ಶ್ರೀ ವಿದ್ಯಾರಣ್ಯರ

# ಪಂಚದಶಿ



ಸಂಪಾಕರು :

ರಘುನಾಥ ಗಂಗಾಧರ ನಾಡೇದ



ಪ್ರಕಾಶಕರು :

ಸಿಟಿ ಬುಕ್ ಸ್ಟಾಲ್, ಹುಬ್ಬಳ್ಳಿ.

ಬೆಲೆ : 5-50

# — ಪ್ರಸ್ತಾವನೆ —

ಲೋಕಪ್ರಸಿದ್ಧವಾದ ಈ ಗ್ರಂಥಕ್ಕೆ ಪ್ರಸ್ತಾವನೆಯ ಅವಶ್ಯಕತೆ ಯುಂಟೆಂದು ಅನಿಸುವದಿಲ್ಲ. ಯಾಕಂದರೆ ಶ್ರೀ. ಪ. ಪ. ವಿದ್ಯಾರಣ್ಯ ಸ್ವಾಮಿಗಳು ಇದನ್ನು ರಚಿಸಿ ಆರು ಶತಮಾನಗಳ ಮೇಲಾಯಿತು. ವಿಶಿಷ್ಟ ಗ್ರಹಿಕೆ–ವಿಶ್ವಾಸಗಳಿಂದ ಕೂಡಿದ ಪಂಡಿತೋತ್ತಮರು ಇದನ್ನು ಅಭ್ಯಾಸ ಮಾಡಿ ತಮ್ಮ ಬುದ್ಧಿಗೊಪ್ಪುವಂತೆ ವ್ಯಾಖ್ಯಾನ ಬರೆದಿದ್ದಾರೆ. ಇಂದಿಗೂ ವೇದಾಂತಿಗಳು ಬಹು ಆದರದಿಂದ ಈ ಗ್ರಂಥದಮೇಲೆ ಪ್ರವಚನ ಮಾಡು ತ್ತಾರೆ. ಶ್ರೋತೃಗಳು ಶ್ರದ್ಧೆಯಿಂದ ಆಲಿಸುತ್ತಾರೆ. ಆಸೇತುಹಿಮಾಚಲ ಪರ್ಯಂತ ಈ ಕ್ರಮ ನಡೆದೇ ಇದೆ. ಎಂದಮೇಲೆ ಪಂಚದಶಿಯು ಬಹುಜನ ಪ್ರಿಯ ಗ್ರಂಥವೆಂದಂತಾಯಿತಲ್ಲ. ಯಾರಾದರೂ ಮಾಡಿಕೊಟ್ಟ ಪರಿಚಯ–ಪ್ರಶಂಸೆ–ಪ್ರಚಾರಗಳ ಅವಶ್ಯಕತೆ ಇಲ್ಲದೇ ಜಿಜ್ಞಾಸುಗಳ-ತತ್ವಕೋವಿದರ ಹಾಗೂ ಶ್ರದ್ಧಾಳುಗಳಾದ ಸಾಧಕರ ರತ್ನಖನಿಯಂತಿರುವ ಗ್ರಂಥಕ್ಕೆ ಪ್ರಸ್ತಾವನೆ ಬರೆಯಬೇಕಾದರೂ ಏನು ? ಈಗಾಗಲೇ ಆಗಿಹೋಗಿರುವ ಇದರ ಸಾರ್ವತ್ರಿಕ ಪ್ರಚಾರವೇ ಇದರ ಪ್ರಸ್ತಾವನೆ ಎಂದು ಬೇಕಾದರೆ ತಿಳಿಯಬಹುದು. ಬಹುಶಃ ಭಾರತದ ಎಲ್ಲ ಭಾಷೆಗಳಲ್ಲಿ ಭಾಷಾಂತರವಾಗಿ ಇದು ಪ್ರಚಾರ ಹೊಂದಿದೆ. ಹೀಗಿದ್ದರೂ ಈ ಗ್ರಂಥದ ಬಗೆಗೆ ಕೆಲವು ಮಾತುಗಳನ್ನು ಹೇಳುವದು ಅಪ್ರಸ್ತುತವಾಗಲಿಕ್ಕಿಲ್ಲ.

ಶ್ರೀ ಶಂಕರಾಚಾರ್ಯರ ತರುವಾಯ ಅವರ ಸಾಂಪ್ರದಾಯಲ್ಲಿ ಅದ್ವೈತ ಮತದ ಸಂವರ್ಧನೆಗೆ ಪೋಷಕವಾಗುವಂಥ ಯಾವ ಮಹಾ ಗ್ರಂಥಗಳೂ ನಿರ್ಮಾಣವಾಗಲಿಲ್ಲ. ಕೈಯಾಡದಿದ್ದರೆ ಕಾಲಾನುಕ್ರಮದಲ್ಲಿ ಎಲ್ಲವೂ ಮಾಲಿನ್ಯ ಹೊಂದುವದು ಈ ಲೋಕದ ಧರ್ಮ. ಅದರಂತೆ ಅದ್ವೈತಮತದ ವಿಷಯದಲ್ಲಿಯೂ ಆಗಿರಬೇಕು. ಯಾಕಂದರೆ ಶ್ರೀ ಶಂಕರಾಚಾರ್ಯರ ಕಾಲವು ಕ್ರಿ. ಶ. ೮ನೇ ಶತಮಾನವೆಂದು ನಿರ್ಣಯವಾಗಿದೆ. ಅದರಂತೆ ಶ್ರೀ ವಿದ್ಯಾರಣ್ಯರ ಕಾಲವು ೧೪ನೇ ಶತಮಾನವಾಗಿದೆ. ಇವರಿಬ್ಬರ ನಡುವೆ ಸುಮಾರು

೬೦೦ ವರ್ಷಗಳು ಕಳೆದಂತಾಯಿತು. ಆ ಅವಧಿಯಲ್ಲಿ ಅದ್ವೈತ ಮತದ ಮೇಲೆ ಅನೇಕ ಬೌದ್ಧಿಕ ದಾಳಿಗಳಾಗಿರಬಹುದು. ಯಾಕಂದರೆ ಭರತ ಭೂಮಿಯು ಋಷಿಕಾಲದಿಂದಲೇ ಬೌದ್ಧಿಕ ಸ್ವಾತಂತ್ರ್ಯವನ್ನು ಪಡೆದ ದೇಶವು. ಅವೆಲ್ಲವುಗಳನ್ನು ವಿದ್ಯಾರಣ್ಯರು ಲಕ್ಷಿಸಿ, ಪ್ರಬಲ ರೀತಿಯಿಂದ ತಲೆ ಎತ್ತಿದ ವಾದಗಳಿಗೆಲ್ಲ ಉತ್ತರವಾಗುವಂತೆ ಕಾಲಾನುಗುಣವಾಗಿ 'ಪಂಚದಶಿ' ಗ್ರಂಥವನ್ನು ನಿರ್ಮಿಸಿರುವರೆಂದು ಹೇಳಲು ಯಾವ ಬಾಧೆಯೂ ಇಲ್ಲ. ತರ್ಕಬದ್ಧವೂ, ಯುಕ್ತಿಯುಕ್ತವೂ, ವೇದ ಸಮ್ಮತವೂ ಆದ ಜ್ಞಾನದಿಂದೊಡಗೂಡಿದ ಇವರ ಗ್ರಂಥರೂಪೀ ಮಂತ್ರಪಠಣದಿಂದ ಅದ್ವೈತ ಜ್ಞಾನ ಸೂರ್ಯನಿಗೆ ಕವಿದ ಗ್ರಹಣವು ಬಿಡುಗಡೆ ಹೊಂದಿತು.

ಶ್ರೀ ವಿದ್ಯಾರಣ್ಯರು ಅಂದರೆ ಗೃಹಸ್ಥಾಶ್ರಮದಲ್ಲಿ ಮಾಧವಾಚಾರ್ಯರು–ಗೃಹಸ್ಥರಾಗಿರುವಾಗಿನಿಂದಲೇ ಅನೇಕ ಗ್ರಂಥಗಳನ್ನು ರಚಿಸಿ ವಿಖ್ಯಾತರಾದವರು. ಬಹುಶಃ ಪಂಚದಶಿಯನ್ನು ಸನ್ಯಾಸ ಸ್ವೀಕರಿಸಿದನಂತರ ಬರೆದಿರಬೇಕೆಂದು ಪಂಡಿತರ ಅಭಿಪ್ರಾಯವಾಗಿದೆ. ಇದರಲ್ಲಿ ಶಾಂಕರ ಮತವು ಬಹು ಸಮೀಚೀನವಾಗಿಯೂ, ಪ್ರಭಾವಯುತವಾಗಿಯೂ ನಿರೂಪಿತವಾಗಿದೆ. ಆದರೂ ಶಂಕರರ ಅಭಿಪ್ರಾಯಗಳಿಗೆ ವ್ಯತಿರಿಕ್ತವೆನಿಸಬಹುದಾದ ಅತ್ಯಲ್ಪ ಹೆಚ್ಚು ಕಡಿಮೆಗಳು ಇವರ ಗ್ರಂಥದಲ್ಲಿ ಕಾಣುತ್ತವೆ. ಅವುಗಳಿಂದ ಮೂಲಾರ್ಥ ಗ್ರಹಣಕ್ಕೆ ಯಾವಬಾಧೆಯೂ ಉಂಟಾಗುವುದಿಲ್ಲ. ಒಂದುವೇಳೆ ಅವು ಶಂಕರರ ಅಭಿಪ್ರಾಯಗಳು ಸ್ಫುಟವಾಗುವಂತೆಯೇ ಇರುತ್ತವೆ.

ಈಗೊಂದು ಉದಾಹರಣೆ. ವಸ್ತುತಃ ಸರ್ವತ್ರ ವ್ಯಾಪಕನಾದ ಬ್ರಹ್ಮನು 'ಅವಿದ್ಯೆ' ಎಂಬ ಉಪಾಧಿಯನ್ನು ಹೊಂದಿ ಜೀವನೆನಿಸುತ್ತಾನೆ ಎಂದು ವಿದ್ಯಾರಣ್ಯರು ಹೇಳುತ್ತಾರೆ. ಶಂಕರರು ತಮ್ಮ ಯಾವ ಗ್ರಂಥದಲ್ಲಿಯೂ 'ಅವಿದ್ಯೆ'ಯನ್ನು ಸ್ವೀಕರಿಸುವುದಿಲ್ಲ. ಕೇವಲ 'ಅಧ್ಯಾಸ' (=ಅತಸ್ಮಿನ್ ತದ್ಬುದ್ಧಿಃ ಅಂದರೆ ಅದಲ್ಲದ್ದನ್ನು ಅದೆಂದು ತಿಳಿಯುವದು. ಅಥವಾ ಒಂದರ ಮೇಲೆ ಇನ್ನೊಂದರ ಆರೋಪಮಾಡುವದು) ದಿಂದಲೇ ತಮ್ಮ ನಿರೂಪಣೆಯನ್ನು ನಾಂಗಗೊಳಿಸುತ್ತಾರೆ. ಈ 'ಅವಿದ್ಯೆ' ಎಂಬುದನ್ನು ವಿದ್ಯಾರಣ್ಯರೇ ಮೊದಲಿಗರಾಗಿ ಸ್ವೀಕರಿಸಿದರೋ, ಅಥವಾ ಅವರಿಗಿಂತ ಮೊದಲು ಅದ್ವೈತ ಪಂಡಿತರು ಅದನ್ನು ಸ್ವೀಕರಿಸಿದ್ದರೋ ಎಂಬುದು ವಿಚಾರಣೀಯವಾದ ಅಂಶ

ವಾಗಿದೆ. ನಮಗೆ ತಿಳಿದಿರುವ ಮಟ್ಟಿಗಂದರೆ ಭಾಗವತ ಪುರಾಣದ ಮೂರ ನೆಯ ಸ್ಕಂಧದಲ್ಲಿ ಬರುವ ಕಪಿಲ–ದೇವಹೂತಿಯ ಸಂವಾದದ ವ್ಯಾಖ್ಯಾನದಲ್ಲಿ ಶ್ರೀ ಶ್ರೀಧರಸ್ವಾಮಿಗಳು ಅವಿದ್ಯೆಯನ್ನು ಸ್ವೀಕರಿಸಿದ್ದಾರೆ. ಇವರು ಹನ್ನೆರ ಡನೇ ಶತಮಾನದವರೆಂದು ಹೇಳುತ್ತಾರೆ. ಎಂದಮೇಲೆ ವಿದ್ಯಾರಣ್ಯರಿಗಿಂತ ಪೂರ್ವದವರೆಂಬ ವಿಷಯದಲ್ಲಿ ಸಂದೇಹವಿಲ್ಲ. ಶ್ರೀಧರಸ್ವಾಮಿಗಳು ಭಾಗವತ ಪುರಾಣಕ್ಕೆ ಬರೆದ ವ್ಯಾಖ್ಯಾನವು 'ಶ್ರೀಧರೀ' ಎಂಬ ಹೆಸರಿನಿಂದ ಇವತ್ತಿಗೂ ಸುವಿಖ್ಯಾತವಾಗಿದೆ. ಇವರು ಕೂಡ ಪ್ರಸಿದ್ಧ ಅದ್ವೈತ ಪಂಡಿತರು–ಮತ್ತು ಆದರ ಅನುಯಾಯಿಗಳಾಗಿದ್ದರೆಂದು ಅವರ ವ್ಯಾಖ್ಯಾನವನ್ನೋದಿದವರಿಗೆ ಸಹಜವಾಗಿ ಗೋಚರಿಸುತ್ತದೆ.

ಹೀಗೆ ಪಂಡಿತರಿಗೆ ಮಾನ್ಯವೆನಿಸಿ ನಿರೂಪಣೆಗೆ ಸುಕರವೆನಿಸಿದ ಶೈಲಿ–ಹಾಗೂ ಪದ–ಪ್ರಕಾರಗಳು ವಿದ್ಯಾರಣ್ಯರ ಗ್ರಂಥದಲ್ಲಿ ಕಂಡುಬಂದರೆ ಆಶ್ಚರ್ಯ ಪಡಬೇಕಾಗಿಲ್ಲ. ಹಾಗೆ ಕಂಡುಬರುವ ಬದಲಾವಣೆ ಕಾಲ–ಮಾನಕ್ಕನುಗುಣ ವಾಗಿ ಬೆಳೆಯುತ್ತ ಬಂದ ಪ್ರಜ್ಞೆಯ ಲಕ್ಷಣವೂ ಹೌದು. ಅನ್ನವು ಅದೇ. ಆದರೆ ರುಚಿ–ಋತು ಮಾನಗಳಿಗನುಸರಿಸಿ ವ್ಯಂಜನಾದಿಗಳು ಬೇರೆ. ಹಾಗೆ ಇಲ್ಲಿಯೂ ತಿಳಿದರೆ ತೊಂದರೆ ಇಲ್ಲ.

ಅಧ್ಯಾತ್ಮ ವಿಚಾರದಿಂದ ಉಂಟಾಗುವ ಜ್ಞಾನರೂಪ ಫಲವು ಎಂದರೆ ಮೋಕ್ಷವು 'ವಸ್ತುತಂತ್ರ' ವಾಗಿರುವುದು. ಅಂದರೆ ಯಾವುದು ಹೇಗಿರುವದೋ ಹಾಗೆ ಅದನ್ನು ಅರಿತುಕೊಳ್ಳುವದು ಜ್ಞಾನ. ಜ್ಞಾನದಿಂದ ಮೋಕ್ಷರೂಪ ಭಾವೋದಯ. ಇಂಥ ಜ್ಞಾನವನ್ನು ಹೊಂದಬೇಕಾದರೆ ಶ್ರವಣ-ಮನನಾದಿ ಗಳು ಸಾಧನವೆಂದು ಶಾಸ್ತ್ರನಿರ್ಣಯವು. ಹೀಗಿದ್ದರೂ ಕೆಲವರು ಕರ್ಮದಿಂದ ಕರ್ಮಜ್ಞಾನ ಸಮುಚ್ಚಯದಿಂದ ಅಥವಾ ಉಪಾಸನೆ (=ಭಕ್ತಿ) ಯಿಂದ ಜ್ಞಾನ–ಅರ್ಥಾತ್ ಮೋಕ್ಷವು ದೊರೆಯುವದೆಂದು ವಾದ ಮಾಡುತ್ತಾರೆ. ಆದರೆ ತನ್ನ ಇಷ್ಟಬಂದ ಕರ್ಮಗಳನ್ನು ಆಚರಿಸಲು ಸ್ವಾತಂತ್ರ್ಯವುಳ್ಳ ಮನುಷ್ಯನು ಆಚರಿಸಿದ ಕರ್ಮಫಲಗಳು–(೧) ಉತ್ಪಾದ್ಯ (೨) ಪ್ರಾಪ್ಯ (೩) ವೈಕಾರಿಕ (೪) ಸಾಂಸ್ಕಾರಿಕ ಹೀಗೆ ನಾಲ್ಕು ಬಗೆಯವಾಗಿರುವವೆಂದು ವೇದಾಂತಿಗಳು ನಿರ್ಣಯಿಸುತ್ತಾರೆ. ಒಂದು ವೇಳೆ ಜ್ಞಾನವು ಕರ್ಮದ ಫಲವೇ ಆಗಿದ್ದ ಪಕ್ಷದಲ್ಲಿ ಮೇಲಿನ ನಾಲ್ಕು ಪ್ರಕಾರಗಳಲ್ಲಿ ಅಂತರ್ಭೂತ ವಾಗಿರ

ಬೇಕಾಯಿತು. ಆದರೆ ಹಾಗಿಲ್ಲವೆಂಬುದನ್ನು ನೋಡಬಹುದು. (೧) ಕುಂಬಾರನು ಘಟಗಳನ್ನು ನಿರ್ಮಿಸುತ್ತಾನೆ. (ಉತ್ಪಾದ್ಯ) ಆದರೂ ಅದು ಕಾರ್ಯವೆನಿಸುವದರಿಂದ ನಾಶಹೊಂದುತ್ತದೆ. ಜ್ಞಾನವು ನಿತ್ಯವಾದುದರಿಂದ ಹುಟ್ಟುವದೂ ಅಲ್ಲ; ನಾಶವಾಗುವದೂ ಅಲ್ಲ. (೨) ಗಮನ ರೂಪವಾದ ಕರ್ಮಕ್ಕೆ ಫಲವಾಗಿ ಅವನು ಯಾವುದಾದರೊಂದು ಊರನ್ನು ತಲುಪುತ್ತಾನೆ.(ಪ್ರಾಪ್ಯ.) ಆದರೆ ಅದು ಪ್ರಾಪ್ತವೆನಿಸುವುದರಿಂದ ಆ ಊರನ್ನು ತ್ಯಜಿಸುವ ಪ್ರಸಂಗ ಇದ್ದೇ ಇದೆ. ಜ್ಞಾನವು ನಿತ್ಯ ಪ್ರಾಪ್ತವಾದುದು. ಆದುದರಿಂದ ಅದನ್ನು ದೊರಕಿಸಿಕೊಳ್ಳಬೇಕಾಗಿಲ್ಲ. ಎಂದಮೇಲೆ ಅದು ಕರ್ಮ ಫಲವಲ್ಲ. (೩) ಬೇಯಿಸುವ ಕರ್ಮದಿಂದ ಸಿದ್ಧವಾದ ಅನ್ನವು ಅಕ್ಕಿಯ ವಿಕಾರವೆಂದೆನಿಸುವದು. (ವೈಕಾರಿಕ) ಊಟ ಮಾಡಿದರೆ ಅದು ನಷ್ಟವಾಗುವದು. ಜ್ಞಾನವು ನಿರ್ವಿಕಾರಿಯಾದುದರಿಂದ ಅದು ಕರ್ಮಫಲವೆನಿಸಲಾರದು. (೪) ಪಾತ್ರೆಗಳನ್ನು ತಿಕ್ಕುವದರಿಂದ ಅವು ನೈರ್ಮಲ್ಯವನ್ನು ಹೊಂದುವವು (ಸಾಂಸ್ಕಾರಿಕ) ಕೆಲ ಹೊತ್ತಿನ ಮೇಲೆ ಅವು ಮತ್ತೆ ಹೊಲಸಾಗುವವು. ಆದರೆ ಜ್ಞಾನವು ಪರಮ ಪವಿತ್ರವೂ-ನಿತ್ಯವೂ-ಸ್ವತಃಸಿದ್ಧವೂ ಆಗಿರುವುದರಿಂದ ಅದು ಕರ್ಮಜನ್ಯವಲ್ಲ.

ಹೀಗಿರುವ ಜ್ಞಾನವು ಈ ಗ್ರಂಥದಲ್ಲಿ ಬಹು ಗಂಭೀರವಾಗಿ, ಪೂರ್ವ ಪಕ್ಷ ಮತ್ತು ಸಿದ್ಧಾಂತರೂಪ ಪ್ರಶ್ನೋತ್ತರಗಳಿಂದ ಶಾಸ್ತ್ರೀಯ ಪದ್ಧತಿಗನುಸರಿಸಿ ಪ್ರತಿಪಾದಿತವಾಗಿದೆ. ವಿದ್ಯಾರಣ್ಯರು ಶಾಸ್ತ್ರಕೋವಿದರೆಂಬುದು ನಿಜವಾದರೂ ಇವರ ನಿರೂಪಣೆಯಲ್ಲಿ ಲಾಲಿತ್ಯಕ್ಕೆ ಕೊರತೆ ಇಲ್ಲ. ಅಲ್ಲಿಗಲ್ಲಿಗೆ ಉಪಮಾ-ದೃಷ್ಟಾಂತ ಮೊದಲಾದ ಅರ್ಥಾಲಂಕಾರಗಳು ಮಿತವಾಗಿ ಶಬ್ದಾಲಂಕಾರಗಳು-ಕಂಡು ಬರುತ್ತವೆ. ಭಾಷೆಯಂತೂ ಗಂಭೀರವೂ, ಅರ್ಥವತಿಯೂ ಗಂಗಾಪ್ರವಾಹದಂತೆ ನಿರ್ಮಲವೂ ಆಗಿದೆ. ವಿದ್ಯಾರಣ್ಯರು ಜ್ಞಾನಮಾರ್ಗಿಗಳಾದರೂ, ಉಪನಿಷತ್ತುಗಳಲ್ಲಿ ‹ರಸೋವೈಸಃ, ಎಂದು ವರ್ಣಿತನಾದ ರಸರೂಪಿ ಪರಮಾತ್ಮನ ಅನುಭವವನ್ನು ಪಡೆದವರು. ಇವರ ರಸಾಭಿಜ್ಞತೆಯನ್ನು ತಿಳಿಯಬಯಸುವವರು ಇವರಿಂದ ವಿರಚಿತವಾದ ಶ್ರೀ ಶಂಕರ ದಿಗ್ವಿಜಯ ಕಾವ್ಯವನ್ನು ಓದಬೇಕು.

ಪಂಚದಶಿ ಗ್ರಂಥದಲ್ಲಿ ಹದಿನೈದು ಪ್ರಕರಣಗಳಿರುವದರಿಂದ ಇದಕ್ಕೆ— ‹ಪಂಚದಶಿ, ಎಂಬ ಹೆಸರು ಬಂದಿದೆ. ಇದಕ್ಕೆ ರಾಮಕೃಷ್ಣ ಸೂರಿಯು ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ವ್ಯಾಖ್ಯಾನ ಕರ್ತೃವಿನ

ವಿಷಯ ಇದುವರೆಗೆ ಪಂಡಿತರಿಗೆ ಅಜ್ಞಾತವಾಗಿಯೇ ಇದ್ದಿತು. ಈಗ ಕಾಶಿಯ ಸಂಸ್ಕೃತ ಕಾಲೇಜದ ಪ್ರಾಧ್ಯಾಪಕ ಬಲದೇವ ಉಪಾಧ್ಯಾಯರು 'ರಾಮಕೃಷ್ಣ ಸೂರಿ, ವಿದ್ಯಾರಣ್ಯರ ಪೂರ್ವಾಶ್ರಮದ ಭಾಗಿನೇಯ ಅಂದರೆ ಅಕ್ಕ-ಅಥವಾ ತಂಗಿಯ ಮಗನೆಂದು ಹೊಸ ಮಾತು ಹೇಳಿದ್ದಾರೆ. ಒಂದು ವೇಳೆ ನಿಜವೇ ಆಗಿದ್ದಲ್ಲಿ ರಾಮಕೃಷ್ಣ ಸೂರಿಯು ಪಂಚದಶಿ ಗ್ರಂಥಕ್ಕೆ ಬರೆದ ವ್ಯಾಖ್ಯಾನಕ್ಕೆ ಬಹು ಪ್ರಾಶಸ್ತ್ಯ ಬಂದಂತಾಗುವುದು. ಯಾಕೆಂದರೆ ಪಂಡಿತೋತ್ತಮರಾದ ಆಪ್ತ ವಿದ್ಯಾರಣ್ಯರ ಬಳಿಯಲ್ಲಿಯೂ ಅವನು ಕೆಲಕಾಲ ಅಧ್ಯಯನ ಮಾಡಿದವನಾಗಿರಬೇಕು. ಅಂತೇವಾಸಿಯಾದ ಮೇಲೆ ಗುರುಗಳ ಆಶಯಗಳನ್ನು ಅರಿತವನಾಗಿರಬೇಕು. ಎಂದ ಮೇಲೆ ಮೂಲ ಗ್ರಂಥಕರ್ತರಾದ ವಿದ್ಯಾರಣ್ಯರ ಅಭಿಪ್ರಾಯಗಳೇ ಅವನ ವ್ಯಾಖ್ಯಾನದಲ್ಲಿ ವಿಶದವಾಗಿ ಬಂದಿರುತ್ತವೆ ಎನ್ನಲು ಅಡ್ಡಿ ಏನು ?

ಇದನ್ನು ನಾನು ಕನ್ನಡಿಸುವಾಗ ಮುಖ್ಯವಾಗಿ ರಾಮಕೃಷ್ಣ ಸೂರಿಯ ವ್ಯಾಖ್ಯಾನವನ್ನೇ ಅನುಸರಿಸಿದ್ದೇನೆ. ಆದರೂ ಪಂಚದಶಿಯ ಮರಾಠಿ ಭಾಷಾಂತರಕರ್ತರಾದ ಶ್ರೀ ವಿಷ್ಣುಶಾಸ್ತ್ರಿ ಬಾಪಟ. ಕನ್ನಡ ಭಾಷಾಂತರಕರ್ತ ಬಾಬಾ ಗರ್ದೆ ಮತ್ತು ಶ್ರೀ ಭಾರತೀ ಸಚ್ಚಿದಾನಂದ ಸಹಜಾನಂದ ಸ್ವಾಮಿಗಳು ಬೆಂಗಳೂರು ಇವರ ಗ್ರಂಥಗಳಿಂದಾದ ಸಹಾಯವನ್ನು ಮರೆಯುವಹಾಗಿಲ್ಲ.

ವಿದ್ಯಾರಣ್ಯರು ರಚಿಸಿದ ಅನೇಕ ಗ್ರಂಥಗಳ ಆರಂಭದಲ್ಲಿ ಬೇರೆಬೇರೆ ಗುರುಗಳನ್ನು ಸ್ಮರಣಮಾಡುತ್ತಾರೆ. ಅದರಂತೆ ಈ ಪಂಚದಶಿ ಗ್ರಂಥದಲ್ಲಿಯೂ ಕಂಡು ಬರುತ್ತದೆ. ಇದರಿಂದ ಕೆಲವು ಪಂಡಿತರು ಪಂಚದಶಿ ಗ್ರಂಥವು ಮೂವರು ಎಂದರೆ- ವಿದ್ಯಾರಣ್ಯರು-ಶಂಕರಾನಂದರು-ಮತ್ತು ಭಾರತೀ ಕೃಷ್ಣ ತೀರ್ಥರು ಇವರಿಂದ ರಚಿತವಾಗಿರುವುದೆಂದು ಅಭಿಪ್ರಾಯಕ್ಕೆ ಬಂದಿದ್ದಾರೆ. ಆದರೆ ಹಾಗೆ ತಿಳಿಯುವ ಕಾರಣವಿಲ್ಲ. ಸಮನ್ವಯ ಈ ರೀತಿ.

ವಿದ್ಯಾರಣ್ಯ ವಿರಚಿತ 'ಸರ್ವ ದರ್ಶನ ಸಂಗ್ರಹ, ಗ್ರಂಥದ ಆದಿಯಲ್ಲಿ 'ಸರ್ವಜ್ಞ ವಿಷ್ಣು, ವೆಂಬ ಗುರುವಿನ ಸ್ತುತಿಯು ಕಂಡು ಬರುತ್ತದೆ. ಅವರು ಆರಂಭ ವಿದ್ಯಾಗುರುಗಳಾಗಿರಬಹುದು.

ಈ ಪಂಚದಶಿಯ ಆರಂಭದಲ್ಲಿ ಶಂಕರಾನಂದ ಗುರುವಿನ ಸ್ಮರಣವಿದೆ. ಇವರು ಬ್ರಹ್ಮತತ್ತ್ವೋಪದೇಶ ಮಾಡಿದವರಾಗಿರಬಹುದು.

ಇನ್ನು ಉಳಿದವರು ಭಾರತೀಕೃಷ್ಣ ತೀರ್ಥರು. ಇವರಿಗೇ ವಿದ್ಯಾತೀರ್ಥರೆಂದು ಮತ್ತೊಂದು ಹೆಸರು. ಇವರ ಉಲ್ಲೇಖವೂ ಪಂಚದಶಿಯಲ್ಲಿದೆ. ಇವರು ಸನ್ಯಾಸ ದೀಕ್ಷೆಕೊಟ್ಟ ಗುರುಗಳಾಗಿರಬಹುದು.

ಹೀಗೆ ವಿಚಾರ ಮಾಡಿದರೆ ಬೇರೆಬೇರೆ ಗುರುಗಳ ಹೆಸರು ಬಂದಿರುವದರಿಂದ ಉಂಟಾದ ಗೊಂದಲವು ತಪ್ಪಿ ಪಂಚದಶಿ ಗ್ರಂಥವು ವಿದ್ಯಾರಣ್ಯಕೃತವೆಂದು ಭಾವಿಸಲು ಅವಕಾಶ ಉಂಟಾಗುತ್ತದೆ. ಒಂದು ವೇಳೆ ಮೂವರಿಂದ ರಚಿತವಾದುದಾಗಿದ್ದರೆ ವಿದ್ಯಾರಣ್ಯರ ಪೂರ್ಣ ಪರಿಚಿತನಾದ ರಾಮಕೃಷ್ಣ ಸೂರಿ ಆ ಬಗೆಗೆ ಒಂದಾದರೂ ಮಾತನ್ನು ಹೇಳಿಯೇ ಹೇಳುತ್ತಿದ್ದನು. ಆದರೆ ಎಲ್ಲಿಯೂ ಅವನು ಹಾಗೆ ಹೇಳಿಲ್ಲ.

ಪಂಚದಶಿಯು ಶ್ರೇಷ್ಠ ಹಾಗೂ ಸಂಗ್ರಹಣೀಯ ಗ್ರಂಥವೆಂಬುದು ನಿಜವಾದರೂ ವ್ಯಾಪಾರೀ ದೃಷ್ಟಿಯಿಂದ ಗಲ್ಲಾ ಪೆಟ್ಟಿಗೆಯನ್ನು ತುಂಬುವಂಥದಲ್ಲ. ಆದರೂ ಹೇಳಿ–ಬರೆಸಿ ಧೈರ್ಯದಿಂದ ಪ್ರಕಾಶನಗೊಳಿಸುತ್ತಿರುವ, ಮಿತ್ರ ಎಸ್. ವ್ಹಿ. ಶ್ರೇಷ್ಠಿಯವರು ಕನ್ನಡ ವಾಚಕರ ಪ್ರಶಂಸಾಪಾತ್ರರು. ಕನ್ನಡಿಸುತ್ತಿರುವಾಗ ಅವರು ಒಂದೇ ಮಾತು ಹೇಳಿದರು. 'ಆತ್ಮ ಸಮಾಧಾನ ಕೊಡಬಲ್ಲ ಒಂದಾದರೂ ಶ್ರೇಷ್ಠ ಗ್ರಂಥವನ್ನು ಸಿಟಿ ಬುಕ್ ಸ್ಟಾಲ್‌ದಿಂದ ಪ್ರಕಾಶನಗೊಳಿಸಬೇಕು.' ಅವರ ಸತ್ಸಂಕಲ್ಪದ ಫಲವೇ ಈ ಪಂಚದಶಿಯ ಪ್ರಕಾಶನ. ಕನ್ನಡ ನಾಡಿನಲ್ಲಿ 'ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ'ರೆನಿಸಿದ ವಿದ್ಯಾರಣ್ಯರ ಚಿತ್ರವು ಇದುವರೆಗೆ ಲಭ್ಯವಿರಲಿಲ್ಲವೆಂದರೂ ಸರಿಯೇ. ವಿಖ್ಯಾತ ಕಲಾವಿದರಾದ ಮೂರ್ತಿಯವರು ರಚಿಸಿದ ವಿದ್ಯಾರಣ್ಯರ ಸುಂದರ ಚಿತ್ರವೂ ಈ ಗ್ರಂಥದ ರಕ್ಷಾಕವಚದಲ್ಲಿದೆ.

ಇನ್ನು ಭಾಷಾಂತರ ಕಾರ್ಯವು ಕಠಿಣವೆಂಬುದನ್ನು ಅದರಲ್ಲಿಯೂ ಪರಿಪೂರ್ಣವೆನಿಸುವ ದೇವಭಾಷೆ ಸಂಸ್ಕೃತದಿಂದ ಎಂದ ಮೇಲೆ ಬೇರೆ ಹೇಳುವುದೇನು ? ಬರಿಯ ಶ್ಲೋಕಾರ್ಥ ಕೊಡದೇ ಅಧ್ಯಾಯದ ಕೊನೆಗೆ ವಿಸ್ತೃತ ಗದ್ಯಾನುವಾದ ಕೊಡಬೇಕೆಂದು ಮೊದಲು ವಿಚಾರವಿತ್ತು. ಆದರೆ ಗ್ರಂಥ ವಿಸ್ತಾರ ಭೀತಿಯಿಂದ ಆ ವಿಚಾರವನ್ನು ಬಿಡಬೇಕಾಯಿತು. ಪಂಚದಶಿಯ ಮೊದಲನೇ ಅಧ್ಯಾಯ ವಿಷಯ ಪ್ರವೇಶಕ್ಕೆ ಅವಶ್ಯವಾಗಿರುವುದರಿಂದ ಅದೇ ಒಂದು ಅಧ್ಯಾಯಕ್ಕೆ ಕೊನೆಯ ಗದ್ಯಾನುವಾದವನ್ನು ಕೊಟ್ಟಿದೆ.

ಖಾದ್ಯಸಿದ್ಧಗೊಳಿಸಿದವ ನಾನಾದರೂ ಒಳಗಿನ ಹೂರಣ ಮಹಾಮಹಿಮರು ಸಿದ್ಧಗೊಳಿಸಿದ್ದು. ಇದನ್ನುಂಡವರಿಗೆಲ್ಲ ತೃಪ್ತಿಯಾಗಿ ಆನಂದದೊರೆಯುಲೆಂಬುದೇ ನಮ್ಮ ಹಾರ್ೈಕೆ.

'ವಿದ್ಯಾಯತನ, ಸುಜನ ವಿಧೇಯ

**ಮಿಶ್ರೀಕೋಟಿ.** **ರ. ಗಂ. ವಾಡೇದ.**

ಪರಾಭವ. ಅಧಿಕ ಶ್ರಾವಣ ಶುಕ್ಲದಶಮಿ.

# ವಿದ್ಯಾರಣ್ಯರ ಸಂಕ್ಷೇಪ ಚರಿತ್ರೆ

ಶ್ರೀ ವಿದ್ಯಾರಣ್ಯ ಸ್ವಾಮಿಗಳು ಪರಾಶರ ಸ್ಮೃತಿವ್ಯಾಖ್ಯಾದಲ್ಲಿ ಬರೆದ ಸ್ವಚರಿತ್ರಾತ್ಮಕ ಎರಡು ಶ್ಲೋಕಗಳು ಹೀಗಿವೆ.

**ಶ್ರೀಮತೀ ಜನನೀ ಯಸ್ಯ ಸುಕೀರ್ತಿರ್ಮಾಯಣಃ ಪಿತಾ ।**
**ಸಾಯಣಃ ಸೋಮನಾಥಶ್ಚ ಮನೋಬುದ್ಧೀ ಸಹೋದರೌ ॥೧॥**
**ಯಸ್ಯ ಬೋಧಾಯನಂ ಸೂತ್ರಂ ಶಾಖಾ ಯಸ್ಯಚ ಯಾಜುಷೀ ।**
**ಭಾರದ್ವಾಜಂ ಯಸ್ಯಗೋತ್ರಂ ಸರ್ವಜ್ಞಃ ಸ ಹಿ ಮಾಧವಃ ॥೨॥**

ಶ್ರೀಮತಿಯು ತಾಯಿ. ಕೀರ್ತಿಶಾಲಿಯಾದ ಮಾಯಣ ಪಂಡಿತ ತಂದೆ. ಮನೋಬುದ್ಧಿಗಳಂತಿರುವ ಸಾಯಣ-ಸೋಮನಾಥರು ತಮ್ಮಂದಿರು. ಯಜುಃಶಾಖೆ ಬೋಧಾಯಾನ ಸೂತ್ರ. ಭಾರದ್ವಾಜ ಗೋತ್ರ. ಮಾಧವನು ಸರ್ವಜ್ಞನಂತಿರುವನು.

ಮಾಧವನೆಂಬ ಇಟ್ಟಹೆಸರಲ್ಲದೆ (೧) ಮಾಧವಾರ್ಯ (೨) ಮಾಧವಾಚಾರ್ಯ (೩) ಮಾಧವಾಮಾತ್ಯ ಎಂಬ ಹೆಸರುಗಳೂ ಇವರಿಗಿದ್ದಂತೆ ತಿಳಿಯುತ್ತದೆ. ಚತುರಸ್ರ ಪಂಡಿತರಾದುದರಿಂದ ವಿದ್ಯಾರಣ್ಯರೆಂಬ ಹೆಸರೂ ಇವರಿಗುಂಟು. ೧೩ನೇ ಶತಮಾನದ ತೀರ ಕೊನೆಯ ಭಾಗದಲ್ಲಿ ಇವರು ಕಿಷ್ಕಿಂಧಾಪುರಿ (ಮುಂದೆ ವಿಜಯನಗರ) ಯಲ್ಲಿ ಜನ್ಮತಾಳಿದರು.

ಗಾಯತ್ರಿ ದೇವಿಯ ಅನುಗ್ರಹಕ್ಕೆ ಪಾತ್ರರಾಗಿ ಇವರು ಅವಳ ಪ್ರಸಾದದಿಂದಲೇ ಸುವರ್ಣವೃಷ್ಟಿಯನ್ನು ಸುರಿಸಿ ಹುಕ್ಕ-ಬುಕ್ಕರಿಂದ ವಿಜಯನಗರವನ್ನು ಸ್ಥಾಪಿಸಿದರೆಂದು ಪ್ರಸಿದ್ಧಿ. ಕೆಲವು ಕಾಲ ಇವರು ವಿಜಯನಗರ ರಾಜ್ಯದಲ್ಲಿ ಮಂತ್ರಿಪದವನ್ನಲಂಕರಿಸಿದ್ದರೆಂದು ತಿಳಿದುಬರುತ್ತದೆ. ಇವೆಲ್ಲ ಕಾರಣಗಳಿಂದ "ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ" ರೆಂದು ಇವರಿಗೆ ಬಿರುದು.

ಇದುವರೆಗೆ ಯಾವ ವೇದಾಂತಿಗಳೂ ಹೇಳದ ಈ ಕೆಳಗಿನ ಒಂದು ಮಾತನ್ನು ವಿದ್ಯಾರಣ್ಯರು ಹೇಳಿ ಜಗತ್ತಿಗೆ ಮಹೋಪಕಾರ ಮಾಡಿದ್ದಾರೆ.

**ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಗ್ ರಾಜ್ಯಾದಿ ಲೌಕಿಕಮ್ ।**

ರಾಜ್ಯವೇ ಆಗಲಿ, ಸಾಮಾಜಿಕವೇ ಆಗಲಿ, ಪ್ರಾಪಂಚಿಕವೇ ಇರಲಿ ಇವೆಲ್ಲ ಕಾರ್ಯಗಳನ್ನು ಸಮರ್ಥವಾಗಿ ಯೋಗ್ಯರೀತಿಯಿಂದ ನಿರ್ವಹಿಸಲು ಶಕ್ಯ.

ಮರಾಠೀ ಭಾಷೆಯ ಗುರುಚರಿತ್ರೆಯ ಪ್ರಕಾರ ಇವರು ಶಂಕರಾಚಾರ್ಯರಿಂದ ಹತ್ತನೇ ಸ್ಥಾನಕ್ಕೆ ಬರುತ್ತಾರೆ.





# ಪಂಚದಶೀ

## ೧ ತತ್ವವಿವೇಕ ಪ್ರಕರಣ

**ನಮಃ ಶ್ರೀ ಶಂಕರಾನಂದ ಗುರುಪಾದಾಂಬುಜನ್ಮನೇ ।**
**ಸವಿಲಾಸ ಮಹಾಮೋಹಗ್ರಾಹ ಗ್ರಾಸೈಕ ಕರ್ಮಣೇ ॥೧॥**

ಅರ್ಥ:— ಜಗತ್ತು-ಮತ್ತು ಅದರ ಕಾರ್ಯ ಸಮೂಹಗಳನ್ನುಂಟು ಮಾಡುತ್ತಿರುವ ಮೂಲಾ ಜ್ಞಾನವೆಂಬ ಮೊಸಳೆಯನ್ನು ನುಂಗುವ ಒಂದೇ ಒಂದು ಕಾರ್ಯ ಮಾಡುತ್ತಿರುವ ಶ್ರೀ ಶಂಕರಾನಂದ ಗುರುವಾದ ಕಮಲಕ್ಕೆ ನಮಸ್ಕಾರವು.

**ತತ್ಪಾದಾಂಬುರುಹದ್ವಂದ್ವ ಸೇವಾ ನಿರ್ಮಲಚೇತಸಾಮ್ ।**
**ಸುಖಬೋಧಾಯ ತತ್ವಸ್ಯ ವಿವೇಕೋ-ಯಂ ವಿಧೀಯತೇ॥೨॥**

ಅರ್ಥ:—ಆ ಗುರುವಿನ ಪಾದಕಮಲಗಳ ಸೇವೆಯಿಂದ ನಿರ್ಮಲಾಂತಃ ಕರಣ ಹೊಂದಿದವರಿಗೆ ಸುಲಭವಾಗಿ ತಿಳಿಯಬೇಕೆಂದು ತತ್ವವಿವೇಕವನ್ನು (ಜೀವನ ಸತ್ಯಸ್ವರೂಪವನ್ನು )ಹೇಳುತ್ತೇವೆ.

**ಶಬ್ದ ಸ್ಪರ್ಶಾದಯೋ ವೇದ್ಯಾ ವೈಚಿತ್ರ್ಯಾಜ್ಜಾಗರೇ ಪೃಥಕ್ ।**
**ತತೋ ವಿಭಕ್ತಾ ತತ್ಸಂವಿದೈಕ ರೂಪ್ಯಾನ್ನ ಭಿದ್ಯತೇ ॥೩॥**

ಅರ್ಥ:— ಎಚ್ಚರವೆಂಬ ಅವಸ್ಥೆಯಲ್ಲಿ ಗೋಚರವಾದ ವಿಷಯಗಳು ಪರಸ್ಪರ ವಿಲಕ್ಷಣ(ಭಿನ್ನ)ವಾದರೂ ಅವುಗಳ ಜ್ಞಾನವು ಒಂದೇ ಆಗಿರುವುದು.

**ತಥಾ ಸ್ವಪ್ನೇಽತ್ರ ವೇದ್ಯಂ ತು ನ ಸ್ಥಿರಂ ಜಾಗರೇ ಸ್ಥಿರಮ್ ।**
**ತದ್ಭೇದೋಽತಸ್ತಯೋಃ ಸಂವಿದೇಕರೂಪಾ ನ ಭಿದ್ಯತೇ ॥೪॥**

ಅರ್ಥ:— ಅದರಂತೆ ಕನಸಿನಲ್ಲಿ ಕಂಡುಬರುವ (ಮನೋಮಯ) ವಿಷಯಗಳೂ ಪರಸ್ಪರಭಿನ್ನವೆಂದು ತಿಳಿಯಬೇಕು. ಆದರೆ ಕನಸಿನ ವಿಷಯಗಳು ಸ್ಥಿರವಾದವುಗಳಲ್ಲ. ಅವೇ ಎಚ್ಚರದಲ್ಲಿ ಸ್ಥಿರವಾದವುಗಳು ಆದುದರಿಂದ ಅವುಗಳಲ್ಲಿ ಭೇದವು. ಇವೆರಡೂ ಅವಸ್ಥೆಗಳಲ್ಲಿಯ ಜ್ಞಾನವು ಮಾತ್ರ ಭೇದವಿಲ್ಲದ್ದು.

**ಸುಪ್ತೋತ್ಥಿತಸ್ಯ ಸೌಷುಪ್ತ ತಮೋಬೋಧೋ ಭವೇತ್ ಸ್ಮೃತಿ।**
**ಸಾ ಚಾವಬುದ್ಧ ವಿಷಯಾಽವಬುದ್ಧಂ ತತ್ತದಾ ತಮಃ ॥೫॥**

ಅರ್ಥ:— ಮಲಗಿಕೊಂಡು ನಿದ್ದೆಮಾಡಿ ಎದ್ದವನಿಗೆ ಗಾಢನಿದ್ದೆಯೊಳಗಿನ ತಮದ ಜ್ಞಾನವು ನೆನಪಿರುತ್ತದೆ. ಆ ನೆನಪು ಅನುಭವ ತೆಗೆದುಕೊಂಡ ವಿಷಯದ್ದೇ ಸರಿ. ಆಗ (ಗಾಢನಿದ್ದೆಯಲ್ಲಿ) ತಮವನ್ನು ಅನುಭವಿಸಿರುವನು

**ಸ ಬೋಧೋ ವಿಷಯಾದ್ಭಿನ್ನೋ ನ ಬೋಧಾತ್ ಸ್ವಪ್ನಬೋಧವತ್ ।**
**ಏವಂ ಸ್ಥಾನತ್ರಯೇಽಪ್ಯೇಕಾ ಸಂವಿತ್ತದ್ವದ್ದಿನಾಂತರೇ ॥೬॥**

ಅರ್ಥ:— ಆ ಬೋಧವು-ಎಂದರೆ ಗಾಢನಿದ್ದೆಯೊಳಗಿನ ಅಜ್ಞಾನದ ತಿಳಿವಳಿಕೆಯು, ತನ್ನ ವಿಷಯದಿಂದ ಅರ್ಥಾತ್ ಅಜ್ಞಾನದಿಂದ ಬೇರೆಯಾದದ್ದು. ಕನಸಿನಲ್ಲಿ ಮನೋಮಯ ವಿಷಯಗಳನ್ನು ಅನುಭವಿಸಿದ ತಿಳಿವಳಿಕೆಯಂತೆ ಗಾಢನಿದ್ದೆಯಲ್ಲಿ ವಿಷಯಾ ಭಾವವನ್ನು ಅನುಭವಿಸಿದ ತಿಳಿವಳಿಕೆಯು (ಎಂದರೆ ಎಚ್ಚರ-ಕನಸುಗಳಿಗಿಂತ ಜ್ಞೇಯವು ಇಲ್ಲಿ ಭಿನ್ನವೆಂದು ತಿಳಿಯಬೇಕು.) ಹೀಗೆ ಎಚ್ಚರ ಮೊದಲಾದ ಮೂರು ಅವಸ್ಥೆಗಳಲ್ಲಿ ಜ್ಞಾನವು ಒಂದೇ ಆಗಿರುವುದು ಹೀಗೆ ಒಂದೇ ದಿನದ ಮೂರು ಅವಸ್ಥೆಗಳಲ್ಲಿ ಜ್ಞಾನವು ಒಂದೇ ಆಗಿರುವಂತೆ ಬೇರೆ ಬೇರೆ ದಿನಗಳಲ್ಲಿಯೂ ಒಂದೇ ಆಗಿರುವದು.

**ಮಾಸಾಬ್ದ-ಯುಗಕಲ್ಪೇಷು ಗತಾಗಮ್ಯೇಷ್ವನೇಕಧಾ ।**
**ನೋದೇತಿ ನಾಸ್ತಮೇತ್ಯೇಕಾ ಸಂವಿದೇಷಾ ಸ್ವಯಂಪ್ರಭಾ ॥೭॥**

ಅರ್ಥ:— ಅದರಂತೆ ಭೂತ-ಭವಿಷ್ಯತ್ ಕಾಲದಲ್ಲಿ ತಿಂಗಳು-ವರ್ಷ-ಯುಗ-ಕಲ್ಪಗಳಲ್ಲಿ ಜ್ಞಾನವು ಒಂದೇ ಆಗಿರುವುದು. ಹೀಗೆ ಇದು (ಜ್ಞಾನವು) ಒಂದೇ ಆಗಿರುವುದರಿಂದ ಇದಕ್ಕೆ ಉದಯಾಸ್ತಗಳಿಲ್ಲ. ಈ ಜ್ಞಾನವು ಸ್ವಯಂ ಪ್ರಕಾಶವು.

**ಇಯಮಾತ್ಮಾ ಪರಾನಂದಃ ಪರಪ್ರೇಮಾಸ್ಪದಂ ಯತಃ ।**
**ಮಾ ನ ಭೂವಂ ಹಿ ಭೂಯಾಸಮಿತಿ ಪ್ರೇಮಾತ್ಮನೀಕ್ಷ್ಯತೇ॥೮॥**

ಅರ್ಥ:— ಈ ಜ್ಞಾನವೇ ಆತ್ಮವು. (ಹೀಗೆ ನಿತ್ಯವಾದುದರಿಂದ ಸದ್ರೂಪ ಸಿದ್ಧಿಯಾಯಿತು. ಇನ್ನು-) ಆತ್ಮನು ಪರಮಪ್ರೀತಿಗೆ ಪಾತ್ರನಾದುದರಿಂದ ಶ್ರೇಷ್ಠ ಆನಂದರೂಪನು. (ನಿರತಿಶಯ ಸುಖರೂಪನು.) ಯಾಕೆಂದರೆ ನಾನು (ಎಂದರೆ ಆತ್ಮನು) ಇಲ್ಲದಂತಾಗಬಾರದು. ಯಾವಾಗಲೂ ಇರಬೇಕು. ಎಂಬ ಆತ್ಮ ಪ್ರೀತಿಯು ಎಲ್ಲರಿಗೂ ಅನುಭವಕ್ಕೆ ಬರುತ್ತದೆ.

**ತತ್ಪ್ರೇಮಾತ್ಮಾರ್ಥಮನ್ಯತ್ರ ನೈವಮನ್ಯಾರ್ಥಮಾತ್ಮನಿ ।**
**ಅತಸ್ತತ್ಪರಮಂ ತೇನ ಪರಮಾನಂದತಾತ್ಮನಃ ॥೯॥**

ಅರ್ಥ:— (ಆತ್ಮನಿಂದ ಬೇರೆ ಎನಿಸುವ) ಮಗ-ಹೆಂಡತಿ ಮುಂತಾದ ಪದಾರ್ಥಗಳ ಮೇಲಿನ ಪ್ರೇಮವು ಆತ್ಮನಿಗೋಸುಗವೇ. (ಎಂದರೆ ಅವೆಲ್ಲ ಪದಾರ್ಥಗಳ ಮೇಲಿನ ಪ್ರೇಮವು ಆತ್ಮನ ಸುಖಕ್ಕೆ ಅನುಕೂಲವಾಗುವುದರಿಂದ ಆಯಾ ಪದಾರ್ಥಗಳಲ್ಲಿ ಪ್ರೇಮವು ಉಂಟಾಗುತ್ತದೆ.) ಆತ್ಮನಲ್ಲಿ ತೋರುವ ಪ್ರೀತಿಯು ಇತರ ಪದಾರ್ಥಗಳಮೇಲಿನ ಪ್ರೀತಿಯಂತಲ್ಲ. ಅದು ಸ್ವಾಭಾವಿಕ. ಆದುದರಿಂದ ಅದು ಶ್ರೇಷ್ಠವು. ಇದರಿಂದ ಆತ್ಮನ ಪರಮಾನಂದತ್ವವು ಸಿದ್ಧವಾಯಿತು. (ಎಂದರೆ ಆತ್ಮನು ಪರಮಪ್ರಿಯನೆಂದು ಭಾವವು.)

**ಇತ್ಥಂ ಸಚ್ಚಿತ್ ಪರಾನಂದ ಆತ್ಮಾಯುಕ್ತ್ಯಾ ತಥಾವಿಧಮ್ ।**
**ಪರಂ ಬ್ರಹ್ಮ ತಯೋಶ್ಚೈಕ್ಯಂ ಶ್ರುತ್ಯಂತೇಷೂಪದಿಶ್ಯತೇ ॥೧೦॥**

ಅ:— ಹೀಗೆ ಆತ್ಮನು ಸಚ್ಚಿದಾನಂದರೂಪನೆಂದು ಯುಕ್ತಿಯಿಂದ ಸಿದ್ಧವಾಯಿತು. ಬ್ರಹ್ಮವಾದರೂ ಇವೇಲಕ್ಷಣಗಳಿಂದ ಕೂಡಿದೆ. (ಆದುದರಿಂದ) ಇವೆರಡರ (ಬ್ರಹ್ಮ-ಮತ್ತು ಆತ್ಮರ) ಐಕ್ಯವು ವೇದಾಂತದಲ್ಲಿ ಉಕ್ತವಾಗಿದೆ.

**ಅಭಾನೇ ನ ಪರಂ ಪ್ರೇಮ ಭಾನೇ ನ ವಿಷಯೇ ಸ್ಪೃಹಾ ।**
**ಅತೋಽಭಾನೇಽಸ್ಯಭಾತಾಽಸೌ ಪರಮಾನಂದತಾತ್ಮನಃ ॥೧೧॥**

ಅ:— (ಪರಮಾನಂದ ರೂಪ) ಆತ್ಮನ ಅನುಭವವೇ ಇಲ್ಲದಿದ್ದರೆ ಅಲ್ಲಿ ನಿರತಿಶಯ ಪ್ರೀತಿಯ ಸಂಭವವೂ ಇರುತ್ತಿದ್ದಿಲ್ಲ. (ಇನ್ನು ಪರಮಾನಂದ ರೂಪದ) ಅನುಭವವಿರುವುದೆಂಬ ಪಕ್ಷದಲ್ಲಿ ( ಹೊರಗಿನ ) ವಿಷಯಗಳಲ್ಲಿ (ಎಂದರೆ ಹೂ-ಮಾಲೆ-ಚಂದನ-ಸ್ತ್ರೀ ಮುಂ. ಗಳಲ್ಲಿ) ಬಯಕೆಯಾಗುತ್ತಿರಲಿಲ್ಲ. ಆದುದರಿಂದ ಆತ್ಮನ ಪರಮಾನಂದತ್ವವು (ಸಾಮಾನ್ಯವಾಗಿ) ಅನುಭವ ಗೋಚರವಾದರೂ (ವಿಶೇಷ ರೀತಿಯಿಂದ) ಗೋಚರಿಸುವಂಥದಲ್ಲ.

**ಅಧ್ಯೇತೃವರ್ಗಮಧ್ಯಸ್ಥ ಪುತ್ರಾಧ್ಯಯನಶಬ್ದವತ್ ।**
**ಭಾನೇಽಪ್ಯಭಾನಂ ಭಾನಸ್ಯ ಪ್ರತಿಬಂಧೇನ ಯುಜ್ಯತೇ ॥೧೨॥**

ಅ:— ವೇದಪಾಠಕರ ಸಮೂಹ ಮಧ್ಯದಲ್ಲಿ ಅಧ್ಯಯನ ಮಾಡುತ್ತಿರುವ ಮಗನ ಧ್ವನಿಯಂತೆ, (ಹೊರಗಿದ್ದ ತಂದೆಗೆ ಸಾಮಾನ್ಯವಾಗಿ ಕೇಳಿಸಿದರೂ ಇದೇ ನನ್ನ ಮಗನ ಧ್ವನಿ ಎಂದು ವಿಶೇಷ ರೂಪದಿಂದ ತಿಳಿದಿರುವಂತೆ) ಆನಂದವು ಸಾಮಾನ್ಯವಾಗಿ ಅನುಭವಕ್ಕೆ ಬಂದರೂ ವಿಶೇಷ ರೂಪವಾಗಿ (ಎಂದರೆ ಇದೇ ಬ್ರಹ್ಮಾನಂದವು ಎನಿಸುವಂತೆ) ಅನುಭವಕ್ಕೆ ಬರುವುದಿಲ್ಲ. ಸಾಮಾನ್ಯವಾದ ಆ ಅನುಭವಕ್ಕೆ ಇರುವ ಪ್ರತಿಬಂಧಗಳಿಂದ ಹೀಗೆ ಸಂಭವಿಸುವುದು. ಹಾಗಾದರೆ ಆ ಪ್ರತಿಬಂಧಗಳು ಯಾವವು ?

**ಪ್ರತಿಬಂಧೋಽಸ್ತಿಭಾತೀತಿ ವ್ಯವಹಾರಾರ್ಹವಸ್ತುನಿ ।**
**ತಂ ನಿರಸ್ಯ ವಿರುದ್ಧಸ್ಯ ತಸ್ಯೋತ್ಪಾದನಮುಚ್ಯತೇ ॥೧೩॥**

ಅರ್ಥ:—ಇರುತ್ತದೆ ಹೊಳೆಯುತ್ತದೆ ಎಂದು ವ್ಯವಹರಿಸಲಿಕ್ಕೆ ಯೋಗ್ಯವಾದ ವಸ್ತುಗಳಲ್ಲಿ ಹಾಗೆ ಒಪ್ಪದೇ ಇರುವುದಿಲ್ಲ. ಹೊಳೆಯುವುದಿಲ್ಲ. ಎಂದು ವಿರುದ್ಧ ವ್ಯವಹಾರವನ್ನು ಉತ್ಪನ್ನಮಾಡಿಕೊಳ್ಳುವುದೇ ಪ್ರತಿಬಂಧವು.

**ತಸ್ಯ ಹೇತುಃ ಸಮಾನಾಭಿಹಾರಃ ಪುತ್ರಧ್ವನಿಶ್ರುತೌ ।**
**ಇಹಾನಾದಿರವಿದ್ಯೈವ ವ್ಯಾಮೋಹೈಕನಿಬಂಧನಮ್ ॥೧೪॥**

ಅರ್ಥ:— ಮಗನ ಧ್ವನಿಯನ್ನು ಕೇಳುವ (ದೃಷ್ಟಾಂತದ)ಲ್ಲಿಯ ಪ್ರತಿಬಂಧವು ಅನೇಕರೊಡನೆ ಕೂಡಿ ಪಠನ ಮಾಡುತ್ತಿರುವುದು. ಇಲ್ಲಿ (ಎಂದರೆ ಆತ್ಮನ ಆನಂದರೂಪದ ಪೂರ್ಣಾನುಭವವು ಬರುವುದಕ್ಕೆ) ಪ್ರತಿಬಂಧವು ವಿಪರೀತ ಜ್ಞಾನಕ್ಕೆ ಕಾರಣವಾದ ಅನಾದಿ ಎನಿಸುವ ಅವಿದ್ಯೆಯು.

**ಚಿದಾನಂದಮಯಬ್ರಹ್ಮ ಪ್ರತಿಬಿಂಬ ಸಮನ್ವಿತಾ |**
**ತಮೋರಜಃ ಸತ್ವಗುಣಾ ಪ್ರಕೃತಿರ್ದ್ವಿವಿಧಾ ಚ ಸಾ ||೧೫||**

ಅರ್ಥ:— ಸತ್ಯಜ್ಞಾನಾನಂದ ಮಯವಾದ ಪರಬ್ರಹ್ಮದ ಪ್ರತಿಬಿಂಬ ದೊಡನೆ ಕೂಡಿಕೊಂಡು ಸತ್ವರಜ-ತಮ ಗುಣಗಳ ಸಾಮಾನ್ಯ ವ್ಯವಸ್ಥೆಯಾಗಿರುವುದೇ ಪ್ರಕೃತಿ. ಇದು ಎರಡು ಬಗೆಯಾಗಿರುವುದು.

**ಸತ್ವಶುದ್ಧ್ಯವಿಶುದ್ಧಿಭ್ಯಾಂ ಮಾಯಾ ವಿದ್ಯೇಚ ತೇಮತೇ |**
**ಮಾಯಾಬಿಂಬೋ ವಶೀಕೃತ್ಯ ತಾಂ ಸ್ಯಾತ್ಸರ್ವಜ್ಞ**
**ಈಶ್ವರಃ ||೧೬||**

ಅರ್ಥ:— (ಪ್ರಕಾಶಸ್ವರೂಪವಾದ) ಶುದ್ಧ ಸತ್ವಗುಣದಿಂದ ಕೂಡಿದ ಪ್ರಕೃತಿಯು ಮಾಯೆಯು. ಮಲಿನ (ಮತ್ತೊಂದು ಗುಣದಿಂದ ಮಿಶ್ರ) ಸತ್ವಗುಣವುಳ್ಳದ್ದು ಅವಿದ್ಯೆ. ಶುದ್ಧ ಸತ್ವಗುಣ ವಿಶಿಷ್ಟವಾದ ಮಾಯೆಯಲ್ಲಿ ಪ್ರತಿಬಿಂಬಿತವಾದ ಬ್ರಹ್ಮಚೈತನ್ಯವು ಆ ಮಾಯೆಯನ್ನು ವಶಪಡಿಸಿಕೊಂಡು ಸರ್ವಜ್ಞತ್ವವೇ ಮೊದಲಾದ ಗುಣಗಳಿಂದ ಕೂಡಿದ ಸಗುಣ ಈಶ್ವರನಾಗುವನು.

**ಅವಿದ್ಯಾವಶಗಸ್ತ್ವನ್ಯಸ್ತದ್ವೈಚಿತ್ರ್ಯಾದನೇಕಧಾ |**
**ಸಾ ಕಾರಣಶರೀರಂ ಸ್ಯಾತ್ಪ್ರಾಜ್ಞಸ್ತತ್ರಾಭಿಮಾನವಾನ್ ||೧೭||**

ಅರ್ಥ:— ಅವಿದ್ಯೆಯಲ್ಲಿ ಪ್ರತಿಬಿಂಬಿತನಾಗಿ, ಅವಿದ್ಯೆಗೆ ಅಧೀನನಾದವನೇ ಜೀವನಾಗುವನು. (ಪ್ರಾಣಿಗಳ ಶುಭಾಶುಭ ಕರ್ಮಗಳಿಂದ ಅವಿದ್ಯೆಯು ವೈಚಿತ್ರ್ಯಮಯವಾಗಿರುವುದು) (ಇದಕ್ಕೆ ಅಧೀನನಾದ ಜೀವನು ಪರತಂತ್ರನು) ಅವಿದ್ಯೆಯು ಅನೇಕ ಬಗೆಯಾಗಿರುವದರಿಂದ ಅದಕ್ಕೆ ವಶನಾದ ಜೀವನಾದರೂ ಅನೇಕ ಬಗೆಯವ (ದೇವ–ಮನುಷ್ಯ–ಪಶು–ಪಕ್ಷಿ–ಮುಂದೇಹಧಾರಿ)ನಾಗುತ್ತಾನೆ. ಈ ಅವಿದ್ಯೆಯೇ ಕಾರಣ ಶರೀರವೆನಿಸುತ್ತದೆ. ಅದರ ಅಭಿಮಾನ ಹೊಂದುವವನೇ (ನಾನೆಂದು ತಿಳಿಯುವವನೇ) ಪ್ರಾಜ್ಞನೆನಿಸುವನು.

**ತಮಃ ಪ್ರಧಾನ ಪ್ರಕೃತೇ ಸ್ತದ್ಭೋಗಾಯೇಶ್ವರಾಜ್ಞಯಾ |**
**ವಿಯತ್ಪವನ ತೇಜೋಂಬುವೋಭೂತಾನಿಜಜ್ಞಿರೇ ||೧೮||**

ಅರ್ಥ— ಆ ಪ್ರಾಜ್ಞರ (ಕರ್ಮಗಳಂತೆ) ಸುಖ ದುಃಖಾದಿ ಅನುಭವ ಸಿದ್ಧಿಗೆ, ತಮೋಗುಣ ಪ್ರಧಾನವಾದ ಉಪದಾನವೆನಿಸಿದ ಪ್ರಕೃತಿಯಲ್ಲಿ

ಈಶ್ವರನ ಅಪ್ಪಣೆಯಿಂದ ಆಕಾಶ-ವಾಯು-ಅಗ್ನಿ ಜಲ-ಭೂಮಿಗಳೆಂಬ ಪಂಚ ಮಹಾಭೂತಗಳು ಹುಟ್ಟಿದವು.

**ಸತ್ವಾಂಶೈಃ ಪಂಚಭಿಸ್ತೇಷಾಂ ಕ್ರಮಾದ್ಧೀಂದ್ರಿಯ**
**ಪಂಚಕಮ್ ।**
**ಶ್ರೋತ್ರತ್ವಗಕ್ಷಿರಸನ ಘ್ರಾಣಾಖ್ಯಮುಪಜಾಯತೇ ॥೧೯॥**

ಅರ್ಥ:— ಈ ಪಂಚಮಹಾಭೂತಗಳ ಸತ್ವಾಂಶದಿಂದ ಕ್ರಮವಾಗಿ ಇಂದ್ರಿಯ ಪಂಚಕವೆನಿಸಿದ ಕಿವಿ-ಚರ್ಮ-ಕಣ್ಣು-ನಾಲಿಗೆ-ಮೂಗುಗಳೆಂಬ ಜ್ಞಾನೇಂದ್ರಿಯಗಳು ಹುಟ್ಟಿದವು.

**ತೈರಂತಃಕರಣಂ ಸರ್ವೈರ್ವೃತ್ತಿಭೇದೇನ ತದ್ವಿಧಾ ।**
**ಮನೋವಿಮರ್ಶರೂಪಂ ಸ್ಯಾದ್ಬುದ್ಧಿಃ ಸ್ಯಾನ್ನಿಶ್ಚ**
**ಯಾತ್ಮಿಕಾ ॥೨೦॥**

ಅರ್ಥ:— ಅವೆಲ್ಲ ಭೂತಗಳ ಒಟ್ಟುಗೂಡಿದ ಸಂತ್ವಾಂಶಕ್ಕೆ ಅಂತಃಕರಣವೆಂದು ಹೆಸರು. ಇದು ವೃತ್ತಿಭೇದದಿಂದ ಎರಡುಬಗೆಯಾಗಿರುವುದು. ಸಂಶಯಾತ್ಮಕ ವೃತ್ತಿಯೇ ಮನಸ್ಸು. ನಿಶ್ಚಯಾತ್ಮಕ ವೃತ್ತಿಯು ಬುದ್ಧಿಯು.

**ರಜೋಂಶೈಃ ಪಂಚಾಭಿಸ್ತೇಷಾಂ ಕ್ರಮಾತ್**
**ಕರ್ಮೇಂದ್ರಿಯಾಣಿ ತು ।**
**ವಾಕ್ಪಾಣಿಪಾದ ಪಾಯೂಪಸ್ಥಾಭಿಧಾನಾನಿಜಜ್ಞಿರೇ ॥೨೧॥**

ಅರ್ಥ:— ಆ ಪಂಚಭೂತಗಳ ಒಟ್ಟುಗೂಡಿದ ರಜೋಂಶದಿಂದ ಕ್ರಮವಾಗಿ ವಾಕ್-ಪಾಣಿ-ಪಾದ-ಪಾಯು ಉಪಸ್ಥಗಳೆಂಬ ಕರ್ಮೇಂದ್ರಿಯಗಳು ಹುಟ್ಟಿದವು.

**ತೈಃ ಸರ್ವೈಃ ಸಹಿತೈಃ ಪ್ರಾಣೋ ವೃತ್ತಿಭೇದಾತ್ ಸ ಪಂಚಧಾ ।**
**ಪ್ರಾಣೋಽಪಾನಃ ಸಮಾನೋಶ್ಚೋದಾನವ್ಯಾನೌ ಚ ತೇ**
**ಪುನಃ ॥೨೨॥**

ಅರ್ಥ:— ಅವೆಲ್ಲ ಭೂತಗಳ ರಜೋಂಶ ಸಮೂಹದಿಂದ ಪ್ರಾಣವಾಗುವದು. ಅದು ವೃತ್ತಿಭೇದದಿಂದ ಪ್ರಾಣ-ಅಪಾನ-ಸಮಾನ-ಉದಾನ-ವ್ಯಾನವೆಂದು ಐದುಬಗೆಯಾಗಿರುವುದು.

**ಬುದ್ಧಿ ಕರ್ಮೇಂದ್ರಿಯ ಪ್ರಾಣ ಪಂಚಕೈರ್ಮನಸಾಧಿಯಾ ।**
**ಶರೀರಂ ಸಪ್ತದಶಭಿಃ ಸೂಕ್ಷ್ಮಂ ತಲ್ಲಿಂಗ ಮುಚ್ಯತೇ ॥೨೩॥**

ಅ:— ಹೀಗೆ ಜ್ಞಾನೇಂದ್ರಿಯಪಂಚಕವು, ಕರ್ಮೇಂದ್ರಿಯ ಪಂಚಕವು ಮತ್ತು ವೃತ್ತಿಭೇದದಿಂದ ಪ್ರಾಣಾದಿಪಂಚಕವು. ಮನಸ್ಸು ಮತ್ತು ಬುದ್ಧಿ ಇವುಗಳಿಂದಕೂಡಿದುದೇ ಸೂಕ್ಷ್ಮಶರೀರವು. ಇದಕ್ಕೆ ಲಿಂಗಶರೀರವೆನ್ನುವರು.

**ಪ್ರಾಜ್ಞಸ್ತತ್ರಾಭಿಮಾನೇನ ತೈಜಸತ್ವಂ ಪ್ರಪದ್ಯತೇ ।**
**ಹಿರಣ್ಯಗರ್ಭತಾ ಮೀಶಸ್ತಯೋರ್ವ್ಯಷ್ಟಿ ಸಮಷ್ಟಿ ತಾ ॥೨೪॥**

ಅರ್ಥ:—ಹಿಂದೆ ಹೇಳಿದ ಪ್ರಾಜ್ಞನು ಈ ಲಿಂಗಶರೀರದ ಅಭಿಮಾನವನ್ನು ತಾಳಿದಾಗ ತೈಜಸನೆಂದು ಹೆಸರನ್ನು ಹೊಂದುವನು. ವಿರುದ್ಧ ಸತ್ವ ಪ್ರಧಾನಮಾಯೋಪಾಧಿಕ ಈಶ್ವರನು ಅಭಿಮಾನತಾಳಿದಾಗ ಹಿರಣ್ಯಗರ್ಭನೆನಿಸುವನು. ಅವರಲ್ಲಿ ಪ್ರಾಜ್ಞನು ವ್ಯಷ್ಟಿ. ಹಿರಣ್ಯಗರ್ಭನು ಸಮಷ್ಟಿ.

**ಸಮಷ್ಟಿರೀಶಃ ಸರ್ವೇಷಾಂ ಸ್ವಾತ್ಮತಾದಾತ್ಮ್ಯ ವೇದನಾತ್ ।**
**ತದಭಾವಾತ್ತತೋಽನ್ಯೇತು ಕಥ್ಯಂತೇ ವ್ಯಷ್ಟಿಸಂಜ್ಞಯಾ ॥೨೫॥**

ಅರ್ಥ:— ಎಲ್ಲ ಲಿಂಗಗಳ ಅಭಿಮಾನತಾಳಿದ ಈಶ್ವರನು ಸಮಷ್ಟಿಯು. ಒಂದೇಶರೀರದ ಅಭಿಮಾನಿಯಾದುದರಿಂದ ಜೀವನು ವ್ಯಷ್ಟಿಯು.

**ತದ್ಭೋಗಾಯ ಪುನರ್ಭೋಗ್ಯ ಭೋಗಾಯತನಜನ್ಮನೇ ।**
**ಪಂಚೀಕರೋತಿ ಭಗವಾನ್ ಪ್ರತ್ಯೇಕಂ**
**ವಿಯದಾದಿಕಮ್ ॥೨೬॥**

ಅರ್ಥ:— ಈಶ್ವರನು ಜೀವರ ಭೋಗಗಳಿಗೋಸುಗ ಈಗ ಅನ್ನಪಾನಾದಿಗಳು ಮತ್ತು ಜರಾಯುಜ ಮುಂ. ನಾಲ್ಕುಬಗೆಯ ಪ್ರಾಣಿಗಳು ಹುಟ್ಟುವುದಕ್ಕೆ ಆಕಾಶವೇ ಮೊದಲಾದ ಪಂಚಭೂತಗಳನ್ನು ಪಂಚೀಕರಣ ಮಾಡುತ್ತಾನೆ. (ಎಂದರೆ ಪರಸ್ಪರ ಮಿಶ್ರಣ ಮಾಡುತ್ತಾನೆ.)

**ದ್ವಿಧಾ ವಿಧಾಯ ಚೈಕೈಕಂ ಚತುರ್ಧಾ ಪ್ರಥಮಂ ಪುನಃ ।**
**ಸ್ವಸ್ವೇತರ ದ್ವಿತೀಯಾಂಶೈರ್ಯೋಜನಾತ್ಪಂಚ ಪಂಚತೇ ॥೨೭॥**

ಅರ್ಥ:— ಪ್ರತಿಯೊಂದು ಭೂತವನ್ನು ಎರಡಾಗುವಂತೆ ವಿಭಾಗಿಸಿ, ಅದರೊಳಗಿನ ಮೊದಲನೆಯ ಭಾಗವನ್ನು ನಾಲ್ಕು ನಾಲ್ಕು ಭಾಗಮಾಡಿ,

ಬೇರೆಯಾಗಿಟ್ಟು ಪ್ರತಿಯೊಂದು ಅರ್ಧಭಾಗದಲ್ಲಿ ಇತರ ಭೂತಗಳ ನಾಲ್ಕನೆಯ ಅಂಶಭಾಗವನ್ನು ಕೂಡಿಸುವುದರಿಂದ ಪ್ರತಿಯೊಂದರಲ್ಲಿ ಐದು ಭೂತಗಳ ಅಂಶಗಳು ಬರುತ್ತವೆ.

(ಪ್ರತಿಯೊಂದು ಭೂತದ ಅರ್ಧಾಂಶದಲ್ಲಿ ಉಳಿದ ಭೂತಗಳ ಒಂದು ಎಂಟನೆಯ ಅಂಶಭಾಗವನ್ನು ಕೂಡಿಸುತ್ತ ಹೋಗುವುದೇ ಪಂಚೀಕರಣವು.)

**ತೈರಂಡಸ್ತತ್ರ ಭುವನಂ ಭೋಗ್ಯಭೋಗಾಶ್ರಯೋದ್ಭವಃ ।**
**ಹಿರಣ್ಯಗರ್ಭಃ ಸ್ಥೂಲೇಽಸ್ಮಿನ್ದೇಹೇ ವೈಶ್ವಾನರೋ ಭವೇತ್॥೨೮॥**

ಅ:— ಪಂಚೀಕೃತ ಪಂಚಭೂತಗಳಿಂದ ಬ್ರಹ್ಮಾಂಡವು. ಅದರಲ್ಲಿ (ಹದಿನಾಲ್ಕು) ಲೋಕಗಳು. ಭೋಗ್ಯವೆನಿಸಿದ ಅನ್ನಪಾನಾದಿಗಳು. ಆಯಾ ಲೋಕಕ್ಕೆ ಯೋಗ್ಯವೆನಿಸುವ ಶರೀರಗಳು ಹುಟ್ಟುವವು. ಹಿರಣ್ಯಗರ್ಭನು ಈ ಸ್ಥೂಲದೇಹದಲ್ಲಿ ಅಭಿಮಾನವನ್ನು ತಾಳಿ ವೈಶ್ವಾನರನಾದನು.

**ತೈಜಸಾ ವಿಶ್ವತಾಂ ಯಾತಾ ದೇವತಿರ್ಯಙ್ನರಾದಯಃ ।**
**ತೇ ಪರಾಗ್ದರ್ಶಿನಃ ಪ್ರತ್ಯಕ್ತತ್ತ್ವಬೋಧವಿವರ್ಜಿತಾಃ ॥೨೯॥**

ಅ:— (ಅದೇ ಸ್ಥೂಲದೇಹದಲ್ಲಿ) ತೈಜಸರು (ಲಿಂಗಶರೀರಾಭಿಮಾನಿಗಳಾದ ಜೀವರು) ವಿಶ್ವಸಂಜ್ಞೆಯನ್ನುಹೊಂದಿದರು. ದೇವ-ತಿರ್ಯಕ್ ನರ ಮೊದಲಾದ ಜೀವರು ಬಹಿರ್ಮುಖದೃಷ್ಟಿಯುಳ್ಳವರು. ಪ್ರತ್ಯಗಾತ್ಮನ ತಿಳಿವಳಿಕ ಇಲ್ಲದವರು.

**ಕುರ್ವತೇ ಕರ್ಮ ಭೋಗಾಯ ಕರ್ಮ ಕರ್ತುಂ ಚ ಭುಂಜತೇ ।**
**ನದ್ಯಾಂ ಕೀಟಾ ಇವಾವರ್ತಾದಾವರ್ತಾಂತರ ಮಾಶುತೇ ।**
**ವ್ರಜಂತೋ ಜನ್ಮನೋ ಜನ್ಮ ಲಭಂತೇ ನೈವ**
**ನಿರ್ವೃತಿಮ್ ॥೩೦॥**

ಅ:— (ಹೀಗೆ ಜ್ಞಾನವಿಲ್ಲದವರಾಗಿ) ಸುಖಾದಿಗಳ ಅನುಭವಕ್ಕೆ ಕರ್ಮವನ್ನುಮಾಡುತ್ತಾರೆ. ಪುನಃ ಕರ್ಮವನ್ನುಮಾಡುವದಕ್ಕೆ ಫಲವನ್ನು ಭೋಗಿಸುತ್ತಾರೆ. ನದಿಯಲ್ಲಿ ಒಂದುಸುಳಿಯಿಂದ ಇನ್ನೊಂದುಸುಳಿಗೆ ಸಾಗುವ ಕೀಟ(ಹುಳ)ದಂತೆ; ಒಂದುಜನ್ಮದಿಂದ ಇನ್ನೊಂದುಜನ್ಮಕ್ಕೆ ತೆರಳುವ ಇವರು ಸುಖವನ್ನುಹೊಂದುವದಿಲ್ಲ.

**ಸತ್ಕರ್ಮ ಪರಿಪಾಕಾತ್ತೇ ಕರುಣಾನಿಧಿನೋದ್ಧೃತಾಃ ।**
**ಪ್ರಾಪ್ಯ ತೀರತರುಚ್ಛಾಯಾಂ ವಿಶ್ರಾಮ್ಯಂತಿ ಯಥಾ**
**ಸುಖಮ್ ॥೩೧॥**

ಅ:— ಆ ಕೀಟಗಳು ಹಿಂದಿನಜನ್ಮದ ಪುಣ್ಯದಿಂದ ಯಾವನೋ ಒಬ್ಬ ದಯಾವಂತನು ಹೊರಗೆತೆಗೆದುಹಾಕಲು ದಂಡೆಯಲ್ಲಿಗುವ ಗಿಡದನೆರಳನ್ನು ಹೊಂದಿ ಸುಖವಾಗಿ ವಿಶ್ರಾಂತಿಯನ್ನುಪಡೆಯುತ್ತವೆ.

**ಉಪದೇಶಮವಾಪ್ಯೈವಮಾಚಾರ್ಯಾತ್ತತ್ತ್ವದರ್ಶಿನಃ ।**
**ಪಂಚಕೋಶವಿವೇಕೇನ ಲಭಂತೇ ನಿರ್ವೃತಿಂ ಪರಾಮ್ ॥೩೨॥**

ಅ.— ಹೀಗೆ ಆತ್ಮಾನುಭವಿಯಾದ ಗುರುವಿನಿಂದ ಉಪದೇಶವನ್ನು ಹೊಂದಿ, ಅನ್ನಮಯಾದಿ ಪಂಚಕೋಶ (ಚೀಲ) ಗಳ ಸ್ವರೂಪವನ್ನು ತಿಳಿದು ಶ್ರೇಷ್ಠವೆನಿಸಿದ ಮೋಕ್ಷಸುಖವನ್ನುಹೊಂದುತ್ತಾರೆ.

**ಅನ್ನಂ ಪ್ರಾಣೋ ಮನೋಬುದ್ಧಿರಾನಂದಶ್ಚೇತಿ ಪಂಚ ತೇ ।**
**ಕೋಶಾಸ್ತೈರಾವೃತಃ ಸ್ವಾತ್ಮಾ ವಿಸ್ಮೃತ್ಯಾ ಸಂಸೃತಿಂ**
**ವ್ರಜೇತ್ ॥೩೩॥**

ಅ:— ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯವೆಂದು ಪಂಚ (ಐದು) ಕೋಶಗಳು. ಇವುಗಳಿಂದ ಮುಚ್ಚಲ್ಪಟ್ಟವನಾದ ಆತ್ಮನು ( ತನ್ನ ಸ್ವರೂಪದ ) ವಿಸ್ಮೃತಿಯಿಂದ ಪ್ರಪಂಚವನ್ನುಹೊಂದುತ್ತಾನೆ.

**ಸ್ಯಾತ್ಪಂಚೀಕೃತ ಭೂತೋದ್ಥೋ ದೇಹಃ ಸ್ಥೂಲೋನ್ನ**
**ಸಂಜ್ಞಕಃ ।**
**ಲಿಂಗೇ ತುರಾಜಸೈಃ ಪ್ರಾಣೈಃ ಪ್ರಾಣಃ ಕರ್ಮೇಂದ್ರಿಯೈಃ**
**ಸಹ ॥೩೪॥**

ಅ:— ಪಂಚೀಕೃತ ಭೂತಗಳಿಂದ ಹುಟ್ಟಿದ ಸ್ಥೂಲಶರೀರವೇ ಅನ್ನಮಯಕೋಶವು. ಮತ್ತು ಸೂಕ್ಷ್ಮಶರೀರದಲ್ಲಿರುವ ರಜೋಗುಣ ಕಾರ್ಯಭೂತವಾದ ಪಂಚಪ್ರಾಣಗಳು ಹಾಗೂ ಪಂಚಕರ್ಮೇಂದ್ರಿಯಗಳು ಕೂಡಿ ಪ್ರಾಣಮಯಕೋಶವು. (ಇದಕ್ಕೆ ಕ್ರಿಯಾಶಕ್ತಿ ಎಂದು ಅನ್ನುವರು.)

**ಸಾತ್ವಿಕೈರ್ಧೀಂದ್ರಿಯೈಃ ಸಾಕಂ ವಿಮರ್ಶಾತ್ಮಾ ಮನೋಮಯಃ ।**
**ತೈರೇವ ಸಾಕಂ ವಿಜ್ಞಾನಮಯೋ ಧೀರ್ನಿಶ್ಚಯಾತ್ಮಿಕಾ ॥೩೫॥**

ಅ:— ( ಪಂಚಮಹಾಭೂತಗಳು ) ಸಾತ್ವಿಕಾಂಶಗಳಿಂದ ಹುಟ್ಟಿದ ಸಂಶಯಾತ್ಮಕವಾದ ಮನಸ್ಸು, ಹಾಗೂ ಜ್ಞಾನೇಂದ್ರಿಯಗಳು ಕೂಡಿ ಮನೋಮಯಕೋಶವು. ಅವೇ ಜ್ಞಾನೇಂದ್ರಿಯಗಳು ಹಾಗೂ ನಿಶ್ಚಯಾತ್ಮಕವಾದ ಬುದ್ಧಿಯು ಕೂಡಿ ವಿಜ್ಞಾನಮಯಕೋಶವು. (ಈ ಮೇರೆಗೆ ಪ್ರಾಣಾದಿ ಮೂರುಕೋಶಗಳು ಸೂಕ್ಷ್ಮಶರೀರದಲ್ಲಿರುವವು.)

**ಕಾರಣೇ ಸತ್ವಮಾನಂದಮಯೋ ಮೋದಾದಿವೃತ್ತಿಭಿಃ ।**
**ತತ್ತತ್ಕೋಶೈಸ್ತು ತಾದಾತ್ಮ್ಯಾದಾತ್ಮಾ ತತ್ತನ್ಮಯೋ ಭವೇತ್ ॥೩೬॥**

ಅ:— ಕಾರಣ ಶರೀರದಲ್ಲಿ ಪ್ರಿಯ-ಮೋದ-ಪ್ರಮೋದಗಳೆಂಬ ವೃತ್ತಿಗಳಿಂದ ಆನಂದಮಯಕೋಶವಿರುವುದು. ಆತ್ಮನು ಆಯಾಕೋಶಗಳ ತಾದಾತ್ಮ್ಯಾಭಿಮಾನದಿಂದ ಆಯಾ ಕೋಶಮಯನಾಗುವನು. (ಹಾಗೆ ವ್ಯವಹಾರವೆಂದು ಭಾವವು.)

**ಅನ್ವಯವ್ಯತಿರೇಕಾಭ್ಯಾಂ ಪಂಚಕೋಶವಿವೇಕತಃ ।**
**ಸ್ವಾತ್ಮಾನಂ ತತ ಉದ್ಧೃತ್ಯ ಪರಂ ಬ್ರಹ್ಮ ಪ್ರಪದ್ಯತೇ ॥೩೭॥**

ಅ:— ಅನ್ವಯ ವ್ಯತಿರೇಕಗಳ ಯೋಗದಿಂದ ಹಾಗೂ ಪಂಚಕೋಶಗಳ ವಿವೇಚನೆಯಿಂದ ಆತ್ಮನನ್ನು ಬೇರ್ಪಡಿಸಿದವನು (ಅವುಗಳಿಂದ ಆತ್ಮನು ಬೇರೆ ಎಂದು ತಿಳಿದವನು) ಪರಬ್ರಹ್ಮನನ್ನುಹೊಂದುತ್ತಾನೆ.

**ಅಭಾನೇ ಸ್ಥೂಲದೇಹಸ್ಯ ಸ್ವಪ್ನೇಯದ್ಭಾನ ಮಾತ್ಮನಃ ।**
**ಸೋಽನ್ವಯೋ ವ್ಯತಿರೇಕಸ್ತದ್ಭಾನೇಽನ್ಯಾನವಭಾಸನಮ್ ॥೩೮॥**

ಅ:— ಸ್ವಪ್ನಾವಸ್ಥೆಯಲ್ಲಿ ಸ್ಥೂಲದೇಹದ ಪ್ರತೀತಿ ಇಲ್ಲದಿರುವಾಗಲೂ (ಸಾಕ್ಷಿರೂಪನಾದ) ಆತ್ಮನಪ್ರತೀತಿಯು ಇರುವುದೇ ಅನ್ವಯವು. ಹೀಗೆ ಆತ್ಮನಪ್ರತೀತಿ ಇದ್ದು ಸ್ಥೂಲದೇಹದಪ್ರತೀತಿ ಇಲ್ಲದಿರುವಿಕೆಯೇ ವ್ಯತಿರೇಕವು.

(ಅನ್ವಯ=ಅನುವೃತ್ತಿ ಎಂದರೆ ಮೊದಲಿನಂತೆ ಕೊನೆಯಲ್ಲಿಯೂ ತೋರುವಿಕೆ. ವ್ಯತಿರೇಕ = ವ್ಯಾವೃತ್ತಿ ಎಂದರೆ ಮೊದಲಿಂತೆ ಕೊನೆಯಲ್ಲಿ ಇಲ್ಲದಿರುವಿಕೆಯು.)

ಹೀಗೆ ಸ್ಥೂಲದೇಹವು ಆತ್ಮನಲ್ಲವೆಂದು ಅನ್ವಯವ್ಯತಿರೇಕದಿಂದ ತೋರಿಸಿ ಈಗ ಲಿಂಗದೇಹವನ್ನು ವಿವೇಚಿಸುತ್ತಾರೆ.

**ಲಿಂಗಾಭಾನೇ ಸುಷುಪ್ತೌ ಸ್ಯಾದಾತ್ಮನೋ ಭಾನಮನ್ವಯಃ ।**
**ವ್ಯತಿರೇಕಸ್ತು ತದ್ಭಾನೇ ಲಿಂಗಸ್ಯಾಭಾನಮುಚ್ಯತೇ ॥೩೯॥**

ಅ:— ಸುಷುಪ್ತಿ (ಗಾಢನಿದ್ದೆ) ಎಂಬ ಮೂರನೆಯ ಅವಸ್ಥೆಯಲ್ಲಿ ಲಿಂಗದೇಹವು ಪ್ರತೀತಿಗೆಬರದೇ ಆತ್ಮನಪ್ರತೀತಿ ಮಾತ್ರ ಇರುವುದೇ ಅನ್ವಯವು. ಹೀಗೆ ಆತ್ಮಪ್ರತೀತಿ ಇದ್ದು ಸೂಕ್ಷ್ಮದೇಹದ ಪ್ರತೀತಿಯು ಇಲ್ಲದಿರುವಿಕೆಯೇ ವ್ಯತಿರೇಕವು.

**ತದ್ವಿವೇಕಾದ್ವಿವಿಕ್ತಾಃ ಸ್ಯುಃ ಕೋಶಾಃ ಪ್ರಾಣಮನೋಧಿಯಃ ।**
**ತೇ ಹಿ ತತ್ರ ಗುಣಾವಸ್ಥಾಭೇದಮಾತ್ರಾತ್ ಪೃಥಕ್ಕೃತಾಃ॥೪೦॥**

ಅ:— ಹೀಗೆ ಲಿಂಗಶರೀರದ ವಿವೇಚನೆಯಿಂದ ಪ್ರಾಣಮಯ-ಮನೋಮಯ-ವಿಜ್ಞಾನಮಯ ಎಂಬ ಹೆಸರಿನ ಕೋಶಗಳು ಆತ್ಮನಿಂದ ಬೇರೆಯಾದವು. ಒಂದೇಶರೀರದಲ್ಲಿರುವ ಅವೆಲ್ಲ ಕೋಶಗಳು, ಸತ್ವಾದಿಗುಣಗಳ ಅವಸ್ಥಾಭೇದದಿಂದ ಬೇರೆ ಬೇರೆ ಎಂದು ತಿಳಿಯುವರು.

**ಸುಷುಪ್ತ್ಯಭಾನೇ ಭಾನಂ ತು ಸಮಾಧಾವಾತ್ಮನೋಽನ್ವಯಃ ।**
**ವ್ಯತಿರೇಕಸ್ತ್ವಾತ್ಮಭಾನೇ ಸುಷುಪ್ತ್ಯನವಭಾಸನಮ್ ॥೪೧॥**

ಅ:— ಸಮಾಧಿಯಲ್ಲಿ ಸುಷುಪ್ತಿಯ ಪ್ರತೀತಿಇರುವುದಿಲ್ಲ. ಆತ್ಮನ ಅನುಭವವು ಮಾತ್ರ ಇರುವುದರಿಂದ ಇದೇ ಅನ್ವಯವು. ಹೀಗೆ ಆತ್ಮನ ಅನುಭವವಿದ್ದು ಸುಷುಪ್ತಿಯ ಅನುಭವವಿಲ್ಲದಿರುವಿಕೆಯೇ ವ್ಯತಿರೇಕವು.

**ಯಥಾಮುಂಜಾದಿಷೀಕೈವಮಾತ್ಮಾ ಯುಕ್ತ್ಯಾ ಸಮುದ್ಧೃತಃ ।**
**ಶರೀರತ್ರಿತಯಾದ್ಧೀರೈಃ ಪರಂ ಬ್ರಹ್ಮೈವ ಜಾಯತೇ ॥೪೨॥**

ಅ:— ಹೇಗೆ 'ಮುಂಜಾ' ಎಂಬ ಹುಲ್ಲಿನೊಳಗಿಂದ 'ಇಷೀಕಾ' ಎಂಬ ಕೋಮಲವಾದ ಕಡ್ಡಿಯನ್ನು ಬೇರ್ಪಡಿಸುವರೋ ಅದರಂತೆ ಬುದ್ಧಿವಂತನಾದ

ಅಧಿಕಾರೀಪುರುಷನು ಮೂರುದೇಹಗಳಿಂದ ಬೇರ್ಪಡಿಸಿದ ಆತ್ಮನು ಪರಬ್ರಹ್ಮನೇ ಆಗುತ್ತಾನೆ.

**ಪರಾಪರಾತ್ಮನೋರೇವಂ ಯುಕ್ತ್ಯಾ ಸಂಭಾವಿತ್ಯೈಕತಾ ।**
**ತತವುಸ್ಯಾದಿವಾಕ್ಯೈಃ ಸಾ ಭಾಗತ್ಯಾಗೇನ ಲಕ್ಷ್ಯತೇ ॥೪೩॥**

ಅ.— ಹೀಗೆ ಪರ ಮತ್ತು ಅಪರಾತ್ಮರ ಐಕ್ಯವು ಯುಕ್ತಿಯಿಂದ ಸಿದ್ಧವಾಯಿತು. ಅದು ಇನ್ನು 'ತತ್ವಮಸಿ' (ತತ್, ತ್ವಂ, ಅಸಿ ಅದು, ನೀನು, ಇರುತ್ತೀಯೆ.) ಎಂಬ ವಾಕ್ಯಾದಿಗಳನ್ನು ಹೇಳಿ ವಿರುದ್ಧಾಂಶಗಳನ್ನು ತ್ಯಾಗ ಮಾಡಬೇಕಾದ ಲಕ್ಷಣಾವೃತ್ತಿ (ಜಹದಜಹಲ್ಲ ಕ್ಷಣಾವೃತ್ತಿ) ಯಿಂದ ತೋರಿಸಲ್ಪಡುವುದು.

**ಜಗತೋ ಯದುಪಾದಾನಂ ಮಾಯಾಮಾದಾಯ ತಾಮಸೀಮ್ ।**
**ನಿಮಿತ್ತಂ ಶುದ್ಧಸತ್ವಾಂ ತಾಮುಚ್ಯತೇ ಬ್ರಹ್ಮ ತದ್ಗಿರಾ ॥೪೪॥**

ಅ:— ಬ್ರಹ್ಮವು ತಮೋಗುಣ ಪ್ರಧಾನವಾದ ಪ್ರಕೃತಿ ( ಮಾಯೆ ) ಯನ್ನು ಸ್ವೀಕರಿಸಿ ಜಗತ್ತಿಗೆ ಉಪಾದಾನ ಕಾರಣವೆನಿಸುವುದು. ಮತ್ತು ಶುದ್ಧಸತ್ವ ಪ್ರಧಾನಮಾಯೆಯನ್ನು ಸ್ವೀಕರಿಸಿ ನಿಮಿತ್ತಕಾರಣವೆನಿಸುವುದು. (ಹೀಗೆ ಉಪಾಧಿಭೇದದಿಂದ ಜಗತ್ತಿನ ಉಪಾದಾನ ಹಾಗೂ ನಿಮಿತ್ತಕಾರಣವೆನಿಸುವ) ಬ್ರಹ್ಮವು ಮಹಾವಾಕ್ಯ (ತತ್ವಮಸಿ) ದೊಳಗಿನ 'ತತ್' ಪದದಿಂದ ಹೇಳಲ್ಪಡುವುದು.

'ತ್ವಂ' ಪದದ ವಾಚ್ಯಾರ್ಥವನ್ನು ಹೇಳುತ್ತಾರೆ.

**ಯದಾ ಮಲಿನಸತ್ವಾಂ ತಾಂ ಕಾಮ-ಕರ್ಮಾದಿದೂಷಿತಾಮ್ ।**
**ಆದತ್ತೇ ತತ್ಪರಂ ಬ್ರಹ್ಮ ತ್ವಂಪದೇನ ತದೋಚ್ಯತೇ ॥೪೫॥**

ಅ:— ಆ ಪರಬ್ರಹ್ಮವು ಯಾವಾಗ ಇಚ್ಛೆ-ಕರ್ಮಾದಿಗಳಿಂದ ದೂಷಿತವಾದ, ಮಲಿನಸತ್ವಪ್ರಧಾನ (ಸ್ವಲ್ಪ ರಜ-ತಮಗುಣ ಮಿಶ್ರ) ವಾದ ಪ್ರಕೃತಿಯನ್ನು ( ಅವಿದ್ಯೆ ಎನಿಸುವುದನ್ನು) ಸ್ವೀಕರಿಸುವುದೋ ಆಗ 'ತ್ವಂ' ಪದ ವಾಚ್ಯ (ಜೀವ) ವೆನಿಸುವುದು.

**ತ್ರಿತಯೀಮಪಿ ತಾಂ ಮುಕ್ತ್ವಾ ಪರಸ್ಪರ ವಿರೋಧಿನೀಮ್ ।**
**ಅಖಂಡಂ ಸಚ್ಚಿದಾನಂದಂ ಮಹಾವಾಕ್ಯೇನ ಲಕ್ಷ್ಯತೇ ॥೪೭॥**

ಅ:— ತಮಃಪ್ರಧಾನ, ಶುದ್ಧಸತ್ವಪ್ರಧಾನ, ಮಲಿನಸತ್ವಪ್ರಧಾನವಾದ ಪರಸ್ಪರವಿರೋಧಿಯಾದ ಮಾಯೆಯನ್ನು ತ್ಯಾಗಮಾಡಲು, ಭೇದವಿಲ್ಲದ ಸಚ್ಚಿದಾನಂದರೂಪಬ್ರಹ್ಮವು ಮಹಾವಾಕ್ಯದಿಂದ ಲಕ್ಷಿತವಾಗುವುದು.

**ಸೋಽಯ ಮಿತ್ಯಾದಿವಾಕ್ಯೇಷು ವಿರೋಧಾತ್ತದಿದಂತಯೋಃ ।**
**ತ್ಯಾಗೇನ ಭಾಗಯೋರೇಕ ಆಶ್ರಯೋ ಲಕ್ಷ್ಯತೇ**
**ಯಥಾ ॥೪೭॥**

**ಮಾಯಾವಿದ್ಯೇ ವಿಹಾಯೈವಮುಪಾಧೀ ಪರಜೀವಯೋಃ ।**
**ಅಖಂಡಂ ಸಚ್ಚಿದಾನಂದಂ ಪರಂ ಬ್ರಹ್ಮೈವ ಲಕ್ಷ್ಯತೇ ॥೪೮॥**

ಅ:— 'ಅವನೇ ಈ ದೇವದತ್ತನು' ಎಂಬಿವೇ ಮೊದಲಾದ ವಾಕ್ಯಗಳಲ್ಲಿ 'ಅವನೇ' ಎಂಬ ತದಂಶ, 'ಈ' ಎಂಬ ಇದಮಂಶಗಳಲ್ಲಿರುವ ವಿರೋಧವನ್ನು ಬಿಡುವುದರಿಂದ ಒಂದೇಆದ (ಎಂದರೆ ವಾಚ್ಯೈಕದೇಶವಾದ) ಆಶ್ರಯವು (ದೇವದತ್ತನಸ್ವರೂಪವು) ತೋರಿಬರುತ್ತದೆ. ಅದರಂತೆ ಪರಮಾತ್ಮ-ಜೀವಾತ್ಮರಿಗೆ ಉಪಾದಿಗಳೆನಿಸಿದ ಮಾಯೆ ಮತ್ತು ಅವಿದ್ಯೆಗಳನ್ನು ಬಿಡಲು ಅಖಂಡವೂ, ಸಚ್ಚಿದಾನಂದಮಯವೂ, ಶ್ರೇಷ್ಠವೂ ಆದ ಬ್ರಹ್ಮವು ಲಕ್ಷಣಾವೃತ್ತಿಯಿಂದ ತೋರಿಬರುತ್ತದೆ.

ಮಹಾವಾಕ್ಯದಿಂದ ಲಕ್ಷಿತವಾದ ಬ್ರಹ್ಮವು ಸವಿಕಲ್ಪವೋ? ನಿರ್ವಿಕಲ್ಪವೋ? ಎಂದು ಶಂಕಿಸಿ ಎರಡೂಪಕ್ಷಗಳಲ್ಲಿ ಸಂಭವಿಸುವ ದೋಷಗಳನ್ನು ಹೇಳುತ್ತಾನೆ.

**ಸವಿಕಲ್ಪಸ್ಯ ಲಕ್ಷ್ಯತ್ವೇ ಲಕ್ಷ್ಯಸ್ಯ ಸ್ಯಾದ ವಸ್ತುತಾ ।**
**ನಿರ್ವಿಕಲ್ಪಸ್ಯ ಲಕ್ಷ್ಯತ್ವಂ ನ ದೃಷ್ಟಂ ನ ಚ ಸಂಭವಿ ॥೪೯॥**

ಅ:— ಸವಿಕಲ್ಪವು ಲಕ್ಷ್ಯವೆಂದರೆ ಲಕ್ಷ್ಯವಾದಬ್ರಹ್ಮಕ್ಕೆ ನಾಮರೂಪಯುಕ್ತ ಪದಾರ್ಥಗಳಂತೆ ಮಿಥ್ಯಾತ್ವವುಬರುವುದು. ನಿರ್ವಿಕಲ್ಪವಾದ ಬ್ರಹ್ಮವು ಲಕ್ಷ್ಯವೆಂದರೆ ಹಾಗೆ (ಆಗುವುದನ್ನು) ಕಂಡಿಲ್ಲ. ಮತ್ತು ಹಾಗೆ (ಆಗುವುದು) ಅಸಂಭವ.

ಮೇಲಿನ ಪೂರ್ವಪಕ್ಷಕ್ಕೆ ಸಿದ್ಧಾಂತಿಯು ನಿಮ್ಮ ಪ್ರಶ್ನವೇ ಯೋಗ್ಯವಾಗಿಲ್ಲ. ದೋಷಪೂರಿತವಾಗಿದೆ ಎಂದು ಉತ್ತರ ಹೇಳುತ್ತಾನೆ.

**ವಿಕಲ್ಪೋ ನಿರ್ವಿಕಲ್ಪಸ್ಯ ಸವಿಕಲ್ಪಸ್ಯ ವಾ ಭವೇತ್ ।**
**ಆದ್ಯೇ ವ್ಯಾಹತಿರನ್ಯತ್ರಾನವಸ್ಥಾತ್ಮಾಶ್ರಯಾದಯಃ ॥೩೦॥**

ಅ:– ನೀನೀಗಮಾಡಿದ ವಿಕಲ್ಪವು ನಿರ್ವಿಕಲ್ಪದ್ದೋ, ಸರ್ವಿಕಲ್ಪದ್ದೋ? ಇವೆರಡರಲ್ಲಿ ಮೊದಲಿನದೆಂದರೆ ವ್ಯಾಘಾತ (ನನ್ನತಾಯಿ ಬಂಜೆ ಎಂಬಲ್ಲಿಯ) ದೋಷಬರುವುದು. ಎರಡನೆಯದೆಂದರೆ ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಿಕಾಪತ್ತಿ, ಅನವಸ್ಥೆಗಳೆಂಬ ನಾಲ್ಕುದೋಷಗಳು ಬರುವವು.

ಆತ್ಮಾಶ್ರಯ ಉದಾಹರಣೆ.— ತನ್ನ ಹೆಗಲಮೇಲೆ ತಾನೇಹತ್ತುವುದು. ಅನ್ಯೋನ್ಯಾಶ್ರಯ. ಉದಾ.— ದೇವದತ್ತ ಯಜ್ಞದತ್ತರು ಒಬ್ಬರೊಬ್ಬರ ಹೆಗಲಮೇಲೆ ಹತ್ತಿಹೋಗುತ್ತಾರೆ. ಚಕ್ರಿಕಾಪತ್ತಿ (ಉದಾ:— ದೇವದತ್ತನು ಯಜ್ಞದತ್ತನ ಹೆಗಲಮೇಲೆ ಹತ್ತಿದನು. ವಿಷ್ಣುದತ್ತನು ದೇವದತ್ತನ ಹೆಗಲ ಮೇಲೆ ಹತ್ತಿದನು. ಹೀಗೆ ಎಷ್ಟೇಬೆಳೆಸಿದರೂ ಚಕ್ರದಮೇಲೆ ಕೆಳಗಿನಂತೆ ಈ ಕ್ರಮಕ್ಕೆ ವಿರಾಮವಿಲ್ಲ. ಅನವಸ್ಥಾದೋಷ ಉದಾ:— ಒಬ್ಬಕುರುಡನ ಕೈಹಿಡಿದು ನಾಲಾಗಿ ಅನೇಕಕುರುಡರು ಹೋಗುತ್ತಾರೆ. ತತ್ವನಿರ್ಣಯ ಪ್ರಸಂಗದಲ್ಲಿ ಇವೆಲ್ಲ ದೋಷಗಳೆಂದು ವೇದಾಂತಿಗಳು ತಿಳಿಯುತ್ತಾರೆ.

**ಇದಂ ಗುಣಕ್ರಿಯಾ ಜಾತಿ ದ್ರವ್ಯ ಸಂಬಂಧ ವಸ್ತುಷು ।**
**ಸಮಂ ತೇನ ಸ್ವರೂಪಸ್ಯ ಸರ್ವಮೇತದಿತೀಷ್ಯತಾಮ್ ॥೩೧॥**

ಅ:— ಈ ವಿಕಲ್ಪ ದೂಷಣರಾಶಿಯು ಗುಣ-ಕ್ರಿಯೆ-ಜಾತಿ-ದ್ರವ್ಯ ಮತ್ತು ಸಂಬಂಧವೆಂಬ ಐದುವಸ್ತುಗಳಲ್ಲಿ ಸಮನಾಗಿವ್ಯಾಪಿಸುವುದು. ಆ ಕಾರಣದಿಂದ ಗುಣಾದಿಗಳೆಲ್ಲವೂ ಸ್ವಾತ್ಮನಲ್ಲಿಯೇವರ್ತಿಸುವವು. (ಎಂದರೆ ಆತ್ಮನನ್ನುಬಿಟ್ಟು ಅವುಗಳಿಗೆ ಬೇರೆ ಅಸ್ತಿತ್ವವಿಲ್ಲವೆಂದು ಭಾವವು.)

**ವಿಕಲ್ಪತದಭಾವಾಭ್ಯಾಮಸಂಸ್ಪೃಷ್ಟಾತ್ಮ ವಸ್ತುನಿ ।**
**ವಿಕಲ್ಪಿತತ್ವಲಕ್ಷ್ಯತ್ವ ಸಂಬಂಧಾದ್ಯಾಸ್ತು ಕಲ್ಪಿತಾಃ ॥೩೨॥**

ಅ:— ವಿಕಲ್ಪ ಮತ್ತು ವಿಕಲ್ಪಾಭಾವವು ಇವುಗಳ ಸ್ಪರ್ಶವೇ ಇಲ್ಲದ ಆತ್ಮವಸ್ತುವಿನಲ್ಲಿ, ವಿಕಲ್ಪಿತತ್ವ, ಲಕ್ಷ್ಯತ್ವ, ಸಂಬಂಧಾದಿಗಳು ಕಲ್ಪಿತವಾದವು.

**ಇತ್ಥಂ ವಾಕ್ಯೈಸ್ತದರ್ಥಾನುಸಂಧಾನಂ ಶ್ರವಣಂ ಭವೇತ್ ।**
**ಯುಕ್ತ್ಯಾಸಂಭಾವಿತತ್ವಾನುಸಂಧಾನಂ ಮನನಂ ತು ತತ್ ॥೫೩॥**

ಅ:— ಈ ರೀತಿ ಮಹಾವಾಕ್ಯದ ಅರ್ಥದ ಅನುಸಂಧಾನವೇ ಶ್ರವಣವೆನಿಸುವುದು. ಯುಕ್ತಿಯಿಂದ ಮಹಾವಾಕ್ಯವನ್ನು ಕೇಳಿ ತಿಳಿದುಕೊಂಡ ಅರ್ಥವನ್ನು ಚಿಂತನಮಾಡುವುದೇ ಮನನವೆನಿಸುವುದು.

**ತಾಭ್ಯಾಂ ನಿರ್ವಿಚಿಕಿತ್ಸೇಽರ್ಥೇ ಚೇತಸಃ ಸ್ಥಾಪಿತಸ್ಯ ಯತ್ ।**
**ಏಕತಾನತ್ವಮೇತದ್ಧಿ ನಿಧಿಧ್ಯಾಸನಮುಚ್ಯತೇ ॥೫೪॥**

ಅ:— ಶ್ರವಣ-ಮನನಾದಿಗಳಿಂದ ನಿಸ್ಸಂದೇಹವೆನಿಸಿದ ವಸ್ತುವಿನಲ್ಲಿ ಮನಸ್ಸನ್ನು ನೆಲೆಗೊಳಿಸಿ ಏಕಾಗ್ರಗೊಳಿಸುವುದೇ ನಿಧಿಧ್ಯಾಸನವೆಂದು ಹೇಳುವರು.

**ಧ್ಯಾತೃ-ಧ್ಯಾನೇ ಪರಿತ್ಯಜ್ಯ ಕ್ರಮಾದ್ ಧ್ಯೇಯೈಕಗೋಚರಮ್ ।**
**ನಿವಾತದೀಪವಚ್ಚಿತ್ತಂ ಸಮಾಧಿರಭಿಧೀಯತೇ ॥೫೫॥**

ಅ:—ಚಿತ್ತವು ಕ್ರಮವಾಗಿ ಧ್ಯಾತಾ-ಧ್ಯಾನಗಳನ್ನು ಬಿಟ್ಟು, ಗಾಳಿ ಇಲ್ಲದ ಸ್ಥಳದಲ್ಲಿಯ ದೀಪದಂತೆ ಕೇವಲ ಧ್ಯೇಯಾಕಾರವಾಗುವುದೋ, ಆಗ ಅದಕ್ಕೆ ಸಮಾಧಿ ಎಂದು ಹೇಳುವರು.

**ವೃತ್ತಯಸ್ತು ತದಾನೀಮಜ್ಞಾತಾ ಅಪ್ಯಾತ್ಮಗೋಚರಾಃ ।**
**ಸ್ಮರಣಾದನುಮೀಯಂತೇ ವ್ಯುತ್ಥಿತಸ್ಯ ಸಮುತ್ಥಿತಾತ್ ॥೫೬॥**

ಅ:—ಕೇವಲ ಆತ್ಮನನ್ನೇ ವಿಷಯೀಕರಿಸುವ ವೃತ್ತಿಗಳು ಸಮಾಧಿ ಕಾಲದಲ್ಲಿ ಅಡಗಿದಂತೆನಿಸಿದರೂ, ಸಮಾಧಿಯಿಂದ ವ್ಯವಹಾರಕ್ಕೆ ಬಂದ ಪುರುಷನಿಗೆ ನೆನಪಿನಿಂದ (ಇದುವರೆಗೆ ನಾನು ಸಮಾಧಿಯಲ್ಲಿದ್ದೆನು ಎಂಬ ಸ್ಮರಣವಾಗಿ ಸಮಾಧಿಕಾಲದಲ್ಲಿಯೂ ಚಿತ್ತವೃತ್ತಿಗಳು ಇದ್ದವೆಂದು) ಅನುಮಾನಿಸಲು ಬರುತ್ತದೆ.

**ವೃತ್ತೀನಾಮನುವೃತ್ತಿಸ್ತು ಪ್ರಯತ್ನಾತ್ ಪ್ರಥಮಾದಪಿ ।**
**ಅದೃಷ್ಟಾಸಕೃದಭ್ಯಾಸ ಸಂಸ್ಕಾರ ಸಚಿವಾದ್ಭವೇತ್ ॥೫೭॥**

ಅ:— ಆತ್ಮನನ್ನೇ ವಿಷಯೀಕರಿಸುವ ವೃತ್ತಿಗಳ ಅನುವೃತ್ತಿ ಎಂದರೆ ಪ್ರವಾಹರೂಪವಾದ ಅನುಗತಿಯು ಪುಣ್ಯ-ಹಾಗೂ ಎಡೆಬಿಡದೇ ಮಾಡಿದ

ಅಭ್ಯಾಸದ ಸಂಸ್ಕಾರದಿಂದ ಕೂಡಿ ಸಮಾಧಿ ಪೂರ್ವದಲ್ಲಿ ಮಾಡಿದ ಪ್ರಯತ್ನ ದಿಂದ ಉಂಟಾಗುವದು.

**ಯಥಾ ದೀಪೋ ನಿವಾತಸ್ಥ ಇತ್ಯಾದಿಭಿರನೇಕಧಾ ।**
**ಭಗವಾನಿಮಮೇವಾರ್ಥಮರ್ಜುನಾಯ ನ್ಯರೂಪಯತ್ ॥೫೮॥**

ಅ:—ಗಾಳಿಯಾಡದ ಸ್ಥಳದ ದೀಪವು, ಇತ್ಯಾದಿ ಶ್ಲೋಕಗಳಿಂದ ಭಗವಂತನಾದ ಶ್ರೀಕೃಷ್ಣನು ಇದೇ ನಿರ್ವಿಕಲ್ಪ ಸಮಾಧಿ ಸಾರವನ್ನು ಅನೇಕ ಸಾರೆ ನಿರೂಪಿಸಿರುವನು.

**ಅನಾದಾವಿಹಸಂಸಾರೇ ಸಂಚಿತಾಃ ಕರ್ಮಕೋಟಯಃ ।**
**ಅನೇನ ವಿಲಯಂ ಯಾಂತಿ ಶುದ್ಧೋ ಧರ್ಮೋ**
**ವಿವರ್ಧತೇ ॥೫೯॥**

ಅ:—ಅನಾದಿಯಾದ ಸಂಸಾರದಲ್ಲಿ ಸಂಪಾದಿಸಿದ ಕೋಟ್ಯಾವಧಿ (ಪುಣ್ಯ–ಪಾಪರೂಪೀ) ಕರ್ಮಗಳು ಈ ಸಮಾಧಿಯೋಗದಿಂದ ನಾಶವಾಗುವವು. ಮತ್ತು (ಆತ್ಮಸಾಕ್ಷಾತ್ಕಾರಕ್ಕೆ ಸಾಧನವಾದ) ಶುದ್ಧ ಧರ್ಮವು ವರ್ಧಿಸುವುದು.

**ಧರ್ಮಮೇಘಮಿಮಂ ಪ್ರಾಹುಃ ಸಮಾಧಿಂ ಯೋಗವಿತ್ತಮಾಃ।**
**ವರ್ಷತ್ಯೇಷ ಯತೋ ಧರ್ಮಾಮೃತಧಾರಾಃ ಸಹಸ್ರಶಃ ॥೬೦॥**

ಅ:—ಬ್ರಹ್ಮಜ್ಞಾನಿಗಳು ಈ ನಿರ್ವಿಕಲ್ಪ ಸಮಾಧಿಯನ್ನು ಧರ್ಮ ಮೇಘವೆಂದು ಹೇಳುವರು. ಯಾಕಂದರೆ ಇದು ಧರ್ಮಾಮೃತದ ಸಹಸ್ರ ಧಾರೆಗಳನ್ನು ವರ್ಷಿಸುವುದು. (ಒಂದು ಕ್ಷಣ ಮಾತ್ರ ಇದನ್ನು ಪಡೆದರೆ ನೂರಾರು ಯಜ್ಞಗಳ ಫಲವೆಂದು ಶ್ರುತಿ ಹೇಳುತ್ತದೆ.)

ಈಗ ಈ ಸಮಾಧಿಯ ಪರಮಪ್ರಯೋಜನವನ್ನು ಹೇಳುತ್ತಾರೆ.

**ಅಮುನಾ ವಾಸನಾಜಾಲೆ ನಿಶ್ಶೇಷಂ ಪ್ರವಿಲಾಪಿತೇ ।**
**ಸಮೂಲೋನ್ಮೂಲಿತೇ ಪುಣ್ಯಪಾಪಾಖ್ಯೇ**
**ಕರ್ಮಸಂಚಯೇ ॥೬೧॥**

**ವಾಕ್ಯಮಪ್ರತಿಬದ್ಧಂ ಸತ್ಪ್ರಾಕ್ಪರೋಕ್ಷಾವಭಾಸಿತೇ ।**
**ಕರಾಮಲಕವದ್ಬೋಧಮಪರೋಕ್ಷಂ ಪ್ರಸೂಯತೇ ॥೬೨॥**

ಅ:—ಈ ಸಮಾಧಿಯೋಗದಿಂದ ವಾಸನಾಸಮೂಹವು ನಿಶ್ಶೇಷವಾಗಿ ನಷ್ಟವಾಗಲು, ಪುಣ್ಯ ಮತ್ತು ಪಾಪಗಂಳೆಬ ಕರ್ಮಸಂಚಯವು ಸಮೂಲವಾಗಿ ನಾಶಹೊಂದಲು, (ಮಹಾ) ವಾಕ್ಯವು ಪ್ರತಿಬಂಧರಹಿತವಾಗಿ ಮೊದಲು ಶಾಬ್ದಿಕ (ಪರೋಕ್ಷ)ವಾಗಿ ತಿಳಿದ ತತ್ವವು, ಈಗ ಅಂಗೈನೆಲ್ಲಿಯಂತೆ ಸಾಕ್ಷಾತ್ಕಾರ (ಅಪರೋಕ್ಷ) ರೂಪ ಜ್ಞಾನವನ್ನು ಹುಟ್ಟಿಸುವುದು.

ಇಲ್ಲಿ ಪರೋಕ್ಷಜ್ಞಾನದ ಫಲವನ್ನು ಹೇಳುತ್ತಾರೆ.

**ಪರೋಕ್ಷಂ ಬ್ರಹ್ಮವಿಜ್ಞಾನಂ ಶಾಬ್ದಃ ದೇಶಿಕಪೂರ್ವಕಮ್ ।**
**ಬುದ್ಧಿಪೂರ್ವಕೃತಂ ಪಾಪಂ ಕೃತ್ಸ್ನಂ ದಹತಿ ವಹ್ನಿವತ್ ॥೬೩॥**

ಅ.—ಗುರುವಿನಿಂದ ಪಡೆದ 'ತತ್ವಮಸಿ, ಮೊದಲಾದ ಮಹಾವಾಕ್ಯಗಳ ಪರೋಕ್ಷ ಜ್ಞಾನವು, ಬುದ್ಧಿ ಪುರಃಸರವಾಗಿ ಮಾಡಿದ ಎಲ್ಲ ಪಾಪಗಳನ್ನು ಬೆಂಕಿಯಂತೆ ಸುಟ್ಟುಬಿಡುವುದು.

**ಅಪರೋಕ್ಷಾತ್ಮವಿಜ್ಞಾನಂ ಶಾಬ್ದಂ ದೇಶಿಕಪೂರ್ವಕಮ್ ।**
**ಸಂಸಾರಕಾರಣಾಜ್ಞಾನ ತಮಸಶ್ಚಂಡ ಭಾಸ್ಕರಃ ॥೬೪॥**

ಅ:—ಗುರುವು ಉಪದೇಶಿಸಿದ ಮಹಾವಾಕ್ಯಜನ್ಯ ಅಪರೋಕ್ಷ ಆತ್ಮಜ್ಞಾನವು, ಸಂಸಾರಕ್ಕೆ ಕಾರಣವಾದ ಅಜ್ಞಾನರೂಪದ ಕತ್ತಲೆಗೆ ಸೂರ್ಯನಂತಿರುವುದು.

**ಇತ್ಥಂತತ್ವವಿವೇಕಂ**
**ವಿಧಾಯ ವಿಧಿವನ್ಮನಃ ಸಮಾಧಾಯ ।**
**ವಿಗಲಿತ ಸಂಸೃತಿಬಂಧಃ**
**ಪ್ರಾಪ್ನೋತಿ ಪರಂ ಪದಂ ನರೋ ನ ಚಿರಾತ್ ॥೬೫॥**

ಅ:—ಈ ರೀತಿಯಾಗಿ ಮನುಷ್ಯನು ತತ್ವವಿವೇಕವನ್ನು ಮಾಡಿಕೊಂಡು, ಆ ತತ್ವದಲ್ಲಿ ಶಾಸ್ತ್ರೋಕ್ತ ರೀತಿಯಿಂದ ಮನಸ್ಸನ್ನು ಸ್ಥಿರಗೊಳಿಸಿ, ಸಂಸಾರಬಂಧನವನ್ನು ಕಳಚಿದವನಾಗಿ ಮೋಕ್ಷವನ್ನು ಕೂಡಲೇ ಹೊಂದುವನು.

**ಇತಿ ಶ್ರೀ ವಿದ್ಯಾರಣ್ಯ ಮುನಿ ವಿರಚಿತಾಯಾಂ ಪಂಚದಶ್ಯಾಂ**
**ತತ್ವವಿವೇಕಃ ॥**

## ತತ್ತ್ವವಿವೇಕ ಪ್ರಕರಣದ ಸಾರ

ಇಲ್ಲಿ ಬ್ರಹ್ಮಾತ್ಮೈಕ್ಯರೂಪ ತತ್ತ್ವವನ್ನು ಪಂಚಕೋಶಗಳನ್ನು ವಿವೇಚಿಸಿ ತಿಳಿಸಿರುವದರಿಂದ ಈ ಪ್ರಕರಣಕ್ಕೆ 'ತತ್ತ್ವವಿವೇಕ'ವೆಂದು ಹೆಸರಿಟ್ಟಿದ್ದಾರೆ.

ಕಣ್ಣು-ಕಿವಿ-ನಾಲಿಗೆ-ಮೂಗು ಮತ್ತು ಚರ್ಮ ಈ ಐದು ಜ್ಞಾನೇಂದ್ರಿಯಗಳ ಮುಖಾಂತರ ನಾವು ರೂಪ-ಶಬ್ದಾದಿಗಳ ಜ್ಞಾನವನ್ನು ಪಡೆಯುತ್ತಿರುವೆವೋ ಆ ಅವಸ್ಥೆಗೆ 'ಜಾಗರ' (ಎಚ್ಚರ) ವೆಂದು ಹೆಸರು. ಈ ಅವಸ್ಥೆಯಲ್ಲಿ ಆಕಾಶಾದಿ ಭೂತಗಳ ಗುಣವೆಂದು ಪ್ರಸಿದ್ಧವಾದ ಶಬ್ದ-ಸ್ಪರ್ಶಾದಿ ವಿಷಯಗಳು ಒಂದರಿಂದ ಇನ್ನೊಂದು ಭಿನ್ನವಾಗಿವೆ. ಅದರಂತೆ ಅವುಗಳ ಸ್ವರೂಪಗಳೂ ಪರಸ್ಪರ ವಿಲಕ್ಷಣವಾಗಿವೆ ಎಂಬುದು ಪ್ರಸಿದ್ಧವು.

ಆದರೆ ಇವುಗಳಿಗಿಂತ ತೀರ ಬೇರೆ ಎನಿಸುವ ಅವುಗಳ ಜ್ಞಾನವು ಎಂದರೆ ಶಬ್ದಾದಿ ವಿಷಯಗಳ ಜ್ಞಾನವು ಅರ್ಥಾತ್ ಅನುಭವವು ಅಖಂಡವಾಗಿ ಪ್ರತೀತವಾಗುತ್ತಿರುವುದರಿಂದ ಶಬ್ದಾದಿಗಳಂತೆ ಭಿನ್ನವಾದುದಲ್ಲ

ಇದರಂತೆಯೇ ಸ್ವಪ್ನದಲ್ಲಿಯೂ ಶಬ್ದಾದಿ ವಿಷಯಗಳು ಪರಸ್ಪರ ಭಿನ್ನವಾಗಿವೆ. ಆದರೆ ಅವುಗಳ ಜ್ಞಾನವು ಏಕರೂಪವಾಗಿದೆ. ಎಲ್ಲ ಇಂದ್ರಿಯಗಳ ಉಪಸಂಹಾರವಾಗಲು ಎಚ್ಚರದಲ್ಲಿಯ ವಿಷಯಾನುಭವದ ಸಂಸ್ಕಾರದಿಂದ ಘಟಿಸುವ ಮನೋಮಯ ವಿಷಯಾನುಭವಕ್ಕೆ ಕನಸು (ಸ್ವಪ್ನ)ವೆನ್ನುವರು. ಎಚ್ಚರದಂತೆ ಇಲ್ಲಿ ಕೂಡ ವಿಷಯಗಳಷ್ಟೇ ಭಿನ್ನ. ಅವುಗಳ ಜ್ಞಾನವು ಒಂದೇ.

ಹಾಗಿದ್ದಮೇಲೆ ಎಚ್ಚರ ಮತ್ತು ಕನಸು ಬೇರೆ ಬೇರೆ ಅವಸ್ಥೆಗಳೆಂದು ತಿಳಿಯುವುದೇಕೆ? ಎಂದರೆ-ಎಚ್ಚರದಲ್ಲಿ ಕಾಣುವ ವಸ್ತುಗಳು ಸ್ಥಿರವೆನಿಸುತ್ತವೆ. ಕನಸಿನವು ಸ್ಥಿರವಾದವುಗಳಲ್ಲ. ಎಲ್ಲಿಯವರೆಗೆ ಕನಸಿನ ಅವಸ್ಥೆ ಇರುವದೋ ಅಲ್ಲಿಯವರೆಗೆ ಮಾತ್ರ ಅವಕ್ಕೆ ಸ್ಥಿರತ್ವ. ಎಚ್ಚರದ ವಸ್ತುಗಳನ್ನು ಇಂದು ಕಂಡಂತೆ ನಾಳೆ, ನಾಡದು ಬಹಳವೇನು ಜೀವಮಾನವಿರುವವರೆಗೆ ಕಾಣಬಹುದು. ಅದಕ್ಕಾಗಿ ಎಚ್ಚರ ಮತ್ತು ಕನಸು ಬೇರೆ ಬೇರೆ ಅವಸ್ಥೆಗಳೆಂದು ತಿಳಿಯುವರು. ಹೀಗಿದ್ದರೂ ಅವುಗಳಲ್ಲಿಯ ಜ್ಞಾನವು ಒಂದೇ ಇರುವುದು.

ಇನ್ನು ಗಾಢನಿದ್ದೆ (ಸುಷುಪ್ತಿ)ಯಲ್ಲಿ ಅನುಭವರೂಪ ಜ್ಞಾನವು ಇರುತ್ತದೆಂಬುದನ್ನು ಬಹಳ ಜನರು ತಿಳಿಯುವುದಿಲ್ಲ. ಈ ಅವಸ್ಥೆಯಲ್ಲಿ ಅಜ್ಞಾನ ಮತ್ತು ಸುಖದ ಅನುಭವವು ಇದ್ದೇಇರುತ್ತದೆ. ಆದುದರಿಂದಲೇ ಎಚ್ಚತ್ತ ಮನುಷ್ಯನು– 'ಇಷ್ಟುಹೊತ್ತು ನನಗೇನೂ ತಿಳಿಯಲಿಲ್ಲ. ನಾನು ಸುಖವಾಗಿ ನಿದ್ದೆ ಮಾಡುತ್ತಿದ್ದೆನು' ಎಂದು ತನ್ನ ಅನುಭವವನ್ನು ಹೇಳುತ್ತಾನೆ. ಇದಕ್ಕೆ ಸ್ಮೃತಿಜ್ಞಾನವೆಂದು ಹೇಳಬಹುದು. ಆದರೆ ಅನುಭವಿಸಿದ ಪದಾರ್ಥ ವಿಷಯದಲ್ಲಿ ಮಾತ್ರ ಸ್ಮೃತಿಯು ಸಂಭವಿಸುತ್ತದೆ.

ಆದುದರಿಂದ ಗಾಢನಿದ್ದೆಯಲ್ಲಿ ಜೀವನಿಗೆ ಅಜ್ಞಾನದ ಅನುಭವವಾಗಿದೆ ಎಂದು ತಿಳಿಯಬೇಕಾಯಿತು. ಈ ಅನುಭವವು ವಿಷಯವೆನಿಸಿದ ಅಜ್ಞಾನದಿಂದ ಭಿನ್ನವೆಂಬುದು ಸ್ಪಷ್ಟವಾಗಿದೆ. ಆದರೆ ಎಚ್ಚರ-ಕನಸುಗಳಲ್ಲಿ ಬಂದ ಅನುಭವದಿಂದಮಾತ್ರ ಭಿನ್ನವಲ್ಲ. ಆದುದರಿಂದ ಎಚ್ಚರ-ಕನಸು-ಗಾಢನಿದ್ದೆ ಈಮೂರು ಅವಸ್ಥೆಗಳಲ್ಲಿಯ ಅನುಭವ ಎಂದರೆ ಜ್ಞಾನವು ಒಂದೇ ಎಂದಂತಾಯಿತು.

ಅದರಂತೆ ಒಂದೇದಿನದ ಮೂರು ಅವಸ್ಥೆಗಳಲ್ಲಿ ಸಂವಿತ್ ಒಂದೇ. ಹಿಂದೆ ಕಳೆದ ದಿವಸಗಳಲ್ಲಿ ಒಂದೇ. ಮುಂದೆ ಬರುವ ಅನೇಕ ತಿಂಗಳು-ವರ್ಷ-ಯುಗ-ಕಲ್ಪಗಳಲ್ಲಿ ಕೂಡ ಒಂದೇ. ಅದು ಒಂದೇ ಒಂದು ಅಖಂಡ ವಸ್ತುವಾದುದರಿಂದ ಅದಕ್ಕೆ ಉದಯಾಸ್ತಗಳಿಲ್ಲ. ಇದು ಎಲ್ಲವನ್ನು ತಿಳಿಯುವಂಥದು. ಇದಿಲ್ಲದೇ ಯಾವುದೇ ವಸ್ತುವಿನ ಉತ್ಪತ್ತಿ–ನಾಶಗಳು ಸಂಭವಿಸಲಾರವು. ಈ ಸಂವಿತ್ ಸ್ವಯಂಪ್ರಕಾಶಕವು. ಇದೇ ಎಲ್ಲವನ್ನೂ ಬೆಳಗುವಂಥದು. ಜಡಪದಾರ್ಥಗಳೆಲ್ಲ ಇದಕ್ಕೆ ವಿಷಯವಾಗುವವು. ಆದರೆ ಜ್ಞಾನವು ಮತ್ತೊಂದರ ವಿಷಯವಾಗಲರಿಯದು.

ಹೀಗೆ ಜ್ಞಾನವು ಏಕವೂ, ನಿತ್ಯವೂ, ಸ್ವಯಂಪ್ರಕಾಶಕವೂ ಆದಂತೆ ಪರಮಪ್ರೇಮಾಸ್ಪದವೂ ಆಗಿರುವದು. ಈ ಜ್ಞಾನವೇ ಆತ್ಮನು.

ಆತ್ಮನು ಪರಮ (ನಿರತಿಶಯ) ಪ್ರೇಮಾಸ್ಪದನು ಹೇಗೆಂದರೆ—'ನಾನು ಇಲ್ಲದಂತಾಗಬೇಕು' ಎಂದು ಯಾರೂ ಅಪೇಕ್ಷಿಸುವುದಿಲ್ಲ. ಅಲ್ಲದೇ 'ನಾನು ಯಾವಾಗಲೂ ಇರಬೇಕು' ಎಂದೇ ಎಲ್ಲರ ಅಪೇಕ್ಷೆ. ಹೀಗೆ ಅನಿಸುವ ಕಾರಣ ಕಾರಣವೇನೆಂದರೆ– ಆತ್ಮನಲ್ಲಿ ಪ್ರೇಮವಿಡುವದರಿಂದಲೇ ಸರಿ. ಈ ಪ್ರೇಮವು

ಕಾರಣ ಮೂಲಕ ಹುಟ್ಟಿದುದಲ್ಲ. ಅದುದರಿಂದ ಇದು ನಿರುಪಾಧಿಕ ಹಾಗೂ ನಿರತಿಶಯ. ಆತ್ಮನು ಹೀಗೆ ನಿರತಿಶಯ ಪ್ರೇಮವಿಷಯನಾದುದರಿಂದ ಪರಮಾನಂದರೂಪನೆಂದು ಸಿದ್ಧವಾಯಿತು.

ಪರಮಾನಂದ ಸ್ವರೂಪವಲ್ಲದ್ದು ನಿರತಿಶಯ ಪ್ರೇಮವಿಷಯವಾಗಲರಿಯದು. ಕೊಡ (ಘಟ) ಮೊದಲಾದ ಜಡಪದಾರ್ಥಗಳ ಉದಾಹರಣೆಯನ್ನು ಇಲ್ಲಿ ತೆಗೆದುಕೊಳ್ಳಬಹುದು. ಕೊಡವು ಪರಮಾನಂದಸ್ವರೂಪವಲ್ಲದ್ದರಿಂದ ನಿರತಿಶಯ ಪ್ರೇಮಕ್ಕೆ ವಿಷಯವಾಗಲಾರದು.

ಇನ್ನು ಪ್ರಸಂಗ ವಿಶೇಷದಲ್ಲಿ 'ನನಗೆ ಧಿಕ್ಕಾಗವಿರಲಿ' ಎಂದು ಮೊದಲಾಗಿ ಆತ್ಮವಿಷಯದಲ್ಲಿ ತಿರಸ್ಕಾರ–ದ್ವೇಷಗಳು ಕಂಡುಬಂದಂತೆ ಭಾಸವಾಗಬಹುದು. ಆದರೆ ಅವೆಲ್ಲ ಮುಖ್ಯ ಆತ್ಮನ ವಿಷಯದಲ್ಲಿರದೇ ಸಾಫಲ್ಯ ಕಾಣದ ದುಃಖ ಸಂಬಂಧವನ್ನುಂಟುಮಾಡಿದ ಶರೀರವೇ ಮೊದಲಾದ ಅಮುಖ್ಯ ಆತ್ಮವಿಷಯಕವಾಗಿರುತ್ತವೆ. ಮುಖ್ಯ ಆತ್ಮನಲ್ಲಿರುವ ಪ್ರೇಮವು ಎಲ್ಲರ ಅನುಭವಸಿದ್ಧ ವಿಷಯವಾಗಿದೆ.

ಆತ್ಮನೊಬ್ಬನೇ ನಿರತಿಶಯ ನಿರುಪಾಧಿಕ ಪ್ರೇಮಾಸ್ಪದನೆಂದು ಹೇಳಿದರೆ–ನಾವು ಮಕ್ಕಳು-ಹೆಂಡತಿ-ಧನ-ವಸ್ತು ಮುಂತಾದವುಗಳನ್ನು ಪ್ರೀತಿಸುತ್ತಿರುವೆವಲ್ಲ ಇದು ಹೇಗೆ ?

ಎಂದರೆ ಹಾಗೆ ಪ್ರೇಮಮಾಡುವುದೆಲ್ಲ ಆತ್ಮನಿಗೋಸುಗವೇ. ನಮಗೆ ಸುಖದಾಯಕವೆನಿಸದಂಥ ವಸ್ತುವಿನಮೇಲೆ ನಾವು ಪ್ರೇಮ ತೋರಲಾರೆವಷ್ಟೆ.

ಹೀಗೆ ಆತ್ಮನು ಸಚ್ಚಿತ್ಸುಖರೂಪನೆಂದು ಯುಕ್ತಿಯಿಂದ ಸಿದ್ಧವಾಯಿತು.

ಉಪನಿಷತ್ತಿನಲ್ಲಿ ಬ್ರಹ್ಮನೂ ಸಚ್ಚಿತ್ ಸುಖರೂಪನೆಂದು ಹೇಳಿದೆ.

ಮಹಾವಾಕ್ಯದಲ್ಲಿ ಆತ್ಮನನ್ನು 'ತ್ವಂ' ಎಂಬ ಪದದಿಂದ ಪರಬ್ರಹ್ಮನನ್ನು 'ತತ್' ಎಂಬ ಪದದಿಂದ ಗುರುತಿಸುತ್ತಾರೆ. ಇವರಿಬ್ಬರ ಏಕತ್ವವನ್ನು ಸಾಧಿಸುವುದು ವೇದಾಂತಶಾಸ್ತ್ರದ ವಿಷಯವು.

ಆತ್ಮನು ಪರಮಾನಂದರೂಪನು ಎಂದು ಸಾಧಿಸಬೇಕಾದರೆ ಇಲ್ಲಿ ಒಂದು ಆಕ್ಷೇಪವಿದೆ. ಆತ್ಮನ ಪರಮಾನಂದರೂಪವು ಅನುಭವಕ್ಕೆ ಬರುವುದೇ ?

ಬರುತ್ತದೆ. ಆದುದರಿಂದಲೇ ಅವನು ನಿರತಿಶಯ ಪ್ರೇಮಾಸ್ಪದನೆನಿಸಿದ್ದಾನೆ ಎಂದು ಹಿಂದೆ ಸಿದ್ಧವಾಗಿದೆ.

ಒಳ್ಳೇದು. ನಿಮ್ಮಂತೆ ನಿರತಿಶಯ ಸುಖದ ಅನುಭವ ಬರುತ್ತಿದ್ದರೆ ಇತರ ಪದಾರ್ಥಗಳ ಅಪೇಕ್ಷೆ ಮತ್ತು ವಿಷಯಜನ್ಯ ಸುಖದ ಇಚ್ಛೆ ಸಂಭವಿಸುವ ಕಾರಣವಿರಲಿಲ್ಲ. ಆದುದರಿಂದ ಆತ್ಮನ ಪರಮಾನಂದ ರೂಪತ್ವವು ಸಿದ್ಧಿಸುವುದಿಲ್ಲ.

ಆತ್ಮನ ಪರಮಾನಂದತ್ವವು ಸಾಮಾನ್ಯವಾಗಿ ಅನುಭವಕ್ಕೆ ಬರುತ್ತಿದ್ದರೂ ವಿಶೇಷವೆನಿಸಿ ಅನುಭವಕ್ಕೆ ಬರುವುದಿಲ್ಲ. ಆದುದರಿಂದಲೇ ಅನ್ಯ ಪದಾರ್ಥಗಳ ಇಚ್ಛೆಯುಂಟಾಗುವದು. ಎಂದಮೇಲೆ ಒಂದು ವಸ್ತುವಿನ ಅನುಭವವು 'ಇರುವದೂ ಸರಿ' 'ಇಲ್ಲವೆಂಬುದೂ ಸರಿ' ಎಂದು ಅಶಕ್ಯ ಸಂಗತಿಯನ್ನು ಹೇಳಿದಂತಾಯಿತಲ್ಲ ಎಂದರೆ ಹಾಗೇನೂ ಇಲ್ಲ. ಪ್ರತಿಬಂಧದಿಂದ ಹಾಗೆ ಆಗುವದು ಶಕ್ಯವಿದೆ.

ಅನೇಕ ವಿಪರೀತ ಜ್ಞಾನಕ್ಕೆ ಮುಖ್ಯ ಕಾರಣವಾದ ಅನಾದಿ ವಿದ್ಯೆಯೇ ಆ ಪ್ರತಿಬಂಧವು. ಇದರ ಮೂಲಕವಾಗಿಯೇ ವಸ್ತುತಃ ಪರಮಾನಂದರೂಪನಾದ ಆತ್ಮನು ವಿಶೇಷ ರೂಪದಿಂದ ಅನುಭವಕ್ಕೆ ಬರುವದಿಲ್ಲ.

ಅವಿದ್ಯೆಯ ಮೂಲವು ಪ್ರಕೃತಿ. ಸತ್ವ-ರಜ-ತಮೋಗುಣಗಳ ಸಾಮ್ಯಾವಸ್ಥೆಯೇ ಇದರ ಸ್ವರೂಪ. ಇದರಲ್ಲಿ ಚಿದಾನಂದರೂಪ ಪರಬ್ರಹ್ಮನು ಪ್ರತಿಬಿಂಬಿತನಾಗಿರುವನು.

ಈ ಮೂಲ ಪ್ರಕೃತಿಯು ಎರಡು ವಿಧವಾಗಿರುವದು. ಮಾಯೆ ಮತ್ತು ಅವಿದ್ಯೆ. ಮಾಯೆಯಲ್ಲಿ ಪ್ರತಿಬಿಂಬಿತನಾದ ಚಿದಾನಂದಾತ್ಮನು ಅದನ್ನು ಸ್ವಾಧೀನವಾಗಿಟ್ಟುಕೊಂಡಿರುವದರಿಂದ ಅವನು ಸರ್ವಜ್ಞನು, ಸರ್ವಶಕ್ತಿಮಂತನು, ಅನೇಕಗುಣ ಪರಿಪೂರ್ಣನಾದ ಈಶ್ವರನು.

ಅವಿದ್ಯೆಯಲ್ಲಿ ಪ್ರತಿಬಿಂಬಿತನಾದ ಚಿದಾತ್ಮನು ಅವಿದ್ಯೆಯ ಅಧೀನನಾಗುತ್ತಾನೆ. ಈಶ್ವರನಂತೆ ಇವನು ಸಾಮರ್ಥ್ಯವಂತನಲ್ಲ. ಇದರಿಂದ ಇವನು ಜೀವನೆನಿಸುತ್ತಾನೆ. ಈ ಜೀವನ ಕರ್ಮಗಳ ಮೂಲಕ ಸತ್ವಗುಣದ

ಮಾಲಿನ್ಯವು ಹೆಚ್ಚು ಕಡಿಮೆಯಾಗಿ ದೇವ-ಮನುಷ್ಯ ಪಶು-ಪಕ್ಷಿ ಮುಂತಾದ ಅನೇಕ ಪ್ರಕಾರಗಳು ಸಂಭವಿಸುವವು.

ಈ ಅವಿದ್ಯೆಗೇ ಕಾರಣ ಶರೀರವೆನ್ನುವರು. ಈ ಅವಿದ್ಯೆಯೇ ಜೀವನ ಸ್ಥೂಲ-ಸೂಕ್ಷ್ಮ ಶರೀರಾದಿಗಳಿಗೆ ಕಾರಣವೆನಿಸುತ್ತದೆ. ಇದು ಜ್ಞಾನದಿಂದ ನಾಶವಾಗುತ್ತಿರುವದರಿಂದ ಇದಕ್ಕೆ ಶರೀರವೆಂಬ ಸಂಜ್ಞೆಯುಂಟು.

ಕಾರಣಶರೀರರೂಪವಾದ ಈ ಅವಿದ್ಯೆಗೇ 'ಅಹಂ' ಎಂದು ಹೇಳುವದರಿಂದ ಜೀವನಿಗೆ 'ಪ್ರಾಜ್ಞ'ನೆಂದು ಹೆಸರಾಯಿತು.

ಇನ್ನು ತಮಃ ಪ್ರಧಾನ ಪ್ರಕೃತಿಯೊಂದಿರುವದು. ಇದು ಸೃಷ್ಟಿಯ ಉಪಾದಾನಕಾರಣವು. ಈಶ್ವರನ ಆಜ್ಞೆಯಾಗಲು ಇದರಿಂದ ಆಕಾಶ-ವಾಯು-ತೇಜ-ಜಲ-ಪೃಥ್ವಿಗಳೆಂಬ ಐದು ಸೂಕ್ಷ್ಮಮಹಾಭೂತಗಳು ಉಂಟಾಗುತ್ತವೆ. ಇಲ್ಲಿ ಈಶ್ವರನ ಆಜ್ಞೆ ಎಂದರೆ ಸೃಷ್ಟಿಯನ್ನು ಮಾಡಬೇಕೆಂಬ ಅವನ ಇಚ್ಛೆ ಅಥವಾ ಸಂಕಲ್ಪವು. ಇದೇ ಜಗತ್ತಿನ ನಿಮಿತ್ತ ಕಾರಣವು. ಮಣ್ಣಿನ ಕೊಡಕ್ಕೆ ಉಪಾದಾನ ಕಾರಣವು ಮಣ್ಣು. ನಿಮಿತ್ತ ಕಾರಣವು ಚೇತನನೆನಿಸಿದ ಕುಂಬಾರನು. ಇದರಂತೆ ಜಗತ್ತಿನ ಉಪಾದಾನ ಕಾರಣವು ತಮಃ ಪ್ರಧಾನ ಪ್ರಕೃತಿ. ನಿಮಿತ್ತ ಕಾರಣವು ಜಗದೀಶ್ವರನ ಇಚ್ಛೆ.

ತಮಃಪ್ರಧಾನ ಪ್ರಕೃತಿಯಲ್ಲಿ ಸತ್ವ-ರಜ ತಮಗುಣಗಳಿರುತ್ತವೆ. ಆದುದರಿಂದ ಆ ಪ್ರಕೃತಿಯಿಂದ ಹುಟ್ಟಿದ ಆಕಾಶಾದಿಭೂತಗಳಲ್ಲಿಯೂ ಆ ಗುಣಗಳು ಇರುತ್ತವೆಂದಹಾಗಾಯಿತು. ಆಕಾಶಾದಿ ಐದು ಭೂತಗಳ ಐದು ಸತ್ವಾಂಶಗಳಿಂದ ಐದು ಜ್ಞಾನೇಂದ್ರಿಯಗಳು ನಿರ್ಮಾಣವಾಗುತ್ತವೆ. ಮತ್ತು ಆಕಾಶಾದಿ ಪಂಚಭೂತಗಳ ಸತ್ವಾಂಶ ಸಮೂಹದಿಂದ ಅಂತಃಕರಣವು ಉಂಟಾಗುತ್ತದೆ. ಈ ಅಂತಃಕರಣವೇ ಮನ-ಬುದ್ಧಿಗಳಿಗೆ ಉಪಾದಾನಭೂತ ದ್ರವ್ಯವೆನಿಸಿದೆ. ಎರಡು ಭಿನ್ನ ವೃತ್ತಿಗಳಿಂದ ಅಂತಃಕರಣವು ದ್ವಿವಿಧವಾಗುತ್ತದೆ. ಸಂಶಯಾತ್ಮಕ ವೃತ್ತಿಯುಳ್ಳದುದೇ ಮನಸ್ಸು. ನಿಶ್ಚಯಾತ್ಮಕ ವೃತ್ತಿಯುಳ್ಳದುದು ಬುದ್ಧಿ.

ಆಕಾಶಾದಿ ಐದು ಮಹಾಭೂತಗಳ ಐದು ರಜೋಂಶಗಳಿಂದ ವಾಕ್-ಪಾಣಿ-ಪಾದ ಮೊದಲಾದ ಐದು ಕರ್ಮೇಂದ್ರಿಯಗಳು ಹುಟ್ಟುವವು. ಜ್ಞಾನ

ವನ್ನು ಹುಟ್ಟಿಸತಕ್ಕವು ಜ್ಞಾನೇಂದ್ರಿಯಗಳು. ಕರ್ಮ (ಕ್ರಿಯೆ) ವನ್ನು ಮಾಡತಕ್ಕವು ಕರ್ಮೇಂದ್ರಿಯಗಳು.

ಆಕಾಶಾದಿಗಳ ರಜೋಂಶದಿಂದ ಪ್ರಾಣವು ಉತ್ಪತ್ತಿಯಾಗುವದು. ಇಲ್ಲಿ ಬೇರೆ ಬೇರೆ ವೃತ್ತಿಗಳಿಂದ ಇದರಲ್ಲಿ ಪ್ರಾಣ–ಅಪಾನ–ವ್ಯಾನ ಮುಂ. ಐದು ಪ್ರಕಾರಗಳು.

ಐದು } ಜ್ಞಾನೇಂದ್ರಿಯಗಳು.
ಕರ್ಮೇಂದ್ರಿಯಗಳು.
ಪ್ರಾಣಗಳು. ಹಾಗೂ ಮನಸ್ಸು. ಬುದ್ಧಿ ಇವು ಹದಿನೇಳು ಕೂಡಿ ಸೂಕ್ಷ್ಮ ಶರೀರವು. ಇದಕ್ಕೆ ಲಿಂಗಶರೀರವೆಂದು ವೇದಾಂತಶಾಸ್ತ್ರದಲ್ಲಿ ಹೇಳುವರು.

ಕಾರಣಶರೀರಾಭಿಮಾನಿಯಾದ ಪ್ರಾಜ್ಞನು ಈ ಸೂಕ್ಷ್ಮ ಶರೀರದಲ್ಲಿ ಅಭಿಮಾನವನ್ನು ತಾಳುವುದರಿಂದ "ತೈಜಸ"ನೆಂದು ಹೆಸರು ಪಡೆಯುವನು. ಅಂತಃಕರಣವು ಸತ್ವಗುಣದ ಕಾರ್ಯವೆನಿಸುವದರಿಂದ ಅದಕ್ಕೆ ತೇಜವೆಂದು ಹೆಸರು.

ಇದರಂತೆ ಲಿಂಗಶರೀರದಲ್ಲಿ ಅಭಿಮಾನ ತಾಳಿದ ಮಾಯೋಪಾಧಿಕ ಈಶ್ವರನಿಗೆ 'ಹಿರಣ್ಯಗರ್ಭ'ನೆಂದು ಹೆಸರುಂಟಾಗುವುದು. ಅಲ್ಲಿಯ ತೈಜಸ (ಜೀವ) ನಿಗೆ ವ್ಯಷ್ಟಿತ್ವವಿದ್ದು ಹಿರಣ್ಯಗರ್ಭನಿಗೆ ಸಮಷ್ಟಿತ್ವವಿರುತ್ತದೆ.

ಹಿರಣ್ಯಗರ್ಭನು ಲಿಂಗಶರೀರೋಪಾಧಿಕ ಎಲ್ಲ ತೈಜಸರ ಐಕ್ಯವು ತನ್ನಲ್ಲಿ ಇರುವುದನ್ನು ತಿಳಿಯುತ್ತಾನೆ. ಆದುದದರಿಂದ ಅವನು ಸಮಷ್ಟಿ. ಆದರೆ ಈಶ್ವರನಿಂದಲೇ ಬೇರೆಯಾದ ಜೀವನು ಹಾಗೆ ಐಕ್ಯವನ್ನು ತಿಳಿಯುವುದಿಲ್ಲ. ಆದುದರಿಂದ ಅವನಿಗೆ ವ್ಯಷ್ಟಿ ಎನ್ನುವರು.

ಷಡ್ಗುಣೈಶ್ವರ್ಯ ಸಂಪನ್ನನಾದ ಈಶ್ವರನು ಅನ್ನ–ಪಾನಾದಿ ಭೋಗಗಳು, ಜರಾಯುಜಾದಿ ನಾಲ್ಕು ಬಗೆಯ ಭೋಗಾಯತನ (ಶರೀರ)ಗಳನ್ನು ನಿರ್ಮಿಸಲು ಆಕಾಶಾದಿಭೂತಗಳ ಪಂಚೀಕರಣವನ್ನು ಮಾಡುತ್ತಾನೆ. ಪಂಚೀಕರಣ ವಿಲ್ಲದೇ ಭೂತಗಳು ಇಂದ್ರಿಯಗಳ ವಿಷಯವಾಗಲಾರವು. ಯಾಕಂದರೆ ಪಂಚೀಕರಣವಾದ ಮೇಲೆಯೇ ಭೂತಗಳು ಸ್ಥೂಲ ರೂಪಹೊಂದುವವು.

ಉಪಾದಾನಭೂತ ಪಂಚಸ್ಥೂಲಭೂತಗಳಿಂದ ಬ್ರಹ್ಮಾಂಡವಾಗುವದು. ಅದರಲ್ಲಿ ಭೂಮಿಯೇ ಮೊದಲಾದ ಏಳು ಊರ್ಧ್ವ ಲೋಕಗಳು-ಮತ್ತು ಅತಲಾದಿ ಏಳು ಪಾತಾಲ ಲೋಕಗಳು ಅಲ್ಲಿಯ ಬೇರೆ ಬೇರೆ ಪ್ರಾಣಿಗಳಿಗೆ ಯೋಗ್ಯವಾದ ಅನ್ನ, ಹಾಗೂ ಆಯಾಲೋಕಕ್ಕೆ ಉಚಿತವಾದ ಜರಾಯುಜಾದಿ ಶರೀರಗಳು ನಿರ್ಮಾಣವಾದವು. ಅವೆಲ್ಲ ಸ್ಥೂಲ ಶರೀರಗಳ ಮೇಲೆ ಅಭಿಮಾನವಹಿಸುವ ಸಮಷ್ಟಿರೂಪ ಹಿರಣ್ಯಗರ್ಭನಿಗೆ 'ವೈಶ್ವಾನರ, ನೆಂಬ ಸಂಜ್ಞೆಯುಂಟು. ಒಂದೊಂದೇ ಸ್ಥೂಲ ಶರೀರದ ಮೇಲೆ ಅಭಿಮಾನ ವಹಿಸುವ ವ್ಯಷ್ಟಿರೂಪ ತೈಜಸನಿಗೆ 'ವಿಶ್ವ'ನೆಂದು ಸಂಜ್ಞೆ ಬರುವುದು.

ಈ ವಿಶ್ವಸಂಜ್ಞಕ ಜೀವನಿಗೆ ಕೇವಲ ಬಹಿರ್ದೃಷ್ಟಿ ಇರುವದು. ಇವನು ಪ್ರತ್ಯಕ್ ತತ್ವವನ್ನು ತಿಳಿಯುವುದಿಲ್ಲ.

ಆದುದರಿಂದ ವಿಶ್ವ (ಜೀವ)ರು ಮನುಷ್ಯಾದಿಶರೀರಗಳನ್ನು ಆಶ್ರಯಿಸಿ ಆಯಾ ಶರೀರೋಚಿತ ಕರ್ಮಗಳನ್ನು ಮಾಡುತ್ತ ಕರ್ಮಚಕ್ರದಲ್ಲಿ ಸಿಲುಕುವರು. ಪುನಃ ಕರ್ಮ ಪುನಃ ಶರೀರಧಾರಣೆ. ಮತ್ತೆ ಭೋಗಕ್ಕಾಗಿ ಕರ್ಮ ಹೀಗೆ ಒಂದು ಕೀಟವು ನದಿಯ ಚಕ್ರಸುಳಿಯಿಂದ ಇನ್ನೊಂದು ಸುಳಿಗೆ ಬೀಳುವಂತೆ ಕರ್ಮ ಪ್ರವಾಹದಲ್ಲಿ ಇವರು ತೊಳಲಬೇಕಾಗುವದು.

ಯಾವುದೋ ಪೂರ್ವ ಪುಣ್ಯವು ಪರಿಪಾಕಗೊಂಡಾಗ ದಯಾಳು ಪುರುಷನೊಬ್ಬನು ಆ ಕೀಟವನ್ನು ಪ್ರವಾಹದಿಂದ ಎತ್ತಿಹಾಕಿದರೆ ಆಗಕೀಟವು ದಂಡೆಯಲ್ಲಿರುವ ಒಂದು ಮರದನೆರಳಿನಲ್ಲಿ ವಿಶ್ರಾಂತಿ ಪಡೆಯುತ್ತದೆ. ಅದರಂತೆ ಪೂರ್ವ ಪುಣ್ಯವು ಫಲೋನ್ಮುಖವಾಗಿ ಬರಲು ಆಗ ಬ್ರಹ್ಮಜ್ಞಾನಿಯಾದ ಗುರುವಿನಿಂದ ಮಹಾ ವಾಕ್ಯಾದಿಗಳನ್ನು ಶ್ರವಣಮಾಡಿ ಅನ್ನಮಯ ಮುಂತಾದ ಪಂಚಕೋಶ ವಿವೇಕದಿಂದ ಮೋಕ್ಷವನ್ನು ಪಡೆಯುತ್ತಾನೆ.

ಅನ್ನ–ಪ್ರಾಣ–ಮನ–ವಿಜ್ಞಾನ-ಆನಂದ ಇವು ಪಂಚಕೋಶಗಳು. ಇವುಗಳಿಂದ ಆಚ್ಛಾದಿತ ಆತ್ಮನು ಸ್ವರೂಪವನ್ನು ಮರೆತು ಸಂಸಾರದಲ್ಲಿ ಬೀಳುತ್ತಾನೆ.

ಹೀಗಿದ್ದರೂ ಅನ್ವಯ-ವ್ಯತಿರೇಕಗಳೆಂಬ ಉಪಾಯಗಳನ್ನು ಅವಲಂಬಿಸಿ ಆತ್ಮ ಪಂಚಕೋಶಗಳಿಂದ ಬೇರೆಯಾಗಿದ್ದಾನೆ ಎಂದು ನಿಶ್ಚಯಿಸಿ ಆತ್ಮನು

ಬ್ರಹ್ಮತ್ವವನ್ನು ಪಡೆಯುವನು. ಯಾಕೆಂದರೆ- ಚಿದಾನಂದ ರೂಪತ್ವ ಲಕ್ಷಣವು ಆತ್ಮ ಹಾಗೂ ಬ್ರಹ್ಮದಲ್ಲಿ ಸಾಮಾನ್ಯವಾಗಿದೆ.

ಇನ್ನು 'ತತ್‌ತ್ವಂ ಅಸಿ' ಎಂಬ ಮಹಾವಾಕ್ಯವನ್ನು ವಿಚಾರಿಸಿದರೂ ಆತ್ಮ ಬ್ರಹ್ಮರ ಐಕ್ಯವೇ ಸಿದ್ಧಿಸುತ್ತದೆ. ಈ ವಿಚಾರ ಕ್ರಮವು ವಾಕ್ಯದಲ್ಲಿಯ ವಿರುದ್ಧಾಂಶಗಳನ್ನು ತ್ಯಾಗಮಾಡಿ ಅವಿರುದ್ಧ ಅಂಶಗಳನ್ನು ಗ್ರಹಣಮಾಡುವ ದಾಗಿದೆ. ಇದಕ್ಕೆ ಜಹದಜಹಲ್ಲಕ್ಷಣಾವೃತ್ತಿ ಎಂದು ಹೆಸರು. ಪರಮಾತ್ಮನ ಉಪಾಧಿಯಾದ ಮಾಯೆ, ಜೀವಾತ್ಮನ ಉಪಾಧಿಯಾದ ಅವಿದ್ಯೆ ಇವುಗಳನ್ನು ತ್ಯಾಗಮಾಡುವುದರಿಂದ ಅಖಂಡ-ಏಕರಸ-ಸಚ್ಚಿದಾನಂದ ಬ್ರಹ್ಮವೇ ಮಹಾ ವಾಕ್ಯದಿಂದ ಲಕ್ಷಿತವಾಗುವುದು.

ಇಲ್ಲಿ ಹೀಗೆ ಲಕ್ಷಿತವಾಗುವ ಬ್ರಹ್ಮವು ಸವಿಕಲ್ಪವೋ? ನಿರ್ವಿಕಲ್ಪವೋ? ಎಂಬ ಪ್ರಶ್ನೆ ಉದ್ಭವಿಸುವುದು. ಆದರೆ ವಿವರ್ತವಾದದಲ್ಲಿ ಇಂಥ ಆಕ್ಷೇಪಗಳೇ ಸಂಭವಿಸುವುದಿಲ್ಲ. ಯಾಕೆಂದರೆ ಅಧ್ಯಾಸದಲ್ಲಿ ಎಲ್ಲ ಅಶಕ್ಯ ಸಂಗತಿಗಳೂ ಸುಶಕ್ಯವಾಗುತ್ತವೆ.

ಒಟ್ಟಿನಲ್ಲಿ ಮಹಾವಾಕ್ಯದಿಂದ ಜೀವ-ಬ್ರಹ್ಮೈಕ್ಯರೂಪ ಅರ್ಥವನ್ನು ಅನುಸಂಧಾನಮಾಡುವುದೇ ಶ್ರವಣವು. ಯುಕ್ತಿಯಿಂದ ಆವಾಕ್ಯಾರ್ಥ ಸಂಭವಿ ಸುವುದೆಂಬುದೇ ಚಿಂತನವು. ಐಕ್ಯಾರ್ಥವನ್ನು ನಿಶ್ಚಿತಮಾಡಿಕೊಳ್ಳುವುದೇ ಮನನವು. ಶುದ್ಧಾತ್ಮರೂಪದಲ್ಲಿ ಚಿತ್ತವನ್ನು ಏಕಾಗ್ರಗೊಳಿಸುವುದೇ ನಿದಿ ಧ್ಯಾಸನವು. ಇದಕ್ಕೇ ಯೋಗಶಾಸ್ತ್ರದಲ್ಲಿ ಧ್ಯಾನವೆನ್ನುತ್ತಾರೆ. ಇದೇ ಪಕ್ವ ವಾಯಿತೆಂದರೆ ಚಿತ್ತವು ಧ್ಯೇಯರೂಪವಾಗಿ ನಿಲ್ಲುವದು. ಗಾಳಿಯಾಡದ ಸ್ಥಳದ ದೀಪದಂತೆ ತಾನೇ ತಾನಾಗುವುದು. ಇದಕ್ಕೆ ಸಮಾಧಿ ಎನ್ನುವರು.

ಸಮಾಧಿ ಕಾಲದಲ್ಲಿ ಚಿತ್ತವೃತ್ತಿ ಇಲ್ಲವೆಂಬಂತೆ ಅನುಭವಕ್ಕೆ ಬಂದರೂ ಸಮಾಧಿಯಿಂದ ಎದ್ದಾಗ ಸಮಾಧಿಯ ಸೆನಪು ಇದ್ದೇ ಇರುವುದು. ಆದುದ ರಿಂದ ಆಗಲೂ ಚಿತ್ತವೃತ್ತಿ ಇದ್ದಿತೆಂದು ತಿಳಿಯಬೇಕಾಗುವುದು.

ಸಮಾಧಿ ಅವಸ್ಥೆಯಲ್ಲಿ ಚಿತ್ತವೃತ್ತಿಯ ಅನುವೃತ್ತಿ (ಹಿಂದೇದೆಯಲ್ಲಿ ಹರಿಯುವವೃತ್ತಿ) ಗಳಿಗೋಸುಗ ಜೀವನ ಯಾವ ಪ್ರಯತ್ನವೂ ನಡೆಯದು. ಆದರೆ ಸಮಾಧಿಯನ್ನು ಪಡೆಯಬೇಕೆಂದು ಪೂರ್ವದಲ್ಲಿ ಮಾಡಿದ

ಪ್ರಯತ್ನಗಳಿಂದ ಅನುವೃತ್ತಿಯುಂಟಾಗುವುದು. ಆ ಪ್ರಯತ್ನಕ್ಕೆ ಒಂದು ಬಗೆಯ ಅದೃಷ್ಟ-ಪುಣ್ಯವೂ, ಸಮಾಧಿಯ ಅಭ್ಯಾಸದಿಂದ ಹುಟ್ಟಿದ ಸಂಸ್ಕಾರವೂ ಸಹಾಯಕಾರಿಯಾಗಿವೆ. ಭಗವಂತನಾದ ಶ್ರೀ ಕೃಷ್ಣನು ಇದೇ ಸಮಾಧಿಯ ವರ್ಣನೆಯನ್ನು ಸವಿಸ್ತರವಾಗಿ ಮಾಡಿದ್ದಾನೆ.

## ಸಮಾಧಿಯಿಂದ ದೊರೆಯುವ ಲಾಭಗಳು

ಅನಾದಿ ಎನಿಸುವ ಸಂಸಾರದಲ್ಲಿ ಅಸಂಖ್ಯ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯ–ಪಾಪ ರೂಪಕರ್ಮಗಳು (ಇವು ಅಪರಿಮಿತವಾಗಿವೆ.) ಈ ಸಮಾಧಿಯೋಗದಿಂದ ನಾಶಹೊಂದುವವು. ಆತ್ಮ ಸಾಕ್ಷಾತ್ಕಾರಕ್ಕೆ ಕಾರಣವೆನಿಸುವ ಶುದ್ಧವಾದ ಧರ್ಮವು ವೃತ್ತಿಯಾಗಿ ಕಾರ್ಯಸಹಿತವಾದ ಅವಿದ್ಯೆಯಲಿ ಇಲ್ಲದಂತಾಗುವುದು.

ಜ್ಞಾನಿಗಳಾದ ಯೋಗವೇತ್ತರು ಈ ನಿರ್ವಿಕಲ್ಪ ಸಮಾಧಿಯನ್ನು 'ಧರ್ಮಮೇಘವೆಂದು ಗುರುತಿಸುವರು. ಯಾಕೆಂದರೆ ಇದು ಧರ್ಮರೂಪಸಹಸ್ರಶಃ ಅಮೃತಧಾರೆಗಳನ್ನು ಸುರಿಸುವದು. ಈ ಸಮಾಧಿಯೋಗದಿಂದ ಅಹಂ-ಮಮ-ಕರ್ತಾ-ಭೋಕ್ತಾ ಮುಂತಾದ ವಾಸನೆಗಳೆಲ್ಲ ಅಡಗುವವು. ಪುಣ್ಯ-ಪಾಪರೂಪಕರ್ಮ ಸಂಚಯವು ಸಮೂಲ ವಿನಾಶವನ್ನೈದುವುದು.

ಇದರಿಂದ ತತ್ವಮಸಿಯೇ ಮೊದಲಾದ ಮಹಾವಾಕ್ಯ ಜ್ಞಾನವಾಗಲು ಇರುವ ಪ್ರತಿಬಂಧಗಳು ಉಳಿಯಲಾರವು. ಅಂಗೈನೆಲ್ಲಿಯಂತೆ ಆತ್ಮಸಾಕ್ಷಾತ್ಕಾರ ಲಭಿಸುವುದು.

## ಪರೋಕ್ಷ ಜ್ಞಾನದ ಲಾಭಗಳು

ಸದ್ಗುರುಮುಖದಿಂದ ಮಹಾ ವಾಕ್ಯಗಳನ್ನು ಶ್ರವಣ ಮಾಡಿದ್ದರಿಂದ ಉಂಟಾದ ಪರೋಕ್ಷ ಬ್ರಹ್ಮಜ್ಞಾನವು ಬುದ್ಧಿಪೂರ್ವಕವಾಗಿ ಆಚರಿಸಿದ ಎಲ್ಲ ಪಾಪಗಳನ್ನು ಸುಟ್ಟುಹಾಕುವುದು.

ಸಾರಾಂಶವೇನೆಂದರೆ—ಪರೋಕ್ಷಜ್ಞಾನದ ಫಲವೇ ಹೀಗಿದ್ದಮೇಲೆ ಅಪರೋಕ್ಷ ಜ್ಞಾನದ ಮಹಿಮೆಯನ್ನೇನು ವರ್ಣಿಸುವುದು ?

ಮಧ್ಯಾಹ್ನಕಾಲದ ಪ್ರಖರ ತೇಜೋರಾಶಿ ಸೂರ್ಯನಂತೆ ಅಪರೋಕ್ಷ ಜ್ಞಾನವು ಅಜ್ಞಾನಾಂಧಃಕಾರವನ್ನು ನಾಶಮಾಡುವುದು. ಅಜ್ಞಾನದಿಂದ

ಉಂಟಾದ ಪ್ರಪಂಚವೂ ಇದರಿಂದ ನಾಶವಾಗುವುದೆಂದು ಬೇರೆ ಹೇಳುವುದೇ ಬೇಡ.

ಪಂಚ ಕೋಶಾದಿಗಳ ವಿವೇಚನ ಮಾಡುತ್ತ ಬ್ರಹ್ಮಾತ್ಮೈಕ್ಯ ರೂಪದಲ್ಲಿ ಶಾಸ್ತ್ರೋಕ್ತ ವಿಧಾನದಿಂದ ಮನಸ್ಸನ್ನು ಸ್ಥಿರಗೊಳಿಸಿದಲ್ಲಿ ಸ್ವಲ್ಪ ಕೂಡ ತಡ ವಿಲ್ಲದೇ ಆ ಪುರುಷನು ಸಚ್ಚಿದಾನಂದರೂಪಬ್ರಹ್ಮವೇ ಆಗುತ್ತಾನೆ.

... ○....

## ೨ ಮಹಾಭೂತವಿವೇಕ

ಸೃಷ್ಟಿಗಿಂತ ಮೊದಲು ತಾನೇ ತಾನಾಗಿದ್ದ ಸದ್ರೂಪ ಅದ್ವಿತೀಯ ಬ್ರಹ್ಮನು ಜಗತ್ತಿನ ಕಾರಣನೆಂದು ಹೇಳುತ್ತಾರೆ. ಅವನು ಮಾತು-ಮನಗಳಿಗೆ ವಿಷಯನಲ್ಲ. ಆದುದರಿಂದ ಅವನ ಕಾರ್ಯಗಳೇ ಆಗಿ ಉಪಾಧಿಗಳೆನಿಸಿದ ಭೂತ ಪಂಚಕಗಳ ವಿವೇಕ ಮುಖಾಂತರವಾಗಿ ಆ ಬ್ರಹ್ಮನ ಜ್ಞಾನ ಮಾಡಿ ಕೊಡಲು ಪ್ರಾರಂಭಿಸುತ್ತಾರೆ.

**ಸದದ್ವೈತಂ ಶ್ರುತಂ ಯತ್ತತ್ಪಂಚ ಭೂತ ವಿವೇಕತಃ ।**
**ಬೋದ್ಧುಂ ಶಕ್ಯಂ ತತೋ ಭೂತಪಂಚಕಂ ಪ್ರವಿವಿಚ್ಯತೇ ॥೧॥**

ಅ:— (ಛಾಂದೋಗ್ಯವೇ ಮೊದಲಾದ) ಶ್ರುತಿಗಳಿಂದ ಕೇಳಿದ ಸದ್ರೂಪ–ಅದ್ವಿತೀಯ ಬ್ರಹ್ಮವು ಪಂಚಭೂತಗಳ ವಿವೇಚನೆಯಿಂದ ಮಾತ್ರ ತಿಳಿಯಲು ಶಕ್ಯ. ಆದುದರಿಂದ ನಾವೀಗ ಪಂಚಭೂತಗಳ ವಿವೇಚನೆ ಮಾಡುತ್ತೇವೆ.

ಗುಣಭಿನ್ನತೆಯಿಂದ ಆಕಾಶಾದಿ ಪಂಚಮಹಾಭೂತಗಳೆಂಬ ಭೇದ ಗಳುಂಟಾದ್ದರಿಂದ ಅವುಗಳಿಗೆ ಗುಣಗಳನ್ನು ಮೊದಲು ಹೇಳುತ್ತಾರೆ.

**ಶಬ್ದಸ್ಪರ್ಶೌ ರೂಪರಸೌ ಗಂಧೋಭೂತಗುಣಾ ಇಮೇ ।**
**ಏಕದಿತ್ರಿಚತುಃಪಂಚ ಗುಣಾವ್ಯೋಮಾದಿಷುಕ್ರಮಾತ್ ॥೨॥**

ಅ:— ಶಬ್ದ-ಸ್ಪರ್ಶ-ರೂಪ ರಸ ಮತ್ತು ಗಂಧಗಳೆಂದು (ಪಂಚ) ಭೂತಗಳ ಗುಣಗಳು, ಆಕಾಶಾದಿ ಭೂತಗಳಲ್ಲಿ ಕ್ರಮವಾಗಿ ಒಂದು-ಎರಡು ಮೂರು-ನಾಲ್ಕು ಮತ್ತು ಐದು ಗುಣಗಳಿರುವವು.

ಹೇಗೆಂದರೆ ?

**ಪ್ರತಿಧ್ವನಿರ್ವಿಯಚ್ಛಬ್ದೋ ವಾಯೌಬೀಸೀತಿ ಶಬ್ದನಮ್ ।**
**ಅನುಷ್ಣಾಶೀತಸಂಸ್ಪರ್ಶೋ ವಹ್ನೌ ಭುಗು ಭುಗು ಧ್ವನಿಃ ॥೩॥**

**ಉಷ್ಣಃಸ್ಪರ್ಶಃಪ್ರಭಾರೂಪಂ ಜಲೇ ಬುಲುಬುಲು ಧ್ವನಿಃ ।**
**ಶೀತಃ ಸ್ಪರ್ಶಃ ಶುಕ್ಲರೂಪಂ ರಸೋ ಮಾಧುರ್ಯ**
**ಮೀರಿತಮ್ ॥೪॥**

**ಭೂಮೌ ಕಡಕಡಾಶಬ್ದಃ ಕಾಠಿಣ್ಯಂ ಸ್ಪರ್ಶ ಇಷ್ಯತೇ ।**
**ನೀಲಾದಿಕಂ ಚಿತ್ರರೂಪಂ ಮಧುರಾಮ್ಲಾದಿಕೋ ರಸಃ ॥೫॥**

**ಸುರಭೀತರಗಂಧೌದ್ವೌ ಗುಣಾಃಸಮ್ಯಗ್ವಿವೇಚಿತಾಃ ।**
**ಶ್ರೋತ್ರಂ ತ್ವಕ್ ಚಕ್ಷುಷೀ ಜಿಹ್ವಾ ಘ್ರಾಣಂ**
**ಚೇಂದ್ರಿಯಪಂಚಕಮ್ ॥೬॥**

ಅ:— ಆಕಾಶಕ್ಕೆ ಪ್ರತಿಧ್ವನಿ ರೂಪವಾದ ಶಬ್ದ ಒಂದೇ ಗುಣವು. ವಾಯುವಿನಲ್ಲಿ 'ಬೀಸಿ' ಎಂಬ ಶಬ್ದವು. ಬಿಸಿಇಲ್ಲದ ಶೀತವಿಲ್ಲದ ಒಂದು ಬಗೆಯ ಸ್ಪರ್ಶವು. ಅಗ್ನಿಯಲ್ಲಿ 'ಭುಗು ಭುಗು' ಶಬ್ದ. ಉಷ್ಣ ಸ್ಪರ್ಶ. ಪ್ರಭೆ ಯುರೂಪ. 'ನೀರಿನಲ್ಲಿ ಬುಳು ಬುಳು' ಶಬ್ದ. ತಂಪಾದ ಸ್ಪರ್ಶ. ಬಿಳಿಯು ದಾದ ರೂಪ. ಮಾಧುರ್ಯವೆಂಬ ರಸ. (ಹೀಗೆ ನಾಲ್ಕು). ಪೃಥ್ವಿಯಲ್ಲಿ ಕಡ ಕಡ ಶಬ್ದ, ಕಠಿಣ ಸ್ಪರ್ಶ. ಕಪ್ಪು-ಕೆಂಪು ಇತ್ಯಾದಿ ಆರು ಪ್ರಕಾರದ ರೂಪ ಸಿಹಿ-ಹುಳಿ ಮೊದಲಾದ ಆರು ಪ್ರಕಾರದ ರಸ. ಸುಗಂಧ- ದುರ್ಗಂಧಗಳೆಂಬ ಎರಡು ವಿಧದ ಗಂಧ. ಹೀಗೆ ಐದು ಗುಣಗಳು. ಈ ಪ್ರಕಾರ ಸ್ಪಷ್ಟವಾಗಿ ಗುಣಗಳ ವಿವೇಚನೆಯಾಯಿತು.

ಹೀಗೆ ಗುಣದಿಂದ ಪಂಚಮಹಾಭೂತಗಳಲ್ಲಿ ಭೇದವನ್ನುಹೇಳಿ ಕಾರ್ಯದಿಂ ದಲೂ ಭೇದವುಂಟೆಂದು ತಿಳಿಸಲು ಅವುಗಳ (ಅಪಂಚೀಕೃತ) ಎಂದರೆ ಸೂಕ್ಷ್ಮ ಮಹಾಭೂತಗಳ ಕಾರ್ಯಗಳೇ ಆದ ಜ್ಞಾನೇಂದ್ರಿಯಗಳನ್ನು ಹೇಳುತ್ತಾರೆ

ಅ:— ಕಿವಿ-ಚರ್ಮ-ಕಣ್ಣುಗಳು-ನಾಲಿಗೆ-ಮೂಗು. ಇವು (ಜ್ಞಾನ) ಇಂದ್ರಿಯ ಪಂಚಕವು.

**ಕರ್ಣಾದಿಗೋಲಕಸ್ಥಂ ತಚ್ಛಬ್ದಾದಿಗ್ರಾಹಕಂ ಕ್ರಮಾತ್ ।**
**ಸೌಕ್ಷ್ಮ್ಯಾತ್ ಕಾರ್ಯಾನುಮೇಯಂ ತತ್ಪ್ರಾಯೋ**
**ಧಾವೇದ್ಬಹಿರ್ಮುಖಮ್ ॥ ೭ ॥**

ಅ:— ಆ ಇಂದ್ರಿಯ ಪಂಚಕವು ಕಿವಿಯೇ ಮೊದಲಾದ ಗೋಲಕ (ಸ್ಥಾನ)ಗಳಲ್ಲಿ ನೆಲೆಸಿರುವದು. ಕ್ರಮವಾಗಿ ಶಬ್ದಾದಿ ವಿಷಯಗಳನ್ನು ಗ್ರಹಿಸುವದು. ಅದು (ಇಂದ್ರಿಯ ಪಂಚಕವು) ಬಹಳ ಸೂಕ್ಷ್ಮವಾಗಿರುವದರಿಂದ ಕಾರ್ಯಗಳಿಂದಲೇ ಅದನ್ನು ತಿಳಿಯಬೇಕಾಗುವದು. ಬಹುತರವಾಗಿ ಇದು ಬಹಿರ್ಮುಖವಾಗಿ ಓಡುತ್ತಿರುವದು.

(ಈ ಶ್ಲೋಕದಲ್ಲಿ 'ಪ್ರಾಯಃ'=ಬಹುತರವಾಗಿ ಎಂದು ಬಂದಿರುವ ಶಬ್ದದ ವಿಶೇಷಾರ್ಥವೆಂದರೆ, ಬುದ್ಧಿವಂತನಾದ ಪುರುಷನಿಗೆ ಅವುಗಳನ್ನು ಅಂತರ್ಮುಖಗೊಳಿಸಿ ಆತ್ಮ ಸಾಕ್ಷಾತ್ಕಾರ ಪಡೆಯಲು ಸಾಧ್ಯ ಎಂದು ತಿಳಿಯಬೇಕು.)

**ಕದಾಚಿತ್ಪಿಹಿತೇ ಕರ್ಣೇ ಶ್ರೂಯತೇ ಶಬ್ದ ಆಂತರಃ ।**
**ಪ್ರಾಣವಾಯೌ ಜಾಠರಾಗ್ನೌ ಜಲಪಾನೇಽನ್ನಭಕ್ಷಣೇ ॥೮॥**
**ವ್ಯಜ್ಯಂತೇ ಹ್ಯಾಂತರಾಃ ಸ್ಪರ್ಶಾ ಮೀಲನೇ ಚಾಂತರಂ ತಮಃ ।**
**ಉದ್ಗಾರೇ ರಸಗಂಧೌ ಚೇತ್ಯಕ್ಷಾಣಾಮಾಂತರಗ್ರಹಃ ॥೯॥**

ಅಃ— ಒಂದು ವೇಳೆ ಕಿವಿಗಳನ್ನು ಮುಚ್ಚಿಕೊಂಡರೆ ಪ್ರಾಣವಾಯು ಮತ್ತು ಜಠರಾಗ್ನಿಯಲ್ಲಿಯ ಶಬ್ದವು ಕೇಳಬಹುದು. ನೀರು ಕುಡಿದಾಗ, ಅನ್ನವನ್ನು ಉಂಡಾಗ ಒಳಗೆ ಆದ ಸ್ಪರ್ಶವು ತಿಳಿಯುವದು. ಕಣ್ಣು ಮುಚ್ಚಿಕೊಂಡರೆ ಒಳಗಿನ ಕತ್ತಲೆಯು ಅನುಭವಕ್ಕೆ ಬರುವದು. ತೇಗು ಮುಂ. ಬಂದಾಗ ಒಳಗಿನ್ನರಸ-ಗಂಧಗಳು ತಿಳಿಯುವವು. ಹೀಗೆ ಇಂದ್ರಿಯಗಳು ಒಳಗಿನ ವಿಷಯಗಳನ್ನು ಗ್ರಹಿಸಬಲ್ಲವು.

ಕರ್ಮೇಂದ್ರಿಯವ್ಯಾಪಾರಗಳನ್ನು ಹೇಳಿ ಅವು ಉಂಟೆಂಬುದನ್ನು ಸ್ಪಷ್ಟಪಡಿಸುತ್ತಾರೆ.

**ಪಂಚೋಕ್ತ್ಯಾದಾನ ಗಮನವಿಸರ್ಗಾನಂದಕಾಃ ಕ್ರಿಯಾಃ ।**
**ಕೃಷಿವಾಣಿಜ್ಯ ಸೇವಾದ್ಯಾಃ ಪಂಚಸ್ವಂತರ್ಭವಂತಿ ಹಿ ॥೧೦॥**

ಅ:— ಮಾತಾಡುವದು, ತೆಗೆದುಕೊಳ್ಳುವದು, ಗಮನಮಾಡುವದು, ಮಲವಿಸರ್ಜನೆ, ಸ್ಪರ್ಶಸುಖ ತೆಗೆದುಕೊಳ್ಳುವದು, ಈ ಐದು ಕ್ರಿಯೆಗಳು ಪ್ರಸಿದ್ಧವಾಗಿವೆ. ಮತ್ತು ಕೃಷಿ-ವ್ಯಾಪಾರ-ಸೇವೆ (ಊಳಿಗ) ಮುಂ. ಇವುಗಳಲ್ಲಿಯೆ ಒಳಗೊಳ್ಳುವವು.

**ವಾಕ್ಪಾಣಿಪಾದಪಾಯೂಪಸ್ಥೈರಕ್ಷೈಸ್ತತ್ಕ್ರಿಯಾಜನಿಃ ।**
**ಮುಖಾದಿ ಗೋಲಕೇಷ್ವಾಸ್ತೇ ತತ್ಕರ್ಮೇಂದ್ರಿಯ**
**ಪಂಚಕಮ್ ॥೧೧॥**

ಅ:— ಮಾತು, ಕೈ. ಕಾಲು, ಗುದ, ಶಿಶ್ನ ಈ ಐದು ಇಂದ್ರಿಯಗಳಿಂದ (ಮೇಲೆ ಹೇಳಿದ) ಕ್ರಿಯೆಗಳು ಜರುಗುತ್ತವೆ. ಈ ಕರ್ಮೇಂದ್ರಿಯ ಪಂಚಕವು ಮುಖಾದಿ ಗೋಲಕಗಳಲ್ಲಿ ಇರುತ್ತದೆ.

ಇನ್ನು ಈ ದಶ ಇಂದ್ರಿಯಗಳನ್ನು ಪ್ರೇರಿಸುವ ಮನಸ್ಸಿನ ಸ್ಥಾನ ಮತ್ತು ಕರ್ಮವನ್ನು ಹೇಳುತ್ತಾರೆ.

**ಮನೋ ದಶೇಂದ್ರಿಯಾಧ್ಯಕ್ಷಂ ಹೃತ್ಪದ್ಮಗೋಲಕೇ ಸ್ಥಿತಮ್ ।**
**ತಚ್ಚಾಂತಃಕರಣಂ ಬಾಹ್ಯೇಷ್ವಸ್ವಾತಂತ್ರ್ಯಾದ್ವಿನೇಂ**
**ದ್ರಿಯೈಃ ॥೧೨॥**

ಅ:— ಮನಸ್ಸು ಹತ್ತು ಇಂದ್ರಿಯಗಳ ಅಧ್ಯಕ್ಷನೆನಿಸುವದು. ಅದು ಹೃದಯಕಮಲರೂಪ ಗೋಲಕದಲ್ಲಿರುವದು. ಇಂದ್ರಿಯಗಳ ಸಹಾಯವಿಲ್ಲದೆ ಬಾಹ್ಯ ವಿಷಯಗಳಲ್ಲಿ ವರ್ತಿಸಲು ಅದಕ್ಕೆ ಸ್ವಾತಂತ್ರ್ಯವಿಲ್ಲದ್ದರಿಂದ ಅದಕ್ಕೆ ಅಂತರಿಂದ್ರಿಯವೆಂದು ಹೆಸರು.

(ಸ್ವತಂತ್ರ ರೀತಿಯಿಂದ ಬಾಹ್ಯವಿಷಯಗಳನ್ನರಿತುಕೊಳ್ಳಲು ಮನಸ್ಸಿಗೆ ಸಾಧ್ಯವಿಲ್ಲ. ಆದಕಾರಣ ಅದಕ್ಕೆ ಅಂತಃಕರಣವೆಂದು ಪಂಡಿತರು ಹೇಳುವರು)

ಮನವು ಇಂದ್ರಿಯಗಳ ಅಧ್ಯಕ್ಷನೆಂಬುದು ಹೇಗೆಂಬುದನ್ನು ಸ್ಪಷ್ಟಪಡಿಸುತ್ತಾರೆ.

**ಅಕ್ಷೇಷ್ವರ್ಥಾರ್ಪಿತೇಷ್ವೇತದ್ಗುಣ-ದೋಷ ವಿಚಾರಕಮ್ ।**
**ಸತ್ವಂ ರಜಸ್ತಮಶ್ಚಾಸ್ಯ ಗುಣಾ ವಿಕ್ರಿಯತೇ ಹಿ ತೈಃ ॥೧೩॥**

ಅಃ—ಇಂದ್ರಿಯಗಳು ವಿಷಯಗಳಲ್ಲಿ ಮಗ್ನವಾಗುತಿರಲು, ಮನವು (ವಿಷಯಗಳ) ಗುಣ–ದೋಷಗಳನ್ನು ವಿಚಾರಿಸುವದು. ಇದಕ್ಕೆ ಸತ್ವ–ರಜ ತಮವೆಂಬ ಮೂರು ಗುಣಗಳಿವೆ. ಹೀಗೆಂದು ಆ ಗುಣಗಳ ಯೋಗದಿಂದ ಇದು ವಿಕಾರವನ್ನು ಹೊಂದುವದು.

ಗುಣಯೋಗದಿಂದ ವಿಕಾರವು ಹೇಗೆ?

**ವೈರಾಗ್ಯಂ ಕ್ಷಾಂತಿರೌದಾರ್ಯಮಿತ್ಯಾದ್ಯಾಃ ಸತ್ವಸಂಭವಾಃ ।**
**ಕಾಮ ಕ್ರೋಧೌ ಲೋಭ ಯತ್ನಾವಿತ್ಯಾದ್ಯಾ ರಜಸೋತ್ಥಿತಾಃ ।**
**ಆಲಸ್ಯ ಭ್ರಾಂತಿತಂದ್ರಾದ್ಯಾ ವಿಕಾರಾತಮಸೋತ್ಥಿತಾಃ ॥೧೪॥**

ಅ:—ವೈರಾಗ್ಯ, ಕ್ಷಮೆ(ತಾಳ್ಮೆ), ಉದಾರತೆ ಮುಂ. ಸತ್ವಗುಣದಿಂದ ಹುಟ್ಟಿದವುಗಳು. ಕಾಮ–ಕ್ರೋಧ–ಲೋಭ–ಯತ್ನ ಮುಂ. ರಜೋಗುಣದಿಂದ. ಆಲಸ್ಯ–ಭ್ರಮೆ-ನಿದ್ದೆಬಡಕತನ ಮುಂ. ತಮೋಗುಣದಿಂದ ಹುಟ್ಟಿದವುಗಳು.

ವೈರಾಗ್ಯಾದಿಗಳ ಕಾರ್ಯಗಳನ್ನು ವಿಭಾಗಿಸಿ ತೋರಿಸುತ್ತಾರೆ.

**ಸಾತ್ವಿಕೈಃ ಪುಣ್ಯನಿಷ್ಪತ್ತಿಃ ಪಾಪೋತ್ಪತ್ತಿಶ್ಚ ರಾಜಸೈಃ ।**
**ತಾಮಸೈರ್ನೋಭಯಂ ಕಿಂತು ವೃಥಾಯುಃ ಕ್ಷಪಣಂ ಭವೇತ್ ॥೧೫॥**

ಅ:—ಸಾತ್ವಿಕ ವಿಕಾರಗಳ ಯೋಗದಿಂದ ಪುಣ್ಯಸಂಚಯವು. ರಾಜಸ ವಿಕಾರಗಳ ಯೋಗದಿಂದ ಪಾಪವು ಬೆಳೆಯುತ್ತದೆ. ತಾಮಸ ವಿಕಾರಗಳಿಂದ ಎರಡೂ ಇಲ್ಲ. ವ್ಯರ್ಥವಾಗಿ ಆಯುಷ್ಯ ಮಾತ್ರ ಕಳೆಯುತ್ತದೆ.

**ಅತ್ರಾಹಂಪ್ರತ್ಯಯೀ ಕರ್ತೇತ್ಯೇವಂ ಲೋಕವ್ಯವಸ್ಥಿತಿಃ ॥೧೬॥**

ಅ:—ಈ ಅಂತಃಕರಣ ಮೊದಲಾದವುಗಳಮೇಲೆ 'ನಾನು' ಎಂದು ಅಭಿಮಾನ ತಾಳುವ ಆತ್ಮನೇ ಕರ್ತನು. ಲೋಕದಲ್ಲಿ ಕೂಡ ಹೀಗೇ ವ್ಯವಹಾರವಿರುವದು.

— ಇದುವರೆಗೆ ಜಗತ್ತಿನ ಸ್ಥಿತಿಯನ್ನು ಹೇಳಿ ಈಗ ಅದು ಪಂಚಭೂತಗಳ ಕಾರ್ಯವಾದುದರಿಂದ ಭೌತಿಕವಾಗಿದೆ ಎಂದು ತಿಳಿಯಲು ಉಪಾಯಗಳನ್ನು ಹೇಳುತ್ತಾರೆ.

**ಸ್ಪಷ್ಟಶಬ್ದಾದಿಯುಕ್ತೇಷು ಭೌತಿಕತ್ವಮತಿಸ್ಫುಟಮ್ ।**
**ಅಕ್ಷಾದಾವಪಿ ತಚ್ಛಾಸ್ತ್ರಯುಕ್ತಿಭ್ಯಾಮವಧಾರ್ಯತಾಮ್ ॥೧೭॥**

ಅ:— ಸ್ಪಷ್ಟ ಶಬ್ದವೇ ಮೊದಲಾದ ( ಶಬ್ದವು ಆಕಾಶಗುಣವು. ಸ್ಪರ್ಶವು ವಾಯುಗುಣವು.) ಪಂಚಭೂತಗಳಿಂದ ಕೂಡಿಕೊಂಡಿರುವ ಪದಾರ್ಥಗಳ ಭೌತಿಕತ್ವವು ನಿಚ್ಚಳವಾಗಿಯೇ ಇದೆ. ಅದು ಇಂದ್ರಿಯಗಳಲ್ಲಿಯೂ ಇರುವವೆಂದು ಶಾಸ್ತ್ರ ಮತ್ತು ಯುಕ್ತಿಗಳಿಂದ ತಿಳಿಯಬೇಕು.

ಆಕಾಶವೇ ಮೊದಲಾದ ಪಂಚಮಹಾಭೂತಗಳ ಕಾರ್ಯಕ್ಕೆ ಭೌತಿಕವೆನ್ನುವರು. ಘಟವೇ ಮುಂ. ಪದಾರ್ಥಗಳು ಶಬ್ದ-ಸ್ಪರ್ಶ ಇತ್ಯಾದಿ ಭೂತಕಾರ್ಯದಿಂದ ಕೂಡಿರುತ್ತವೆ. ಅಲ್ಲದೆ ಆಯಾ ಭೂತಧರ್ಮಗಳೆಲ್ಲ ಅವುಗಳಲ್ಲಿ ಸ್ಪಷ್ಟವಾಗಿ ಅನುಭವಕ್ಕೆ ಬರುತ್ತವೆ. ಆದುದರಿಂದ ಅವು (ಆ ಪದಾರ್ಥಗಳು) ಭೌತಿಕವೆಂದು ಹೇಳಬಹುದು. ಆದರೆ ಇಂದ್ರಿಯಗಳ ವಿಷಯ ? "ಮನವು ಅನ್ನದ ವಿಕಾರವಾಗಿದೆ. ಪ್ರಾಣವು ನೀರಿನ ವಿಕಾರ ಎಂದು ಮೊದಲಾಗಿ ಛಾಂದೋಗ್ಯ ಶ್ರುತಿಯಲ್ಲಿ ಹೇಳಿದೆ. ಇದರಂತೆ ಯುಕ್ತಿಯಿಂದಲೂ ಇಂದ್ರಿಯಗಳು ಭೌತಿಕವೆಂದು ಸಿದ್ಧಮಾಡಬಹುದು.)

—ಹೀಗೆ ಭೂತ-ಭೌತಿಕ ಪದಾರ್ಥಗಳನ್ನು ವಿವೇಚಿಸಿ ಈಗ "ಸದೇವ ಸೋಮ್ಯ ಇದಂ ಅಗ್ರ ಆಸೀತ್'' ಎಲೈ ಪ್ರಿಯದರ್ಶನನಾದ ಶ್ವೇತಕೇತುವೇ ಜಗದುತ್ಪತ್ತಿಗಿಂತ ಮೊದಲು ಇದೆಲ್ಲ 'ಸತ್' ಆಗಿತ್ತು ಎಂದು ಮೊದಲಾಗಿ ಅದ್ವಿತೀಯ ಬ್ರಹ್ಮ ಪ್ರತಿಪಾದಕ ಶ್ರುತಿಯನ್ನು ವ್ಯಾಖ್ಯಾನಮಾಡುವ ಗ್ರಂಥಕಾರರು ಮೇಲಿನ ವಾಕ್ಯದಲ್ಲಿಯ 'ಇದಂ' ಪದದ ಅರ್ಥ ಹೇಳುತ್ತಾರೆ.

**ಏಕಾದಶೇಂದ್ರಿಯೈರ್ಯುಕ್ತ್ಯಾ ಶಾಸ್ತ್ರೇಣಾಪ್ಯವಗಮ್ಯತೇ ।**
**ಯಾವತ್ಕಿಂಚಿದ್ಭವೇದೇತದಿದಂ ಶಬ್ದೋದಿತಂ ಜಗತ್ ॥೧೮॥**

ಅ:— ಮನ ಸಹಿತವಾಗಿ ಹನ್ನೊಂದು ಇಂದ್ರಿಯಗಳಿಂದ ಹಾಗೂ ಅನುಮಾನ, ಅರ್ಥಾಪತ್ತಿ ಮುಂ. ಪ್ರಮಾಣಗಳಿಂದ, ಶಾಸ್ತ್ರದಿಂದ ಸ್ವಲ್ಪ

ಕೂಡ ಬಿಡದೇ ಯಾವ ಜಗತ್ತು ತಿಳಿದುಬರುವದೋ ಅದನ್ನು 'ಇದಂ' ಶಬ್ದದಿಂದ ಹೇಳಲಾಗಿದೆ.

ಇನ್ನು ಪೂರ್ಣವಾಗಿ ಅದೇ ಶ್ರುತಿಯನ್ನು ಅನುವಾದಿಸುತ್ತಾರೆ.

**ಇದಂ ಸರ್ವಂ ಪುರಾ ಸೃಷ್ಟೇರೇಕಮೇವಾದ್ವಿತೀಯಕಮ್ ।**
**ಸದೇವಾಸೀನ್ನಾಮರೂಪೇ ನಾಸ್ತಾಮಿತ್ಯಾರುಣೇರ್ವಚಃ ॥೧೯॥**

ಅ:—ಸೃಷ್ಟಿ ಹುಟ್ಟುವದಕ್ಕಿಂತ ಮೊದಲು ಇದೆಲ್ಲ (ಇದಂ ಶಬ್ದವಾಚ್ಯ) ಒಂದೇ ಒಂದು ಮತ್ತೊಂದಿಲ್ಲದ ಸದ್ರೂಪವಿತ್ತು. ನಾಮ-ರೂಪಗಳು ಇರಲಿಲ್ಲ ಎಂದು (ಛಾಂದೋಗ್ಯದಲ್ಲಿ) ಅರುಣಿಯ ಮಗನ (ಉದ್ದಾಲಕನ) ವಚನವುಂಟು.

(ಛಾಂದೋಗ್ಯೋಪನಿಷತ್ತಿನ ಆರನೇ ಅಧ್ಯಾಯದಲ್ಲಿ ಅರುಣಪುತ್ರನಾದ ಉದ್ದಾಲಕನು ತನ್ನ ಮಗನಾದ ಶ್ವೇತಕೇತುವಿಗೆ ಬ್ರಹ್ಮೋಪದೇಶವನ್ನು ಮಾಡುವಾಗ ಈ ವಾಕ್ಯ ಬಂದಿದೆ)

ಲೌಕಿಕವಾದ ಯಾವುದೇ ಪದಾರ್ಥಗಳಲ್ಲಿ ಸ್ವಗತ-ಸಜಾತೀಯ-ವಿಜಾತೀಯಗಳೆಂಬ ಭೇದಗಳಿರುತ್ತವೆ.

**ವೃಕ್ಷಸ್ಯ ಸ್ವಗತೋ ಭೇದಃ ಪತ್ರ ಪುಷ್ಪ ಫಲಾದಿಭಿಃ ।**
**ವೃಕ್ಷಾಂತರಾತ್ಸಜಾತೀಯೋ ವಿಜಾತೀಯಃ ಶಿಲಾದಿತಃ ॥೨೦॥**

ಅ:— ವೃಕ್ಷಗಳಲ್ಲಿ ಎಲೆ-ಹೂ-ಕಾಯಿ ಮೊದಲಾದವುಗಳ ಯೋಗದಿಂದ ಸ್ವಗತಭೇದವು ಕಂಡುಬರುತ್ತದೆ. ಅದರ ವಿಷಯದಲ್ಲಿಯೇ ಬೇರೆ ಜಾತಿಯ ವೃಕ್ಷಗಳನ್ನು ಹೋಲಿಸಲು ಸಜಾತೀಯ ಭೇದವು ಕಾಣುತ್ತದೆ. ಅದರಂತೆ ಕಲ್ಲು-ಮಣ್ಣು ಮುಂ. ಯೋಗದಿಂದ ವಿಜಾತೀಯ ಭೇದವೆನಿಸುತ್ತದೆ.

—ಲೌಕಿಕ ಪದಾರ್ಥಗಳಂತೆ ಸದ್ವಸ್ತುವಿನಲ್ಲಿಯೂ ಸಂಭವಿಸಬಹುದಾದ ಈ ಭೇದತ್ರಯವನ್ನು ಶ್ರುತಿಯು ಮೂರು ಪದಗಳಿಂದ ನಿವಾರಿಸುವದೆಂದು ಹೇಳುತ್ತಾರೆ.

**ತಥಾ ಸದ್ವಸ್ತುನೋ ಭೇದತ್ರಯಂ ಪ್ರಾಪ್ತಂ ನಿವಾರ್ಯತೇ ।**
**ಐಕ್ಯಾವಧಾರಣಾದ್ವೈತಪ್ರತಿಷೇಧೈಸ್ತ್ರಿಭಿಃ ಕ್ರಮಾತ್ ॥೨೧॥**

ಅ:— ಅದರಂತೆ ಸದ್ವಸ್ತುವಿನಲ್ಲಿಯೂ ಪ್ರಾಪ್ತವಾಗುವ ಈ ಮೂರು ಭೇದಗಳನ್ನು, ಏಕತ್ವವನ್ನು ತಿಳಿಸುವ, ನಿಶ್ಚಯಾರ್ಥಕವಾದ, ದ್ವೈತವನ್ನು ನಿಷೇಧಿಸುವ (ಏಕಮೇವಾದ್ವಿತೀಯಮ್) ಮೂರು ಶಬ್ದಗಳಿಂದ ಕ್ರಮವಾಗಿ ಅಲ್ಲಗಳೆಯುತ್ತಾರೆ.

ಸದ್ವಸ್ತುವು ನಿರವಯವವೆನಿಸುವದರಿಂದ ಅದರಲ್ಲಿ ಭೇದತ್ರಯದ ಸಂದೇಹತಾಳುವದೇ ಸಾಧ್ಯವಿಲ್ಲವೆನ್ನುತ್ತಾರೆ.

**ಸತೋ ನಾವಯಾಃ ಶಂಕ್ಯಾಸ್ತದಂಶಸ್ಯಾನಿರೂಪಣಾತ್ ।**
**ನಾಮ ರೂಪೇ ನ ತಸ್ಯಾಂಶೌ ತಯೋರದ್ಯಾಪ್ಯನುದ್ಭವಾತ್ ॥೨೨॥**

ಅ:— ಸದ್ವಸ್ತುವಿನ ಅಂಶರೂಪಭಾಗಗಳುಂಟೆಂದು ಪ್ರಮಾಣಗಳಿಂದ ಸಿದ್ಧವಾಗುವದಿಲ್ಲ. ಆದುದರಿಂದ ಅದರಲ್ಲಿ ಅವಯವ (ಭಾಗ) ಗಳುಂಟೆಂದು ಸಂದೇಹ ತಾಳಲು ಶಕ್ಯವಿಲ್ಲ. (ಸೃಷ್ಟಿ ಪೂರ್ವದಲ್ಲಿ) ಇನ್ನೂ ನಾಮರೂಪಗಳು ಹುಟ್ಟಿಕೊಂಡಿರಲಿಲ್ಲ. ಆದುದರಿಂದ ನಾಮರೂಪಗಳು ಸದ್ವಸ್ತುವಿನ ಅಂಶಗಳೆನಿಸಲಾರವು.

**ನಾಮರೂಪೋದ್ಭವಸ್ಯೈವ ಸೃಷ್ಟಿತ್ವಾತ್ ಸೃಷ್ಟಿತಃ ಪುರಾ ।**
**ನ ತಯೋರುದ್ಭವಸ್ತಸ್ಮಾನ್ನಿರಂಶಂ ಸದ್ಯಥಾ ವಿಯತ್॥೨೩॥**

ಅ:— ನಾಮ-ರೂಪಗಳ ಉತ್ಪತ್ತಿ ಎಂದರೇ ಸೃಷ್ಟಿಎನಿಸುವುದರಿಂದ ಸೃಷ್ಟಿಯ ಪೂರ್ವದಲ್ಲಿ ಅವು ಇರಲಿಲ್ಲ. (ಎಂದಂತಾಯಿತು.) ಆದುದರಿಂದ ಆಕಾಶದಂತೆ ಸದ್ವಸ್ತುವು ಅಖಂಡವಾಗಿದೆ. (ಇದರಿಂದ ಸ್ವಗತ ಭೇದ ನಿರಾಕರಣವಾಯಿತು.)

ಇನ್ನು 'ಏವ' ಪದದಿಂದ ಸಜಾತೀಯ ಭೇದವನ್ನು ನಿರಾಕರಿಸುತ್ತಾರೆ.

**ಸದಂತರಂ ಸಜಾತೀಯಂ ನ ವೈಲಕ್ಷಣ್ಯವರ್ಜನಾತ್ ।**
**ನಾಮರೂಪೋಪಾಧಿ ಭೇದಂ ವಿನಾ ನೈವ ಸತೋ ಭಿದಾ॥೨೪॥**

ಅ:— ಸದ್ವಸ್ತುವಿನಲ್ಲಿ ವಿಲಕ್ಷಣತೆ (ಭಿನ್ನಲಕ್ಷಣತ್ವ) ಇಲ್ಲದ್ದರಿಂದ, ಅದರ ಹೊರತು ಇನ್ನೊಂದಿಲ್ಲ. ನಾಮ-ರೂಪಗಳ ಉಪಾಧಿಭೇದದ ಹೊರತಾಗಿ ಸದ್ವಸ್ತುವಿಗೆ ಇನ್ನೊಂದು ಭೇದವಿಲ್ಲ.

(ಉಪಾಧಿಗಳ ಮೂಲಕ ಕಂಡುಬಂದ ಭೇದವು ಉಪಾಧಿನಷ್ಟವಾದ ಕೂಡಲೇ ನಷ್ಟವಾಗುತ್ತದೆ. ಆದುದರಿಂದ ಉಪಾಧಿಮೂಲವಾದ ಭೇದವು ನಿಜವಾದುದಲ್ಲ.)

ಅದರಲ್ಲಿ ವಿಜಾತೀಯ ಭೇದವೂ ಇಲ್ಲ.

**ವಿಜಾತೀಯಮಸತ್ತತ್ತು ನ ಖಲ್ವಸ್ತೀತಿ ಗಮ್ಯತೇ ।**
**ನಾಸ್ಯಾತಃ ಪ್ರತಿಯೋಗಿತ್ವಂ ವಿಜಾತೀಯಾದ್ಭಿದಾ ಕುತಃ ॥೨೫॥**

ಅ:— ಸತ್ತಿಗೆ ವಿಜಾತೀಯ (ಭಿನ್ನ ಲಕ್ಷಣವುಳ್ಳ)ವೆನಿಸುವ ಅಸತ್ತು ಇರುತ್ತದೆಂದು ಅನಿಸುವದೇಇಲ್ಲ. ಎಂದಮೇಲೆ ಅಸತ್ತು ಸತ್ತಿಗೆ ಪ್ರತಿಯೋಗಿಯಾಗಲಾರದು. ಆದುದರಿಂದ ವಿಜಾತೀಯ ಪದಾರ್ಥದಿಂದ ಸತ್ತಿನಲ್ಲಿ ಭೇದವಾಗುವದು ಹೇಗೆ?

ಇವೆಲ್ಲ ವಿಚಾರಗಳಿಂದ ನಿಷ್ಪನ್ನವೇನಾಯಿತು ?

**ಏಕಮೇವಾದ್ವಿತೀಯಂ ಸತ್ಸಿದ್ಧಮತ್ರ ತು ಕೇಚನ ।**
**ವಿಹ್ವಲಾ ಅಸದೇವೇದಂ ಪುರಾಸೀದಿತ್ಯವರ್ಣಯನ್ ॥೨೬॥**

ಅ:— ಹೀಗೆ ಸತ್ತು ಮೂರು ಭೇದಗಳಿಲ್ಲದುದೆಂದು ಸಿದ್ಧವಾಯಿತು. ಆದರೆ ಕೆಲವರು ಸೃಷ್ಟಿಯ ಪೂರ್ವದಲ್ಲಿ ಅಸತ್ತೇ ಇದ್ದಿತೆಂದು ಹೇಳುತ್ತಾರೆ.

(ಬೌದ್ಧಮತಾನುಯಾಯಿಗಳಾದ ಶೂನ್ಯವಾದಿ ಮಾಧ್ಯಮಿಕರು ಹೀಗೆ ಹೇಳುತ್ತಾರೆ.)

**ಮಗ್ನಸ್ಯಾಬ್ಧೌ ಯಥಾಕ್ಷಾಣಿ ವಿಹ್ವಲಾನಿ ತಥಾಸ್ಯಧೀಃ ।**
**ಅಖಂಡೈಕರಸಂ ಶ್ರುತ್ವಾ ನಿಷ್ಪ್ರಚಾರಾ ಬಿಭೇತ್ಯತಃ ॥೨೭॥**

ಅ:— ಸಮುದ್ರದಲ್ಲಿ ಮುಳುಗಿದ ಪ್ರಾಣಿಗಳ ಇಂದ್ರಿಯಗಳು ಹೇಗೆ ವ್ಯಾಕುಲಗೊಳ್ಳುವವೋ, ಅದರಂತೆ ಮಾಧ್ಯಮಿಕರೇ ಮೊದಲಾದವರ ಬುದ್ಧಿಯು ಅಖಂಡವೂ, ಏಕರಸವೂ ಆದ ಬ್ರಹ್ಮಸ್ವರೂಪವನ್ನು ಕೇಳಿ ಕುಂಠಿತವಾಗುವದು. ಆದುದರಿಂದ ಭೀತಿ ಎನಿಸುವದು.

ಅನೇಕ ಆಚಾರ್ಯರೂ ಇದನ್ನು ಒಪ್ಪುತ್ತಾರೆ.

**ಗೌಡಾಚಾರ್ಯಾ ನಿರ್ವಿಕಲ್ಪೇ ಸಮಾಧಾವನ್ಯಯೋಗಿನಾಮ್ ।**
**ಸಾಕಾರಬ್ರಹ್ಮನಿಷ್ಠಾನಾಮತ್ಯಂತಂ ಭಯಮೂಚಿರೇ ॥೨೮॥**

ಅ– ಗೌಡಪಾದಾಚಾರ್ಯರು ನಿರ್ವಿಕಲ್ಪ ಸಮಾಧಿಯಲ್ಲಿ ಸಗುಣಬ್ರಹ್ಮನಿಷ್ಠೆಯುಳ್ಳ ಬೇರೆ ಅನೇಕಉಪಾಸಕರಿಗೆ ಬಹಳಭಯವೆನಿಸುವದೆಂದು ಹೇಳಿದ್ದಾರೆ.

ಗೌಡಪಾದಾಚರ್ಯ ವಿರಚಿತ ಮಾಂಡೂಕ್ಯಕಾರಿಕಾ ಗ್ರಂಥದಿಂದ ಮೇಲೆ ಹೇಳಿದ ಅರ್ಥವುಳ್ಳ ಶ್ಲೋಕ (ಕಾರಿಕಾ) ವನ್ನು ಉದ್ಧರಿಸುತ್ತಾರೆ. (ಮಾಂಡೂಕ್ಯಕಾರಿಕಾ ಗ್ರಂಥವು ೨೦೦ ಶ್ಲೋಕಾತ್ಮಕವು.)

**ಅಸ್ಪರ್ಶಯೋಗೋ ನಾಮೈಷ ದುರ್ದರ್ಶಃ ಸರ್ವಯೋಗಿಭಿಃ ।**
**ಯೋಗಿನೋ ಬಿಭ್ಯತಿ ಹ್ಯಸ್ಮಾದಭಯೇ ಭಯದರ್ಶಿನಃ ॥೨೯॥**

ಅ:— ಈ 'ಅಸ್ಪರ್ಶಯೋಗ'ವೆಂಬ ಹೆಸರಿನ ನಿರ್ವಿಕಲ್ಪ ಸಮಾಧಿಯು ಸಗುಣೋಪಾಸಕರಾದ ಯೋಗಿಗಳಿಗೆ ಕಾಣಲು ಸಾಧ್ಯವಿಲ್ಲ. ಯಾಕೆಂದರೆ ನಿರ್ಭಯವಾದ ಸ್ಥಾನದಲ್ಲಿ ಭಯವುಂಟೆಂದು ತಿಳಿಯುವ ಅವರಿಗೆ ಈ ಸಮಾಧಿಯಲ್ಲಿ ಭಯವೆನಿಸುತ್ತದೆ.

ಗೌಡಪಾದಾಚಾರ್ಯರು ಶ್ರೀ ಶಂಕರಾಚಾರ್ಯರ ಪರಮಗುರುಗಳು. ಎಂದರೆ ಗುರುಗಳ ಗುರುಗಳು.

ಶಂಕರಾಚಾರ್ಯರ ಮತವನ್ನು ಹೇಳುತ್ತಾರೆ.

**ಭಗವತ್ಪೂಜ್ಯ ಪಾದಾಶ್ಚ ಶುಷ್ಕತರ್ಕಪಟೂನಮೂನ್ ।**
**ಆಹುರ್ಮಾಧ್ಯಮಿಕಾನ್ ಭ್ರಾಂತಾನ ಚಿಂತ್ಯೇಽಸ್ಮಿನ್ ಸದಾತ್ಮನಿ ॥೩೦॥**

ಅ:— ಮತ್ತು ಭಗವತ್ಪೂಜ್ಯಪಾದರುಕೂಡ ಒಣ ತರ್ಕ ಮಾಡುವದರಲ್ಲಿ ಚತುರರಾಗಿರುವ ಮಾಧ್ಯಮಿಕರಿಗೆ ಈ ಅಚಿಂತ್ಯನಾದ ಸದ್ರೂಪ ಆತ್ಮನ ವಿಷಯದಲ್ಲಿ ಭ್ರಾಂತರಾಗಿರುವರೆಂದು ಹೇಳುತ್ತಾರೆ.

ಸುರೇಶ್ವರಾಚಾರ್ಯರ ಅಭಿಪ್ರಾಯ

**ಅನಾದೃತ್ಯ ಶ್ರುತಿಂ ಮೌರ್ಖ್ಯಾದಿಮೇ ಬೌದ್ಧಾಸ್ತಮಸ್ವಿನಃ ।**
**ಆಪೇದಿರೇ ನಿರಾತ್ಮತ್ವಮನು ಮಾನೈಕ ಚಕ್ಷುಷಃ ॥೩೧॥**

ಅ:— ಈ ಅಜ್ಞಾನಿಗಳಾದ ಬೌದ್ಧರು ಮೂರ್ಖತನದಿಂದ ಶ್ರುತಿಯನ್ನು ಅನಾದರಮಾಡಿ 'ಅನುಮಾನ' ಒಂದೇ ಪ್ರಮಾಣವೆಂದು ಭಾವಿಸುತ್ತ ಶೂನ್ಯವಾದಕ್ಕೆ ಬಂದರು.

ಇಲ್ಲಿ ಶೂನ್ಯವಾದಿಗಳಿಗೆ ಪ್ರಶ್ನೆಮಾಡಿ ನಿರುತ್ತರಗೊಳಿಸುವರು.

**ಶೂನ್ಯಮಾಸೀದಿತಿ ಬ್ರೂಷೇ ಸದ್ಯೋಗಂ ವಾ ಸದಾತ್ಮತಾಮ್।**
**ಶೂನ್ಯಸ್ಯ ನ ತು ತದ್ಯುಕ್ತಮುಭಯಂ ವ್ಯಾಹತತ್ವತಃ ॥೩೨॥**

ಅ:—(ಎಲೈ ಮಾಧ್ಯಮಿಕನೇ) ಶೂನ್ಯವು ಇದ್ದಿತು ಎಂಬ ಮಾತಿನಿಂದ ಶೂನ್ಯಕ್ಕೆ ಸತ್ತಿನೊಡನೆ ಸಂಬಂಧವೋ? ತಾದಾತ್ಮ್ಯವೋ ಇವೆರಡೂ ಉತ್ತರಗಳಲ್ಲಿ ವ್ಯಾಘಾತದೋಷ ಸಂಬಂಧಿಸುವುದರಿಂದ ಅವು ಯೋಗ್ಯವಾದವುಗಳಲ್ಲ.

('ಇರು' ಎಂಬ ಧಾತು ಪ್ರಯೋಗ ಅಥವಾ ಕ್ರಿಯಾಪದ ಪ್ರಯೋಗವು ಒಂದು ವಸ್ತುವು ಇದ್ದಿತೆಂದು ಸೂಚಿಸುವದರಿಂದ 'ಶೂನ್ಯವು ಇದ್ದಿತು' ಎಂಬ ವಾಕ್ಯವು "ವದತೋವ್ಯಾಘಾತ"ದೋಷದಿಂದ ಕೂಡಿರುವದೆಂದು ಭಾವವು. ಇದಕ್ಕೆ 'ನನ್ನ ತಾಯಿ ಬಂಜೆಯು' ಎಂಬುದು ಉದಾಹರಣೆಯಾಗಿದೆ.)

**ನ ಯುಕ್ತಸ್ತಮಸಾ ಸೂರ್ಯೋನಾಪಿ ಚಾಸೌ ತಮೋಮಯಃ।**
**ಸಚ್ಛೂನ್ಯಯೋರ್ವಿರೋಧಿತ್ವಾಚ್ಛೂನ್ಯಮಾಸೀತ್ ಕಥಂ ವದ ॥೩೩॥**

ಅ:—ಸೂರ್ಯನು ಕತ್ತಲೆಯಿಂದ ಕೂಡಿದವನಲ್ಲ. ಕತ್ತಲೆಯ ರೂಪವುಳ್ಳವನೂ ಅಲ್ಲ. ಅದರಂತೆ ಸತ್ತು ಮತ್ತು ಶೂನ್ಯಗಳಲ್ಲಿ ವಿರೋಧವಿರುವದರಿಂದ "ಶೂನ್ಯವಿತ್ತು" ಎಂದು ಹೇಳುವದು ಹೇಗೆ?

ಹೀಗಿದ್ದಮೇಲೆ ನಿರ್ವಿಕಲ್ಪ ಬ್ರಹ್ಮದಲ್ಲಿ ಆಕಾಶಾದಿ ಭೂತಗಳಾದರೂ ಇರುವವೆಂಬುದು ಹೇಗೆ? ಇದರಿಂದ ವ್ಯಾಘಾತದೋಷ ಉಂಟಾಗಲಾರದೇ?

**ವಿಯದಾದೇರ್ನಾಮರೂಪೇ ಮಾಯಯಾ ಸುವಿಕಲ್ಪಿತೇ।**
**ಶೂನ್ಯಸ್ಯ ನಾಮರೂಪೇಚ ತಥಾ ಚೇಜ್ಜೀವ್ಯತಾಂ ಚಿರಮ್ ॥೩೪॥**

ಅ.—ಆಕಾಶ ಮೊದಲಾದವುಗಳ ನಾಮರೂಪಗಳು ಮಾಯೆಯಿಂದ ಕಲ್ಪಿತವಾದವುಗಳು. ಅದರಂತೆ ಶೂನ್ಯದ ನಾಮರೂಪಗಳಾದರೂ ಕಲ್ಪಿತವೆಂದರೆ, ಆ ಶೂನ್ಯವು ಯಾವಾಗಲೂ ಬಾಳಲಿ.

(ಕಲ್ಪಿತ ವಸ್ತುವಿನ ವಿಷಯೋಗದಿಂದ ಅಧಿಷ್ಠಾನಕ್ಕೆ ಯಾವ ಬಾಧೆಯೂ ಇಲ್ಲ.)

ಹಾಗೆಂದರೆ ಶೂನ್ಯಕ್ಕಾದಂತೆ ಸದ್ವಸ್ತುವಿನ ನಾಮರೂಪಗಳೂ ಕಲ್ಪಿತವೇ ಎನ್ನಬೇಕಾಯಿತಲ್ಲ.

**ಸತೋಽಪಿ ನಾಮರೂಪೇ ದ್ವೇ ಕಲ್ಪಿತೇ ಚೇತ್ತದಾವದ ।**
**ಕುತ್ರೇತಿ ನಿರಧಿಷ್ಠಾನೋ ನ ಭ್ರಮಃ ಕ್ವಚಿದೀಕ್ಷ್ಯತೇ ॥೩೫॥**

ಅ.— ಸದ್ವಸ್ತುವಿನ ನಾಮರೂಪಗಳೆರಡೂ ಕಲ್ಪಿತವೆಂದು ಹೇಳುವ ಪಾದರೆ, ಯಾವ ಅಧಿಷ್ಠಾನದಮೇಲೆ ಕಲ್ಪಿತವಾದವೆಂಬುದನ್ನು ಹೇಳು. ಯಾಕೆಂದರೆ ಅಧಿಷ್ಠಾನವಿಲ್ಲದೇ ಭ್ರಮೆಯುಂಟಾದುದನ್ನು ಎಂದೂ ಕಂಡಿಲ್ಲ.

ಕತ್ತಲೆಯಲ್ಲಿ ಹಾವಿನ ಭ್ರಮೆಯುಂಟಾಗಲು ಹಗ್ಗ (ಅಧಿಷ್ಠಾನ)ವು ಬೇಕು. (ಅದರಂತೆ ಶುಕಿ, ರಜತ, ಸ್ಥಾಣುಪುರುಷ ಮುಂ.)

ಶೂನ್ಯವಿತ್ತು ಎಂಬುದಕ್ಕೆ ವ್ಯಾಘಾತದೋಷವುಂಟಾದರೆ ಸತ್ತು ಇತ್ತು ಎಂಬುದಕ್ಕೂ ದೋಷವು ಬರುತ್ತದೆ.

**ಸದಾಸೀದಿತಿ ಶಬ್ದಾರ್ಥಭೇದೇ ವೈಗುಣ್ಯಮಾಪತೇತ್ ।**
**ಅಭೇದೇ ಪುನರುಕ್ತಿಃ ಸ್ಯಾನ್ನೈವಂ ಲೋಕೇ ತಥೇ**
**ಕ್ಷಣಾತ್ ॥೩೬॥**

ಅ:— ಸತ್ತು ಇತ್ತು ಎಂಬ ಎರಡು ಶಬ್ದಗಳಿಗೆ ಅರ್ಥಭೇದವಿರುವು ದೆಂದರೆ (ಅದ್ವೈತಕ್ಕೆ) ವಿರೋಧವುಂಟಾಗುವುದು. ಇನ್ನು ಒಂದೇ ಅರ್ಥ ವಿರುವುದೆಂದರೆ ಪುನರುಕ್ತಿ ದೋಷನಂಭವಿಸುವುದು. (ಉತ್ತರ) ಹಾಗಲ್ಲ. ಲೋಕದಲ್ಲಿ ಸಾಕಷ್ಟು ಅಂಥ ಪ್ರಯೋಗಗಳುಂಟು.

ಉದಾಹರಣೆ

**ಕರ್ತವ್ಯಂ ಕುರುತೇ ವಾಕ್ಯಂ ಬ್ರೂತೇ ಧಾರ್ಯಸ್ಯಧಾರಣಮ್ ।**
**ಇತ್ಯಾದಿವಾಸನಾವಿಷ್ಟಂ ಪ್ರತ್ಯಾಸೀತ್ ಸದಿ-**
**ತೀರಣಮ್ ॥೩೭॥**

ಅ:— ಕರ್ತವ್ಯವನ್ನು ಮಾಡುತ್ತಾನೆ. ವಾಕ್ಯವನ್ನು ಹೇಳುತ್ತಾನೆ. ಧರಿಸತಕ್ಕದ್ದನ್ನು ಧರಿಸುತ್ತಾನೆ. ಇತ್ಯಾದಿ ಪದ ಪ್ರಯೋಗಗಳ ಸಂಸ್ಕಾರ ಹಿಡಿದವನನ್ನು (ಶ್ವೇತಕೇತುವನ್ನು) ಕುರಿತು (ಸತ್ ಆಸೀತ್) ಸತ್ತು ಇತ್ತು ಎಂದು ಹೇಳಬೇಕಾಯಿತು.

ಹಾಗೇ ಆಗಲಿ. ಅದ್ವಿತೀಯವಸ್ತುವಿನಲ್ಲಿ ಕಾಲಾಭಾವವಿರುವುದು. ಎಂದ ಮೇಲೆ ಇಲ್ಲಿ ಭೂತಕಾಲ ಪ್ರಯೋಗವು ಹೇಗೆ? 'ಅಗ್ರೇ, ಉತ್ಪತ್ತಿಯ ಪೂರ್ವದಲ್ಲಿ ಎಂದುಹೇಳಿರುವುದಲ್ಲ.

**ಕಾಲಾಭಾವೇ ಪುರೇತ್ಯುಕ್ತಿಃ ಕಾಲವಾಸನಯಾ ಯುತಮ್ ।**
**ಶಿಷ್ಯಂ ಪ್ರತ್ಯೇವ ತೇನಾತ್ರ ದ್ವಿತೀಯಂ ನ ಹಿ ಶಂಕ್ಯತೇ ॥೩೮॥**

ಅ:— ಅದ್ವಿತೀಯ ವಸ್ತುವಿನಲ್ಲಿ ಕಾಲವಿರುವುದಿಲ್ಲವೆಂಬುದ ನರಿಯೇ. ಆದರೆ 'ಪುರಾ' ಎಂದರೆ ಸೃಷ್ಟಿ ಹುಟ್ಟುವುದಕ್ಕಿಂತ ಮೊದಲು ಎಂದು ಹೇಳು ವುದು ಕಾಲದ ತಿಳಿವಳಿಕೆ (ವಾಸನೆ) ಯುಳ್ಳ ಶಿಷ್ಯನನ್ನು ಉದ್ದೇಶಿಸಿ. ಸದ್ವಸ್ತುವಿನಲ್ಲಿ ದ್ವೈತವನ್ನು ಶಂಕಿಸಲು ಅವಕಾಶವಿಲ್ಲ.

**ಚೋದ್ಯಂ ವಾ ಪರಿಹಾರೋ ವಾ ಕ್ರಿಯತಾಂ**
**ದ್ವೈತಭಾಷಯಾ ।**
**ಅದ್ವೈತಭಾಷಯಾ ಚೋದ್ಯಂ ನಾಸ್ತಿನಾಪಿ**
**ತದುತ್ತರಮ್ ॥೩೯॥**

ಅ:— ಪ್ರಶ್ನವಾಗಲೀ ಅದಕ್ಕೆ ಪರಿಹಾರವಾಗಲೀ (ವ್ಯಾವಹಾರಿಕ) ದ್ವೈತ ಭಾಷೆಯಿಂದ ನಡೆಯಲಿ. ಅದ್ವೈತ ಭಾಷೆಯಿಂದ ಪ್ರಶ್ನೆ ಮಾಡಲು ಬರುವದಿಲ್ಲ. ಉತ್ತರವನ್ನುಕೊಡಲು ಬರುವದಿಲ್ಲ. (ಅದ್ವೈತಿಗಳ ಬ್ರಹ್ಮವು ಮಾತು-ಮನಗಳಿಗೆ ಮೀರಿದುದು)

**ತದಾ ಸ್ತಿಮಿತಗಂಭೀರಂ ನ ತೇಜೋ ನ ತಮಸ್ತತಮ್ ।**
**ಅನಾಖ್ಯಮನಭಿವ್ಯಕ್ತಂ ಸತ್ಕಿಂಚಿದವ ಶಿಷ್ಯತೇ ॥೪೦॥**

ಅ:— ಪ್ರಲಯಕಾಲದಲ್ಲಿ ನಿಶ್ಚಲವೂ, ಮನದಿಂದ ಚಿಂತಿಸಲು ಅನಾಧ್ಯವೂ ಆದ ಪ್ರಕಾಶವಲ್ಲ. ಕತ್ತಲೆಯಲ್ಲ . ಎಲ್ಲಡೆಗೆ ತುಂಬಿರುವಂಥ, ಮಾತಿಗೆನಿಲುಕದಂಥ, ಕಣ್ಣು-ಕಿವಿಗಳಿಗೆ ವಿಷಯವಾಗದಂಥ ಯಾವದೋ ಒಂದು ಸತ್ತು ಉಳಿಕೆಯಾಗಿರುತ್ತದೆ.

(ಇದು ಯೋಗ ವಾಸಿಷ್ಟ ಗ್ರಂಥದೊಳಗಿನದು.)

**ನನು ಭೂಮ್ಯಾದಿಕಂ ಮಾ ಭೂತ್ಪರಮಾಣ್ವಂತನಾಶತಃ ।**
**ಕಥಂ ತೇ ವಿಯತೋಽಸತ್ವಂ ಬುದ್ಧಿಮಾರೋಹತೀತಿ**
**ಚೇತ್ ॥೪೧॥**

ಅ:— (ಈ ಶಂಕೆಯನ್ನು ತಾರ್ಕಿಕರು ಎತ್ತಿದ್ದಾರೆ) (ಅದ್ವೈತ ಸಿದ್ಧಾಂತಿಯೇ) ಭೂಮಿ-ಉದಕ-ತೇಜ-ವಾಯು ಈ ನಾಲ್ಕು ದ್ರವ್ಯಗಳು ಪರಮಾಣುವಿನ ವರೆಗೆ ನಾಶವಾಗುವದರಿಂದ ಅವು ಮಿಥ್ಯೆ ಎನಿಸಲಿ. ಆದರೆ ಅದು ಹೇಗೆ ಆಕಾಶದ ಮಿಥ್ಯಾತ್ವವು ನಿನ್ನ ಬುದ್ಧಿಗೆ ಹಿಡಿಯುವುದು? ಎಂದರೆ-

**ಅತ್ಯಂತಂ ನಿರ್ಜಗದ್ವ್ಯೋಮ ಯಥಾತೇ**
**ಬುದ್ಧಿಮಾಶ್ರಿತಮ್ ।**
**ತಥೈವ ಸನ್ನಿರಾಕಾಶಂ ಕುತೋ ನಾಶ್ರಯತೇ ಮತಿಮ್ ॥೪೨॥**

ಅ:— ಜಗತ್ತಿನ ನಾಶವಾದ ಮೇಲೆ ಉಳಿಯುವ ಆಕಾಶವನ್ನು ನಿನ್ನ ಬುದ್ಧಿಯು ಗ್ರಹಿಸಿದಂತೆ, ಆಕಾಶರಹಿತ ಸತ್ ವಸ್ತುವನ್ನು ನಿನ್ನ ಬುದ್ಧಿಯು ಯಾಕೆ ಗ್ರಹಿಸುವದಿಲ್ಲ?

ಪ್ರತ್ಯಕ್ಷ ಕಂಡದ್ದನ್ನು ಇಲ್ಲವೆನ್ನಲಾಗುವದಿಲ್ಲ ಎಂಬ ನ್ಯಾಯವನ್ನಾಧರಿಸಿ ತಾರ್ಕಿಕನ ಆಕ್ಷೇಪವು.

**ನಿರ್ಜಗದ್ವ್ಯೋಮ ದೃಷ್ಟಂ ಚೇತ್ಪ್ರಕಾಶತಮಸೀ ವಿನಾ ।**
**ಕ್ವ ದೃಷ್ಟಂ ಕಿಂ ಚ ತೇ ಪಕ್ಷೇ ನ ಪ್ರತ್ಯಕ್ಷಂ**
**ವಿಯತ್‌ಖಲು ॥೪೩॥**

ಅ:— ಜಗದ್ರಹಿತವಾದ ಆಕಾಶವು ಕಂಡಿತೆಂದು ಹೇಳುವುದಾದರೆ, ಬೆಳಕು-ಕತ್ತಲೆಗಳಿಲ್ಲದಾಗ ಅದೆಲ್ಲಿ ಕಂಡಿತು? ಅಲ್ಲದೇ ನಿನ್ನ ಮತದಂತೆ ಆಕಾಶದ ಪ್ರತ್ಯಕ್ಷಜ್ಞಾನವು ಆಗುವುದಿಲ್ಲ. (ತಾರ್ಕಿಕರು ಆಕಾಶವನ್ನು ಪ್ರತ್ಯಕ್ಷವೆಂದು ತಿಳಿಯುವುದಿಲ್ಲ.)

ದರ್ಶನಾಭಾವವು ಆಕಾಶದಂತೆ ಸದ್ವಸ್ತುವಿನಲ್ಲಿಯು ಉಂಟು. ಎಂದರೆ-

**ಸದ್ವಸ್ತು ಶುದ್ಧಂ ತ್ವಸ್ಮಾಭಿರ್ನಿಶ್ಚಿತೈರನುಭೂಯತೇ ।**
**ತೂಷ್ಣೀಂ ಸ್ಥಿತೌ ನ ಶೂನ್ಯತ್ವಂ ಶೂನ್ಯಬುದ್ಧೇಶ್ಚ**
**ವರ್ಜನಾತ್ ॥೪೪॥**

ಅ:— ಒಳ-ಹೊರ ಇಂದ್ರಿಯ ವ್ಯಾಪಾರಗಳನ್ನು ನಿಲ್ಲಿಸಿ ಕುಳಿತ ತೂಷ್ಣೀಂ ಅವಸ್ಥೆಯಲ್ಲಿ ವಿವೇಕಿಗಳಾದ ನಮಗೆ ಅದ್ವಿತೀಯ ಸದ್ವಸ್ತುವಿನ ಅನುಭವವು ಬರುತ್ತದೆ. ಆ ಅವಸ್ಥೆಯಲ್ಲಿ ಶೂನ್ಯ ಬುದ್ಧಿಯು ಇಲ್ಲದ್ದರಿಂದ ಶೂನ್ಯತ್ವದ ಅನುಭವವಿಲ್ಲ.

ಅದರಂತೆ ಸದ್ಬುದ್ಧಿಯೂ ಇರುವುದಿಲ್ಲ.

**ಸದ್ಬುದ್ಧಿರಪಿ ಚೇನ್ನಾಸ್ತಿ ಮಾಸ್ತ್ವಸ್ಯ ಸ್ವಪ್ರಭತ್ವತಃ ।**
**ನಿರ್ಮನಸ್ಕತ್ವಸಾಕ್ಷಿತ್ವಾತ್ ಸನ್ಮಾತ್ರಂ ಸುಗಮಂ**
**ನೃಣಾಮ್ ॥೪೫॥**

ಅ:— ತೂಷ್ಣೀಂ ಸ್ಥಿತಿಯಲ್ಲಿ ಸತ್ ಎಂಬಬುದ್ಧಿಯೂ ಇರುವುದಿಲ್ಲ ವೆಂದರೆ, ಸದ್ವಸ್ತುವು ಸ್ವಪ್ರಕಾಶವಿರುವುದರಿಂದ ಸದ್ಬುದ್ಧಿ ಇಲ್ಲದಿದ್ದರೆ ಹೋಗಲಿ. ಆ ಸತ್ತು ನಿರ್ಮನಸ (ತೂಷ್ಣೀಂ) ಅವಸ್ಥೆಗೆ ಸಾಕ್ಷಿಯಾಗಿರು ವದರಿಂದ ಸದ್ವಸ್ತುವು ನಾ[illegible] ಸುಲಭವಾಗಿದೆ.

ಹೀಗೆ ಪ್ರಪಂ[illegible]ಚತವಾದ ಸಾಕ್ಷಿ ಚೈತನ್ಯದ ಭಾಗವನ್ನು ತೋರಿಸಿ, ಇದೇ ದೃಷ್ಟಾಂತ ಬಲದಿಂದ ಸೃಷ್ಟಿಪೂರ್ವದಲ್ಲಿಯೂ ಸದ್ವಸ್ತುವು ಹಾಗೇ ಇತ್ತು ಎಂದು ತಿಳಿಯುವುದು ಸಾಧ್ಯವೆನ್ನುತ್ತಾರೆ.

**ಮನೋಜೃಂಭಣರಾಹಿತ್ಯೇ ಯಥಾ ಸಾಕ್ಷೀ ನಿರಾಕುಲಃ ।**
**ಮಾಯಾಜೃಂಭಣತಃ ಪೂರ್ವಂ ಸತ್ತಥೈವ**
**ನಿರಾಕುಲಮ್ ॥೪೬॥**

ಅ:— ಮನವು ವೃತ್ತಿಶೂನ್ಯವಾಗಿರಲು ಸಾಕ್ಷಿ ಚೈತನ್ಯವು ಹೇಗೆ ನಿರ್ವಿಕಾರವಾಗಿರುವುದೋ, ಹಾಗೆ ಮಾಯೆಯು ವಿಕಾಸ ಹೊಂದುವುದಕ್ಕಿಂತ ಮೊದಲು ಸತ್ತು ನಿರ್ವಿಕಾರವಾಗಿತ್ತು.

**ನಿಸ್ತತ್ತ್ವಾ ಕಾರ್ಯಗಮ್ಯಾಸ್ಯ ಶಕ್ತಿರ್ಮಾಯಾಗ್ನಿಶಕ್ತಿವತ್ ।**
**ನ ಹಿ ಶಕ್ತಿಃ ಕ್ವಚಿತ್ ಕೈಶ್ಚಿದ್‌ಬುಧ್ಯತೇ ಕಾರ್ಯತಃ**
**ಪುರಾ ॥೪೭॥**

ಅ:—ಸದ್ವಸ್ತುವಿಗಿಂತಲೂ ಬೇರೆ ತತ್ತ್ವವಿಲ್ಲದ, ಮತ್ತು ಅದರ ಕಾರ್ಯ (ಆಕಾಶಾದಿ ಭೂತ ಜನನ)ದಿಂದಲೇ ತಿಳಿಯಬೇಕಾದ, ಅಗ್ನಿಯಲ್ಲಿ ಶಕ್ತಿ ಇರು

ವಂತೆ ಇರುವ, ಸದ್ರೂಪ ಆತ್ಮನ ಶಕ್ತಿಯೇ ಮಾಯೆ. ಕಾರ್ಯಕ್ಕಿಂತ ಮೊದಲು ಯಾರಿಂದಲೂ ಯಾವುದೇ ಶಕ್ತಿಯನ್ನು ತಿಳಿಯುವುದು ಸಾಧ್ಯವಿಲ್ಲ.

**ನ ಸದ್ವಸ್ತು ಸತಃ ಶಕ್ತಿರ್ನ ಹಿ ವಹ್ನೇಃ ಸ್ವಶಕ್ತಿತಾ ।**
**ಸದ್ವಿಲಕ್ಷಣತಾಯಾಂ ತು ಶಕ್ತೇಃ ಕಿಂ ತತ್ತ್ವಮುಚ್ಯತಾಮ್ ॥೪೮॥**

ಅ:— ಸತ್ತಿನ ಶಕ್ತಿಯು ಸದ್ರೂಪವೇ ಇರಲಾರದು. ಯಾಕೆಂದರೆ ಅಗ್ನಿಯೇ ಅಗ್ನಿಯ ಶಕ್ತಿಯಾಗಲಾರನು. ಎಂದಮೇಲೆ ಸತ್ತಿನಶಕ್ತಿಯು ಸತ್ತಿಗಿಂತ ಬೇರೆ ಎಂದಾದ ಪಕ್ಷದಲ್ಲಿ ಅದರ ಸ್ವರೂಪವಾದರೂ ಏನು? ಹೇಳು.

(ಅಸತ್ತು ಎರಡು ವಿಧ. ಮನುಷ್ಯನ ಕೊಂಬು ಎಂದರೆ ಶೂನ್ಯವೆಂದರ್ಥ. ಬ್ರಹ್ಮಕ್ಕಿಂತ ಬೇರೆಯಾದುದು ಎಂದು ಮತ್ತೊಂದು ಅರ್ಥ. ಮೇಲಿನ ಶ್ಲೋಕದಲ್ಲಿ ಮಾಯೆಯು ಸದ್ವಸ್ತುವೋ? ಅಸದ್ವಸ್ತುವೋ? ಎಂಬ ಶಂಕೆ ಇರುತ್ತದೆ.)

**ಶೂನ್ಯತ್ವಮಿತಿ ಚೇಚ್ಛೂನ್ಯಂ ಮಾಯಾಕಾರ್ಯಮಿತೀರಿತಮ್ ।**
**ನ ಶೂನ್ಯಂ ನಾಪಿ ಸದ್ಯಾದೃಕ್ತಾದೃಕ್‌ತತ್ತ್ವಮಿಹೇಷ್ಯತಾಮ್ ॥೪೯॥**

ಅ:— ಶೂನ್ಯತ್ವವೇ ಮಾಯಾತತ್ತ್ವವೆಂದು ಹೇಳುವುದಾದರೆ, ಆ ಶೂನ್ಯವು ಮಾಯಾ ಕಾರ್ಯವೆಂದು ಮೊದಲೇ ಹೇಳಲಾಗಿದೆ. ಆದುದರಿಂದ (ಮಾಯೆಯು) ಶೂನ್ಯವೂ ಅಲ್ಲ ಮತ್ತು ಸತ್ತೂ ಅಲ್ಲ. ಹೀಗೆ ಏನಾದರೂ ಮಾಯೆಯ ಸ್ವರೂಪವನ್ನು ಹೇಳಬೇಕು.

(ಮಾಯೆಯು ಸದಸದ್ವಿಲಕ್ಷಣ ಆದುದರಿಂದ ಅನಿರ್ವಚನೀಯವೆಂದು ಭಾವವು.)

ಇದಕ್ಕೆ ಶ್ರುತಿಪ್ರಮಾಣವು ಇಲ್ಲಿದೆ.

**ನಾಸದಾಸೀನ್ನೋ ಸದಾಸೀತ್ತದಾನೀಂ ಕಿಂತ್ವಭೂತ್ತಮಃ ।**
**ಸದ್ಯೋಗಾತ್ತಮಸಃ ಸತ್ತ್ವಂ ನ ಸ್ವತಸ್ತನ್ನಿಷೇಧನಾತ್ ॥೫೦॥**

ಅ:— ಪ್ರಲಯ ಕಾಲದಲ್ಲಿ ಅಸತ್ ಎಂದರೆ ಶೂನ್ಯವಿರಲಿಲ್ಲ. ಅದರಂತೆ ಸತ್ತೂ ಇರಲಿಲ್ಲ. ಆದರೆ ಕತ್ತಲೆ ಇತ್ತು. ಆ ಕತ್ತಲೆಗೆ ಸ್ವಸುದ್ಧುವಿನ ಆಶ್ರಯ

ದಿಂದಲೇ ಸತ್ವವು ಇರುತ್ತದೆ. ಅಲ್ಲದೇ ಶ್ರುತಿ ಸ್ಮೃತಿಗಳಲ್ಲಿ ನಿಷೇಧವನ್ನು ಹೇಳಿದ್ದರಿಂದ (ಮಾಯೆಗೆ) ಸ್ವತಂತ್ರ ಅಸ್ತಿತ್ವವಿಲ್ಲ.

(ಋಗ್ವೇದದ 'ನಾಸದೀಯ' ಸೂಕ್ತದಲ್ಲಿ ಇದು ವಿವೃತವಾಗಿದೆ.)

**ಅತ ಏವ ದ್ವಿತೀಯತ್ವಂ ಶೂನ್ಯವನ್ನ ಹಿ ಗಣ್ಯತೇ ।**
**ನ ಲೋಕೇ ಚೈತ್ರತಚ್ಛಕ್ತ್ಯೋರ್ಜೀವಿತಂ ಲಿಖ್ಯತೇ ಪೃಥಕ್ ॥೫೧॥**

ಅ:— ಆದುದರಿಂದ ಆ ಶಕ್ತಿಯನ್ನು ಸ್ವತಂತ್ರವಾದ ಎರಡನೆಯ ದೆನ್ನುವಂತೆ ಲೆಕ್ಕಿಸುವುದಿಲ್ಲ. ವ್ಯವಹಾರದಲ್ಲಿಯಾದರೂ 'ಚೈತ್ರ' ನೆಂಬ ಮನುಷ್ಯನು. ಅವನ ಶಕ್ತಿಯು. ಹೀಗೆಂದು ಬೇರೆ ಬೇರೆ ಸಂಬಳವನ್ನು ಬರೆಯುವುದಿಲ್ಲ.

**ಶಕ್ತ್ಯಾಧಿಕ್ಯೇ ಜೀವಿತಂ ಚೇದ್ವರ್ಧತೇ ತತ್ರ ವೃದ್ಧಿಕೃತ್ ।**
**ನ ಶಕ್ತಿಃ ಕಿಂತು ತತ್ಕಾರ್ಯಂ ಯುದ್ಧಕೃಷ್ಯಾದಿಕಂ ತಥಾ ॥೫೨॥**

ಅ:— ಶಕ್ತಿಯು ಹೆಚ್ಚಾಗಿದ್ದರೆ ಸಂಬಳ ಹೆಚ್ಚುತ್ತದೆ. ಎಂದರೆ ಸಂಬಳ ವೃದ್ಧಿ ಮಾಡುವದು ಶಕ್ತಿಯಲ್ಲ. ಯುದ್ಧ ಒಕ್ಕಲುತನ ಮುಂ. ಅದರ ಕಾರ್ಯಗಳು ಹೆಚ್ಚಳವನ್ನು ಮಾಡುತ್ತವೆ.

**ಸರ್ವಥಾ ಶಕ್ತಿಮಾತ್ರಸ್ಯ ನ ಪೃಥಗ್ಗಣನಾ ಕ್ವಚಿತ್ ।**
**ಶಕ್ತಿಕಾರ್ಯಂತು ನೈವಾಸ್ತಿ ದ್ವಿತೀಯಂ ಶಂಕ್ಯತೇ ಕಥಮ್ ॥೫೩॥**

ಅ:— ಹೇಗೇ ಆದರೂ ಶಕ್ತಿಯು (ಸ್ವತಂತ್ರ) ಬೇರೆ ಎಂಬ ಎಣಿಕೆಯನ್ನು ಮಾಡುವುದಿಲ್ಲ. ಪ್ರಲಯಕಾಲದಲ್ಲಿ ಶಕ್ತಿಯ ಕಾರ್ಯವೂ ಇರುವುದಿಲ್ಲ. ಎಂದ ಮೇಲೆ ಅದೊಂದು ಬೇರೆ (ಸ್ವತಂತ್ರ) ಎಂಬ ಸಂದೇಹವಾದರೂ ಹೇಗೆ ಬರುತ್ತದೆ?

**ನ ಕೃತ್ಸ್ನ ಬ್ರಹ್ಮವೃತ್ತಿಃ ಸಾ ಶಕ್ತಿಃ ಕ್ವಿಂತೇಕ ದೇಶಭಾಕ್ ।**
**ಘಟಶಕ್ತಿರ್ಯಥಾ ಭೂಮೌ ಸ್ನಿಗ್ಧಮೃದ್ಯೇವ ವರ್ತತೇ ॥೫೪॥**

ಅ:— ಆ ಶಕ್ತಿಯು ಸಂಪೂರ್ಣ ಬ್ರಹ್ಮದಲ್ಲಿ ಇರುವಂಥದಲ್ಲ. ಹಸಿಯಾದ ಮಣ್ಣಿನಲ್ಲಿ ಮಾತ್ರ ಘಟಾಕಾರ ಹೊಂದುವ ಶಕ್ತಿ ಇರುವಂತೆ ಅದು ಬ್ರಹ್ಮದ ಕೆಲಭಾಗದಲ್ಲಿ ಮಾತ್ರ ಇರುತ್ತದೆ.

**ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯ ಸ್ವಯಂಪ್ರಭಃ ।**
**ಇತ್ಯೇಕದೇಶವೃತ್ತಿತ್ವಂ ಮಾಯಾಯಾ ವದತಿ ಶ್ರುತಿಃ ॥೫೫॥**

ಅ:— ಇವೆಲ್ಲ ಭೂತಗಳು ಅವನ ಒಂದು ಪಾದವಾಗಿದ್ದು ಆ ಸ್ವಯಂ ಪ್ರಕಾಶನು ಮೂರು ಪಾದಗಳಿಂದ ಉಳಿಕೆ ಯಾಗಿದ್ದಾನೆ. ಹೀಗೆ ಮಾಯೆಯು ಪರಮಾತ್ಮನ ಒಂದು ಭಾಗದಲ್ಲಿರುವುದೆಂದು ಶ್ರುತಿ ಹೇಳುತ್ತದೆ.

**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋಜಗತ್ ।**
**ಇತಿ ಕೃಷ್ಣೋಽರ್ಜುನಾಯಾಹ ಜಗತಸ್ತ್ವೇಕದೇಶತಾಮ್॥೫೬॥**

ಅ:— ನಾನು ಈ ಸರ್ವ ಜಗತ್ತನ್ನು ಒಂದೇ ಅಂಶದಿಂದ ವ್ಯಾಪಿಸಿದ್ದೇನೆ ಎಂದು ಭಗವಾನ್ ಕೃಷ್ಣನು ಕೂಡ ಜಗತ್ತಿನ ಏಕದೇಶತ್ವವನ್ನು ಅರ್ಜುನನಿಗೆ ಹೇಳಿದ್ದಾನೆ.

ಮಾಯಾರಹಿತ ಸ್ವರೂಪವಿರುವುದೆಂದು ಋಗ್ವೇದದಲ್ಲಿಯ ಪುರುಷ ಸೂಕ್ತದ ಪ್ರಮಾಣವು.

**ಸ ಭೂಮಿಂ ವಿಶ್ವತೋ ವೃತ್ವಾ ಹ್ಯತ್ಯತಿಷ್ಠದ್ದಶಾಂಗುಲಮ್ ।**
**ವಿಕಾರಾವರ್ತಿ ಚಾತ್ರಾಸ್ತಿ ಶ್ರುತಿ ಸೂತ್ರಕೃತೋರ್ವಚಃ ॥೫೭॥**

ಅ:— ಭೂಮಿ-(ಸೃಷ್ಟಿ)ಯನ್ನು ಎಲ್ಲಕಡೆಗೂ ವ್ಯಾಪಿಸಿ ಆ ಈಶ್ವರನು ಹತ್ತು ಬೆರಳು ಹೆಚ್ಚಾಗಿ ಉಳಿದಿದ್ದಾನೆ. ಅದರಂತೆ ವಿಕಾರಗಳಿಲ್ಲದ ಆತ್ಮನ ಶುದ್ಧ ರೂಪವೂ ಇರುತ್ತದೆ. ಹೀಗೆಂದು ಶ್ರುತಿ ಮತ್ತು ವೇದಾಂತ ಸೂತ್ರ ಕರ್ತರಾದ ವ್ಯಾಸರ ವಚನಗಳು ಪ್ರಮಾಣವಾಗಿವೆ.

**ನಿರಂಶೇಽಪ್ಯಂಶಮಾರೋಪ್ಯ ಕೃತ್ಸ್ನೇಽಂಶೇ ವೇತಿ ಪೃಚ್ಛತಃ ।**
**ತದ್ಭಾಷಯೋತ್ತರಂ ಬ್ರೂತೇ ಶ್ರುತಿಃ ಶ್ರೋತೃಹಿತೈಷಿಣೀ ॥೫೮॥**

ಅ:— ಅವಯವರಹಿತರಾದ ಬ್ರಹ್ಮನಲ್ಲಿಯೂ ಅವಯವವನ್ನು ಕಲ್ಪಿಸಿ ಮಾಯೆಯು ಬ್ರಹ್ಮನ ಆಶ್ರಯದಿಂದಿರುವುದೋ ಅದರ ಕೆಲವು ಭಾಗದ ಆಶ್ರಯದಿಂದಿರುವುದೋ ? ಎಂದು ಕೇಳುವವನಿಗೆ ಶ್ರೋತೃಗಳ ಹಿತವನ್ನು ಬಯಸುವ ಶ್ರುತಿಯು ಅವನ ಭಾಷೆಯಲ್ಲಿಯೇ ಉತ್ತರವನ್ನು ಕೊಡುತ್ತದೆ.

**ಸತ್ತತ್ವಮಾಶ್ರಿತಾ ಶಕ್ತಿಃ ಕಲ್ಪಯೇತ್ ಸತಿ ವಿಕ್ರಿಯಾಃ ।**
**ವರ್ಣಾಭಿತ್ತಿಗತಾ ಭಿತ್ತೌ ಚಿತ್ರಂ ನಾನಾವಿಧಂ ಯಥಾ ॥೫೯॥**

ಅ:— ಗೋಡೆಯ ಮೇಲಿನ ಬಣ್ಣಗಳು ಅಲ್ಲಿ ಅನೇಕ ಬಗೆಯ ಚಿತ್ರಗಳ ಕಲ್ಪನೆಯನ್ನು ತಂದುಕೊಡುವಂತೆ, ಸತ್ತತ್ವವನ್ನು ಆಶ್ರಯಿಸಿಕೊಂಡಿರುವ ಈ ಶಕ್ತಿಯು ಸದ್ವಸ್ತುವಿನಲ್ಲಿ ನಾನಾಃಬಗೆಯ ಪದಾರ್ಥಗಳನ್ನು ವಿಷಯಗಳನ್ನು ಕಲ್ಪಿಸುವುದು.

ಮಾಯೆಯಿಂದ ತೋರುವ ಈ ಸೃಷ್ಟಿಯಲ್ಲಿ ಮೊದಲನೆಯ ಕಾರ್ಯವು ಯಾವುದು?

**ಆದ್ಯೋ ವಿಕಾರ ಆಕಾಶಃ ಸೋಽವಕಾಶ ಸ್ವರೂಪವಾನ್ ।**
**ಆಕಾಶೋಽಸ್ತೀತಿ ಸತ್ತತ್ವಮಾಕಾಶೇಽಪ್ಯನುಗಚ್ಛತಿ ॥೬೦॥**

ಅ:— ಮೊದಲಿನ ವಿಕಾರವೆಂದರೆ ಆಕಾಶವು. ಅವಕಾಶ (ಪೊಳ್ಳು)ವೇ ಅದರ ಸ್ವರೂಪವಾಗಿದೆ. ಈ ಆಕಾಶವು ಬ್ರಹ್ಮನ ಕಾರ್ಯವು ಎಂಬುದಕ್ಕೆ 'ಆಕಾಶವು' ಇರುತ್ತದೆ ಎಂಬ ಪ್ರಯೋಗವೇ. ಹೀಗೆ ಆಕಾಶದಲ್ಲಿಯೂ ಸತ್ತತ್ವದ (ಸದ್ರೂಪಬ್ರಹ್ಮದ) ಅನುವೃತ್ತಿಯಾಗುವುದು.

**ಏಕಸ್ವಭಾವಂ ಸತ್ತತ್ವಮಾಕಾಶೋ ದ್ವಿಸ್ವಭಾವಕಃ ।**
**ನಾವಕಾಶಃ ಸತಿವ್ಯೋಮ್ನಿ ಸ ಚೈಷೋಽಪಿ ದ್ವಯಂ ಸ್ಥಿತಮ್ ॥೬೧॥**

ಅ: — ಸತ್ತತ್ವವು ಸತ್ತಾರೂಪ (ಇರುವಿಕೆ ಎಂಬ) ಒಂದೆ ಸ್ವಭಾವವುಳ್ಳದುದು. ಆದರೆ ಆಕಾಶವು ಎರಡು ಸ್ವಭಾವವುಳ್ಳದುದು. ಸದ್ವಸ್ತುವಿನಲ್ಲಿ ಅವಕಾಶ (ಎಂಬ ಸ್ವಭಾವ)ವಿಲ್ಲ. ಆಕಾಶದಲ್ಲಿ ಸತ್‌ಸ್ವಭಾವ, ಹಾಗೂ ಅವಕಾಶಸ್ವಭಾವಗಳೆರಡೂ ಇರುತ್ತವೆ.

**ಯದ್ವಾ ಪ್ರತಿಧ್ವನಿರ್ವ್ಯೋಮ್ನೋ ಗುಣೋನಾಸೌ ಸತೀಕ್ಷ್ಯತೇ ।**
**ವ್ಯೋಮ್ನಿ ದ್ವೌ ಸದ್ಧ್ವನೀ ತೇನ ಸದೇಕಂ ದ್ವಿಗುಣಂ ವಿಯತ್ ॥೬೨॥**

ಅ.— ಮತ್ತೊಂದು ಪಕ್ಷದಲ್ಲಿ ಪ್ರತಿಧ್ವನಿಯು ಆಕಾಶದ ಗುಣವಾಗಿದೆ. ಅದು ಸದ್ವಸ್ತುವಿನಲ್ಲಿ ಅನುಭವಕ್ಕೆ ಬರುವದಿಲ್ಲ. ಆಕಾಶದಲ್ಲಿ ಸತ್ತಾ ಹಾಗೂ ಶಬ್ದಗಳೆಂಬ ಎರಡು ಗುಣಗಳಾದವು. ಆದುದರಿಂದ ಸತ್ತು ಒಂದೇಗುಣವುಳ್ಳದುದು. ಆಕಾಶವು ಎರಡುಗುಣಗಳುಳ್ಳದು. (ಎಂದು ತಿಳಿಯಬೇಕಾಯಿತು.)

**ಯಾ ಶಕ್ತಿಃ ಕಲ್ಪಯೇದ್ ವ್ಯೋಮ ಸಾ ಸದ್ ವ್ಯೋಮ್ನೋರ ಭಿನ್ನತಾಮ್ ।**
**ಆಪಾದ್ಯ ಧರ್ಮಧರ್ಮಿತ್ವಂ ವ್ಯತ್ಯಯೇನಾವಕಲ್ಪಯೇತ್ ॥೬೩॥**

ಅ:— ಯಾವ ಮಾಯಾಶಕ್ತಿಯು ಸದ್ವಸ್ತುವಿನಲ್ಲಿ ಆಕಾಶವನ್ನು ಕಲ್ಪಿಸಿತೋ, ಅದು ಮೊದಲು ಸತ್ತು ಹಾಗೂ ಆಕಾಶ ಇವುಗಳಲ್ಲಿ ಅಭೇದವನ್ನು ಉಂಟುಮಾಡಿ, ನಂತರ ವಿಪರೀತವಾಗಿ ಅವುಗಳಧರ್ಮ-ಧರ್ಮೀಭಾವವನ್ನು ಕಲ್ಪಿಸುವದು.

(ಎಂದರೆ 'ಆಕಾಶವಿರುವದು' ಎಂಬ ವ್ಯವಹಾರವು. ಸದ್ವಸ್ತುವಿಗೆ ಮಾತ್ರ 'ಇರುವಿಕೆ' ಎಂಬುದು ಸ್ವಭಾವವು ಅರ್ಥಾತ್ ಧರ್ಮವು. ಈ ಧರ್ಮವನ್ನು ಆಕಾಶದಲ್ಲಿ ಆರೋಪಿಸಿ ಆಕಾಶವು ಧರ್ಮಿ (ಸತ್ ವುಳ್ಳದುದು) ಎಂದೂ 'ಸತ್' ಧರ್ಮವೆಂದೂ ವಿಪರೀತವಾಗಿ ತೋರಿಸಿತೆಂದು ಭಾವವು.)

**ಸತೋ ವ್ಯೋಮತ್ವಮಾಪನ್ನಂ ವ್ಯೋಮ್ನಃ ಸತ್ತಾಂತು ಲೌಕಿಕಾಃ ।**
**ತಾರ್ಕಿಕಾಶ್ಚಾವಗಚ್ಛಂತಿ ಮಾಯಾಯಾ ಉಚಿತಂ ಹಿ ತತ್ ॥೬೪॥**

ಅ— ಮಾಯೆಯಯೋಗದಿಂದ ಸದ್ವಸ್ತುವಿಗೆ ಆಕಾಶತ್ವವು ಬಂದಿರುವದು. ಆದರೆ ವ್ಯವಹಾರಿಕರು ಮತ್ತು ತಾರ್ಕಿಕರು (ಕಣಾದ-ಗೌತಮ ಮುಂ.) ಆಕಾಶಕ್ಕೆ ಸದ್ರೂಪಧರ್ಮವನ್ನು ಆರೋಪಿಸುವರು. ಮಾಯೆಯಿಂದ ಹೀಗಾಗುವದ ಯೋಗ್ಯವೇಸರಿ.

**ಯದ್ಯಥಾ ವರ್ತತೇ ತಸ್ಯ ತಥಾತ್ವಂ ಭಾತಿ ಮಾನತಃ ।**
**ಅನ್ಯಥಾತ್ವಂ ಭ್ರಮೇಣೇತಿ ನ್ಯಾಯೋಽಯಂ ಸಾರ್ವ ಲೌಕಿಕಃ ॥೬೫॥**

ಅ— ಯಾವದು ಹೇಗೆಇರುವದೋ ಹಾಗೇಕಂಡರೆ ಅದು ಪ್ರಾಮಾಣಿಕವಾಗಿಕಂಡಂತೆ. ವಿಪರೀತವಾಗಿಕಂಡರೆ ಭ್ರಮೆಯಿಂದಮಾತ್ರ, (ನಿಜವಲ್ಲ.) ಎಂಬನ್ಯಾಯವು ಲೋಕಪ್ರಸಿದ್ಧವಾಗಿದೆ.

**ಏವಂ ಶ್ರುತಿವಿಚಾರಾತ್ ಪ್ರಾಗ್ ಯಥಾಯದ್ ವಸ್ತುಭಾಸತೇ ।**
**ವಿಚಾರೇಣ ವಿಪರ್ಯೇತಿ ತತಸ್ತಚ್ಚಿಂತ್ಯತಾಂ ವಿಯತ್ ॥೬೬॥**

ಅ:—ಹೀಗೆ ಶ್ರುತಿಯ ಅರ್ಥವನ್ನು ವಿಚಾರಮಾಡುವದಕ್ಕಿಂತ ಮೊದಲು ಯಾವವಸ್ತುವು ಹೇಗೆಕಾಣುತ್ತಿರುವದೋ, ಆ ಸ್ವರೂಪವು (ಶ್ರುತಿ ವಿಚಾರ ಮಾಡಿದನಂತರ) ಮೊದಲಿನಂತೆಯೇ ಕಾಣುವದಿಲ್ಲ. ಆದುದರಿಂದ ಆಕಾಶದ ವಿಷಯದಲ್ಲಿ ವಿಚಾರಮಾಡಬೇಕು.

**ಭಿನ್ನೇ ವಿಯತ್ಸತೀ ಶಬ್ದಭೇದಾದ್ ಬುದ್ಧೇಶ್ಚ ಭೇದತಃ ।**
**ವಾಯ್ವಾದಿಷ್ವನುವೃತ್ತಂ ಸನ್ನ ತು ವ್ಯೋಮೇತಿ ಭೇದಧೀಃ॥೬೭॥**

ಅ:— ಶಬ್ದಭೇದದಿಂದ ಹಾಗೂ ಬುದ್ಧಿಭೇದದಿಂದ ಆಕಾಶ ಮತ್ತು ಸತ್ತು ಭಿನ್ನವೆನಿಸುವವು. ಯಾಕಂದರೆ ವಾಯುವು ಇದೆ, ತೇಜವು ಇದೆ, ಎಂದು ಸತ್ತು ಅನುವರ್ತಿಸುವದು. ಆದರೆ ಆಕಾಶವು ಹಾಗೆ ಅನುವರ್ತಿಸುವದಿಲ್ಲ.

(ಆಕಾಶ ಹಾಗೂ ಸತ್ ಎರಡೂ ಭಿನ್ನಶಬ್ದಗಳಾಗಿವೆ. ಆ ಶಬ್ದಗಳು ಘಟವೆಂಬುದಕ್ಕೆ ಕಲಶ–ಕುಂಭ ಎಂದು ಮೊದಲಾದಂತೆ ಒಂದು ಒಂದಕ್ಕೆ ಪರ್ಯಾಯಶಬ್ದಗಳು. ಅಲ್ಲದೇ ಅವೆರಡೂ ತೋರಿಕೆಗೆ ಬೇರೆಬೇರೆ ವಸ್ತುಗಳನ್ನು ಪ್ರತಿನಿಧಿಸುತ್ತವೆ. ಎಂದಮೇಲೆ ಬುದ್ಧಿಭೇದವೂ ಇಲ್ಲಿದೆ. ಆಕಾಶದ ಮುಂದಿನಕಾರ್ಯಗಳಾದ ವಾಯು ಮುಂ. ಗಳಲ್ಲಿ ಸದ್ವಸ್ತುವಿನ ಅನುವೃತ್ತಿ ಇದೆ. ವಾಯುವು ಇದೆ. ತೇಜವು ಇದೆ ಹೀಗೆ. ಆದರೆ ಆಕಾಶದ ಅನುವೃತ್ತಿ ಮಾತ್ರ ಇಲ್ಲ.)

**ಸದ್ವಸ್ತ್ವಧಿಕವೃತ್ತಿತ್ವಾದ್ಧರ್ಮಿವ್ಯೋಮ್ನಸ್ತುಧರ್ಮತಾ ।**
**ಧಿಯಾ ಸತಃ ಪೃಥಕ್ಕಾರೇ ಬ್ರೂಹಿ ವ್ಯೋಮ**
**ಕಿಮಾತ್ಮಕಮ್ ॥೬೮॥**

ಅ:— ಸದ್ವಸ್ತುವು ವ್ಯಾಪಕವಾಗಿರುವದರಿಂದ ಅದು ಧರ್ಮಿಯು. ಆಕಾಶವು ಸ್ವಲ್ಪಭಾಗದಲ್ಲಿ ಮಾತ್ರ ವ್ಯಾಪಿಸಿರುವದರಿಂದ ಧರ್ಮವು. ಈಗ ವಿವೇಕದಿಂದ ಆಕಾಶದಲ್ಲಿರುವ ಸದ್ರೂಪವನ್ನು ಬೇರ್ಪಡಿಸಿದರೆ, ಆಕಾಶದ ಸ್ವರೂಪವು ಏನುಉಳಿಯುವುದು? ಹೇಳು. (ಯಾವುದೇ ಪದಾರ್ಥವನ್ನು ಸದ್ರೂಪದಿಂದ ಬೇರ್ಪಡಿಸಿದರೆ ಆ ಪದಾರ್ಥವೇ ಉಳಿಯುವದಿಲ್ಲ.)

**ಅವಕಾಶಾತ್ಮಕಂ ತಚ್ಚೇದಸತ್ತದಿತಿ ಚಿಂತ್ಯತಾಮ್ ।**
**ಭಿನ್ನಂ ಸತೋಽಸಚ್ಚ ನೇತಿ ವಕ್ಷಿ ಚೇದ್ವ್ಯಾಹತಿಸ್ತವ ॥೬೯॥**

ಅ:— ಅದು (ಆಕಾಶವು) ಅವಕಾಶವುಳ್ಳದುದು. ಎಂದರೆ ಅದು ಅಸತ್ತಾಗಿದೆ ಎಂದು ತಿಳಿ. ಸತ್ತಿನಿಂದ ಭಿನ್ನವಿರುವದು ನಿಜ. ಆದರೆ ಅಸತ್ ಅಲ್ಲ. ಎನ್ನುವದಾದರೆ ವ್ಯಾಘಾತದೋಷವು ಬರುತ್ತದೆ.

ಒಳ್ಳೇದು. ಆಕಾಶವು ಅಸತ್ ಎಂದು ತಿಳಿಯುವದಾದರೆ ಅದು ಕಾಣುತ್ತಿರುವದಾದರೂ ಹೇಗೆ?

**ಭಾತೀತಿ ಚೇದ್ಭಾತು ನಾಮ ಭೂಷಣಂ ಮಾಯಿಕಸ್ಯ ತತ್ ।**
**ಯದ ಸದ್ಭಾಸಮಾನಂ ತನ್ಮಿಥ್ಯಾ ಸ್ವಪ್ನಗಜಾದಿವತ್ ॥೭೦॥**

ಅ:— ಆಕಾಶವು ಕಾಣುವದಲ್ಲ ಎಂದರೆ ಕಾಣಲಿ. ಯಾಕೆಂದರೆ ಮಾಯೆಯಿಂದಾದ ಪದಾರ್ಥಗಳಿಗೆ ಅದುಭೂಷಣವೇ. ಯಾವಪದಾರ್ಥವು ಇಲ್ಲದ್ದಾಗಿ ಇದ್ದಂತತೋರುವದೋ ಅದು ಕನಸಿನಲ್ಲಿಯ ಆನೆ-ಕುದುರೆಗಳಂತೆ ಸುಳ್ಳಾದುದು.

**ಜಾತಿವ್ಯಕ್ತೀ ದೇಹಿದೇಹೌ ಗುಣದ್ರವ್ಯೇ ಯಥಾಪೃಥಕ್ ।**
**ವಿಯತ್ಸತೋಸ್ತಥೈವಾಸ್ತು ಪಾರ್ಥಕ್ಯಂ ಕೋಽತ್ರ ವಿಸ್ಮಯಃ ॥೭೧॥**

ಅ:— ಜಾತಿ ಮತ್ತು ವ್ಯಕ್ತಿಗಳು, ಆತ್ಮನು ಮತ್ತು ದೇಹವು, ಗುಣ ಮತ್ತು ದ್ರವ್ಯಗಳು, ಇವು ಹೇಗೆ ಬೇರೆಬೇರೆಯಾಗಿರುವವೋ ಅದರಂತೆ ಆಕಾಶ ಮತ್ತು ಸತ್ತುಗಳು ಬೇರೆಬೇರೆಯಾಗಿರಲಿ. ಇದರಲ್ಲಿ ಆಶ್ಚರ್ಯವೇನು?

(ಸಾಮಾನ್ಯವಾಗಿ ಮೇಲಿನ ಉದಾಹರಣೆಯಲ್ಲಿಯ ಪದಾರ್ಥಗಳು ಬೆರೆತುಕೊಂಡಿದ್ದರೂ ಅವುಗಳಲ್ಲಿ ಭೇದವಿದೆ.)

**ಬುದ್ಧೋಽಪಿ ಭೇದೋ ನೋ ಚಿತ್ತೇ ನಿರೂಢಿಂಯಾತಿ ಚೇತ್ತದಾ ।**
**ಅನೇಕಾಗ್ರ್ಯಾತ್ಸಂಶಯಾದ್ವಾ ರೂಢ್ಯಭಾವೋಽಸ್ಯ ತೇ ವದ॥೭೨॥**

ಅ:— (ಆಕಾಶ-ಸದ್ವಸ್ತುಗಳಿಗೆ) ಭೇದವಿರಬೇಕೆಂದು ತಿಳಿದರೂ ಅದೇಕೋ ಮನಸ್ಸಿಗೆ ಹಿಡಿಯದಾಗಿದೆ ಎಂದರೆ– ಮನಸ್ಸಿಗೆ ಹಿಡಿಯದಿರಲು ಚಿತ್ತದ ಏಕಾಗ್ರತೆ ಇಲ್ಲದಿರುವದು ಕಾರಣ. ಅಥವಾ ಸಂಶಯವು ಕಾರಣ. ಇವುಗಳಲ್ಲಿ ನಿನಗಿರುವ ಕಾರಣ ಯಾವುದು? ಹೇಳು.

**ಅಪ್ರಮತ್ತೋ ಭವ ಧ್ಯಾನಾದಾದ್ಯೇಽಸ್ಮಿನ್ ವಿವೇಚನಮ್ ।**
**ಕುರು ಪ್ರಮಾಣ ಯುಕ್ತಿಭ್ಯಾಂ ತತೋ ರೂಢತಮೋ**
**ಭವೇತ್ ॥೭೩॥**

ಅ:— ಇದರಲ್ಲಿಯ ಮೊದಲನೇ (ಅನೈಕಾಗ್ರ್ಯ) ಕಾರಣವಿದ್ದರೆ, ಧ್ಯಾನಯೋಗದಿಂದ ಸಾವಧಾನಚಿತ್ತನಾಗು. ಇನ್ನು ಎರಡನೇ (ಸಂಶಯ) ಕಾರಣವಿದ್ದರೆ, ಶ್ರುತಿ ಪ್ರಮಾಣಗಳು ಮತ್ತು ಅದಕ್ಕನುಕೂಲಯುಕ್ತಿಗಳ ಸಹಾಯದಿಂದ ಸತ್ತು ಹಾಗೂ ವಿಯತ್ತುಗಳ ವಿವೇಚನೆಮಾಡು. ನಂತರ ನಿಶ್ಚಯವಾಗುವದು.

**ಧ್ಯಾನಾನ್ಮಾನಾದ್ಯುಕ್ತಿತೋಽಪಿ ರೂಢೇ ಭೇದೇ ವಿಯತ್ಸತೋಃ।**
**ನ ಕದಾಚಿದ್ವಿಯತ್ಸತ್ಯಂ ಸದ್ವಸ್ತು ಚ್ಛಿದ್ರವನ್ನ ಚ ॥೭೪॥**

ಅ:— ಧ್ಯಾನದಿಂದ, ಪ್ರಮಾಣಗಳಿಂದ ಹಾಗೂ ಯುಕ್ತಿಗಳಿಂದ ಆಕಾಶ ಹಾಗೂ ಸತ್ತುಗಳಲ್ಲಿ ಭೇದವಿದೆ ಎಂದು ಒಮ್ಮೆ ನಿಶ್ಚಯವಾಯಿತೆಂದರೆ ಆಕಾಶವು ಎಂದಿಗೂ ಸತ್ಯವೆನಿಸಲಾರದು. ಮತ್ತು ಸದ್ವಸ್ತುವು ಅವಕಾಶ (ಪೊಳ್ಳು) ವುಳ್ಳದುದೆಂದೂ ಆಗಲಾರದು.

**ಜ್ಞಸ್ಯ ಭಾತಿ ಸದಾ ವ್ಯೋಮ ನಿಸ್ತತ್ತ್ವೋಲ್ಲೇಖ ಪೂರ್ವಕಮ್ ।**
**ಸದ್ವಸ್ತ್ವಪಿ ವಿಭಾತ್ಯಸ್ಯ ನಿಶ್ಛಿದ್ರತ್ವ ಪುರಸ್ಸರಮ್ ॥೭೫॥**

ಅ:— ಪಂಡಿತನಿಗೆ ಆಕಾಶವು ಯಾವಾಗಲೂ ಸ್ವತಃ ಸತ್ತಾಶೂನ್ಯವೆಂದು ತೋರುವದು. ಮತ್ತು ಸದ್ವಸ್ತುವಿನ ವಿಷಯಕ್ಕೆ ವಿಚಾರಮಾಡತೊಡಗಲು ಅದರಲ್ಲಿ ಅವಕಾಶವಿಲ್ಲವೆಂದು ಸ್ಪಷ್ಟವಾಗಿ ಅವನ ಅನುಭವಕ್ಕೆ ಬರುವದು.

**ವಾಸನಾಯಾಂ ಪ್ರವೃದ್ಧಾಯಾಂ ವಿಯತ್ಸತ್ಯತ್ವವಾದಿನಾಮ್।**
**ಸನ್ಮಾತ್ರಾಬೋಧಯುಕ್ತಂಚ ದೃಷ್ಟ್ವಾ ವಿಸ್ಮಯತೇ**
**ಬುಧಃ ॥೭೬॥**

ಅ:— (ಆಕಾಶವು ಸುಳ್ಳು. ಸದ್ರೂಪವು ಸತ್ಯ.) ಎಂಬ ಚಿಂತನೆಯು ಬೆಳೆದಿರಲು, ಆಕಾಶವು ಸತ್ಯವೆಂದು ಹೇಳುತ್ತ ಸದ್ವಸ್ತುವಿನ ವಿಷಯದಲ್ಲಿ ಅಜ್ಞಾನದಿಂದ ಕೂಡಿದವನನ್ನು ಕಂಡು ಆಶ್ಚರ್ಯಪಡುತ್ತಾನೆ.

**ಏವಮಾಕಾಶ ಮಿಥ್ಯಾತ್ವೇ ಸತ್ಸತ್ಯತ್ವೇ ಚ ವಾಸಿತೇ ।**
**ನ್ಯಾಯೇನಾನೇನ ವಾಯ್ವಾದೇಃ ಸದ್ವಸ್ತು**
**ಪ್ರವಿವಿಚ್ಯತಾಮ್ ॥೭೭॥**

ಅ:— ಹೀಗೆ ಆಕಾಶದ ಮಿಥ್ಯಾತ್ವ ಹಾಗೂ ಸತ್ತಿನ ಸತ್ಯತ್ವ ವಿಷಯ ದಲ್ಲಿ ಭಾವನೆಯು ದೃಢವಾಗಲು, ಇದೇ ನ್ಯಾಯದಿಂದ ವಾಯು-ತೇಜ ಇತ್ಯಾದಿ ಭೂತಗಳಿಂದಲೂ ಸದ್ವಸ್ತುವನ್ನು ವಿವೇಚಿಸಬೇಕು.

**ಸದ್ವಸ್ತ್ವೇಕದೇಶಸ್ಥಾ ಮಾಯಾ ತತ್ರೈಕದೇಶಗಮ್ ।**
**ವಿಯತ್ತತ್ರಾಪ್ಯೇಕದೇಶಗತೋ ವಾಯುಃ ಪ್ರಕಲ್ಪಿತಃ ॥೭೮॥**

ಅ:— ಸದ್ವಸ್ತುವಿನ ಒಂದು ಭಾಗದಲ್ಲಿ ಮಾಯೆಯು ಇರುವದು. ಆದೇ ಸದ್ವಸ್ತುವನ್ನು ಆಶ್ರಯಿಸಿಕೊಂಡಿರುವ ಮಾಯೆಯ ಕೆಲಭಾಗದಲ್ಲಿ ಆಕಾಶವಿರುವದು. ಆದರಂತೆ ಸತ್ತು ಹಾಗೂ ಮಾಯೆ ಇವುಗಳ ಆಶ್ರಯ ದಿಂದ ತೋರುವ ಆಕಾಶದ ಕೆಲಭಾಗದಲ್ಲಿ ವಾಯುವಿರುವದು.

**ಶೋಷಸ್ಪರ್ಶೌ ಗತಿರ್ವೇಗೋವಾಯುಧರ್ಮಾ ಇಮೇಮತಾಃ ।**
**ತ್ರಯಃ ಸ್ವಭಾವಾಃ ಸನ್ಮಾಯಾವ್ಯೋಮ್ನಾಂ ಯೇ ತೇऽಪಿ**
**ವಾಯುಗಾಃ ॥೭೯॥**

ಅ:— ಒಣಗಿಸುವಿಕೆ, ಸ್ಪರ್ಶ, ಗತಿ ಹಾಗೂ ವೇಗಗಳನ್ನು ವಾಯು ಧರ್ಮಗಳೆಂದು ತಿಳಿಯುವರು. ಸತ್ತು–ಮಾಯೆ–ಆಕಾಶ ಇವುಗಳ ಮೂರೂ ಗುಣಗಳು ವಾಯುವಿನಲ್ಲಿರುವವು.

ಅವು ಯಾವವು ?

**ವಾಯುರಸ್ತೀತಿ ಸದ್ಭಾವಃ ಸತೋ ವಾಯೌ ಪ್ರಥಕ್ಕೃತೇ ।**
**ನಿಸ್ತತ್ವರೂಪತಾ ಮಾಯಾಸ್ವಭಾವೋ ವ್ಯೋಮಗೋ**
**ಧ್ವನಿಃ ॥೮೦॥**

ಅ:— ವಾಯುವು ಇರುತ್ತದೆ ಎಂಬುದು ಸತ್ತಿನ ಗುಣವು. (ಧರ್ಮವು) ವಾಯುವನ್ನು ಸತ್ತಿನಿಂದ ಬೇರೆ ಮಾಡಲು ಕಾಣುವ ಅದರ ಮಿಥ್ಯಾ ಸ್ವಭಾ ವವು ಮಾಯೆಯ ಗುಣವು. ಆದರಂತೆ ಆಕಾಶದ ಗುಣವಾದ ಧ್ವನಿಯು ವಾಯುವಿನಲ್ಲಿದೆ.

**ಸತೋಽನುವತ್ತಿಃ ಸರ್ವತ್ರ ವ್ಯೋಮ್ನೋ ನೇತಿ ಪುರೇರಿತಮ್ ।**
**ವ್ಯೋಮಾನುವೃತ್ತಿರಧುನಾ ಕಥಂ ನ ವ್ಯಾಹತಂ ವಚಃ ॥೮೧॥**

ಅ:— ಸತ್ತಿನ ಅನುವೃತ್ತಿಯು ಎಲ್ಲಕಡೆಗೂ ಆಗುತ್ತದೆ. ಆಕಾಶ ವಿಷಯದಲ್ಲಿ ಹಾಗಿಲ್ಲ. ಎಂದು ಮೊದಲು (೬೭ನೇ ಶ್ಲೋಕ) ಹೇಳಿದ್ದಿರಿ. ಈಗ ವಾಯುವಿನಲ್ಲಿ ಆಕಾಶದ ಅನುವೃತ್ತಿ ಹೇಳುತ್ತೀರಿ. ನಿಮ್ಮ ಭಾಷಣವು ಪರಸ್ಪರ ವಿರುದ್ಧವಾಗುವದಿಲ್ಲವೇ ?

**ಛಿದ್ರಾನುವೃತ್ತಿರ್ನೇತೀತಿ ಪೂರ್ವೋಕ್ತಿರಧುನಾ ತ್ವಿಯಮ್ ।**
**ಶಬ್ದಾನುವೃತ್ತಿರೇವೋಕ್ತಾ ವಚಸೋ ವ್ಯಾಹತಿಃ ಕುತಃ ॥೮೨॥**

ಅ:— ವಾಯುವೇ ಮೊದಲಾದ ಕಾರ್ಯಗಳಲ್ಲಿ ಆಕಾಶದ ಅವಕಾಶದ (ಪೊಳ್ಳಿನ) ಅನುವೃತ್ತಿಯಾಗುವದಿಲ್ಲವೆಂದು ಮೊದಲು ಹೇಳಿದೆ. ಈಗ ಶಬ್ದದ ಅನುವೃತ್ತಿಯನ್ನು ಮಾತ್ರ ಹೇಳಲಾಗುತ್ತದೆ ಎಂದಮೇಲೆ ನಮ್ಮ ಹೇಳಿಕೆಗೆ ವ್ಯಾಘಾತದೋಷವೆಲ್ಲಿಯದು ?

**ನನು ಸದ್ವಸ್ತು ಪಾರ್ಥಕ್ಯಾದಸತ್ತ್ವಂ ಚೇತ್ತದಾ ಕಥಮ್ ।**
**ಅವ್ಯಕ್ತಮಾಯಾ ವೈಷಮ್ಯಾದಮಾಯಾಮಯ-**
**ತಾಪಿ ನೋ ॥೮೩॥**

ಅ:— ಒಂದುವೇಳೆ ಸದ್ವಸ್ತುವಿನಿಂದ ಭಿನ್ನವಾಗಿರುವದೆಂದು ವಾಯುವಿನ ಅಸತ್ವವು ಸಿದ್ಧವಾಗುವದಾದರೆ, ಅವ್ಯಕ್ತಮಾಯೆಯಿಂದ ವಿಲಕ್ಷಣವಾದ ವಾಯುವು ಮಾಯಾಮಯವೂ ಅಲ್ಲವೆನ್ನಬೇಕು.

**ನಿಸ್ತತ್ತ್ವರೂಪತೈವಾತ್ರ ಮಾಯಾತ್ವಸ್ಯ ಪ್ರಯೋಜಿಕಾ ।**
**ಸಾ ಶಕ್ತಿಕಾರ್ಯಯೋಸ್ತುಲ್ಯಾ ವ್ಯಕ್ತಾವ್ಯಕ್ತತ್ವ ಭೇದಿನೋಃ॥೮೪॥**

ಅ:— ಇಲ್ಲಿ ಮಾಯಾಮಯತ್ವಕ್ಕೆ ನಿಸ್ತತ್ವರೂಪತ್ವವೇ (ಮಿಥ್ಯಾ ಸ್ವರೂಪವೇ) ಉಪಯೋಗವುಳ್ಳದ್ದಾಗಿರುವದು. ಅದು ಅವ್ಯಕ್ತವಾದ ಮಾಯೆ ವ್ಯಕ್ತವಾದ ಅದರ ಕಾರ್ಯಗಳಲ್ಲಿ ಸಮಾನವಾಗಿರುವದು.

**ಸದಸತ್ವವಿವೇಕಸ್ಯ ಪ್ರಸ್ತುತತ್ವಾತ್ಸ ಚಿಂತ್ಯತಾಮ್ ।**
**ಅಸತೋಽವಾಂತರೋ ಭೇದ ಆಸ್ತಾಂ ತಚ್ಚಿಂತಯಾತ್ರ**
**ಕಿಮ್ ॥೮೫॥**

ಅ:— ಸದ್ಯಕ್ಕೆ ಸತ್ವ ಮತ್ತು ಅಸತ್ವ ಇವುಗಳ ವಿವೇಚನೆಯನ್ನು ಆರಂಭಿಸಿರುವದರಿಂದ ಅದನ್ನೇ ವಿಚಾರಿಸೋಣ. ಅಸತ್ತಿನ ಅವಾಂತರ ಭೇದಗಳು ಇರಲಿ. ಅವುಗಳನ್ನು ವಿಚಾರಿಸಿದರೆ ಲಾಭವೇನು ?

**ಸದ್ವಸ್ತು ಬ್ರಹ್ಮ ಶಿಷ್ಟೋಽಂಶೋ ವಾಯುರ್ಮಿಥ್ಯಾ ಯಥಾ ವಿಯತ್ ।**
**ವಾಸಯಿತ್ವಾ ಚಿರಂ ವಾಯೋರ್ಮಿಥ್ಯಾತ್ವಂ ಮರುತಂ ತ್ಯಜೇತ್ ॥೮೬॥**

ಅ:— ವಾಯುವಿನಲ್ಲಿರುವ ಸತ್ತಿನ ಅಂಶವು ಬ್ರಹ್ಮವು. ಉಳಿದ ವಾಯುವು ಹಿಂದೆ ಹೇಳಿದ ಆಕಾಶದಂತೆ ಮಿಥ್ಯೆಯು. ಹೀಗೆ ವಾಯುವಿನ ಮಿಥ್ಯಾತ್ವವನ್ನು ಚಿಂತಿಸುತ್ತ ವಾಯುವನ್ನು ತ್ಯಾಗಮಾಡಬೇಕು.

**ಚಿಂತಯೇದ್ವಹ್ನಿಮಪ್ಯೇವಂ ಮರುತೋನ್ಯೂನವರ್ತಿನಮ್।**
**ಬ್ರಹ್ಮಾಂಡಾವರಣೇ ಷ್ವೇಷಾ ನ್ಯೂನಾಧಿಕ ವಿಚಾರಣಾ ॥೮೭॥**

ಅ:— ವಾಯುವಿನ ಕೆಲವು ಭಾಗದಲ್ಲಿ ಮಾತ್ರ ಇರುವ ಅಗ್ನಿಯ ವಿಷಯದಲ್ಲಿ ಕೂಡ ಹೀಗೇ ವಿಚಾರಿಸಬೇಕು. ಈ ಕಡಿಮೆ-ಹೆಚ್ಚಿನ ವಿಚಾರವು ಬ್ರಹ್ಮಾಂಡಾವರಣದಲ್ಲಿ ಎಲ್ಲಕಡೆಗೆ ಇದೇ ರೀತಿ.

**ವಾಯೋರ್ದಶಾಂಶತೋ ನ್ಯೂನೋ ಪೂರ್ವಾನುಗತಿರತ್ರ ಚ ।**
**ಪುರಾಣೋಕ್ತಂ ತಾರತಮ್ಯಂ ದಶಾಂಶೈರ್ಭೂತಪಂಚಕೇ ॥೮೮॥**

ಅ:— ಅಗ್ನಿಯು ವಾಯುವಿನಲ್ಲಿ ಅದಕ್ಕಿಂತ ದಶಾಂಶ ರೂಪದಿಂದ ಕಡಿಮೆ ಎಂದು ಕಲ್ಪಿತವಾಗಿದೆ. ಐದೂ ಮಹಾಭೂತಗಳ ವಿಷಯದಲ್ಲಿ ದಶಾಂಶತಾರತಮ್ಯವು ಪುರಾಣಗಳಲ್ಲಿ ಹೇಳಿದೆ.

**ವಹ್ನಿರುಷ್ಣಃ ಪ್ರಕಾಶಾತ್ಮಾ ಪೂರ್ವಾನುಗತಿರತ್ರ ಚ ।**
**ಅಸ್ತಿ ವಹ್ನಿಃ ಸ ನಿಸ್ತತ್ವಃ ಶಬ್ದವಾನ್ ಸ್ಪರ್ಶವಾನಪಿ ॥೮೯॥**

ಅ:— ಅಗ್ನಿಯು ಉಷ್ಣವೂ, ಪ್ರಕಾಶರೂಪವೂ ಆಗಿದೆ. ಇಲ್ಲಿ ಕಾರಣ ಗುಣಗಳ ಅನುವೃತ್ತಿಯೂ ಇರುವದು. ಅಗ್ನಿಇರುತ್ತದೆ. (ಸದ್ರೂಪ) ಮಿಥ್ಯಾರೂಪವು (ಮಾಯಾಗುಣ) ಶಬ್ದವುಳ್ಳದುದು. (ಆಕಾಶಗುಣ) ಸ್ಪರ್ಶವುಳ್ಳದುದು. (ವಾಯುಗುಣ.)

**ಸನ್ಮಾಯಾವ್ಯೋಮ ವಾಯ್ವಂಶೈರ್ಯುಕ್ತಸ್ಯಾಗ್ನೇರ್ನಿ-**
**ಜೋಗುಣಃ ।**
**ರೂಪಂ ತತ್ರ ಸತಃ ಸರ್ವಮನ್ಯದ್ ಬುದ್ಧ್ಯಾ**
**ವಿವಿಚ್ಯತಾಮ್ ॥೯೦॥**

ಅ:—ಸತ್ತು, ಮಾಯೆ, ಆಕಾಶ ಹಾಗೂ ವಾಯು ಇವುಗಳ ಅಂಶದಿಂದ ಯುಕ್ತವಾಗಿರುವ ಅಗ್ನಿಯ ಸ್ವಾಭಾವಿಕ ಗುಣವು ರೂಪವು. ಸದ್ರೂಪದಿಂದ ಭಿನ್ನವಾದವುಗಳನ್ನೆಲ್ಲ ವಿವೇಕಬುದ್ಧಿಯಿಂದ ಬೇರ್ಪಡಿಸಬೇಕು.

**ಸತೋ ವಿವೇಚಿತೇ ವಹ್ನೌ ಮಿಥ್ಯಾತ್ವೇ ಸತಿ ವಾಸಿತೇ ।**
**ಅಪೋದಶಾಂಶತೋ ನ್ಯೂನಾಃ ಕಲ್ಪಿತಾ ಇತಿ**
**ಚಿಂತಯೇತ್ ॥೯೧॥**

ಅ:—ಹೀಗೆ ಸತ್ತಿನಿಂದ ವಹ್ನಿಯನ್ನು ಬೇರ್ಪಡಿಸಲಾಗಿ ಅದರ ಮಿಥ್ಯಾತ್ವದ ದೃಢಭಾವನೆಯಾಗಲು ಆ ಅಗ್ನಿಯ ಹತ್ತು ಭಾಗಗಳ ಒಂದರಲ್ಲಿ ಮಾತ್ರ ಉದಕವು ಕಲ್ಪಿತವಾಯಿತೆಂದು ತಿಳಿಯಬೇಕು.

**ಸಂತ್ಯಾಪೋಽಮೂಃ ಶೂನ್ಯತತ್ತ್ವಾಃ ಸಶಬ್ದಸ್ಪರ್ಶ**
**ಸಂಯುತಾಃ ।**
**ರೂಪವತ್ಯೋಽನ್ಯ ಧರ್ಮಾನುವೃತ್ತ್ಯಾ ಸ್ವೀಯೋ**
**ರಸೋಗುಣಃ ॥೯೨॥**

ಅ:—ಇತರ ಎಂದರೆ ಸತ್ತು ಮುಂ.ಗಳ ಗುಣಗಳ ಅನುವರ್ತನದಿಂದ ಕೂಡಿ ನೀರು ಇರುತ್ತದೆ. ಇದು ಮಿಥ್ಯೆ. ಶಬ್ದಸ್ಪರ್ಶದಿಂದ ಕೂಡಿದುದು. ರೂಪಗುಣವುಳ್ಳದುದು ಮತ್ತು ತನ್ನದೇ ಆದ ರಸಗುಣವುಳ್ಳದುದು.

**ಸತೋ ವಿವೇಚಿತಾಸ್ವಪ್ಸು ತನ್ಮಿಥ್ಯಾತ್ವೇ ಚ ವಾಸಿತೇ ।**
**ಭೂಮಿರ್ದಶಾಂಶತೋ ನ್ಯೂನಾಕಲ್ಪಿತಾಪ್ಸ್ವಿತಿ**
**ಚಿಂತಯೇತ್ ॥೯೩॥**

ಅ:—ಸತ್ತಿನಿಂದ ಬೇರೆಮಾಡಿ ನೋಡಿದ ಉದಕವು ಮಿಥ್ಯೆ ಎಂದು ಮನವರಿಕೆಯಾಗಲು, ಆ ಉದಕಕ್ಕಿಂತ ಹತ್ತು ಪಟ್ಟು ಕಡಿಮೆಯಾಗಿರುವ ಭೂಮಿಯು ಕಲ್ಪಿಸಲ್ಪಟ್ಟಿದೆ ಎಂದು ಅರಿತುಕೊಳ್ಳಬೇಕು.

(ಪಾರ್ಥಿವ ಬ್ರಹ್ಮಾಂಡಕ್ಕಿಂತ ಅದನ್ನು ಆಚ್ಛಾದಿಸಿರುವ ಉದಕವು ಹತ್ತುಪಟ್ಟುಹೆಚ್ಚು. ಅದಕ್ಕಿಂತ ತೇಜವು ಹತ್ತುಪಟ್ಟುಹೆಚ್ಚು. ತೇಜಕ್ಕಿಂತ ವಾಯುವು ಹತ್ತುಪಟುಹೆಚ್ಚು. ವಾಯುವಿಗಿಂತ ಆಕಾಶವು ಹತ್ತುಪಟ್ಟು ಹೆಚ್ಚು. ಹೀಗೆ ಅಧಿಕತ್ವದ ನಿರ್ಣಯವನ್ನು ತಿಳಿಯಬೇಕು.)

**ಅಸ್ತಿಭೂಸ್ತತ್ರಶೂನ್ಯಾಸ್ಯಾಂ ಶಬ್ದಾಸ್ಪರ್ಶೌ ಸರೂಪಕೌ ।**
**ರಸಶ್ಚ ಪರತೋ ಗಂಧೋ ನೈಜಃ ಸತ್ತಾ ವಿವಿಚ್ಯತಾಮ್ ॥೯೪॥**

ಅ:—ಭೂಮಿಯು ಇರುತ್ತದೆ. (ಎಂಬಲ್ಲಿ ಸದ್ರೂಪವು) (ನಿಜವಾಗಿ) ಅದು ಮಿಥ್ಯೆಯು. ಅದರಲ್ಲಿ ರೂಪ-ಶಬ್ದ-ಸ್ಪರ್ಶ-ರಸಗಳೆಂಬ ಇತರ ಭೂತಗಳ ಕಾರ್ಯಧರ್ಮಗಳುಂಟು. ಗಂಧವು ಅದರ ಸ್ವಂತಗುಣವು. ಆದುದರಿಂದ ಇದರಲ್ಲಿರುವ ಸದ್ರೂಪವನ್ನು ಪೃಥಕ್ಕರಿಸಬೇಕು.

**ಪೃಥಕ್‌ಕೃತಾಯಾಂ ಸತ್ತಾಯಾಂ ಭೂಮಿರ್ಮಿಥ್ಯಾವ ಶಿಷ್ಯತೇ ।**
**ಭೂಮೇರ್ದಶಾಂಶತೋ ನ್ಯೂನಂ ಬ್ರಹ್ಮಾಂಡಂ ಭೂಮಿ ಮಧ್ಯಗಮ್ ॥೯೫॥**

ಅ:—ಹೀಗೆ ಭೂಮಿಯ ಸರ್ವಧರ್ಮಗಳಿಂದ ಸತ್ತನ್ನು ಬೇರ್ಪಡಿಸಲು ಮಿಥ್ಯೆಯಾದ ಭೂಮಿ ಮಾತ್ರ ಉಳಿಕೆಯಾಗುತ್ತದೆ. ಈ ಭೂಮಿಯ ಮಧ್ಯ ಭಾಗದಲ್ಲಿ ಭೂಮಿಗಿಂತಲೂ ಹತ್ತುಪಾಲು ಕಡಿಮೆಯಾದ ಬ್ರಹ್ಮಾಂಡವು ಇರುತ್ತದೆ.

**ಬ್ರಹ್ಮಾಂಡಮಧ್ಯೇ ತಿಷ್ಠಂತಿ ಭುವನಾನಿ ಚತುರ್ದಶ ।**
**ಭುವನೇಷು ವಸಂತ್ಯೇಷು ಪ್ರಾಣಿದೇಹಾ ಯಥಾ ಯಥಮ್ ॥೯೬॥**

ಅ:—ಬ್ರಹ್ಮಾಂಡಮಧ್ಯದಲ್ಲಿ ಭೂಃ-ಭುವಃ ಮೊದಲಾದ ಏಳು ಊರ್ಧ್ವ ಲೋಕಗಳೂ, ತಲ–ಅತಲ ಮುಂ. ಏಳು ಅಧೋಲೋಕಗಳೂ ಇರುತ್ತವೆ. ಆ ಹದಿನಾಲ್ಕು ಲೋಕಗಳಲ್ಲಿ ಯೋಗ್ಯವಾದ ಪ್ರಾಣಿದೇಹಗಳು ಇರುತ್ತವೆ.

**ಬ್ರಹ್ಮಾಂಡಲೋಕದೇಹೇಷು ಸದ್‌ವಸ್ತುನಿ ಪೃಥಕ್‌ಕೃತೇ ।**
**ಅಸಂತೋಽಡಾದಯೋ ಭಾಂತು ತದ್ಭಾನೇಽಪೀಹ ಕಾ ಕ್ಷತಿಃ॥೯೭॥**

ಅ:—ಬ್ರಹ್ಮಾಂಡವು, ಎಲ್ಲ ಲೋಕಗಳು ಮತ್ತು ಚತುರ್ವಿಧ (ಸ್ವೇದ ಜಾದಿ) ದೇಹಗಳು ಇವುಗಳಿಂದ ಸದ್ವಸ್ತುವನ್ನು ಬೇರೆಮಾಡಲು, ಬರಿ ತೋರಿಕೆ ಯವುಗಳಾದ ಬ್ರಹ್ಮಾಂಡವೇ ಮೊದಲಾದ ಪದಾರ್ಥಗಳು ತೋರಿಕೊಳ್ಳು ತಿರಲಿ. ಅದರಿಂದಾಗುವ ಹಾನಿ ಏನು ?

**ಭೂತಭೌತಿಕಮಾಯಾನಾಮ ಸತ್ವೇಽತ್ಯಂತವಾಸಿತೇ ।**
**ಸದ್ವಸ್ತ್ವದ್ವೈತಮಿತ್ಯೇಷಾ ಧೀರ್ವಿಪರ್ಯೇತಿ ನ ಕ್ವಚಿತ್ ॥೯೮॥**

ಅ:—ಪಂಚಮಹಾಭೂತಗಳು, ಅವುಗಳ ಕಾರ್ಯವೆನಿಸಿದ ಬ್ರಹ್ಮಾಂ ಡಾದಿಳು, ಇವುಗಳ ಕಾರಣವಾದ ಮಾಯೆಯು ಮಿಥ್ಯೆಯಾದವುಗಳೆಂದು ಮನವರಿಕೆಯಾಗಿ ದೃಢವಾಗಲು, ಸದ್ವಸ್ತುವೆನಿಸಿದ ಬ್ರಹ್ಮವು ಅಖಂಡವಾ ಗಿರುವುದೆಂಬ ಬುದ್ಧಿಯು ಎಂದೂ ಕೆಡುವದಿಲ್ಲ.

**ಸದದ್ವೈತಾತ್ಪ್ರಥಗ್ಭೂತೇ ದ್ವೈತೇ ಭೂಮ್ಯಾದಿರೂಪಿಣಿ ।**
**ತತ್ತದರ್ಥಕ್ರಿಯಾ ಲೋಕೇ ಯಥಾ ದೃಷ್ಟಾ ತಥೈವ ಸಾ ॥೯೯॥**

ಅ:—ಭೂಮಿ-ಆಪ-ಮೊದಲಾದ ದ್ವೈತ ಪ್ರಪಂಚವು ಸದ್ರೂಪವೆನಿಸಿದ ಅದ್ವೈತದಿಂದ ಭಿನ್ನವಾಗಿದೆ ಎಂದು ನಿಶ್ಚಿತವಾಗಲು, ಆಯಾ ಪದಾರ್ಥಗಳ ವ್ಯವಹಾರ ಪ್ರಯೋಜನವು ಮೊದಲಿನಂತೆಯೇ (ಜ್ಞಾನೋತ್ತರದಲ್ಲಿ ಕೂಡ) ನಡೆಯುವದು.

**ಸಾಂಖ್ಯಕಾಣಾದ ಬೌದ್ಧಾದ್ಯೈರ್ಜಗದ್ಭೇದೋ ಯಥಾ ಯಥಾ ।**
**ಉತ್ಪ್ರೇಕ್ಷ್ಯತೇಽನೇಕಯುಕ್ತ್ಯಾ ಭವತ್ವೇಷ ತಥಾ ತಥಾ ॥೧೦೦॥**

ಅ:— ಸಾಂಖ್ಯರು, ವೈಶೇಷಿಕರು, ಬೌದ್ಧರು ಮೊದಲಾದವರಿಂದ ಜಗ ತ್ತಿನ ಭೇದವು ಅನೇಕ ಯುಕ್ತಿಗಳಿಂದ ಪ್ರತಿಪಾದಿತವಾಗುವದಷ್ಟೇ. ಅದು ಅವರು ಹೇಳುವಂತೆಯೇ ಇರಲಿ.

(ವ್ಯಾವಹಾರಿಕ ಭೇದವನ್ನು ಅದ್ವೈತಿಗಳೂ ಒಪ್ಪಬೇಕಾದುದರಿಂದ ಅದನ್ನು ಖಂಡಿಸುವ ಅವಶ್ಯವಿಲ್ಲವೆಂದು ಭಾವವು)

**ಅವಜ್ಞಾತಂ ಸದದ್ವೈತಂ ನಿಃಶಂಕೈರನ್ಯವಾದಿಭಿಃ ।**
**ಏವಂ ಕಾ ಕ್ಷತಿರಸ್ಮಾಕಂ ತದ್ದ್ವೈತಮವಜಾನ**
**ತಾಮ್ ॥೧೦೧॥**

ಅ:—ಭಯವಿಲ್ಲದೇ ಅನ್ಯವಾದಿಗಳು ಸದ್ರೂಪವಾದ ಅದ್ವೈತವನ್ನು ತಿರಸ್ಕರಿಸಿರುವರು. ಅದರಂತೆ ಅವರು ಕಲ್ಪಿಸಿರುವ ದ್ವೈತವನ್ನು ತಿರಸ್ಕರಿಸಿದರೆ ನಮಗೇನು ಹಾನಿ ?

**ದ್ವೈತಾವಜ್ಞಾ ಸುಸ್ಥಿತಾ ಚೇದದ್ವೈತೇ ಧೀಃ ಸ್ಥಿರಾಭವೇತ್ ।**
**ಸ್ಥೈರ್ಯೇ ತಸ್ಯಾಃ ಪುಮಾನೇಷ ಜೀವನ್ಮುಕ್ತ ಇತೀರ್ಯತೇ ॥೧೦೨॥**

ಅ: - ದ್ವೈತ ವಿಷಯದಲ್ಲಿ ತಿರಸ್ಕಾರವು ದೃಢವಾಗಲು, ಅದ್ವೈತದಲ್ಲಿ ಬುದ್ಧಿಯು ಸ್ಥಿರವಾಗುವದು. ಹಾಗೆ ಬುದ್ಧಿಯು ಸ್ಥಿರವಾಗಲು, ಆ ಪುರುಷನು ಜೀವನ್ಮುಕ್ತನೆಂದು ಹೇಳುವರು.

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯವಿಮುಹ್ಯತಿ ।**
**ಸ್ಥಿತ್ವಾಽಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥೧೦೩॥**

ಅ:— ಎಲೈ ಅರ್ಜುನನೇ ಇದು ಬ್ರಹ್ಮ ವಿಷಯಕವಾದ ನಿಶ್ಚಯವು. ಈ ಸ್ಥಿತಿಯನ್ನು ಹೊಂದಿದವನು ಎಂದಿಗೂ ಮೋಹಗೊಳ್ಳಲಾರನು. ಕೊನೆಗಾಲದಲ್ಲಿಯಾದರೂ ಈ ಸ್ಥಿತಿಯು ಉಂಟಾದರೆ ಅವನು ವಿದೇಹ ಮುಕ್ತಿಯನ್ನು ಪಡೆಯುವನು.

**ಸದದ್ವೈತೇಽನೃತದ್ವೈತೇ ಯದನ್ಯೋಽನ್ಯೈಕ್ಯ ವೀಕ್ಷಣಮ್ ।**
**ತಸ್ಯಾಂತ ಕಾಲಸ್ತದ್ಭೇದ ಬುದ್ಧಿರೇವ ನ ಚೇತರಃ ॥೧೦೪॥**

ಅ:—ಸದ್ರೂಪವಾದ ಅದ್ವೈತ ಬ್ರಹ್ಮವನ್ನೂ ಮಿಥ್ಯೆಯಾದ ದ್ವೈತವನ್ನು ಒಂದುಮಾಡಿಕೊಂಡು ನೋಡುವ ದೃಷ್ಟಿಯ ಕೊನೆಗಾಲ ಎಂದರೆ ಅವುಗಳಲ್ಲಿರುವ ಭೇದವನ್ನು ತಿಳಿಯುವದು. ಮತ್ತೇನೂ ಅಲ್ಲ.

**ಯದ್ವಾಂತಕಾಲಃ ಪ್ರಾಣಸ್ಯ ವಿಯೋಗೋಽಸ್ತು ಪ್ರಸಿದ್ಧಿತಃ ।**
**ತಸ್ಮಿನ್ ಕಾಲೇಽಪಿ ನ ಭ್ರಾಂತೇರ್ಗತಾಯಾಃ ಪುನರಾಗಮಃ ॥೧೦೫॥**

ಅ:—ಅಥವಾ ಲೋಕದಲ್ಲಿ ಪ್ರಸಿದ್ಧವಿರುವಂತೆ ಪ್ರಾಣಹೋಗುವ ಕಾಲವೇ ಅಂತಕಾಲವೆಂದರೂ ತಪ್ಪಲ್ಲ. ಆ ಕಾಲದಲ್ಲಿ ಕೂಡ ಒಮ್ಮೆಹೋದ ತಪ್ಪು ತಿಳಿವಳಿಕೆಯು ಪುನಃ ಉಂಟಾಗುವದಿಲ್ಲ.

**ನಿರೋಗ ಉಪವಿಷ್ಟೋಽವಾ ರುಗ್ಣೋಽವಾ ವಿಲುಠನ್ ಭುವಿ ।**
**ಮೂರ್ಛಿತೋಽವಾ ತ್ಯಜತ್ವೇಷ ಪ್ರಾಣಾನ್ ಭ್ರಾಂತಿರ್ನ ಸರ್ವಥಾ ॥೧೦೭॥**

ಅ: –(ಈ ಸಾಧಕನು) ನಿರೋಗಿಯಾಗಲಿ, ಕುಳಿತುಕೊಂಡಾಗಲಿ, ರೋಗಿಯಾಗಲಿ, ಭೂಮಿಯಮೇಲೆ ಹೊರಳಾಡುವವನಾಗಲಿ ಅಥವಾ ಮೂರ್ಛಿತನಾಗಿಯಾಗಲಿ ಹೇಗೇ ಸಾಯಲಿ ಅವನಿಗೆ ತಪ್ಪುತಿಳಿವಳಿಕೆಯು ಎಂದಿಗೂ ಉಂಟಾಗುವದಿಲ್ಲ.

**ದಿನೇ ದಿನೇ ಸ್ವಪ್ನಸುಪ್ತ್ಯೋರಧೀತೇ ವಿಸ್ಮೃತೇಽಪ್ಯಯಮ್ ।**
**ಪರೇದ್ಯುರ್ನಾನಧೀತಃ ಸ್ಯಾತ್ತದ್ವದ್ವಿದ್ಯಾ ನ ನಶ್ಯತಿ ॥೧೦೭॥**

ಅ–ಪ್ರತಿದಿನದಲ್ಲಿಯೂ ಅಭ್ಯಾಸಮಾಡಿದ ವಿದ್ಯೆಯು ಕನಸು-ಗಾಢನಿದ್ದೆಗಳಲ್ಲಿ ಮರೆತುಹೋಗಿದ್ದರೂ, ಮರುದಿನ ಅವನು ಕಲಿತವನಲ್ಲ ಎಂದು ಅನಿಸುವದಿಲ್ಲ. ಅದರಂತೆ ಸಾಯುವದಕ್ಕಿಂತ ಮೊದಲು (ಮರಣ ಕ್ಲೇಶಾದಿಗಳಿಂದ) ಬಂದ ಮೂರ್ಛೆಯಲ್ಲಿ (ಮೊದಲು ಕಲಿತ) ವಿದ್ಯೆಯು ನಾಶವಾಗುವದಿಲ್ಲ.

**ಪ್ರಮಾಣೋತ್ಪಾದಿತಾ ವಿದ್ಯಾ ಪ್ರಮಾಣಂ ಪ್ರಬಲಂ ವಿನಾ ।**
**ನ ನಶ್ಯತಿ ನವೇದಾಂತಾತ್ ಪ್ರಬಲಂ ಮಾನಮೀಕ್ಷ್ಯತೇ ॥೧೦೮॥**

ಅ:—ಪ್ರಮಾಣಗಳಿಂದ ಹುಟ್ಟಿದ ಜ್ಞಾನವು, ಅದಕ್ಕಿಂತ ಪ್ರಬಲ ಪ್ರಮಾಣಗಳಿಂದ ಮಾತ್ರ ನಾಶವಾಗಬಲ್ಲದು. ಆದರೆ ವೇದಾಂತಕ್ಕಿಂತ ಪ್ರಬಲವಾದ ಪ್ರಮಾಣವು ಯಾವುದೂ ಕಂಡಿಲ್ಲ.

**ತಸ್ಮಾದ್ವೇದಾಂತಸಂಸಿದ್ಧಂ ಸದದ್ವೈತಂ ನ ಬಾಧ್ಯತೇ ।**
**ಅಂತಕಾಲೇಽಪ್ಯತೋ ಭೂತವಿವೇಕಾನ್ನಿರ್ವೃತಿಃ ಸ್ಥಿತಾ ॥೧೦೯॥**

ಅ:— ಆದುದರಿಂದ ವೇದಾಂತಪ್ರಮಾಣಗಳಿಂದ ಸಿದ್ಧವಾದ ಅದ್ವೈತರೂಪ ಸದ್ವಸ್ತು ಜ್ಞಾನವು, ಕೊನೆಗಾಲದಲ್ಲಿ ಕೂಡ ಹಾನಿ ಹೊಂದುವದಿಲ್ಲ. ಈಪ ಭೂತಪಂಚಕದಿಂದ ಬ್ರಹ್ಮವನ್ನು ಬೇರ್ಪಡಿಸಿ ನೋಡುವದರಿಂದ ಮೋಕ್ಷಪ್ರಾಪ್ತಿ ಎಂದು ಸಿದ್ಧವಾಯಿತು.

**ಇತಿ ಶ್ರೀ ವಿದ್ಯಾರಣ್ಯ ಮುನಿವಿರಚಿತಾಯಾಂ ಪಂಚದಶ್ಯಾಂ ಪಂಚಭೂತ ವಿವೇಕಃ ॥**

## ಪಂಚಭೂತ ವಿವೇಕಪ್ರಕರಣದ ಸಾರ

ಹಿಂದಿನ ಪ್ರಕರಣದಲ್ಲಿ 'ತತ್ವಮಸಿ' ಎಂಬ ಮಹಾವಾಕ್ಯವನ್ನು ವಿಚಾರ ಮಾಡಿ ಜೀವಬ್ರಹ್ಮೈಕ್ಯವನ್ನು ಹೇಳಿದುದಾಗಿದೆ. ಹಾಗಾದರೆ ಈಗ ಜೀವ ಸ್ವರೂಪ ಹಾಗೂ ಬ್ರಹ್ಮಸ್ವರೂಪವನ್ನು ತಿಳಿಯುವದು ಅವಶ್ಯವಾಯಿತು. ಆದುದರಿಂದ ಮೊದಲು ಪಂಚಮಹಾಭೂತಗಳ ಉಪಾಧಿಯನ್ನು ಸ್ವೀಕರಿಸಿದ ಬ್ರಹ್ಮನನ್ನು ಆ ಉಪಾಧಿಯಿಂದ ಬೇರ್ಪಡಿಸಿ ತೋರಿಸಿದ್ದಾರೆ ಮತ್ತು ಪಂಚ ಮಹಾಭೂತಗಳ ಸ್ವರೂಪವನ್ನು ತಿಳಿಸಿದ್ದಾರೆ.

... ○....

## ೩. ಪಂಚಕೋಶ ವಿವೇಕಃ

ಈ ಪ್ರಕರಣದಿಂದ ಹಿಂದೆ ನಾವು ತಿಳಿದ ತತ್ ಪದದ ಅರ್ಥವಾದ ಬ್ರಹ್ಮವೇ ತ್ವಂ ಪದದ ಅರ್ಥವೆಂಬುದನ್ನು ವಿವರಿಸುತ್ತಾರೆ.

**ಗುಹಾಹಿತಂ ಬ್ರಹ್ಮ ಯತ್ತತ್ ಪಂಚಕೋಶ ವಿವೇಕತಃ ।**
**ಬೋದ್ಧುಂ ಶಕ್ಯಂತತಃ ಕೋಶಪಂಚಕಂ ಪ್ರವಿವಿಚ್ಯತೇ ॥೧॥**

ಅ:— ಗುಹೆಯಲ್ಲಿ ಇಟ್ಟ ಬ್ರಹ್ಮವು ಪಂಚಕೋಶಗಳ ವಿವರಣೆಯಿಂದ ತಿಳಿಯಲು ಶಕ್ಯವು. ಆದುದರಿಂದ ಪಂಚಕೋಶಗಳ ವಿವೇಚನೆಯನ್ನು ಮಾಡುತ್ತೇವೆ.

(ತೈತ್ತರೀಯೋಪನಿಷತ್ತಿನಲ್ಲಿ 'ಯೋವೇದನಿಹಿತಂಗುಹಾಯಾಂ ಪರಮೇ ವ್ಯೋಮನ್' ಬ್ರಹ್ಮನು ಗುಹೆಯಲ್ಲಿರುವನೆಂದು ಹೇಳಿದೆ.)

**ದೇಹಾದಭ್ಯಂತರಃ ಪ್ರಾಣಃ ಪ್ರಾಣಾದಭ್ಯಂತರಂ ಮನಃ ।**
**ತತಃ ಕರ್ತಾ ತತೋಭೋಕ್ತಾ ಗುಹಾಸೇಯಂ ಪರಂಪರಾ ॥೨॥**

ಅ:— ಅನ್ನಮಯವೆನಿಸುವ ದೇಹಕ್ಕಿಂತ ಪ್ರಾಣವು ಒಳಗಿದೆ. ಪ್ರಾಣ ಕ್ಕಿಂತ ಮನವು ಒಳಗಿದೆ. ಮನಸ್ಸಿನ ಆಚೆಗೆ ಕರ್ತನು. (ವಿಜ್ಞಾನಮಯ

ಕೋಶ) ಆನಂತರ ಭೋಕ್ತಾ. (ಆನಂದಮಯಕೋಶ) ಹೀಗೆ ಒಂದ ರೊಳಗೊಂದು ಇರುವ ಕೋಶಪರಂಪರೆಗೆ ವೇದಾಂತದಲ್ಲಿ ಗುಹೆ ಎಂದು ಹೆಸರು.

**ಪಿತೃಭುಕ್ತಾನ್ನಜಾದ್ವೀರ್ಯಾಜ್ಜಾತೋಽನ್ನೇನೈವ ವರ್ಧತೇ ।**
**ದೇಹಃ ಸೋಽನ್ನಮಯೋನಾತ್ಮಾ ಪ್ರಾಕ್ ಚೋರ್ಧ್ವಂ ತದಭಾವತಃ ॥೩॥**

ಅ: — ತಂದೆಯು ತಿಂದ ಅನ್ನದಿಂದ ಪರಿಪಾಕವಾದ ವೀರ್ಯದಿಂದ ಹುಟ್ಟುವದು ಹಾಗೂ ಅನ್ನದಿಂದಲೇ ಬೆಳೆಯುವದು. ಹೀಗೆ ಅನ್ನಮಯ ವಾದ ದೇಹವು ಆತ್ಮವೆನಿಸಲಾರದು. ಯಾಕಂದರೆ ಹುಟ್ಟುವದಕ್ಕಿಂತ ಮೊದಲು ಹಾಗೂ ನಾಶವಾದ ಮೇಲೆ ಅದು ಇರುವದಿಲ್ಲ.

(ಮನುಷ್ಯನು ತಿಂದ ಅನ್ನವು ರಸ-ರಕ್ತ-ಮಾಂಸ-ಅಸ್ಥಿ-ಮಜ್ಜಾ-ಸ್ನಾಯು ಮತ್ತು ಶುಕ್ರ ಅಥವಾ ಶೋಣಿತವೆಂಬ ಸಪ್ತಧಾತುಗಳಾಗಿ ಪರಿಣ ಮಿಸುವದೆಂಬುದು ಪ್ರಸಿದ್ಧವು. ಒಟ್ಟಿನಲ್ಲಿ ದೇಹವು ಕಾರ್ಯವೆಂದಂತಾ ಯಿತು. ಕಾರ್ಯಕ್ಕೆ ನಾಶವುಂಟು ಎಂದು ನಿಯಮವು. ಆದುದರಿಂದ ದೇಹವು ಅನಾತ್ಮವಸ್ತುವು.)

**ಪೂರ್ವಜನ್ಮನ್ಯಸನ್ನೇತಜ್ಜನ್ಮ ಸಂಪಾದಯೇತ್ಕಥಮ್ ।**
**ಭಾವಿಜನ್ಮನ್ಯಸತ್ ಕರ್ಮ ನ ಬುಂಜೀತೇಹ ಸಂಚಿತಮ್ ॥೪॥**

ಅ:— (ಸ್ಥೂಲದೇಹವೇ ಆತ್ಮನೆಂದರೆ ?) ಸ್ಥೂಲದೇಹರೂಪನಾದ ಆತ್ಮನು ಪೂರ್ವಜನ್ಮದಲ್ಲಿ ಇರಲಿಲ್ಲ. ಎಂದಮೇಲೆ ಅವನು ಈ ಜನ್ಮವನ್ನು ಹೇಗೆ ಸಂಪಾದಿಸಬಹುದು ? ಅದರಂತೆ ಮುಂದಿನ ಜನ್ಮದಲ್ಲಿಯೂ ಅವನು ಇರುವದಿಲ್ಲ. ಹೀಗಾದರೆ ಈ ಜನ್ಮದಲ್ಲಿ ಸಂಚಯಿಸಿದ ಕರ್ಮದ ಫಲವನ್ನು ಅವನು ಮುಂದೆ ಭೋಗಿಸುವ ಸಾಧ್ಯತೆಯೇ ಇಲ್ಲ.

ದೇಹವೇ ಆತ್ಮನೆಂದರೆ ಅಕೃತಾಭ್ಯಾಗಮ ಎಂದರೆ ಮಾಡದಿರುವದರ ಪ್ರಾಪ್ತಿ ಎಂಬ ದೋಷವುಂಟಾಗುತ್ತದೆ. ಪೂರ್ವಜನ್ಮದ ಸಂಬಂಧವೇ ಇಲ್ಲ ವಾದರೆ ಈ ಜನ್ಮವು ಯಾಕೆ ಬಂದಿತು ? ಅದೂ ಅನೇಕ ವೈಷಮ್ಯದಿಂದ ಒಡಗೂಡಿ. ಅಲ್ಲದೇ ದೇಹ ನಷ್ಟವಾದಮೇಲೆ ಆತ್ಮನೂ ನಷ್ಟವಾಗಬೇಕಾ

ಯಿತು ? ಹಾಗಾದಲ್ಲಿ ಅವನು ಮಾಡಿದ ಒಳಿತು-ಹೀನ ಕರ್ಮಗಳ ಗತಿ ಏನು ? ಅವೆಲ್ಲ ನಿಷ್ಫಲವಾದವೇ ? ಹೌದು ಎಂದರೆ ಕೃತಪ್ರಣಾಶವೆಂಬ ದೋಷವು ಬರುತ್ತದೆ. ಆದುದರಿಂದ ಸ್ಥೂಲದೇಹವು ಆತ್ಮನಲ್ಲ.)

ಇನ್ನು ಪ್ರಾಣಮಯ ಕೋಶದ ಅನಾತ್ಮತ್ವವನ್ನು ತೋರಿಸುತ್ತಾರೆ.

**ಪೂರ್ಣೋ ದೇಹೇ ಬಲಂ ಯಚ್ಛನ್ನಕ್ಷಾಣಾಂ ಯಃ ಪ್ರವರ್ತಕಃ ।**
**ವಾಯುಃ ಪ್ರಾಣಮಯೋ ನಾಸಾವಾತ್ಮಾ ಚೈತನ್ಯ ವರ್ಜನಾತ್ ॥೫॥**

ಅ:— ವಾಯುವು ದೇಹದಲ್ಲಿ ನಖಶಿಖಾಂತವಾಗಿ ತುಂಬಿಕೊಂಡು (ವ್ಯಾನರೂಪದಿಂದ) ಸಾಮರ್ಥ್ಯವನ್ನು ಕೊಡುತ್ತ ಇಂದ್ರಿಯಗಳಿಗೆ ಪ್ರೇರಕನಾಗಿರುವನು. ಇದೇ ಪ್ರಾಣಮಯಕೋಶವು. ಆದರೆ ಇದು ಚೈತನ್ಯ ರಹಿತವಾಗಿರುವದರಿಂದ ಆತ್ಮನಾಗಲಾರದು.

ಮನೋಮಯ ಕೋಶದ ಅನಾತ್ಮತ್ವವನ್ನು ತೋರಿಸುತ್ತಾರೆ.

**ಅಹಂತಾಂ ಮಮತಾಂ ದೇಹೇ ಗೇಹಾದೌ ಚ ಕರೋತಿ ಯಃ ।**
**ಕಾಮಾದ್ಯವಸ್ಥಯಾ ಭ್ರಾಂತೋ ನಾಸಾವಾತ್ಮಾ ಮನೋಮಯಃ ॥೬॥**

ಅ:— ದೇಹದ ಮೇಲೆ ನಾನು ಎಂಬ ಅಭಿಮಾನ ತಾಳುತ್ತ ಮನೆ ಮೊದಲಾದವುಗಳಲ್ಲಿ ಮಮತೆಯನ್ನು ತಳೆಯುತ್ತದೆ. ಕಾಮಾದಿ (ಕ್ರೋಧ, ಲೋಭ. ಮುಂ.) ಗಳಿಂದ ಹರಿದಾಡುತ್ತಿರುವ ಅಸ್ಥಿರ ಮನಸ್ಸು ಆತ್ಮನಾಗಲಾರದು.

ಕರ್ತೃತ್ವ ಸಂಜ್ಞೆಯುಳ್ಳ ವಿಜ್ಞಾನಮಯದ ವಿವರಣೆ.

**ಲೀನಾ ಸುಪ್ತೌ ವಪುರ್ಬೋಧೇ ವ್ಯಾಪ್ನುಯಾದಾನಖಾಗ್ರಗಾ ।**
**ಚಿಚ್ಛಾಯೋಪೇತಧೀರ್ನಾತ್ಮಾ ವಿಜ್ಞಾನಮಯ-ಶಬ್ದಭಾಕ್ ॥೭॥**

ಅ:— ಇದು ಚೈತನ್ಯದ ಪ್ರತಿಬಿಂಬವುಳ್ಳ ಬುದ್ಧಿಯು. ನಿದ್ದೆಯಲ್ಲಿ ಅಡಗಿ ಎಚ್ಚರದಲ್ಲಿ ಉಗುರು ತುದಿಯಿಂದ ತಲೆಯವರೆಗೆ ಇದ್ದುಕೊಂಡು

ಶರೀರವನ್ನೆಲ್ಲ ವ್ಯಾಪಿಸುತ್ತದೆ. ವಿಜ್ಞಾನಮಯವೆಂಬ ಲಸರು ತಳೆದಿರುವ ಬುದ್ಧಿಯು ಆತ್ಮನಾಗಲಾರದು.

ಮನೋಬುದ್ಧಿಗಳೆರಡೂ ಒಂದೇ ಅಂತಃಕರಣದ ಪ್ರಕಾರಗಳಾದುದರಿಂದ ಇಲ್ಲಿ ಎರಡು ಕೋಶಗಳನ್ನು ಕಲ್ಪಿಸಿದ್ದೇಕೆ ?

**ಕರ್ತೃತ್ವಕರಣತ್ವಾಭ್ಯಾಂ ವಿಕ್ರಿಯೇತಾಂತರಿಂದ್ರಿಯಮ್ ।**
**ವಿಜ್ಞಾನಮನಸೀ ಅಂತರ್ಬಹಿಶ್ತ್ವೈತೇ ಪರಸ್ಪರಮ್ ॥೮॥**

ಅ:— ಅಂತಃಕರಣವು ಕರ್ತೃತ್ವ (ಬುದ್ಧಿ) ಕರಣತ್ವ (ಮನಸ್ಸು) ರೂಪವಾಗಿ ವಿಕಾರವನ್ನು ಹೊಂದುವದು. ಇವುಗಳಿಗೆ ವಿಜ್ಞಾನ ಮತ್ತು ಮನಸ್ಸು ಎಂದು ಅನ್ನುತ್ತಾರೆ. ಇವು ಒಂದರ ಒಳಗೆ ಒಂದು ಎಂದರೆ ಒಳಗೆ ಮತ್ತು ಹೊರಗೆ ಇರುತ್ತವೆ.

**ಕಾಚಿದಂತರ್ಮುಖಾ ವೃತ್ತಿರಾನಂದ ಪ್ರತಿಬಿಂಬ ಭಾಕ್ ।**
**ಪುಣ್ಯಭೋಗೇ ಭೋಗಶಾಂತೌ ನಿದ್ರಾರೂಪೇಣ ಲೀಯತೇ ॥೯॥**

ಅ.—ಪುಣ್ಯಕರ್ಮಗಳ ಫಲವನ್ನು ಅನುಭವಿಸುವಾಗ ಬುದ್ಧಿವೃತ್ತಿಯು ಅಂತರ್ಮುಖವಾಗಿ ಆನಂದದ ಪ್ರತಿಬಿಂಬವನ್ನು ಪಡೆಯುವದು. ಅದೇ ಭೋಗವು ಮುಗಿಯಲು ಅವಿದ್ಯಾರೂಪ ನಿದ್ದೆಯಲ್ಲಿ ಲೀನವಾಗುವದು.

**ಕಾದಾಚಿತ್ಕತ್ವತೋನಾತ್ಮಾ ಸ್ಯಾದಾಂದಮಯೋಽಪ್ಯಯಮ್।**
**ಬಿಂಬಭೂತೋ ಯ ಆನಂದ ಆತ್ಮಾಸೌ ಸರ್ವದಾ ಸ್ಥಿತೇಃ ॥೧೦॥**

ಅ:— ಆಗೊಮ್ಮೆ ಈಗೊಮ್ಮೆ ತೋರಿ ಅಡಗುವ ಈ ಆನಂದಮಯ (ಕೋಶವೂ) ನೂ ಆತ್ಮನಲ್ಲ. (ಇಲ್ಲಿ) ಬಿಂಬರೂಪದಿಂದ ತೋರಿದ ಆನಂದ ರೂಪನಾದ ಆತ್ಮನು ಯಾವಾಗಲೂ ಇರತಕ್ಕವನು.

**ನನು ದೇಹಮುಕ್ರಮ್ಯ ನಿದ್ರಾನಂದಾಂತವಸ್ತುಷು ।**
**ಮಾ ಭೂದಾತ್ಮತ್ವ ಮನ್ಯಸ್ತು ನ ಕಶ್ಚಿದನುಭೂಯತೇ ॥೧೧॥**

ಅ:— ದೇಹವನ್ನು ಆರಂಭಮಾಡಿಕೊಂಡು ಕಾರಣ ಶರೀರರೂಪ ಆನಂದಮಯದ ಪರ್ಯಂತವಾಗಿ ಆತ್ಮತ್ವವು ದೊರೆಯದಿರಲಿ. ಆದರೆ ಇವುಗಳಿಗಿಂತ ಬೇರೆ ಆತ್ಮನು ನಮ್ಮ ಅನುಭವಕ್ಕೆ ಬರುವದಿಲ್ಲ.

ಪರಿಹಾರ.

**ಬಾಢಂ ನಿದ್ರಾದಯಃ ಸರ್ವೇಽನುಭೂಯಂತೇ ನಚೇತರಃ ।**
**ತಥಾಪ್ಯೇತೇಽನುಭೂಯಂತೇ ಯೇನ ತಂ ಕೋ ನಿವಾರಯೇತ್ ॥೧೨॥**

ಅ:— ನಿಜ. ಆನಂದಮಯವೇ ಮೊದಲಾದ ಸರ್ವಕೋಶಗಳ ಅನುಭವವೂ ಬರುತ್ತದೆ. ಅವುಗಳಿಗಿಂತ ಬೇರೆಯಾವದೂ ಅನುಭವಕ್ಕೆಬರುವದಿಲ್ಲ. ಆದರೆ ಇವೆಲ್ಲ ಕೋಶಗಳು ಯಾರ ಅನುಭವಕ್ಕೆ ಒಳಗಾಗುತ್ತವೆ? ಅಂಥ ಅನುಭವಿಯನ್ನು ಅಲ್ಲಗಳೆಯುವವರು ಯಾರು?

**ಸ್ವಯಮೇವಾನುಭೂತಿತ್ವಾದ್ವಿದ್ಯತೇ ನಾನುಭಾವ್ಯತಾ ।**
**ಜ್ಞಾತೃಜ್ಞಾನಾಂತರಾಭಾವದ ಜ್ಞೇಯೋನ ತ್ವಸತ್ತಯಾ ॥೧೩॥**

ಅ:— ಈ ಆತ್ಮನು ತಾನೇ ಅನುಭವರೂಪನು. ಅನುಭವಕ್ಕೆ ವಿಷಯನಾಗತಕ್ಕವನಲ್ಲ. ಅವನಹೊರತೂ .ಮತ್ತೊಬ್ಬರು ತಿಳಿಯುವವರು, ಹಾಗೂ ತಿಳಿಯಬೇಕಾದಂಥದು ಇಲ್ಲ. ಆದುದರಿಂದ ಅವನು ಅಜ್ಞೇಯನು. ಅವನು ಇಲ್ಲದ್ದರಿಂದ ಅಜ್ಞೇಯನಾಗಿಲ್ಲ.

ಇದನ್ನೇ ದೃಷ್ಟಾಂತರೂಪದಿಂದ ತಿಳಿಸುತ್ತಾರೆ.

**ಮಾಧುರ್ಯಾದಿ ಸ್ವಭಾವಾನಾಮನ್ಯತ್ರ ಸ್ವಗುಣಾರ್ಪಿಣಾಮ್ ।**
**ಸ್ವಸ್ಮಿಂಸ್ತದರ್ಪಣಾಪೇಕ್ಷಾ ನೋ ನ ಚಾಸ್ತ್ಯನ್ಯದರ್ಪಕಮ್ ॥೧೪॥**

ಅ:— ಬೇರೆ ಪದಾರ್ಥಗಳಿಗೆ ತಮ್ಮಸ್ವಭಾವವನ್ನುಂಟುಮಾಡುವ ಸಿಹಿ ( ಬೆಲ್ಲ ಮುಂ. ) ಮುಂತಾದ ಪದಾರ್ಥಗಳಿಗೆ, ಆ ಸಿಹಿತಂದುಕೊಡಲು ಮತ್ತೊಂದರಅಪೇಕ್ಷೆ ಇಲ್ಲ. ಹಾಗೆತಂದುಕೊಡುವಂಥ ಬೇರೆವಸ್ತುಗಳೂ ಇಲ್ಲ.

ಇದರಿಂದ ಏನಾದಂತಾಯಿತು?

**ಅರ್ಪಕಾಂತರರಾಹಿತ್ಯೇಽಪ್ಯಸ್ತ್ಯೇಷಾಂತತ್ಸ್ವಭಾವತಾ ।**
**ಮಾ ಭೂತ್ತಥಾನುಭಾವ್ಯತ್ವಂ ಬೋಧಾತ್ಮಾ ತು ನ ಹೀಯತೇ ॥೧೫॥**

ಅ:— ಸಿಹಿ ಮುಂ. ಗುಣಗಳನ್ನು ತಂದುಕೊಡುವ ಪದಾರ್ಥಗಳು ಇಲ್ಲದಿದ್ದರೂ, ಬೆಲ್ಲ ಮುಂ. ಸ್ವಾಭಾವಿಕವಾಗಿ ಸಿಹಿ ಮುಂ. ದವುಗಳಾಗಿಯೇ

ಇರುವವು. ಹಾಗೆ ಆತ್ಮನು ಅನುಭವಕ್ಕೆ ವಿಷಯನಾಗದಿದ್ದರೂ ಅವನ ಅನುಭಾವರೂಪವೇನೂ ಹೋಗುವುದಿಲ್ಲ.

ಈ ವಿಷಯಕ್ಕೆ ಪ್ರಮಾಣ.

**ಸ್ವಯಂಜ್ಯೋತಿರ್ಭವತ್ಯೇಷ ಪುರೋಽಸ್ಮಾದ್ಭಾಸತೇಽಖಿಲಾತ್ ।**
**ತಮೇವಭಾಂತ ಮನ್ವೇತಿ ತದ್ಭಾಸಾ ಭಾಸ್ಯತೇ ಜಗತ್ ॥೧೬॥**

ಅ:— ಈ ಆತ್ಮನು ಸ್ವಯಂಜ್ಯೋತಿಯು. ಈ ಸೃಷ್ಟಿಯ ಎಲ್ಲ ವಸ್ತುಗಳಿಗಿಂತ ಮೊದಲು ಇವನು ಬೆಳಗತಕ್ಕವನು. ಆ ಪ್ರಕಾಶರೂಪವನ್ನೇ ಎಲ್ಲವೂ ಅನುಸರಿಸುತ್ತವೆ. ಅವನ ಬೆಳಗುವಿಕೆಯಿಂದಲೇ ಜಗತ್ತೆಲ್ಲ ಬೆಳಕಿಗೆ ಬರುತ್ತದೆ.

(ಬೃಹದಾರಣ್ಯಕ, ನೃಸಿಂಹತಾಪಿನೀ, ಮುಂಡಕ ಮುಂ. ಶ್ರುತಿಗಳಲ್ಲಿ ಆತ್ಮನು ಸ್ವಯಂಪ್ರಕಾಶನೆಂದು ಹೇಳಿದೆ.)

**ಯೇನೇದಂ ಜಾನತೇ ಸರ್ವಂ ತತ್ಕೇನಾನ್ಯೇನ ಜಾನತಾಮ್ ।**
**ವಿಜ್ಞಾತಾರಂ ಕೇನ ವಿದ್ಯಾಚ್ಛಕ್ತಂ ವೇದ್ಯೇತು ಸಾಧನಮ್॥೧೭॥**

ಅ:— ಪ್ರಾಣಿಯು (ಸಾಕ್ಷಿಚೈತನ್ಯರೂಪಿಯಾದ) ಆತ್ಮನಿಂದ ಇದೆಲ್ಲ ದೃಶ್ಯವನ್ನು ತಿಳಿಯುತ್ತಾನೆ. ಅಂಥ ಚೈತನ್ಯಾತ್ಮನನ್ನು ಬೇರೆ ಇನ್ನಾವ ಜಡ ಪದಾರ್ಥದಿಂದ ತಿಳಿಯಲಾದೀತು? ಎಲ್ಲದೃಶ್ಯವನ್ನು ತಿಳಿಯುವವನನ್ನು ದೃಶ್ಯಭೂತವಾದ ಯಾವಜಡಪದಾರ್ಥದಿಂದ ತಿಳಿಯಬಹುದು? ಜ್ಞಾನಕ್ಕೆ ಸಾಧನವಾದ ಮನಸ್ಸಿಗೆ ಪ್ರಪಂಚದ ಪದಾರ್ಥಗಳನ್ನು ಮಾತ್ರ ತಿಳಿಯಲು ಶಕ್ತಿಯುಂಟು. ಜ್ಞಾತೃವೆನಿಸುವ ಆತ್ಮನನ್ನು ತಿಳಿಯಲು ಅದರಿಂದ ಸಾಧ್ಯವಿಲ್ಲ.

**ಸ ವೇತ್ತಿ ವೇದ್ಯಂ ತತ್‌ಸರ್ವಂ ನ್ಯಾನ್ಯಸ್ತಸ್ಯಾಸ್ತಿ ವೇದಿತಾ ।**
**ವಿದಿತಾವಿದಿತಾಭ್ಯಾಂ ತತ್ ಪೃಥಗ್ಬೋಧಸ್ವರೂಪಕಮ್ ॥೧೮॥**

ಅ:— ಆ ಆತ್ಮನು ವಿಷಯಗಳನ್ನೆಲ್ಲ ತಿಳಿಯುತ್ತಾನೆ. ಆದರೆ ಅವನನ್ನು ಅರಿಯುವಂಥವರು ಯಾರೂ ಇಲ್ಲ. ಜ್ಞಾನರೂಪನಾದ ಅವನು ವಿದಿತ ಎಂದರ (ಜ್ಞಾನದಿಂದ) ತಿಳಿದ ಅವಿದಿತ ಎಂದರೆ ಅಜ್ಞಾನದಿಂದ ಮುಚ್ಚಹಾಕಿದ ಜಡಪದಾರ್ಥಗಳಿಗಿಂತ ಬೇರೆಯಾದವನು.

ಇಂಥ ಬೇರೆಯಾದ ಆತ್ಮನ ಅನುಭವವು ಬರುವದಿಲ್ಲ.

**ಬೋಧೇಽಪ್ಯನುಭವೋ ಯಸ್ಯ ನ ಕಥಂಚನಜಾಯತೇ ।**
**ತಂ ಕಥಂ ಬೋಧಯೆಚ್ಛಾಸ್ತ್ರಂ ಲೋಷ್ಟಂ ನರಸಮಾ-**
**ಕೃತಿಮ್ ॥೧೯॥**

ಅ:— ಯಾರಿಗೆ ಘಟ ಮೊದಲಾದ ಪದಾರ್ಥಗಳ ಜ್ಞಾನವಾಗುತ್ತಿದ್ದರೂ ಆ ಘಟಕ್ಕೆ ವಿಶೇಷಣವಾದ ಬೋಧಸ್ವರೂಪದ ಅನುಭವವು ಯಾರಿಗೆ ಆಗುವದಿಲ್ಲವೋ ಆ ಮನುಷ್ಯರೂಪದ ಮಣ್ಣುಹೆಂಟೆಗೆ ಶಾಸ್ತ್ರವಾದರೂ ಹೇಗೆ ತಿಳಿಸಿಹೇಳಬೇಕು?

ಬೋಧವು ಅನುಭವಕ್ಕೆ ಬರುವದಿಲ್ಲವೆಂದರೆ ವ್ಯಾಘಾತದೋಷವು ಹೇಗೆ ಬರುವದೆಂಬುದನ್ನು ಹೇಳುತ್ತಾರೆ.

**ಜಿಹ್ವಾ ಮೇಽಸ್ತಿ ನ ವೇತ್ಯುಕ್ತಿರ್ಲಜ್ಜಾಯೈ ಕೇವಲಂ ಯಥಾ।**
**ನ ಬುಧ್ಯತೇ ಮಯಾ ಬೋಧೋ ಬೋದ್ಧವ್ಯ ಇತಿ**
**ತಾದೃಶೀ ॥೨೦॥**

ಅ:— ನನಗೆ ನಾಲಿಗೆ ಇರುವದೋ ಇಲ್ಲವೋ? ಎಂಬಮಾತು ಬರಿ ನಾಚಿಕೆಗೇಡಿನದೇ ಸರಿ. ಅದರಂತೆ ನನಗೆ ಅರಿವಿನ ಅನುಭವವಾಗಿಲ್ಲ. ಇನ್ನು ತಿಳಿಯಬೇಕು ಎಂಬ ಮಾತು ಕೂಡ.

**ಯಸ್ಮಿನ್ಯಸ್ಮಿನ್ನಸ್ತಿ ಲೋಕೇ ಬೋಧಸ್ತತ್ತದುಪೇಕ್ಷಣೇ ।**
**ತದ್ಬೋಧ ಮಾತ್ರಂ ತದ್‌ಬ್ರಹ್ಮೇತ್ಯೇವಂದೀರ್ಬ್ರಹ್ಮ**
**ನಿಶ್ಚಯಃ ॥೨೧॥**

ಅ:— ಜಗತ್ತಿನಲ್ಲಿ ನಮಗೆ ಯಾವ ಯಾವ ಘಟ-ಪಟ ಮೊದಲಾದ ವಿಷಯಗಳ ಜ್ಞಾನವಿರುವದೋ ಅದನ್ನು ಅನಾದರಮಾಡಿಬಿಡಲು ಉಳಿಯುವ ಅಚ್ಚಅರಿವೇ ಬ್ರಹ್ಮವು. ಹೀಗೆತಿಳಿಯುವದೇ ಬ್ರಹ್ಮನಿಶ್ಚಯವು.

ಹಾಗೆಂದರೆ ಪಂಚಕೋಶವಿವೇಕವು ವ್ಯರ್ಥವೇ?

**ಪಂಚಕೋಶ ಪರಿತ್ಯಾಗೇ ಸಾಕ್ಷಿಬೋಧಾವಶೇಷತಃ ।**
**ಸ್ವಸ್ವರೂಪಂ ಸ ಏವ ಸ್ಯಾಚ್ಛೂನ್ಯತ್ವಂ ತಸ್ಯ**
**ದುರ್ಘಟಮ್ ॥೨೨॥**

ಅ:— ಪಂಚಕೋಶಗಳನ್ನು ಅನಾತ್ಮ್ಯವೆಂದು ತೆಗೆದುಹಾಕಿದರೆ ಎಲ್ಲವುಗಳಿಗೆ ಸಾಕ್ಷಿಯಾದ ಅರಿವು ಉಳಿಕೆಯಾಗುವದು. ಅದೇತನ್ನ ನಿಜವಾದ ರೂಪವು. ಅದು ಇಲ್ಲವೆಂದುಹೇಳುವದು ಶಕ್ಯವೇಇಲ್ಲ.

**ಅಸ್ತಿತಾವತ್ಸ್ವಯಂ ನಾಮವಿವಾದಾ ವಿಷಯತ್ವತಃ ।**
**ಸ್ವಸ್ಮಿನ್ನಪಿ ವಿವಾದಶ್ಚೇತ್ಪ್ರತಿವಾದ್ಯತ್ರ ಕೋಭವೇತ್ ॥೨೩॥**

ಅ:— ತನ್ನವಿಷಯದಲ್ಲಿ ವಾದ-ವಿವಾದವು ಇಲ್ಲದ್ದರಿಂದ ತಾನು ಇರುವದೆಂದಾಯಿತು. ಒಂದುವೇಳೆ ತನ್ನವಿಷಯದಲ್ಲಿ ಸಂದೇಹವುಂಟಾದರೆ ಹಾಗೆ ಹೇಳುವವರಾದರೂ ಯಾವನು ಆಗುವನು. (ಯಾಕಂದರೆ ನಾನು ಇರುವೆನೆಂಬ ಭಾವನೆಯಿಂದ ಎಲ್ಲವ್ಯವಹಾರವು ಆರಂಭವಾಗುವದು.)

**ಸ್ವಾಸತ್ವಂ ತು ನ ಕಸ್ಮೈಚಿದ್ರೋಚತೇ ವಿಭ್ರಮಂ ವಿನಾ ।**
**ಅತ ಏವ ಶ್ರುತಿರ್ಬಾಧಂ ಬ್ರೂತೇ ಚಾಸತ್ವವಾದಿನಃ ॥೨೪॥**

ಅ:— ಭ್ರಮೆಯಹೊರತು ತಾನು ಇಲ್ಲ. ಎನ್ನುವದು ಯಾರಿಗೂ ರುಚಿಸುವಮಾತಲ್ಲ. ಆಧುದರಿಂದ ಶೂನ್ಯವಾದಿಯ ವಿಷಯದಲ್ಲಿ ನಿನ್ನಮಾತು ನಿಲ್ಲುಪದಿಲ್ಲ ಎಂದು (ತೈತ್ತರೀಯ ಶ್ರುತಿಯು ಹೇಳುತ್ತದೆ.

ಆ ಶ್ರುತಿಯವಾಕ್ಯದ ಅನುವಾದವಿದು.

**ಅಸದ್ಬ್ರಹ್ಮೇತಿ ಚೇದ್ವೇದ ಸ್ವಯಮೇವ ಭವೇದಸತ್ ।**
**ಅತೋಽಸ್ಯ ಮಾ ಭೂದ್ವೇದ್ಯತ್ವಂ ಸ್ವಸತ್ವಂ ತ್ವಭ್ಯುಪೇ-**
**ಯತಾಮ್ ॥೨೫॥**

ಅ:— ಬ್ರಹ್ಮವು ಇಲ್ಲವೆಂದು ತಿಳಿದರೆ ತಾನೇ ಇಲ್ಲವೆಂದಂತಾಗುವದು. ಆ ಬ್ರಹ್ಮನಿಗೆ ಅನುಭವಿಸಲ್ಪಡತಕ್ಕ ಸ್ವಭಾವವಿಲ್ಲದಿದ್ದರೆ ಹೋಗಲಿ. ತನ್ನ ಇರುವಿಕೆಯಾದರೂ ಸಿದ್ಧವಾದರೆಸಾಕು.

(ಅಸನ್ನೇವ ಸ ಭವತಿ! ಅಸದ್ಬ್ರಹ್ಮೇತಿ ವೇದ ಚೇತ್ ! ತೈ.ಶ್ರು)

ಒಳ್ಳೇದು ಆತ್ಮ ಸ್ವರೂಪನಾದರೂ ಹೇಗಿದೆ?

**ಕೀದೃಕ್ತರ್ಹೀತಿ ಚೇತ್ಪೃಚ್ಛೇದೀದೃಕ್ತಾ ನಾಸ್ತಿ ತತ್ರ ಹಿ ।**
**ಯದನೀದೃಗತಾ ದೃಕ್ಚ ತತ್ಸ್ವರೂಪಂ ವಿನಿಶ್ಚಿನು ॥೨೬॥**

ಅ:— ಹಾಗಾದರೆ ಆ ಸ್ವರೂಪವಾದರೂ ಹೇಗಿದೆ? ಎಂದು ಕೇಳಿದರೆ ಆತ್ಮನು ಹೀಗಿರುವನೆಂದು ಹೇಳಲಾಗುವದಿಲ್ಲ. ಅವನು ಹೀಗಿರುವುದಿಲ್ಲ. ಹಾಗಿರುವುದಿಲ್ಲ. (ಎಂಬ ನಿಷೇಧಾತ್ಮಕ ವಾಕ್ಯಗಳ ಕೊನೆಗೆ) ಯಾವುದು ತಿಳಿದುಬರುವುದೋ ಅದೇ ಅವನ ಸ್ವರೂಪವೆಂದು ನಿಶ್ಚಯಿಸು.

ಆತ್ಮನ ಅನಿರ್ವಚನೀಯತ್ವವನ್ನು ಹೇಳುತ್ತಾರೆ.

**ಅಕ್ಷಾಣಾಂ ವಿಷಯಸ್ತ್ವೇದೃಕ್ ಪರೋಕ್ಷ ಸ್ತಾದೃಗುಚ್ಯತೇ |**
**ವಿಷಯೀ ನಾಕ್ಷವಿಷಯಃ ಸ್ವಾತ್ವಾನ್ನಾಸ್ಯ ಪರೋಕ್ಷತಾ ||೨೭||**

ಅ:— ಯಾವ ಪದಾರ್ಥವು ಇಂದ್ರಿಯ ಗೋಚರವಾಗುವುದೋ ಅದು ಹೀಗಿರುವುದು. ಮತ್ತು ಯಾವುದು ಇಂದ್ರಿಯ ಗೋಚರವಾಗುವುದಿಲ್ಲವೋ ಅದು ಹಾಗಿರುವುದು ಎನ್ನುತ್ತಾರೆ. ಆದರೆ ಆತ್ಮನು ಎಲ್ಲವನ್ನು ತಿಳಿಯುವವನು. ಇಂದ್ರಿಯಗಳಿಂದ ತಿಳಿಯುವಂಥವನಲ್ಲ. ಅಲ್ಲದೆ ತನಗೆ ತಾನು ಬೇರೆ ಅಲ್ಲದ್ದರಿಂದ ಅಂಥವನು ಎನ್ನಲಿಕ್ಕೆ ಬರುವುದಿಲ್ಲ.

ಹಾಗಾದರೆ ಶೂನ್ಯನೇ ? ಅಲ್ಲ. ಎನ್ನುತ್ತಾರೆ.

**ಅವೇದ್ಯೋಽಪ್ಯಪರೋಕ್ಷೋಽತಃ ಸ್ವಪ್ರಕಾಶೋ ಭವತ್ಯಯಮ್ |**
**ಸತ್ಯಂ ಜ್ಞಾನಮನಂತಂ ಚೇತ್ಯಸ್ತೀಹ ಬ್ರಹ್ಮಲಕ್ಷಣಮ್ ||೨೮||**

ಅ:— ಆತ್ಮನು ತಿಳಿಯಲಿಕ್ಕೆ ಬಾರದಂಥವನಾದರೂ ಅನುಭವರೂಪದಿಂದ ಪ್ರತ್ಯಕ್ಷನು. ತನಗೆ ತಾನೇ ಬೆಳಗುವಂಥವನು. ಸತ್ಯರೂಪನು. ಅನುಭವರೂಪನು. ಅನಂತನು ಎಂಬ ಶ್ರುತಿ ಲಕ್ಷಣವು ಆತ್ಮನಲ್ಲಿದೆ.

ಸತ್ಯತ್ವದ ಲಕ್ಷಣವನ್ನು ಹೇಳುತ್ತಾರೆ.

**ಸತ್ಯತ್ವಂ ಬಾಧರಾಹಿತ್ಯಂ ಜಗದ್ಬಾಧೈಕ ಸಾಕ್ಷಿಣಃ |**
**ಬಾಧಃ ಕಿಂ ಸಾಕ್ಷಿಕೋ ಬ್ರೂಹಿ ನ ತ್ವಸಾಕ್ಷಿಕ ಇಷ್ಯತೇ ||೨೯||**

ಅ:— ಸತ್ಯತ್ವವೆಂದರೆ ಎಂದಿಗೂ ಇಲ್ಲದಂತಾಗುವಂಥದಲ್ಲ, ತೋರಿ ಅಡಗುವ ಸ್ವಭಾವವುಳ್ಳ ಜಗತ್ತಿನ ಸಾಕ್ಷಿಯಾದವನು ಇಲ್ಲವೆಂಬುದಕ್ಕೆ ಸಾಕ್ಷಿಯು ಯಾರು? ಹೇಳು. ಸಾಕ್ಷಿ ಇಲ್ಲದ್ದು ಒಪ್ಪುವಹೊತಲ್ಲ.

**ಅಪನೀತೇಷು ಮೂರ್ತೇಷು ಹ್ಯಮೂರ್ತಂ ಶಿಷ್ಯತೇ ವಿಯತ್।**
**ಶಕ್ಯೇಷು ಬಾಧಿತೇಷ್ವಂತೇ ಶಿಷ್ಯತೇ ಯತ್ತದೇವ ತತ್ ॥೩೦॥**

ಅ:— (ಮನೆಯೊಳಗಿನ) ಘಟವೇ ಮೊದಲಾದ ಸಾಕಾರ ಪದಾರ್ಥ ಗಳನ್ನು ಹೊರಗೆ ಒಯ್ದರೆ ನಿರಾಕಾರವಾದ ಆಕಾಶವು ಉಳಿಯುವುದು. ಅದ ರಂತೆ ಇಲ್ಲದಂತೆ ಆಗುವಂಥವುಗಳನ್ನೆಲ್ಲ ಎಂದರೆ-ಪಂಚಕೋಶಗಳನ್ನು ತ್ಯಜಿಸಿ ದರೆ ಉಳಿದುಕೊಳ್ಳುವುದೇ ಆತ್ಮಸ್ವರೂಪವು.

**ಸರ್ವಬಾಧೇ ನ ಕಿಂಚಿತ್ ಚೇದ್ಯನ್ನ ಕಿಂಚಿತ್ತದೇವ ತತ್ ।**
**ಭಾಷಾ ಏವಾತ್ರ ಭಿದ್ಯಂತೇ ನಿರ್ಬಾಧಂ ತಾವದಸ್ತಿ ಹಿ ॥೩೧॥**

ಅ:— ತ್ಯಜಿಸುವಂಥವುಗಳನ್ನೆಲ್ಲ ತ್ಯಜಿಸಿದ ಮೇಲೆ ಏನೂ ಉಳಿಯುವು ದಿಲ್ಲವೆಂದು ಅನ್ನುವುದಾದರೆ, ಆ ಏನೂ ಉಳಿಯುವುದಿಲ್ಲವೆಂಬುದನ್ನು ಬೆಳಗು ವುದೇ ತತ್ ಪದ–ಎಂದರೆ ಬ್ರಹ್ಮವು. ಇಲ್ಲಿ ಮಾತಿನದಷ್ಟೇ ಭೇದವು. ಸಾಕ್ಷಿ ಚೈತನ್ಯವು ಯಾವಾಗಲೂ ಇದ್ದೇ ಇರುತ್ತದೆ.

**ಅತ ಏವ ಶ್ರುತಿರ್ಬಾಧ್ಯಂ ಬಾಧಿತ್ವಾ ಶೇಷಯತ್ಯದಃ ।**
**ಸ ಏಷ ನೇತಿ ನೇತ್ಯಾತ್ಮೇತ್ಯತದ್ ವ್ಯಾವೃತ್ತಿ ರೂಪತಃ ॥೩೨॥**

ಅ:— ಆದುದರಿಂದಲೇ ಶ್ರುತಿಯು ಈ ಮೂರ್ತರೂಪವು ಆತ್ಮವಲ್ಲ. ಅಮೂರ್ತವು ಆತ್ಮವಲ್ಲ. (ಇದಲ್ಲ. ಇದಲ್ಲ.) ಎಂಬ ಅರ್ಥವನ್ನು ಹೇಳುವ ಶ್ರುತಿಯು ಅನಾತ್ಮಪದಾರ್ಥಗಳನ್ನು ನಿರಾಕರಣಮಾಡಿ ತ್ಯಜಿಸಲುಯೋಗ್ಯ ವಾದ ವಸ್ತುಗಳನ್ನು ತ್ಯಜಿಸಿ ಆತ್ಮಸ್ವರೂಪವನ್ನು ಉಳಿಸುತ್ತದೆ.

**ಇದಂ ರೂಪಂ ತು ಯದ್ಯಾವತ್ ತತ್ತ್ಯಕ್ತುಂಶಕ್ಯತೇಽಖಿಲಂ ।**
**ಅಶಕ್ಯೋ ಹ್ಯನಿದಂ ರೂಪಃ ಸ ಆತ್ಮಾ ಬಾಧವರ್ಜಿತಃ ॥೩೩॥**

ಅ:— ಇದು ಎಂಬ ಮಾತಿಗೊಳಗಾಗುವ ಹೊರಗಿನ ಎಲ್ಲ ವಸ್ತುಗ ಳನ್ನು ತ್ಯಜಿಸಲು ಸಾಧ್ಯ. ಆದರೆ ಇದು ಎಂಬ ಮಾತಿಗೊಳಪಡದ ಆತ್ಮನನ್ನು ತ್ಯಜಿಸುವುದು ಸಾಧ್ಯವಿಲ್ಲ. ಹೀಗೆ ಯಾವ ಬಾಧೆಯೂ ತಟ್ಟದವನೇ ಆತ್ಮನು.

**ಸಿದ್ಧಂ ಬ್ರಹ್ಮಣಿ ಸತ್ಯತ್ವಂ ಜ್ಞಾನತ್ವಂ ತು ಪುರೇರಿತಮ್ ।**
**ಸ್ವಯಮೇವಾನು ಭೂತಿತ್ವಾದಿತ್ಯಾದಿವಚನೈಃ**
**ಸ್ಫುಟಮ್ ॥೩೪॥**

ಅ:— (ಹೀಗೆ) ಬ್ರಹ್ಮನ ಲಕ್ಷಣದಲ್ಲಿರುವ ಸತ್ಯತ್ವವು ಆತ್ಮನಲ್ಲಿ ಸಿದ್ಧವಾಯಿತು. ಜ್ಞಾನತ್ವವನ್ನು "ತಾನೇ ಅನುಭವರೂಪ"ನೆಂಬ ಮಾತುಗಳಿಂದ (ಶ್ಲೋ.೧೩) ಹಿಂದೆ ನಿಚ್ಚಳವಾಗಿ ಹೇಳಿದೆ.

**ನ ವ್ಯಾಪಿತ್ವಾದ್‌ದೇಶತೋಽಂತೋ ನಿತ್ಯತ್ವಾನ್ನಾಪಿ ಕಾಲತಃ|**
**ನ ವಸ್ತುತೋಽಪಿ ಸಾರ್ವಾತ್ಮ್ಯಾದಾನಂತ್ಯಂ ಬ್ರಹ್ಮಣಿ ತ್ರಿಧಾ ||೩೫||**

ಅ:— ಬ್ರಹ್ಮನು ಎಲ್ಲ ಕಡೆಗೂ ವ್ಯಾಪಕನಾದುದರಿಂದ ದೇಶ (ಸ್ಥಳ) ಗಳಿಂದ ಅವನಲ್ಲಿ ಭಾಗಗಳಾಗುವುದಿಲ್ಲ. ನಿತ್ಯನಾಗಿರುವುದರಿಂದ ಕಾಲದಿಂದ ಸಂಭವಿಸುವ ಮೊದಲು ಕೊನೆಗಳೂ ಇಲ್ಲ. ಅವನು ಸರ್ವಾತ್ಮನಾದುದರಿಂದ ನಾಮ-ರೂಪಗಳಿಂದಾಗುವ ವಿಭಾಗಗಳೂ ಇಲ್ಲ. ಹೀಗೆ ಬ್ರಹ್ಮನಲ್ಲಿ ಮೂರು ಬಗೆಯ ಅನಂತತ್ವಗಳು.

**ದೇಶ ಕಾಲಾನ್ಯವಸ್ತೂನಾಂ ಕಲ್ಪಿತತ್ವಾಚ್ಚ ಮಾಯಯಾ |**
**ನ ದೇಶಾದಿಕೃತೋಽಂತೋಽಸ್ತಿ ಬ್ರಹ್ಮಾನಂತ್ಯಂ ಸ್ಫುಟಂ ತತಃ ||೩೬||**

ಅ:— ದೇಶ-ಕಾಲ ಮತ್ತು ಬೇರೆ ಪದಾರ್ಥಗಳು ಇವೆಲ್ಲ ಮಾಯೆಯಿಂದ ಹುಟ್ಟಿದವುಗಳು. ಆದುದರಿಂದ ಅವುಗಳಿಂದ ಬ್ರಹ್ಮನ ಕೊನೆ-ಮೊದಲು ತಿಳಿಯಲಾಗುವುದಿಲ್ಲ. ಹೀಗಾಗಿ ಬ್ರಹ್ಮನ ಅನಂತತ್ವವು ನಿಚ್ಚಳವೇ ಇರುತ್ತದೆ.

ಬ್ರಹ್ಮನಲ್ಲಿ ಕಲ್ಪಿತವಾದ ಜಗತ್ತಿನ ಮಾತಿರಲಿ. ಜೀವ-ಈಶ್ವರರು ಕಲ್ಪಿತರಲ್ಲ. ಅವರ ಮೂಲಕ ಬ್ರಹ್ಮದಲ್ಲಿ ಭೇದವಾಗಬಾರದೇಕೆ ?

**ಸತ್ಯಂ ಜ್ಞಾನಮನಂತಂ ಯದ್‌ಬ್ರಹ್ಮ ತದ್ವಸ್ತು ಸತ್ಯ ತತ್ |**
**ಈಶ್ವರತ್ವಂ ಚ ಜೀವತ್ವಮುಪಾಧಿದ್ವಯಕಲ್ಪಿತಮ್ ||೩೭||**

ಅ:— ಸತ್ಯವೂ, ಜ್ಞಾನರೂಪವೂ, ಅನಂತವೂ ಆದ ಬ್ರಹ್ಮವು ನಿಜವಾದ ತತ್ತ್ವವು. ಅವನಲ್ಲಿ ಈಶ್ವರತ್ವ-ಜೀವತ್ವಗಳು ಉಪಾಧಿ ಮೂಲಕ ಕಲ್ಪಿಸಿದವುಗಳು.

**ಶಕ್ತಿರಸ್ತ್ಯೈಶ್ವರೀ ಕಾಚಿತ್‌ಸರ್ವವಸ್ತುನಿಯಾಮಿಕಾ |**
**ಆನಂದಮಯಮಾರಭ್ಯ ಗೂಢಾ ಸರ್ವೇಷು ವಸ್ತುಷು ||೩೮||**

ಅ:— ಈಶ್ವರನಲ್ಲಿ ಪೃಥ್ವಿಯೇ ಮೊದಲಾದ ಪದಾರ್ಥಗಳನ್ನು ನಿಯಂತ್ರಿಸುವ ಒಂದು ಅನಿರ್ವಚನೀಯ ಶಕ್ತಿಯುಂಟು. ಅದು ಆನಂದ ಮಯಕೋಶ ಮೊದಲುಗೊಂಡು ಎಲ್ಲ ವಸ್ತುಗಳಲ್ಲಿಯೂ ಅಡಗಿರುವದು.

ಬ್ರಹ್ಮನಲ್ಲಿ ಈಶ್ವರತ್ವವನ್ನು ತಂದುಕೊಡುವ ಈ ಉಪಾಧಿಯು ನಿಯ ಮಿತವಾಗಿ ಕಂಡುಬರುವದಿಲ್ಲ. ಎಂದಮೇಲೆ ಇದಕ್ಕೆ ಅಸತ್ (ಸುಳ್ಳು) ಎಂದು ಯಾಕೆ ಅನ್ನಬಾರದು ?

**ವಸ್ತುಧರ್ಮಾ ನಿಯಮ್ಯೇರನ್ ಶಕ್ತ್ಯಾ ನೈವ ಯದಾ ತದಾ ।**
**ಅನ್ಯೋನ್ಯಧರ್ಮಸಾಂಕರ್ಯಾದ್ವಿಪ್ಲವೇತ ಜಗತ್ಖಲು ॥೩೯॥**

ಅ:— ಒಂದು ವೇಳೆ ಈ ಶಕ್ತಿಯಿಂದ ವಸ್ತು ಧರ್ಮಗಳು ನಿಯಂತ್ರಿತ ಗೊಳಿಸದೇ ಹೋಗಿದ್ದರೆ, ಎಲ್ಲವಸ್ತು ಧರ್ಮಗಳು ಒಂದರೊಳಗೊಂದು ಕಲ ಬೆರಕೆಯಾಗಿ ಜಗತ್ತು ನಿಜವಾಗಿಯೂ ನಾಶವಾಗುತ್ತಿತ್ತು.

ಈ ಜಡಶಕ್ತಿಗೆ ನಿಯಮನ ಮಾಡುವದು ಸಾಧ್ಯವೇ ?

**ಚಿಚ್ಛಾಯಾವೇಶತಃ ಶಕ್ತಿಶ್ಚೇತನೇವ ವಿಭಾತಿ ಸಾ ।**
**ತಚ್ಛಕ್ತ್ಯುಪಾಧಿಸಂಯೋಗಾದ್ ಬ್ರಹ್ಮೈವೇಶ್ವರತಾಂವ್ರಜೇತ್ ॥೪೦॥**

ಅ:— ಈ ರೀತಿ ಜಗನ್ನಿಯಾಮಕ ಶಕ್ತಿಯು ತನ್ನಲ್ಲಿ ಚೈತನ್ಯವು ಪ್ರತಿ ಬಿಂಬಿಸಿರುವದರಿಂದ ಚೇತನದಂತೆಯೇ ತೋರುತ್ತದೆ. ಬ್ರಹ್ಮವು ಈ ಮಾಯಾ ಶಕ್ತಿಯ ಉಪಾಧಿಯನ್ನು ಹೊಂದಿದಾಗ ಸರ್ವಜ್ಞತ್ವ ಮುಂ. ಧರ್ಮಗಳುಳ್ಳ ಈಶ್ವರನೆನಿಸುವದು.

ಪಂಚಕೋಶಗಳು ಜೀವತ್ವದ ಉಪಾಧಿಗಳು. ಅವುಗಳನ್ನು ಹಿಂದೆ ಹೇಳಿದೆ. ಆದುದರಿಂದ ಈಗ ಅವುಗಳ ಉಪಾಧಿಯಿಂದ ಬ್ರಹ್ಮನಿಗೆ ಉಂಟಾ ಗುವ ಜೀವತ್ವವನ್ನು ವಿವರಿಸುತ್ತಾರೆ.

**ಕೋಶೋಪಾಧಿವಿವಕ್ಷಾಯಾಂ ಯಾತಿಬ್ರಹ್ಮೈವ ಜೀವತಾಮ್ ।**
**ಪಿತಾ ಪಿತಾಮಹಾಶ್ಚೈಕಃ ಪುತ್ರಪೌತ್ರೌ ಯಥಾ ಪ್ರತಿ ॥೪೧॥**

ಅ:—ಒಬ್ಬ ಮನುಷ್ಯನೇ ಮಗನಿಗೆ ತಂದೆಯೂ, ಮೊಮ್ಮಗನಿಗೆ ಅಜ್ಜನೂ ಆಗುತ್ತಾನಲ್ಲವೇ? ಅದರಂತೆ ಕೋಶಾದಿಗಳನ್ನು ಹಿಡಿದು ವಿಚಾರ ಮಾಡಲು ಬ್ರಹ್ಮನಿಗೆ ಜೀವತ್ವವು ಬರುತ್ತದೆ.

**ಪುತ್ರಾದೇರವಿವಕ್ಷಾಯಾಂ ನ ಪಿತಾ ನ ಪಿತಾಮಃ ।**
**ತದ್ವನ್ನೇಶೋ ನಾಪಿ ಜೀವಃ ಶಕ್ತಿಕೋಶಾ ವಿವಕ್ಷಣೇ ॥೪೨॥**

ಅ:—ಮಗನ ಮತ್ತು ಮೊಮ್ಮಗನ ಸಂಬಂಧ ಬಿಟ್ಟು ವಿಚಾರ ಮಾಡಲು ಆ ಮನುಷ್ಯನು ತಂದೆಯೂ ಅಲ್ಲ, ಅಜ್ಜನೂ ಅಲ್ಲ. ಅದರಂತೆ ಮಾಯಾಶಕ್ತಿ ಮತ್ತು ಪಂಚಕೋಶಗಳು ಇವುಗಳನ್ನು ಬಿಟ್ಟು ವಿಚಾರಿಸಲು ಈಶ್ವರನೂ ಇಲ್ಲ, ಜೀವನೂ ಇಲ್ಲ.

ಹೀಗೆ ಸಿದ್ಧವಾದ ಜ್ಞಾನದ ಫಲವನ್ನು ಹೇಳುತ್ತಾರೆ.

**ಯ ಏವಂ ಬ್ರಹ್ಮ ವೇದೈಷ ಬ್ರಹ್ಮೈವ ಭವತಿ ಸ್ವಯಮ್ ।**
**ಬ್ರಹ್ಮಣೋ ನಾಸ್ತಿ ಜನ್ಮಾತಃ ಪುನರೇಷ ನ ಜಾಯತೇ ॥೪೩॥**

ಅ:—ಹೀಗೆ ಯಾವನು ಬ್ರಹ್ಮನನ್ನು ತಿಳಿಯುವನೋ ಅವನು ಸ್ವತಃ ಬ್ರಹ್ಮನಾಗುತ್ತಾನೆ. ಬ್ರಹ್ಮನಿಗೆ ಜನ್ಮವಿಲ್ಲ. ಆದುದರಿಂದ ಇವನೂ ಮರಳಿ ಹುಟ್ಟುವದಿಲ್ಲ.

**ಇತಿ ಪಂಚದಶ್ಯಾಂ ಪಂಚಕೋಶ ವಿವೇಕಃ ॥**

## ಪಂಚಕೋಶ ವಿವೇಕ ಪ್ರಕರಣದ ಸಾರ

ಹಿಂದಿನ ಪ್ರಕರಣದಲ್ಲಿ ಪಂಚಭೂತಗಳಿಂದ ಬೇರ್ಪಡಿಸಿ ನೋಡಿದ 'ತತ್ಪದ'ದ ಅರ್ಥವಾದ ಬ್ರಹ್ಮನು ಸಿದ್ಧನಾಗಿದ್ದಾನೆ. ಈ ಪ್ರಕರಣದಲ್ಲಿ ಆತ್ಮನಿರುವ ಸ್ಥಾನವನ್ನು ಹೇಳಿ ಅವನ ಆವರಣಗಳೆನಿಸಿದ ಪಂಚಕೋಶಗಳನ್ನು ಮೊದಲು ವಿವೇಚಿಸಿ ಹೇಳಿದ್ದಾರೆ. ತರುವಾಯ ಆತ್ಮಸ್ವರೂಪವನ್ನು ತಿಳಿಸಿ ಈ ಆತ್ಮನೆಂದರೆ ಬ್ರಹ್ಮನೇ ಎಂದು ಅಭೇದವನ್ನು ತೋರಿಸುತ್ತಾರೆ.

....○....

# ೪ ದ್ವೈತವಿವೇಕಃ

**ಈಶ್ವರೇಣಾಪಿ ಜೀವೇನ ಸೃಷ್ಟಂ ದ್ವೈತಂ ವಿವಿಚ್ಯತೇ ।**
**ವಿವೇಕೇ ಸತಿ ಜೀವೇನ ಹೇಯೋ ಬಂಧಃ ಸ್ಫುಟೀಭವೇತ್ ॥೧॥**

ಅ:—ಈಶ್ವರ ಹಾಗೂ ಜೀವನಿಂದ ಸ್ಪ್ರಷ್ಟವಾದ ಭೇದಗಳನ್ನು ವಿವೇಚಿಸುತ್ತಾರೆ. ಈ ದ್ವೈತದ ವಿವೇಕವು ಉಂಟಾಯಿತೆಂದರೆ ಜೀವನು ಬಿಡಿಸಿಕೊಳ್ಳಬೇಕಾದ ಬಂಧವು ಸ್ಪಷ್ಟವಾಗುವದು.

**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್।**
**ಸ ಮಾಯೀ ಸೃಜತೀತ್ಯಾಹುಃ ಶ್ವೇತಾಶ್ವತರ ಶಾಖಿನಃ ॥೨॥**

ಅ:—ಮಾಯೆಯನ್ನು ಪ್ರಕೃತಿ ಎಂದು ತಿಳಿಯಬೇಕು. ಮಾಯೆಯುಳ್ಳವನೇ ಮಹೇಶ್ವರನು. ಆ ಮಾಯಾವಿಯಾದ ಈಶ್ವರನೇ ಸೃಷ್ಟಿಯನ್ನು ಮಾಡುತ್ತಾನೆಂದು ಯಜುಃಶಾಖೆಯ ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿದೆ.

ಅದರಂತೆ ಐತರೇಯ ವಾಕ್ಯ.

**ಆತ್ಮಾ ವಾ ಇದ್ಮಮಗ್ರೇಽಭೂತ್ಸ ಈಕ್ಷತ ಸೃಜಾ ಇತಿ।**
**ಸಂಕಲ್ಪೇನಾಸೃಜಲ್ಲೋಕಾನ್ ಸ ಏತಾನಿತಿ ಬಹ್ವೃಚಾಃ ॥೩॥**

ಅ:—ಸೃಷ್ಟಿಯ ಪೂರ್ವದಲ್ಲಿ ಇದೆಲ್ಲ ಜಗತ್ತು ಆತ್ಮನೇ ಆಗಿತ್ತು. 'ನಾನು ಇನ್ನು ಸೃಷ್ಟಿಯನ್ನು ಮಾಡಬೇಕು' ಎಂದು ಅವನು ಯೋಚಿಸಿದನು. ಅದರಂತೆ ಅವನು ಎಲ್ಲ ಲೋಕಗಳನ್ನು ಸಂಕಲ್ಪದಿಂದ ನಿರ್ಮಿಸಿದನು. ಹೀಗೆ ಋಗ್ವೇದವನ್ನು ಅಧ್ಯಯನಮಾಡುವವರು ಹೇಳುತ್ತಾರೆ.

**ಖಂ ವಾಯ್ವಗ್ನಿಜಲೋರ್ವ್ಯೋಷಧ್ಯನ್ನದೇಹಾಃ ಕ್ರಮಾದಮೀ।**
**ಸಂಭೂತಾ ಬ್ರಹ್ಮಣಸ್ತಸ್ಮಾದೇತಸ್ಮಾದಾತ್ಮನೋಽಖಿಲಾಃ ॥೪॥**

ಅ:—ಇವು ಎಲ್ಲ ಆಕಾಶ-ವಾಯು-ಅಗ್ನಿ-ನೀರು-ಭೂಮಿ-ಸಸ್ಯ-ಅನ್ನ-ದೇಹಗಳು, ಆತ್ಮಸ್ವರೂಪನಾದ ಬ್ರಹ್ಮನಿಂದ ಕ್ರಮವಾಗಿ ಹುಟ್ಟಿದವು.

(ಇದು ಯಜುರ್ವೇದದ ತೈತ್ತರೀಯ ಶ್ರುತಿಯೊಳಗಿನದು)

**ಬಹು ಸ್ಯಾಮಹಮೇವಾತಃ ಪ್ರಜಾಯೇಯೇತಿ ಕಾಮತಃ।**
**ತಪಸ್ತಪ್ತ್ವಾಸೃಜತ್ಸರ್ವಂ ಜಗದಿತ್ಯಾಹ ತಿತ್ತಿರಿಃ ॥೫॥**

ಅ:— ನಾನು ಬಹುರೂಪವಾಗಬೇಕು ಎಂಬ ಇಚ್ಛೆಯಿಂದ ಆಲೋಚನೆ ಮಾಡಿ ಆ ಬ್ರಹ್ಮನು ಎಲ್ಲ ಜಗತ್ತನ್ನು ನಿರ್ಮಾಣಮಾಡಿದನು.

ಸಾಮವೇದದ ಛಾಂದೋಗ್ಯದಲ್ಲಿ ಬ್ರಹ್ಮನು ಜಗತ್ತನ್ನು ಸೃಷ್ಟಿಸಿದ್ದಾನೆ ಎಂದು ಹೇಳಿದೆ.

**ಇದಮಗ್ರೇ ಸದೇವಾಸೀದ್ಬಹುತ್ವಾಯ ತದೈಕ್ಷತ ।**
**ತೇಜೋಽಬನ್ನಾಂಡಜಾದೀನಿ ಸಸರ್ಜೇತಿ ಚ ಸಾಮಗಾಃ ॥೬॥**

ಅ— ಹುಟ್ಟಿಗಿಂತಮೊದಲು ಇದೆಲ್ಲ ಸದ್ರೂಪವೇಆಗಿತ್ತು. ಅದು ಬಹು ರೂಪವಾಗಬೇಕೆಂದು ಅಪೇಕ್ಷಿಸಿತು. ಮತ್ತು ಅಗ್ನಿ-ನೀರು-ಭೂಮಿ-ಅಂಡಜಾದಿ ದೇಹಗಳನ್ನು ನಿರ್ಮಾಣ ಮಾಡಿತು ಎಂದು ಸಾಮವೇದಿಗಳು ಹೇಳುತ್ತಾರೆ.

**ವಿಸ್ಫುಲಿಂಗಾ ಯಥಾ ವಹ್ನೇರ್ಜಾಯಂತೇಽಕ್ಷರತಸ್ತಥಾ ।**
**ವಿವಿಧಾಶ್ಚಿಜ್ಜಡಾ ಭಾವಾ ಇತ್ಯಾಥರ್ವಣಿಕಾ ಶ್ರುತಿಃ ॥೭॥**

ಅ:— ಅಗ್ನಿಯಿಂದ ಕಿಡಿಗಳು ಹೇಗೆ ಹುಟ್ಟುವವೋ ಅದರಂತೆ ಅಕ್ಷರ ರೂಪನಾದ ಬ್ರಹ್ಮನಿಂದ ಚೇತನ–ಹಾಗೂ ಜಡಪದಾರ್ಥಗಳು ಹುಟ್ಟುತ್ತವೆ ಎಂದು ಅಥರ್ವವೇದದ ಮುಂಡಕೋಪನಿಷತ್ತು ಹೇಳುತ್ತದೆ.

ಬೃಹದಾರಣ್ಯಕದಲ್ಲಿ.

**ಜಗದವ್ಯಾಕೃತಂ ಪೂರ್ವಮಾಸೀದ್ವ್ಯಾಕ್ರಿಯತಾಧುನಾ ।**
**ದೃಶ್ಯಾಭ್ಯಾಂ ನಾಮರೂಪಭ್ಯಾಂ ವಿರಾಡಾದಿಷು ತೇ ಸ್ಫುಟೇ॥೮॥**
**ವಿರಾಣ್ಮನುರ್ನರಾಗಾವಃ ಖರಾಶ್ವಾಜಾವಯಸ್ತಥಾ ।**
**ಪಿಪೀಲಿಕಾವಧಿ ದ್ವಂದ್ವಮಿತಿ ವಾಜಸನೇಯಿನಃ ॥೯॥**

ಅ:— ಹುಟ್ಟುವುದಕ್ಕಿಂತ ಮೊದಲು ಜಗತ್ತು ಅವ್ಯಕ್ತ (ಮಾಯೋಪಾಧಿ ಸ್ವೀಕರಿಸಿದ ಬ್ರಹ್ಮ)ವಾಗಿತ್ತು. ಅದನ್ನು ಬ್ರಹ್ಮನು ಈಗ ಅನುಭವ ಯೋಗ್ಯವೆನಿಸುವ ನಾಮ-ರೂಪಗಳಿಂದ ವ್ಯಕ್ತಗೊಳಿಸಿದನು. ಆ ನಾಮ-ರೂಪಗಳು ವಿರಾಟ್-ಹಾಗು ಪ್ರಾಣಿಗಳಲ್ಲಿ ಸ್ಪಷ್ಟವಾಗಿವೆ.

ವಿರಾಟ್-ಮನು-ಮನುಷ್ಯರು-ಆಕಳು-ಕತ್ತೆ-ಕುದುರೆ-ಕುರಿ-ಆಡು ಇದರಂತೆ ಇರುವೆಯವರೆಗೆ ಎಲ್ಲ ಸಣ್ಣ ದೊಡ್ಡ ಪ್ರಾಣಿಗಳ ಜೋಡಿಯನ್ನು ಅವನು ನಿರ್ಮಿಸಿದನು ಎಂದು ವಾಜಸನೇಯಿ ಶಾಖೆಯವರು ಹೇಳುತ್ತಾರೆ.

ಇರಲಿ, ಜೀವತ್ವವೆಂದರಾದರೂ ಏನು ?

**ಚೈತನ್ಯಂ ಯದಧಿಷ್ಠಾನಂ ಲಿಂಗದೇಹಶ್ಚ ಯಃ ಪುನಃ ।**
**ಚಿಚ್ಛಾಯಾ ಲಿಂಗದೇಹಸ್ಥಾ ತತ್ಸಂಘೋ ಜೀವ**
**ಉಚ್ಯತೇ ॥೧೦॥**

ಅ:— ಆಧಾರಭೂತವಾದ ಚೈತನ್ಯವೂ, ಅದರಲ್ಲಿ ಕಲ್ಪಿತಲಿಂಗ ದೇಹವೂ, ಆ ಲಿಂಗ ದೇಹದಲ್ಲಿ ಮೂಡಿದ ಚೈತನ್ಯದ ಪ್ರತಿಬಿಂಬವೂ ಸೇರಿಕೊಂಡ ಸಮುದಾಯಕ್ಕೆ 'ಜೀವ' ನೆಂದು ಹೇಳುತ್ತಾರೆ.

ಈಶ್ವರನೇ ಜೀವನಾಗಿ ದೇಹದಲ್ಲಿ ಪ್ರವೇಶಿಸಿದ್ದರೆ ಅವನಲ್ಲಿ ಅಜ್ಞತ್ವ-ದುಃಖಿತ್ವ ಮೊದಲಾದ ಅವನ ವಿರುದ್ಧಧರ್ಮಗಳು ಯಾಕೆ ಕಾಣುತ್ತವೆ ?

**ಮಾಹೇಶ್ವರೀತು ಮಾಯಾ ಯಾ ತಸ್ಯಾನಿರ್ಮಾಣಶಕ್ತಿವತ್ ।**
**ವಿದ್ಯತೇ ಮೋಹಶಕ್ತಿಶ್ಚ ತಂ ಜೀವಂ ಮೋಹಯತ್ಯಸೌ ॥೧೧॥**

ಅ:— ಮಹೇಶ್ವರನ ಮಾಯೆಗೆ ಸೃಷ್ಟಿ ಮಾಡುವ ಶಕ್ತಿ ಇರುವಂತೆ ಮೋಹಗೊಳಿಸುವ ಶಕ್ತಿಯೂ ಇರುವದು. ಅದು ಜೀವನನ್ನು ಮೋಹಗೊಳಿಸುತ್ತದೆ.

**ಮೋಹಾದನೀಶತಾಂ ಪ್ರಾಪ್ಯ ಮಗ್ನೋ ವಪುಷಿ ಶೋಚತಿ ।**
**ಈಶಸೃಷ್ಟಮಿದಂ ದ್ವೈತಂ ಸರ್ವಮುಕ್ತಂ ಸಮಾಸತಃ ॥೧೨॥**

ಅ:— ಮೋಹದಿಂದ ಪರಾವಲಂಬಿಯಾಗಿ ಶರೀರದೊಡನೆ ತಾದಾತ್ಮ್ಯನಾಗಿ ಶೋಕಿಸುತ್ತಾನೆ. ಹೀಗೆ ಈಶ್ವರ ನಿರ್ಮಿತವಾದ ದ್ವೈತವನ್ನು ಸಂಕ್ಷೇಪವಾಗಿ ಹೇಳಿತು.

ಇನ್ನು ಜೀವನು ದ್ವೈತವನ್ನು ಹುಟ್ಟಿಸಿರುವನೆಂಬುದಕ್ಕೆ ಪ್ರಮಾಣವೇನು ?

**ಸಪ್ತಾನ್ನಬ್ರಾಹ್ಮಣೇ ದ್ವೈತಂ ಜೀವಸೃಷ್ಟಂ ಪ್ರಪಂಚಿತಮ್ ।**
**ಅನ್ನಾನಿ ಸಪ್ತ ಜ್ಞಾನೇನ ಕರ್ಮಣಾಜನಯತ್ಪಿತಾ ॥೧೩॥**

ಅ:— ಸರ್ವಲೋಕಗಳ ಪಾಲಕನಾದ ಸಮಷ್ಟಿಜೀವನು ತನ್ನ ಒಳ್ಳೆಯ ಮತ್ತು ಕೆಟ್ಟ ಯೋಚನೆಗಳ ಹಾಗೂ ಕರ್ಮಗಳ ಫಲವಾದ ಅದೃಷ್ಟದ ಮೂಲಕ ಏಳು ಬಗೆಯ ಅನ್ನಗಳನ್ನು ನಿರ್ಮಿಸಿದನು. ಹೀಗೆ ಸಪ್ತಾನ್ನಬ್ರಾಹ್ಮಣದಲ್ಲಿ ಜೀವನಿರ್ಮಿತವಾದ ದ್ವೈತದ ಸವಿಸ್ತಾರವಾದ ವರ್ಣನೆಯುಂಟು.

ಈ ಏಳು ಬಗೆಯ ಅನ್ನಗಳನ್ನು ಹುಟ್ಟಿಸುವದರಲ್ಲಿ ಜೀವನ ಉದ್ದೇಶವೇನು ?

**ಮರ್ತ್ಯಾನ್ನಮೇಕಂ ದೇವಾನ್ನೇದ್ವೇ ಪಶ್ವನ್ನಂ ಚತುರ್ಥಕಮ್।**
**ಅನ್ಯತ್ ತ್ರಿತಯಮಾತ್ಮಾರ್ಥಮನ್ನಾನಾಂ**
**ವಿನಿಯೋಜನಮ್ ॥೧೪॥**

ಅ:— ಮರಣಧರ್ಮವುಳ್ಳ ಮನುಷ್ಯರಿಗೋಸುಗ ಒಂದು. ದೇವತೆಗಳಿಗೋಸುಗ ಎರಡು. ಪಶುಗಳಿಗೋಸುಗ ನಾಲ್ಕನೆಯದು. ಉಳಿದ ಮೂರು ತನಗೋಸುಗ.

ಅವು ಯಾವಯಾವವು ?

**ವ್ರಿಹ್ಯಾದಿಕಂ ದರ್ಶಪೂರ್ಣಮಾಸೌ ಕ್ಷೀರಂ ತಥಾ ಮನಃ ।**
**ವಾಕ್‌ಪ್ರಾಣಶ್ಚೇತಿ ಸಪ್ತತ್ವಮನ್ನಾನಾಮುವಗಮ್ಯತಾಮ್॥೧೫॥**

ಅ:—ಭತ್ತ-ಗೋದಿ ಮುಂತಾದ ಧಾನ್ಯರೂಪವಾದ ಮನುಷ್ಯರ ಅನ್ನ. ಅಮಾವಾಸ್ಯೆ-ಪೂರ್ಣಿಮೆಗಳು ಯಜ್ಞ ಯಾಗಗಳಿಗೆ ಯೋಗ್ಯವಾದುದರಿಂದ ದೇವತೆಗಳ ಅನ್ನ. ಹಾಲೆಂಬ ನಾಲ್ಕನೆಯದು ಪಶುಗಳ ಅನ್ನ. ಮನಸ್ಸು, ವಾಕ್, ಪ್ರಾಣಗಳು ಎಲ್ಲ ವಿಷಯೋಪಭೋಗಕ್ಕೂ ಸಾಧನವೆನಿಸುವದರಿಂದ ಆತ್ಮನ ಅನ್ನ.

ಇವೆಲ್ಲ ಈಶನಿರ್ಮಿತ ಸೃಷ್ಟಿಯಲ್ಲಿಯೇ ಅಂತರ್ಭಾವವಾಗುತ್ತವೆ. ನೀವು ಜೀವನಿರ್ಮಿತವೆಂದು ಹೇಳುವದು ಹೇಗೆ ?

**ಈಶೇನ ಯದ್ಯಪ್ಯೇತಾನಿ ನಿರ್ಮಿತಾನಿ ಸ್ವರೂಪತಃ ।**
**ತಥಾಪಿ ಜ್ಞಾನಕರ್ಮಭ್ಯಾಂ ಜೀವೋಽಕಾರ್ಷೀತ್ತದನ್ನ-**
**ತಾಮ್ ॥೧೬॥**

ಅ:—ನಿಜ. ಈಶ್ವರನೇ ಇವೆಲ್ಲ ಪದಾರ್ಥಗಳನ್ನು ನಿರ್ಮಿಸಿದ್ದಾನೆ. ಆದರೂ ಜೀವನು ತನ್ನ ಒಳ್ಳೆಯ-ಕೆಟ್ಟ ತಿಳಿವಳಿಕೆ, ಹಾಗೂ ಕರ್ಮಗಳಿಂದ ಅವನ್ನೆಲ್ಲ ಭೋಗಸಾಧನವಾಗಿ ಮಾಡಿದನು.

**ಈಶಕಾರ್ಯಂ ಜೀವಭೋಗ್ಯಂ ಜಗದ್ದ್ವಾಭ್ಯಾಂ**
**ಸಮನ್ವಿತಮ್ ।**
**ಪಿತೃಜನ್ಯಾ ಭರ್ತೃಭೋಗ್ಯಾ ಯಥಾಯೋಷಿತ್ತಥೇಷ್ಯ-**
**ತಾಮ್ ॥೧೭॥**

ಅ:—ಸ್ತ್ರೀಯು ತಂದೆಯಿಂದ ಹುಟ್ಟಿ, ಗಂಡನಿಗೆ ಭೋಗಸಾಧನವೆನಿಸು ವಂತೆ, ಜಗತ್ತು ಈಶನಿರ್ಮಿತವಾದರೂ ಜೀವನಿಗೆ ಭೋಗಸಾಧನವೆನಿಸಿದೆ. ಹೇಗೆ ಜಗತ್ತು ಜೀವೇಶ್ವರರಿಬ್ಬರಿಗೂ ಸಂಬಂಧಿಸಿರುವದೆಂದು ತಿಳಿಯಬೇಕು.

**ಮಾಯಾವೃತ್ತ್ಯಾತ್ಮಕೋ ಹೀಶಸಂಕಲ್ಪಃ ಸಾಧನಂ ಜನೌ ।**
**ಮನೋವೃತ್ತ್ಯಾತ್ಮಕೋ ಜೀವಸಂಕಲ್ಪೋ ಭೋಗ-**
**ಸಾಧನಮ್ ॥೧೮॥**

ಅ:—ಮಾಯೆಯ ವ್ಯಾಪಾರ ಈಶ್ವರನ ಸಂಕಲ್ಪವು ಸೃಷ್ಟಿಯ ಸಾಧ ನವು. ಭೋಗ ಸಾಧನಗಳೆಂದು ಉಪಯೋಗಿಸುವುದಕ್ಕೆ ಜೀವನ ಮನಸ್ಸಿನ ಸಂಕಲ್ಪವು ಸಾಧನವು.

ಈಶ್ವರನು ಉತ್ಪನ್ನಮಾಡಿದ ಪದಾರ್ಥಗಳ ಸ್ವರೂಪಕ್ಕಿಂತ ಬೇರೆ ಸುಖಸಾಧನಸ್ವರೂಪವು ಕಾಣುವದಿಲ್ಲ. ಎಂದಮೇಲೆ ಇಲ್ಲಿ ಜೀವನು ಮಾಡಿದ ಮಾರ್ಪಾಡೇನು ?

**ಈಶನಿರ್ಮಿತಮಣ್ಯಾದೌ ವಸ್ತುನ್ಯೇಕವಿಧೇಸ್ಥಿತೇ ।**
**ಭೋಕ್ತೃಧೀವೃತ್ತಿನಾನಾತ್ವಾತ್ತದ್ಭೋಗೋ ಬಹುಧೇಷ್ಯತೇ॥೧೯॥**

ಅ:—ಈಶ್ವರನು ನಿರ್ಮಿಸಿದ ಮಣಿಯು ಒಂದೇ ವಿಧವಾಗಿದ್ದರೂ, ಅದರ ಭೋಗವನ್ನು ತೆಗೆದುಕೊಳ್ಳುವವರ ಬುದ್ಧಿವೃತ್ತಿಗಳು ಅನೇಕವಾದುದ ರಿಂದ ಭೋಗವೂ ಅನೇಕಬಗೆಯದಾಗುವದೆನ್ನಬೇಕು.

ಒಂದೇ ಪದಾರ್ಥದ ವಿಷಯದಲ್ಲಿ ಜೀವನು ಅನೇಕ ಕಲ್ಪನೆಗಳನ್ನು ಹೇಗೆ ಹುಟ್ಟಿಸುವನೆಂಬುದನ್ನು ಹೇಳುತ್ತಾರೆ.

**ಹೃಷ್ಯತ್ಯೇಕೋ ಮಣಿಂ ಲಬ್ಧ್ವಾ ಕ್ರುಧ್ಯತ್ಯನ್ಯೋಽಹ್ಯ-**
**ಲಾಭತಃ ।**
**ಪಶ್ಯತ್ಯೇವ ವಿರಕ್ತೋಽತ್ರ ನಹೃಷ್ಯತಿ ನ ಕುಪ್ಯತಿ ॥೨೦॥**

ಅ:—ಅಪೇಕ್ಷಿಸುವ ಜೀವರಲ್ಲಿ ಒಬ್ಬನು ಮಣಿಯು ದೊರೆತುದರಿಂದ ಸಂತೋಷಪಡುತ್ತಾನೆ. ಅದು ದೊರೆಯದವನು ಸಿಟ್ಟಾಗುತ್ತಾನೆ. ಅದರ ಅಪೇಕ್ಷೆ ಇಲ್ಲದ ವಿರಕ್ತನು ಅದನ್ನು ಸುಮ್ಮನೇ ನೋಡುತ್ತಿರುವನು. ಸಂತೋಷ ವನ್ನೂ ಪಡುವದಿಲ್ಲ. ಸಿಟ್ಟಿಗೂ ಏಳುವದಿಲ್ಲ.

**ಪ್ರಿಯೋಽಪ್ರಿಯ ಉಪೇಕ್ಷ್ಯಶ್ಚೇತ್ಯಾಕಾರಾ ಮಣಿಗಾಸ್ತ್ರಯಃ ।**
**ಸೃಷ್ಟಾ ಜೀವೈರೀಶಸೃಷ್ಟಂ ರೂಪಂ ಸಾಧಾರಣಂ ತ್ರಿಷು ॥೨೦॥**

ಅ—ಆ ಮಣಿಯಲ್ಲಿ ಜೀವನು ಪ್ರೀತಿಯದೆಂದು, ಅಪ್ರೀತಿಯದೆಂದು, ತಿರಸ್ಕಾರಕ್ಕೆ ಪಾತ್ರವೆಂದು ಮೂರುಬಗೆಯ ಆಕಾರಗಳನ್ನು ಹುಟ್ಟಿಸುವನು. ಈಶ್ವರನು ಹುಟ್ಟಿಸಿರುವ ರೂಪವು ಮಾತ್ರ ಈ ಮೂರಕ್ಕೂ ಒಂದೇಆಗಿರುವದು.

**ಭಾರ್ಯಾ ಸ್ನುಷಾ ನನಾಂದಾ ಚ ಯಾತಾ ಮಾತೇತ್ಯನೇಕಧಾ।**
**ಪ್ರತಿಯೋಗಿಧಿಯಾ ಯೋಷಿದ್ಭಿದ್ಯತೇ ನ ಸ್ವರೂಪತಃ ॥೨೧॥**

ಅ:— ಒಬ್ಬಳೇ ಹೆಂಗಸು ಹೆಂಡತಿ-ಸೊಸೆ-ನಾದಿನಿ—ನೆಗೆಣ್ಣಿ—ತಾಯಿ ಈ ಮೊದಲಾದ ಅನೇಕ ಹೆಸರುಗಳನ್ನು ಸಂಬಂಧ ಭೇದದಿಂದ ಹೊಂದುತ್ತಾಳೆ. ಸ್ವರೂಪ ಬದಲಾವಣೆ ಏನೂ ಇಲ್ಲ.

**ನನುಜ್ಞಾನಾನಿ ಭಿದ್ಯಂತಾಮಾಕಾರಸ್ತು ನ ಭಿದ್ಯತೇ ।**
**ಯೋಷಿದ್ವಪುಷ್ಯತಿಶಯೋ ನ ದೃಷ್ಟೋ ಜೀವನಿರ್ಮಿತಃ ॥೨೩॥**

ಅ:— ಒಬ್ಬೊಬ್ಬರ ತಿಳಿವಳಿಕೆ ಸಂಬಂಧ ಮಾತ್ರದಿಂದ ಬೇರೆಬೇರೆಯಾಗಲಿ. ಆಕಾರದಲ್ಲಿ ಏನೂ ಬದಲಾವಣೆಯಾಗುವುದಿಲ್ಲ. ಎಂದಮೇಲೆ ಸ್ತ್ರೀಯ ಶರೀರದಲ್ಲಿ ಜೀವನು ಮಾಡಿದ ವಿಶೇಷವೇನೂ ಕಾಣಲಿಲ್ಲವಲ್ಲ.

ಜ್ಞಾನದ ವಿಭಿನ್ನತೆಯು ಜ್ಞೇಯದ ವಿಭಿನ್ನತೆಯ ಹೊರತು ಎಂದೂ ಸಂಭವಿಸುವದಿಲ್ಲ. ಆದಕಾರಣ ಇಂಥ ಪ್ರಸಂಗದಲ್ಲಿ ಮನೋಮಯ (ಜ್ಞೇಯ) ಆಕಾರಗಳನ್ನು ಬೇರೆಬೇರೆ ಆಗಿರುವವೆಂದು ತಿಳಿಯಬೇಕಾಗುವದು.

**ಮೈವಂ ಮಾಂಸಮಯೀ ಯೋಷಿತ್ಕಾಚಿದನ್ಯಾ ಮನೋಮಯೀ ।**
**ಮಾಂಸಮಯ್ಯಾ ಅಭೇದೇಽಪಿ ಭಿದ್ಯತೇ ಹೀ ಮನೋಮಯೀ ॥೨೪॥**

ಅ:— ಹಾಗಲ್ಲ. ಒಬ್ಬಳು ಮಾಂಸ ಮಯಾಳಾದ ಸ್ತ್ರೀಯು. ಮತ್ತು ಮನೋಮಯಳಾದವಳು. ಇವೆರಡು ಪ್ರಕಾರಗಳಲ್ಲಿ ಮಾಂಸಮಯಿಯಾದವಳು ಏಕರೂಪಳೇ. ಆದರೆ ಮನೋಮಯಳಾದವಳಲ್ಲಿ ಭೇದಗಳು ಇದ್ದೇಇರುತ್ತವೆ (ಪತ್ನಿ-ತಾಯಿ—ಸೊಸೆ ಮುಂ.)

ಭ್ರಾಂತಿ ಸ್ವಪ್ನ ಮುಂ. ಆದರೆ ಅಲ್ಲಿ ಮನೋಮಯ ವಸ್ತುಗಳಿರುತ್ತವೆ. ಆದರೆ ಅದೇ ನ್ಯಾಯವನ್ನು ಎಚ್ಚರದಲ್ಲಿಯೂ ಹಚ್ಚುವದು ಯೋಗ್ಯವಲ್ಲ. ಯಾಕಂದರೆ ಇಲ್ಲಿ ಹೊರಗಿನ ಪದಾರ್ಥಗಳಿರುತ್ತವೆ.

**ಭ್ರಾಂತಿಸ್ವಪ್ನ ಮನೋರಾಜ್ಯ ಸ್ಮೃತಿಷ್ವಸ್ತು ಮನೋಮಯಮ್ ।**
**ಜಾಗ್ರನ್ಮಾನೇನ ಮೇಯಸ್ಯ ನಮನೋಮಯತೇತಿ ಚೇತ್ ॥೨೫॥**

ಅ:— ಮನೋಮಯವೆಂಬುದು ಭ್ರಮೆ–ಕನಸು–ಮನೋರಾಜ್ಯ-ಸ್ಮರಣೆಗಳಲ್ಲಿ ಮಾತ್ರ ಇರುವದು. ಆದರೆ ಪ್ರತ್ಯಕ್ಷವೇ ಮೊದಲಾದ ಪ್ರಮಾಣಗಳಿಂದ ಸಾಗುವ ಎಚ್ಚರದಲ್ಲಿ ಮನೋಮಯದ ಸಂಬಂಧವಿಲ್ಲ ಎಂದರೆ–

**ಬಾಢಂ ಮಾನೇತು ಮೇಯೇನ ಯೋಗಾತ್ಸ್ಯಾದ್ವಿಷಯಾಕೃತಿಃ ।**
**ಭಾಷ್ಯ ವಾರ್ತಿಕಕಾರಾಭ್ಯಾಮಯಮರ್ಥ ಉದೀರಿತಃ ॥೨೬॥**

ಅ:— ನಿಜ. ಎಚ್ಚರದಲ್ಲಿ ಹೊರಗಿನ ವಸ್ತುಗಳಿರುತ್ತವೆ. ಆದರೆ ಎಚ್ಚರದಲ್ಲಿ ಹಾಗೆ ಕಾಣುವಾಗ ನಮ್ಮ ಅಂತಃಕರಣವು ವಿಷಯವನ್ನು ಆವರಿಸಿ ವಿಷಯಾಕಾರವಾಗುವದೆಂದು ಶ್ರೀ ಶಂಕರಾಚಾರ್ಯರೂ, ಶ್ರೀ ಸುರೇಶ್ವರಾಚಾರ್ಯರೂ ಹೇಳಿದ್ದಾರೆ.

**ಮೂಷಾಸಿಕ್ತಂ ಯಥಾ ತಾಮ್ರಂ ತನ್ನಿಭಂ ಜಾಯತೇಯಥಾ।**
**ರೂಪಾದೀನ್ ವ್ಯಾಪ್ನುವಚ್ಚಿತ್ತಂ ತನ್ನಿಭಂ ದೃಶ್ಯತೇ ಧ್ರುವಮ್ ॥೨೭॥**

ಅ:— ಮುಸಿಯಲ್ಲಿ ಹಾಕಿ ಕರಗಿಸಿದ ತಾಮ್ರವು ಆ ಮುಸಿಯ ಆಕಾರವನ್ನು ತಾಳುವಂತೆ, ರೂಪ ಮೊದಲಾದ ವಿಷಯಗಳ ಸಂಯೋಗ ಪಡೆದ ಚಿತ್ತವು ಸ್ವತಃ ಅದರ ಆಕಾರ ತಾಳುವದೆಂದು ಶ್ರೀ ಶಂಕರಾಚಾರ್ಯರು ಹೇಳುತ್ತಾರೆ.

ಒಳ್ಳೇದು. ಕರಗಿಸಿದ ತಾಮ್ರ ಮೊದಲಾದವುಗಳ ರಸವು ಮೂರ್ತರೂಪವಾದುದರಿಂದ ಅದು ಮುಸಿಯ ಆಕಾರ ತಾಳುವುದೆಂದು ಹೇಳುವದು

ಸಮಂಜಸ. ಆದರೆ ಯಾವ ಆಕಾರವೂ ಇಲ್ಲದ ಮನಸ್ಸು ವಿಷಯಾಕಾರವಾಗುವದೆಂದರೆ ಹೇಗೆ?

**ವ್ಯಂಜಕೋ ವಾ ಯಥಾ ಲೋಕೋ ವ್ಯಂಗಸ್ಯಾಕಾರತಾ ಮಿಯಾತ್ ।**
**ಸರ್ವಾರ್ಥ ವ್ಯಂಜಕತ್ವಾದ್ಧೀರರ್ಥಾಕಾರಾ ಪ್ರದೃಶ್ಯತೇ ॥೨೮॥**

ಅ:—ಬೆಳಗುವ ಬೆಳಕು ತಾನು ಬೆಳಗುವ ವಸ್ತುವಿನ ಆಕಾರವನ್ನು ತಳೆಯುವಂತೆ, ಬುದ್ಧಿಯು ಎಲ್ಲ ಪದಾರ್ಥಗಳನ್ನು ಬೆಳಗುವದಾದುದರಿಂದ ಆ ಪದಾರ್ಥಾಕಾರವನ್ನು ತಾಳುವದು.

(ಇದು ಶ್ರೀ ಶಂಕರಾಚಾರ್ಯರ ಅಭಿಪ್ರಾಯವು.)

ಈಗ ವಾರ್ತಿಕಕಾರ (ಶ್ರೀ ಸುರೇಶ್ವರಾಚಾರ್ಯರ) ಅಭಿಪ್ರಾಯ ಹೇಳುತ್ತಾರೆ.

**ಮಾತುರ್ಮಾನಾಭಿನಿಷ್ಪತ್ತಿರ್ನಿಷ್ಪನ್ನಂ ಮೇಯಮೇತಿ ತತ್ ।**
**ಮೇಯಾಭಿಸಂಗತಂ ತಚ್ಚ ಮೇಯಾಭತ್ವಂ ಪ್ರಪದ್ಯತೇ ॥೨೯॥**

ಅ:— ಜೀವನಿಂದ ಪ್ರಮಾಣವೆನಿಸುವ ಅಂತಃಕರಣವೃತ್ತಿಯು ಹುಟ್ಟುವದು. ಆ ಪ್ರಮಾಣವು ಪ್ರಮೇಯವನ್ನು ಹೊಂದಿ (ಎಂದರೆ ಘಟಾದಿ ಪದಾರ್ಥಗಳನ್ನು ಹೊಂದಿ) ಅದರ ಆಕಾರವನ್ನು ಪಡೆಯುವದು.

ಹೀಗೆ ಚಿತ್ತವೇ ವಿಷಯಾಕಾರವಾಗುವದೆಂದು ಸಪ್ರಮಾಣಸಿದ್ಧವಾಯಿತು. ಇನ್ನು ವೇದಾಂತಸಮ್ಮತ ಸಿದ್ಧಾಂತವನ್ನು ಹೇಳುತ್ತಾರೆ.

**ಸತ್ಯೇವಂ ವಿಷಯೌದ್ವೌ ಸ್ತೋ ಘಟೌ ಮೃನ್ಮಯಧೀಮಯೌ।**
**ಮೃನ್ಮಯೋ ಮಾನಮೇಯಃ ಸ್ಯಾತ್ ಸಾಕ್ಷಿಭಾಸ್ಯಸ್ತು ಧೀಮಯಃ ॥೩೦॥**

ಅ:—ಹೀಗಾದುದರಿಂದ ವಿಷಯಗಳು ಎರಡು ಆಗುವವು. ಒಂದು ಘಟವು ಮೃನ್ಮಯ. ಮತ್ತೊಂದು ಮನೋಮಯ. ಮೃನ್ಮಯ ಘಟವನ್ನು ಚೈತನ್ಯದ ಪ್ರತಿಬಿಂಬದಿಂದ ಕೂಡಿದ ಮನಸ್ಸು ಗ್ರಹಿಸುವದು. ಆದರೆ ಮನೋಮಯ ಘಟವನ್ನು ಸಾಕ್ಷಿಯು ಮಾತ್ರ ಗ್ರಹಿಸುವದು.

ಹೀಗೆ ಎರಡು ಬಗೆಯ ದ್ವೈತವಿದ್ದರೆ ಅದರಲ್ಲಿ ಬಿಡಬೇಕಾದುದು ಯಾವದೆಂದು ತಿಳಿಯಲಿಲ್ಲ.

**ಅನ್ವಯ ವ್ಯತಿರೇಕಾಭ್ಯಾಂ ಧೀಮಯೋ ಜೀವಬಂಧಕೃತ್ ।**
**ಸತ್ಯಸ್ಮಿನ್ ಸುಖದುಃಖೇ ಸ್ತಸ್ತಸ್ಮಿನ್ನಸತಿ ನ ದ್ವಯಮ್ ॥೩೦॥**

ಅ:— ಅನ್ವಯ-ವ್ಯತಿರೇಕ ನ್ಯಾಯದಿಂದ ಮನೋಮಯ ಸೃಷ್ಟಿಯೇ ಮನುಷ್ಯನನ್ನು ಬಂಧನಕ್ಕೊಳಪಡಿಸುವದು ಎಂದಂತಾಯಿತು. ಇದರಿಂದಲೇ ಸುಖ-ದುಃಖಾದಿಗಳಾಗುವವು. (=ಇದು ಅನ್ವಯವು) ಇದು ಇಲ್ಲವಾದರೆ ಸುಖವೂ ಇಲ್ಲ. ದುಃಖವೂ ಇಲ್ಲ. (=ಇದು ವ್ಯತಿರೇಕವು.)

ಈ ಅನ್ವಯ ವ್ಯತಿರೇಕನ್ಯಾಯವು ಹೊರಗಿನ ವಿಷಯಗಳಿಗಷ್ಟೇ ಸಂಬಂಧವೆಂದು ಯಾಕೆ ತಿಳಿಯಬಾರದು ?

**ಅಸತ್ಯಪಿಚ ಬಾಹ್ಯಾರ್ಥೇ ಸ್ವಪ್ನಾದೌ ಬಧ್ಯತೇ ನರಃ ।**
**ಸಮಾಧಿಸುಪ್ತಿ ಮೂರ್ಛಾಸು ಸತ್ಯಪ್ಯಸ್ಮಿನ್ನ ಬಧ್ಯತೇ ॥೩೨॥**

ಅ:— ಹೊರಗಿನ ವಸ್ತುಗಳು ಇಲ್ಲದಂಥ ಕನಸು ಮುಂತಾದ ಅವಸ್ಥೆಗಳಲ್ಲಿ ಕೂಡ ಮನುಷ್ಯನು ಬಂಧಿತನಾಗುವನು. ಆದರೆ ಅವೇ ವಸ್ತುಗಳು ಇದ್ದರೂ ಅಷ್ಟೆ; ಸಮಾಧಿ, ಗಾಢನಿದ್ರೆ ಮತ್ತು ಮೂರ್ಛೆ ಈ ಅವಸ್ಥೆಗಳಲ್ಲಿ ಮನುಷ್ಯನು ಬಂಧಿತನಾಗಿರುವದಿಲ್ಲ. ( ಎಂದರೆ ಸುಖ – ದುಃಖಾದಿಗಳಿಗೆ ಒಳಗಾಗುವದಿಲ್ಲ.)

(ಸ್ವಪ್ನ-ಸ್ಮೃತಿ-ಮನೋರಾಜ್ಯ ಮುಂತಾದ ಪ್ರಸಂಗಗಳಲ್ಲಿ ತನಗೆ ಅನುಕೂಲವೆನಿಸಿದ ಹೆಂಡತಿ, ಮಕ್ಕಳು, ದ್ರವ್ಯ ಮುಂತಾದ ಪದಾರ್ಥಗಳು, ತನಗೆ ಪ್ರತಿಕೂಲವೆನಿಸುವ ಹುಲಿ-ಸಿಂಹ ಮೊದಲಾದ ಪದಾರ್ಥಗಳು ನಿಜವಾಗಿ ಇರುವದಿಲ್ಲ. ಆದರೂ ಜೀವನು ಸುಖ-ದುಃಖಗಳ ಅನುಭವ ಪಡೆಯುತ್ತಾನೆ. ಇದಕ್ಕೆ ವಿರುದ್ಧವಾಗಿ ಸಮಾಧಿ-ಗಾಢನಿದ್ದೆ-ಮೂರ್ಛೆ ಮುಂತಾದವುಗಳಲ್ಲಿ ಮೇಲೆ ಹೇಳಿದ ಅನುಕೂಲ-ಪ್ರತಿಕೂಲ ಬಾಹ್ಯಪದಾರ್ಥಗಳಿದ್ದರೂ ಸು-ಖದುಃಖಾದಿಗಳನ್ನು ಹೊಂದುವದಿಲ್ಲ. ಆದುದರಿಂದ ಹೊರಗಿನ ವಿಷಯಗಳಲ್ಲಿ ಅನ್ವಯ-ವ್ಯತಿರೇಕನ್ಯಾಯವು ಹತ್ತುವದಿಲ್ಲ.

ಮನೋಮಯ ಸೃಷ್ಟಿಯೇ ಬಂಧಕವಾಗಿರುವುದೆಂದು ಸ್ಪಷ್ಟಪಡಿಸುತ್ತಾರೆ.

**ದೂರದೇಶಂ ಗತೇ ಪುತ್ರೇ ಜೀವತ್ಯೇವಾತ್ರ ತತ್ಪಿತಾ ।**
**ವಿಪ್ರಲಂಭಕವಾಕ್ಯೇನ ಮೃತಂಮತ್ವಾ ಪ್ರರೋದಿತಿ ॥೩೩॥**

ಅ:— ದೂರದ ಊರಿಗೆ ಹೋದ ಮಗನು ಬದುಕಿದ್ದರೂ ಇಲ್ಲಿ ಅವನ ತಂದೆಯು ಯಾವನೋ ಮೋಸಗಾರನ ಮಾತಿನಿಂದ ಅವನು ಸತ್ತಿರುವನೆಂದು ನಂಬಿ ಆಕ್ರೋಶಮಾಡುತ್ತಾನೆ.

(ಇದರಿಂದ ಮನುಷ್ಯನು ವಸ್ತುಸ್ಥಿತಿಯಿಂದಲ್ಲ, ತನ್ನ ಮನಃಕಲ್ಪನೆಯಿಂದಲೇ ಸುಖ-ದುಃಖ ಹೊಂದುತ್ತಾನೆ ಎಂಬುದು ಸ್ಪಷ್ಟವಾಯಿತು.)

ಈಶ ನಿರ್ಮಿತ ಸೃಷ್ಟಿಯಿಂದ ಯಾರೂ ಬದ್ಧರಾಗುವುದಿಲ್ಲ.

**ಮೃತೇಽಪಿ ತಸ್ಮಿನ್ವಾರ್ತಾಯಾಮಶ್ರುತಾಯಾಂ ನ ರೋದಿತಿ ।**
**ಅತಃ ಸರ್ವಸ್ಯ ಜೀವಸ್ಯ ಬಂಧಕೃನ್ ಮಾನಸಂ ಜಗತ್ ॥೩೪॥**

ಅ:— ಆ ಮಗನು ಅಲ್ಲಿ ನಿಜವಾಗಿ ಸತ್ತಿದ್ದರೂ ಆ ಸುದ್ದಿ ಕಿವಿಗೆ ಬೀಳದಿದ್ದರೆ ಇವನು ಅಳುವುದಿಲ್ಲ. ಆದುದರಿಂದ ಎಲ್ಲ ಜೀವರಿಗೆ ಮನೋಮಯ ಸೃಷ್ಟಿಯೇ ಬಂಧಕವು.

ಮನೋಮಯ ದ್ವೈತದಿಂದಲೇ ಪ್ರತಿಯೊಬ್ಬರೂ ಬಂಧಿತರಾಗುವರೆಂದು ತಿಳಿದುಬಿಟ್ಟರೆ ಬೌದ್ಧರ ಕ್ಷಣಿಕ ವಿಜ್ಞಾನವಾದವನ್ನು (ಬುದ್ಧಿಯ ಹೊರತೂ ಹೊರಗೆ ವಸ್ತುಗಳಿಲ್ಲವೆಂಬುದನ್ನು) ಒಪ್ಪಿದಂತಾಗ ಬಹುದಲ್ಲ.

**ವಿಜ್ಞಾನವಾದೋ ಬಾಹ್ಯಾರ್ಥವೈಯರ್ಥ್ಯಾತ್ ಸ್ಯಾದಿಹೇತಿ ಚೇತ್ ।**
**ನ ಹೃದಾಕಾರ ಮಾಧಾತುಂ ಬಾಹ್ಯಸ್ಯಾಪೇಕ್ಷಿತತ್ವತಃ ॥೩೫॥**

ಅ:— ಹೊರಗಿನ ವಸ್ತುಗಳು ಇಲ್ಲವೆಂದಾದ ಮೇಲೆ ಇಲ್ಲಿ ವಿಜ್ಞಾನವಾದವು ಬಂದಿತು ಎಂದರೆ— ಮನಸ್ಸು ಆಕಾರ ಹೊಂದಬೇಕಾದರೆ ಹೊರಗಿನವಸ್ತು ಬೇಕಾಗುವದರಿಂದ ಆ ವಾದವು ಇಲ್ಲಿ ಸಂಭವಿಸದು.

ಮನಸ್ಸು ವಿಷಯಾಕಾರವಾಗಲು ಹೊರಗಿನ ವಸ್ತು ಬೇಕೆಂಬುದೇನೂ ಇಲ್ಲ. ಪೂರ್ವ ಪೂರ್ವ ಸಂಸ್ಕಾರಗಳಿಂದ ಉತ್ತರೋತ್ತರ ಮಾನಸಿಕ ಪದಾರ್ಥಗಳು ಹುಟ್ಟುವುದು ಸಾಧ್ಯವಿದೆಯಲ್ಲ.

**ವೈಯರ್ಥ್ಯಮಸ್ತು ವಾ ಬಾಹ್ಯಂ ನ ವಾರಯಿತುಮೀಶ್ಮಹೇ ।**
**ಪ್ರಯೋಜನಮಪೇಕ್ಷಂತೇ ನ ಮಾನಾನೀತಿ ಹಿ ಸ್ಥಿತಿಃ ॥೩೬॥**

ಅ:— ಅಥವಾ ಹೊರಗಿನ ವಸ್ತುಗಳು ವ್ಯರ್ಥವೇ ಆಗಲಿ; ನಾವು ಅವುಗಳನ್ನು ಅಲ್ಲಗಳೆಯಲು ಶಕ್ತರಾಗಲಾರೆವು. ನಿಜವಾದ ಸ್ಥಿತಿ ಎಂದರೆ ಪ್ರಮಾಣಗಳು ಫಲವನ್ನು ಅಪೇಕ್ಷಿಸುವುದಿಲ್ಲ.

(ಎಂದರೆ ವಸ್ತುಗಳ ಇರುವಿಕೆಯು ಫಲಕ್ಕೆ (ಪ್ರಯೋಜನಕ್ಕೆ) ಅಧೀನ ವಾಗಿಲ್ಲವೆಂದು ಭಾವವು)

ಒಟ್ಟಿನಲ್ಲಿ ಮಾನಸ ಸೃಷ್ಟಿಯು ಬಂಧಕವೆಂದಾದಮೇಲೆ ಮನೋನಿ ರೋಧರೂಪ ಯೋಗದಿಂದ ಆದು ಇಲ್ಲದಂತಾಗುವದಲ್ಲ. ಬ್ರಹ್ಮಜ್ಞಾನವೇ ಬಂಧವನ್ನು ಕಳಚುವದೆಂದು ಯಾಕೆ ತಿಳಿಯುವಿರಿ?

**ಬಂಧಶ್ಚೇನ್ಮಾನಸದ್ವೈತಂ ತನ್ನಿರೋಧೇನ ಶಾಮ್ಯತಿ ।**
**ಅಭ್ಯಸೇದ್ಯೋಗಮೇವಾತೋ ಬ್ರಹ್ಮಜ್ಞಾನೇನ ಕಿಂ ವದ॥೩೭॥**

ಅ:— ಮನೋಮಯ ಸೃಷ್ಟಿಯೇ ಬಂಧಕವೆಂದು ಆದರೆ ಅದು ಮನೋನಿಗ್ರಹ ರೂಪಯೋಗದಿಂದ ಶಾಂತವಾಗುತ್ತದೆ. ಎಂದಮೇಲೆ ಯೋಗ ವನ್ನು ಅಭ್ಯಾಸ ಮಾಡಬೇಕಂದಾಯಿತು. ಬ್ರಹ್ಮಜ್ಞಾನದಿಂದ ಫಲವೇನು ಹೇಳು.

**ತಾತ್ಕಾಲಿಕದ್ವೈತಶಾಂತಾವಪ್ಯಾಗಾಮಿಜನಿಕ್ಷಯಃ ।**
**ಬ್ರಹ್ಮಜ್ಞಾನಂ ವಿನಾ ನ ಸ್ಯಾದಿತಿ ವೇದಾಂತಡಿಂಡಿಮಃ ॥೩೮॥**

ಅ:— ನೀನು ಹೇಳುವ ಯೋಗದಿಂದ ಮನೋಮಯ ಸೃಷ್ಟಿಯು ಆಗಿನ ಮಟ್ಟಿಗಷ್ಟೇ ಶಾಂತವಾಗುವದು. ಬ್ರಹ್ಮಜ್ಞಾನದ ಹೊರತೂ ಅದರ ಮುಂದಿನ ಹುಟ್ಟುಗುವುದಿಲ್ಲವೆಂದು ವೇದಾಂತವು ಉದ್ಘೋಷಿಸುತ್ತದೆ.

ಆಗಲಿ. ಅದ್ವೈತಬ್ರಹ್ಮ ಸಾಕ್ಷಾತ್ಕಾರವಾಗಬೇಕಾದರೆ ಬಾಹ್ಯದ್ವೈತ ವನ್ನು ನಿವಾರಿಸಬೇಕಲ್ಲ.

**ಅನಿವೃತ್ತೇಽಪೀಶಸೃಷ್ಟೇ ದ್ವೈತೇ ತಸ್ಯ ಮೃಷಾತ್ಮತಾಮ್ ।**
**ಬುದ್ಧ್ವಾ ಬ್ರಹ್ಮಾದ್ವಯಂ ಬೋದ್ಧುಂ ಶಕ್ಯಂ ವಸ್ತ್ವೈಕ್ಯ ವಾದಿನಃ ॥೩೯॥**

ಅ:— ಈಶ ಸೃಷ್ಟಿಯ ಭೇದಗಳನ್ನು ಅಲ್ಲಗಳೆಯುವದು ಆಗದಿದ್ದರೂ 'ಒಂದೇ ವಸ್ತುವಿದೆ' ಎಂದೆನ್ನುವ ಅದ್ವೈತ ವಾದಿಗಳಿಗೆ ಜಗತ್ತು ಸುಳ್ಳು ಎಂದು ತಿಳಿಯುವದರಿಂದ ಅದ್ವಿತೀಯ ಬ್ರಹ್ಮಜ್ಞಾನವಾಗುವದು ಸಾಧ್ಯ.

ಜಗತ್ತು ಸುಳ್ಳೆಂಬುದಷ್ಟೇ ಅದ್ವೈತ ಜ್ಞಾನಕ್ಕೆ ಸಾಕಾಗುವುದಿಲ್ಲ. ಅದರ ನಿವಾರಣೆ ಮಾಡುವುದೇಬೇಕು. ಎಂದರೆ

**ಪ್ರಲಯೇ ತನ್ನಿವೃತ್ತೌ ತು ಗುರುಶಾಸ್ತ್ರಾದ್ಯಭಾವತಃ ।**
**ವಿರೋಧಿದ್ವೈತಾಭಾವೇಽಪಿ ನಶಕ್ಯಂ ಬೋದ್ಧು**
**ಮದ್ವಯಮ್ ॥೪೦॥**

ಅ:— ಪ್ರಳಯಕಾಲದಲ್ಲಿ ಈಶ ಸೃಷ್ಟಿಯ ಎಲ್ಲ ಭೇದಗಳು ನಾಶವಾದ ಮೇಲೆ-ವಿರೋಧಿ ಎನಿಸಿದ ದ್ವೈತವು ಇಲ್ಲದಂತಾಗುತ್ತದೆ. ಅದರಂತೆ ಗುರು ಮತ್ತು ಶಾಸ್ತ್ರ ಮುಂ. ಜ್ಞಾನಸಾಧನಗಳೂ ಇಲ್ಲದಾಗಿರುವುದರಿಂದ ಆಗ ಅದ್ವಿತೀಯ ಬ್ರಹ್ಮವನ್ನು ತಿಳಿಯುವದು ಶಕ್ಯವಿಲ್ಲ.

ದ್ವೈತವಿದ್ದರೂ ಅದ್ವೈತ ಸಾಕ್ಷಾತ್ಕಾರ ಸಾಧ್ಯವೇ?

**ಅಬಾಧಕಂ ಸಾಧಕಂ ಚ ದ್ವೈತಮೀಶ್ವರನಿರ್ಮಿತಮ್ ।**
**ಅಪನೇತುಮಶಕ್ಯಂ ಚೇತ್ಯಾಸ್ತಾಂ ತದ್ದ್ವಿಷ್ಯತೇ ಕುತಃ॥೪೧॥**

ಅ:— ಈಶ ಸೃಷ್ಟಿಯು ಬ್ರಹ್ಮಜ್ಞಾನಕ್ಕೆ ಅಡ್ಡಿ ಮಾಡುವಂಥದಲ್ಲ. ಒಂದು ವೇಳೆ ಸಾಧಕವೇ ಆಗಿರುವದು. (ಗುರು-ಶಾಸ್ತ್ರಮುಂ-ಇರುವದರಿಂದ) ಅಲ್ಲದೇ ಅದನ್ನು ಇಲ್ಲದಂತೆ ಮಾಡಲು ಶಕ್ಯವಿಲ್ಲ. ಹೀಗಿರುವದರಿಂದ ಅದು ಇದ್ದುಕೊಳ್ಳಲಿ. ಅದನ್ನು ದ್ವೇಷಿಸುವದೇಕೆ?

**ಜೀವದ್ವೈತಂ ತು ಶಾಸ್ತ್ರೀಯಮಶಾಸ್ತ್ರೀಯಮಿತಿ ದ್ವಿಧಾ ।**
**ಉಪಾದದೀತ ಶಾಸ್ತ್ರೀಯಮಾತತ್ವಸ್ಯಾವ**
**ಬೋಧನಾತ್ ॥೪೨॥**

ಅ:— ಜೀವ ಸೃಷ್ಟಿಯ ಮಾನಸ ಪ್ರಪಂಚವು ಶಾಸ್ತ್ರವಿಚಾರ ರೂಪವೆಂದೂ, ಶಾಸ್ತ್ರವಿಚಾರ ರೂಪದ್ದು ಅಲ್ಲವೆಂದೂ ಎರಡುವಿಧ. (ಹಾಗಾದರೆ ಆ ಎರಡೂಪ್ರಕಾರಗಳನ್ನು ಯಾವಾಗಲೂ ನಿರಾಕರಿಸಬೇಕೇ ?) ತತ್ವದ ಸಾಕ್ಷಾತ್ಕಾರವಾಗುವವರೆಗೆ ಶಾಸ್ತ್ರೀಯ ದ್ವೈತವನ್ನು ಸ್ವೀಕರಿಸಬೇಕು.

(ಎಂದರೆ ಆತ್ಮ–ಪರಬ್ರಹ್ಮರ ವಿಚಾರ. ಅರ್ಥಾತ್ ಶ್ರವಣ–ಮನನ–ನಿದಿಧ್ಯಾಸನಾದಿಗಳು ಜ್ಞಾನವಾದಮೇಲೆ ಇವೆಲ್ಲ ತಾವೇ ಇಲ್ಲದಂತಾಗುವವು.)

ಜೀವ ಕೃತ ಶಾಸ್ತ್ರೀಯ ದ್ವೈತವೆಂದರೆ ಏನು ?

**ಆತ್ಮಬ್ರಹ್ಮವಿಚಾರಾಖ್ಯಂ ಶಾಸ್ತ್ರೀಯಂ ಮಾನಸಂ ಜಗತ್ ।**
**ಬುದ್ಧೇ ತತ್ತ್ವೇ ತಚ್ಚ ಹೇಯಮಿತಿ ಶ್ರುತ್ಯನುಶಾಸನಮ್ ॥೪೩॥**

ಅ:— ಆತ್ಮರೂಪ ಪರಬ್ರಹ್ಮ ವಿಚಾರವು ಎಂಬ ಹೆಸರಿನಿಂದ ಗುರುತಿಸುವ ಶ್ರವಣ-ಮನನ ಮುಂ. ಇದೆಲ್ಲ ಶಾಸ್ತ್ರೀಯವೆನಿಸುವ ಮನೋಮಯ ಜಗತ್ತು. ತತ್ವದ ಸಾಕ್ಷಾತ್ಕಾರವಾದ ಮೇಲೆ ಅದೆಲ್ಲ ಬಿಡತಕ್ಕದುದೆಂದು ಶ್ರುತಿಯು ಉಪದೇಶಿಸುತ್ತದೆ.

ಆ ಶ್ರುತಿಯನ್ನು ಹೇಳುತ್ತಾರೆ.

**ಶಾಸ್ತ್ರಾಣ್ಯಧೀತ್ಯ ಮೇಧಾವೀ ಅಭ್ಯಸ್ಯ ಚ ಪುನಃ ಪುನಃ ।**
**ಪರಮಂ ಬ್ರಹ್ಮ ವಿಜ್ಞಾಯ ಉಲ್ಕಾವತ್ತಾನ್ಯಥೋತ್ಸೃಜೇತ್ ॥೪೪॥**

ಅ:— ಬುದ್ಧಿವಂತನು ಶಾಸ್ತ್ರಗಳನ್ನು ಓದಿಕೊಂಡು, ತಿರುತಿರುಗಿ ಅದನ್ನು ಅಭ್ಯಾಸಮಾಡುತ್ತ ಪರಬ್ರಹ್ಮವನ್ನರಿತುಕೊಂಡು ದೀವಟಿಗೆಗಳಂತೆ ಅವನ್ನು ಬಿಟ್ಟುಬಿಡಬೇಕು. (ಅಮೃತ ಬಿಂದೂಪನಿಷತ್)

**ಗ್ರಂಥಮಭ್ಯಸ್ಯಮೇಧಾವೀ ಜ್ಞಾನ ವಿಜ್ಞಾನತತ್ಪರಃ ।**
**ಪಲಾಲಮಿವ ಧಾನ್ಯಾರ್ಥೀ ತ್ಯಜೇದ್ಗ್ರಂಥಮಶೇಷತಃ ॥೪೫॥**

ಅ:— ಬುದ್ಧಿವಂತನು ತನ್ನ ಹಿತವನ್ನು ಇಚ್ಛಿಸುವದಾದರೆ ಶಾಸ್ತ್ರಜ್ಞಾನದಲ್ಲಿಯೂ, ಅನುಭವಜ್ಞಾನದಲ್ಲಿಯೂ ಆಸಕ್ತಿಯನ್ನು ತಳೆದು ಗ್ರಂಥಗಳನ್ನು ಅಭ್ಯಾಸಮಾಡಿ ಧಾನ್ಯವನ್ನು ಅಪೇಕ್ಷಿಸುವವನು ಗೊಳಲಿಯನ್ನು ಹಾರಿಸುವಂತೆ ಗ್ರಂಥಗಳ ಸಂಪೂರ್ಣ ತ್ಯಾಗವನ್ನು ಮಾಡಬೇಕು.

(ಬ್ರಹ್ಮಬಿಂದೂಪನಿಷತ್)

**ತಮೇವ ಧೀರೋ ವಿಜ್ಞಾಯ ಪ್ರಜ್ಞಾಂಕುರ್ವೀತ ಬ್ರಾಹ್ಮಣಃ ।**
**ನಾನುಧ್ಯಾಯಾದ್ಬಹೂನ್ ಶಬ್ದಾನ್ ವಾಚೋ ವಿಗ್ಲಾಪನಂ ಹಿಂ ತತ್ ॥೪೬॥**

ಅ:— ಬುದ್ಧಿಶಾಲಿಯಾದವನು ಅದ್ವಿತೀಯ ಬ್ರಹ್ಮನ ಸಾಕ್ಷಾತ್ಕಾರ ಮಾಡಿಕೊಂಡು ಅವನ ವಿಷಯದಲ್ಲಿಯೇ ಅನುಸಂಧಾನ ಮಾಡುತ್ತಿರಬೇಕು. ಇದಕ್ಕೂ ಹೆಚ್ಚಿನ ಶಬ್ದಗಳ ಚಿಂತನ ಉಚ್ಚಾರಣಗಳನ್ನು ಮಾಡಬಾರದು. ಯಾಕಂದರೆ ಹಾಗೆ ಮಾಡುವದು ವಾಗಿಂದ್ರಿಯವನ್ನು ವ್ಯರ್ಥ ದಣಿಸಿದಂತೆ ಆಗುವದು.

(ಬೃಹದಾರಣ್ಯಕೋಪನಿಷತ್)

**ತಮೇವೈಕಂ ವಿಜಾನೀಥ ಹ್ಯನ್ಯಾ ವಾಚೋ ವಿಮುಂಚಥ ।**
**ಯಚ್ಛೇದ್ವಾಙ್ಮನಸೀ ಪ್ರಾಜ್ಞ ಇತ್ಯಾದ್ಯಾ ಶ್ರುತಯಃ**
**ಸ್ಫುಟಾಃ ॥೪೭॥**

ಅ:— ಅವನೇ ಒಬ್ಬ ನಿತ್ಯ–ಶುದ್ಧ–ಬುದ್ಧ ಮುಕ್ತ ಸ್ವಭಾವನಾದ ಆತ್ಮನನ್ನು ತಿಳಿಯಿರಿ. ಮತ್ತು ಬೇರೆ ಮಾತುಗಳನ್ನು ಬಿಟ್ಟುಬಿಡಿರಿ. (ಮುಂಡಕೋಪನಿಷತ್) ಮುಮುಕ್ಷುವು ವಾಣಿಯನ್ನು ಮನದಲ್ಲಿ ಅಡಗಿಸಬೇಕು. (ಕಾಠಕೋಪನಿಷತ್) ಹೀಗೆ ಬೇರೆ ಬೇರೆ ಶ್ರುತಿಗಳು ಅದೇ ಮಾತನ್ನು ಸ್ಪಷ್ಟವಾಗಿ ಹೇಳುವವು.

ಇನ್ನು ಅಶಾಸ್ತ್ರೀಯ ದ್ವೈತದ ಒಳಭೇದಗಳನ್ನು ಹೇಳುತ್ತಾರೆ.

**ಅಶಾಸ್ತ್ರೀಯಮಪಿ ದ್ವೈತಂ ತೀವ್ರಂ ಮಂದಮಿತಿ ದ್ವಿಧಾ ।**
**ಕಾಮ-ಕ್ರೋಧಾದಿಕಂ ತೀವ್ರಂ ಮನೋರಾಜ್ಯಂ**
**ತಥೇತರತ್ ॥೪೮॥**

ಅ:— ಶಾಸ್ತ್ರವಿಚಾರಕ್ಕೆ ಸಮ್ಮತವಲ್ಲದ ದ್ವೈತವು ಎರಡು ಬಗೆಯದಾಗಿದೆ. ತೀವ್ರ ಹಾಗೂ ಮಂದವೆಂದು. ಆಶೆ–ಸಿಟ್ಟು ಮೊದಲಾದವು ತೀವ್ರ. ವಿಷಯಸುಖದ ಹಂಬಲಿಕೆ ಮಂದ.

ಶಾಸ್ತ್ರೀಯದಂತೆಯೇ ಇದನ್ನು ಕೂಡ ಜ್ಞಾನಾನಂತರ ತ್ಯಾಗ ಮಾಡಬೇಕೇ ?

**ಉಭಯಂ ತತ್ತ್ವಬೋಧಾತ್ ಪ್ರಾಙ್ನಿವಾರ್ಯಂ ಬೋಧ-**
**ಸಿದ್ಧಯೇ ।**
**ಶಮಃ ಸಮಾಹಿತತ್ವಂ ಚ ಸಾಧನೇಷು ಶ್ರುತಂ ಯತಃ ॥೪೯॥**

ಅ:— ಅವೆರಡನ್ನೂ ತತ್ವಬೋಧವು ಮೈಗೂಡುವದಕ್ಕೆ ಮೊದಲು ಬಿಟ್ಟುಬಿಡಬೇಕು. ಯಾಕಂದರೆ ಆತ್ಮಸಾಕ್ಷಾತ್ಕಾರ ವಿಷಯದಲ್ಲಿ ಅಂತರಿಂದ್ರಿಯ ನಿಗ್ರಹವೂ, ಮನಸ್ಸಿನ ಏಕಾಗ್ರತೆಯೂ ಸಾಧನಗಳೆಂದು ಹೇಳಿದೆ.

ಜ್ಞಾನಾನಂತರ್ಕ ಕಾಮಾದಿ ಅಶಾಸ್ತ್ರೀಯಗಳನ್ನು ಸ್ವೀಕರಿಸಬಹುದೇ?

**ಬೋಧಾದೂರ್ಧ್ವಂ ಚ ತತ್ ಹೇಯಂ ಜೀವನ್ಮುಕ್ತಿ ಪ್ರಸಿದ್ಧಯೇ ।**
**ಕಾಮಾದಿಕ್ಲೇಶ ಬಂಧೇನ ಯುಕ್ತಸ್ಯ ನ ಹಿ ಮುಕ್ತತಾ ॥೫೦॥**

ಅ:— ಬೋಧವಾದಮೇಲೆಯೂ ಪರಮಸುಖರೂಪವಾದ ಜೀವನ್ಮುಕ್ತಿಯನ್ನು ಅನುಭವಿಸುವದಕ್ಕೆ ಆ ಕಾಮಾದಿಗಳನ್ನು ಬಿಡಲೇಬೇಕು. ಯಾಕಂದರೆ ಕಾಮಾದಿಗಳಿಂದ ಚಂಚಲನಾಗಿ ದುಃಖವನ್ನನುಭವಿಸುತ್ತಿರುವವನಿಗೆ ಮುಕ್ತತೆ (ಬಿಡುಗಡೆ) ಯು ಎಂದಿಗೂ ದೊರೆಯಲಾರದು.

ಹುಟ್ಟು-ಸಾವುಗಳಿಂದ ಕೂಡಿದ ಸಂಸಾರದಿಂದ ನೋವು ಪಡೆದ ಸಾಧಕನಿಗೆ ಶಾಶ್ವತವಾದ ವಿದೇಹ ಮುಕ್ತಿ ದೊರೆತರಾಯಿತು. ಶರೀರವಿರುವವರೆಗೆ ಉಳಿಯುವ ಜೀವನ್ಮುಕ್ತಿಯಿಂದೇನು ?

**ಜೀವನ್ಮುಕ್ತಿರಿಯಂ ಮಾ ಭೂಜ್ಜನ್ಮಾಭಾವೇ ತ್ವಹಂ ಕೃತೀ ।**
**ತರ್ಹಿ ಜನ್ಮಾಪಿ ತೇಽಸ್ತ್ವೇವ ಸ್ವರ್ಗಮಾತ್ರಾತ್ ಕೃತೀ ಭವಾನ್ ॥೫೧॥**

ಅ:— ನಿಮ್ಮ ಜೀವನ್ಮುಕ್ತಿ ದೊರೆಯದಿದ್ದರೆ ಹೋಗಲಿ. ನನಗೆ ಹುಟ್ಟು-ಸಾವು ತಪ್ಪಿದವಲ್ಲ ಸಾಕು ಎಂದರೆ ಒಳ್ಳೇದು. ನಿನಗೆ ಜನ್ಮ ಬಂದರಾದರೂ ಏನು ? ಯಾಕಂದರೆ ಕೇವಲ ಸ್ವರ್ಗಪ್ರಾಪ್ತಿಯಿಂದಲೂ ನೀನು ಕೃತಕೃತ್ಯನಾಗುವೆ.

(ಕಾಮಾದಿಗಳ ತ್ಯಾಗದಿಂದ ಮಾತ್ರ ಮುಕ್ತಿಯು ದೊರೆಯುವದೆಂದು ಸಿದ್ಧವಾಗಿದೆಯಷ್ಟೇ ? ಹಾಗೆ ಬಿಟ್ಟಿದ್ದಾದರೆ ಭೋಗಿಸಲು ಐಹಿಕ ವಿಷಯಗಳಲ್ಲಿ ಆಸ್ಥೆಯು ಉಳಿಯುವದಿಲ್ಲ. ಆದುದರಿಂದ ನಮಗೆ ಜೀವನ್ಮುಕ್ತಿ ಸಿಗದಿದ್ದರೆ ಹೋಗಲಿ. ಹುಟ್ಟು-ಸಾವು ತಪ್ಪಿದರೆ (ವಿದೇಹಮುಕ್ತಿ) ಸಾಕು ಎನ್ನಬಹುದಾಗಿದೆ. ಆದರೆ ಇಲ್ಲಿಯೂ ಒಂದು ಹಾನಿ ಇದೆ. ಏನಂದರೆ

ವಿದೇಹಮುಕ್ತಿಯನ್ನು ಅಪೇಕ್ಷಿಸುವವರು ಪಾರಲೌಕಿಕ ಭೋಗಗಳನ್ನು ಬಿಡಬೇಕಾಗುವದು. ಜೀವನ್ಮುಕ್ತಿ ಬೇಕಾದರೆ ಇಹಲೌಕಿಕಭೋಗ ತ್ಯಾಗ. ವಿದೇಹಮುಕ್ತಿಯಲ್ಲಿ ಪಾರಲೌಕಿಕ ಭೋಗತ್ಯಾಗ. ಈ ಎರಡು ವಿಧದ ಭೋಗ ತ್ಯಾಗಕ್ಕೆ ಅಂಜುವ ನೀನು, ಬರಿ ಸ್ವರ್ಗಸಿಕ್ಕರೆ ಸಾಕು ಎಂದೂ ಹೇಳಬಹುದು ಎಂಬ ಭಾವವು.)

ಹೀಗಂದರೆ ನೀನು-

**ಕ್ಷಯಾತಿಶಯ ದೋಷೇಣ ಸ್ವರ್ಗೋ ಹೇಯೋ ಯದಾತದಾ।**
**ಸ್ವಯಂ ದೋಷತಮಾತ್ಮಾಯಂ ಕಾಮಾದಿಃ ಕಿಂ ನ ಹೀಯತೇ ॥೩೨॥**

ಅ:— ಸ್ವರ್ಗ ಸುಖವು ಪುಣ್ಯತೀರಿದ ನಂತರ ಇಲ್ಲದಂತಾಗುತ್ತದೆ. (ಕ್ಷಯದ ವಿವರಣೆ) ಮತ್ತು ಅದಕ್ಕಿಂತ ಹೆಚ್ಚಿನ ಸುಖೋಪಭೋಗಗಳಿವೆ. (ಅತಿಶಯದ ವಿವರಣೆ) ಹೀಗೆ ಎರಡು ದೋಷಗಳಿಂದ ಕೂಡಿರುವುದರಿಂದ ಅದು ಬೇಡವೆನ್ನುವದಾದರೆ, ಮೂರ್ತಿಮಂತದೋಷಗಳ ಪುಂಜವಾದ (ಹಾಗೂ ಪುರುಷಾರ್ಥನಾಶಕವಾದ) ಕಾಮವೇ ಮೊದಲಾದ ತೀವ್ರ-ಮಂದ ಪ್ರಪಂಚವು ಬಿಡತಕ್ಕದ್ದಲ್ಲವೇ ?

ಆರೋಗ್ಯಶಾಲಿಯಾದಮೇಲೆ ಪಥ್ಯವೇಕೆ ? ಎಂದಂತೆ ಕಾಮಾದಿಗಳನ್ನು ಬಿಡಬೇಕೆಂಬ ಹಟವೇಕೆ ?

**ತತ್ತ್ವಂಬುದ್ಧ್ವಾಽಪಿ ಕಾಮಾದೀನ್ನಿಃಶೇಷಂ ನ ಜಹಾಸಿ ಚೇತ್।**
**ಯಥೇಷ್ಟಾಚರಣಂ ತೇ ಸ್ಯಾತ್ ಕರ್ಮಶಾಸ್ತ್ರಾತಿ ಲಂಘಿನಃ ॥೩೩॥**

ಅ:— ತತ್ವವನ್ನು ತಿಳಿದಮೇಲೆಯೂ ಕಾಮಾದಿಗಳನ್ನು ಸಂಪೂರ್ಣ ತ್ಯಾಗಮಾಡಲಾರೆಯಾದರೆ- ವಿಧಿ-ನಿಷೇಧರೂಪವಾದ ಶಾಸ್ತ್ರವನ್ನು ಉಲ್ಲಂಘಿಸಿದ ನಿನ್ನಿಂದ ಮನಸೋಕ್ತ ಆಚರಣೆಯಾಗುವದು.

(ನಾನು 'ತತ್ವವನ್ನು ತಿಳಿದವನು' ಎಂಬ ಅಭಿಮಾನದಿಂದ ಕರ್ಮಶಾಸ್ತ್ರವನ್ನು ಮೀರಿ ಕಾಮಾದಿಗಳಿಗೆ ವಶನಾಗುವದರಿಂದ ನೀನು ಮನಸ್ಸಿಗೆ ಬಂದಂತೆ ನಡೆಯುವವನಾಗುವೆ ಎಂದು ಭಾವವು.)

ಮನಸೋಕ್ತ ಆಚರಣೆಯಾದರೆ ತಪ್ಪೇನು ?

**ಬುದ್ಧಾದ್ವೈತ ಸ್ವತತ್ವಸ್ಯ ಯಥೇಷ್ಟಾಚರಣಂ ಯದಿ ।**
**ಶುನಾಂ ತತ್ವದೃಶಾಂ ಚೈವ ಕೋ ಭೇದೋಽಶುಚಿಭಕ್ಷಣೇ॥೫೪॥**

ಅ:— ತಾನೇ ತಾನಾದ ಬ್ರಹ್ಮವೊಂದೇ ನಿಜ ಎಂದು ತಿಳಿದಿದ್ದರೂ ಕೂಡ ಒಂದು ವೇಳೆ ಮನಸ್ಸಿಗೆ ಬಂದಂತೆ ನಡೆಯುವದಾದರೆ ನಾಯಿಗೂ, ತತ್ವ ತಿಳಿದವನಿಗೂ ಹೊಲಸು ಪದಾರ್ಥ ತಿನ್ನುವ ವಿಷಯದಲ್ಲಿ ಭೇದವೇನು ?

(ಹೀಗೆ ಶ್ರೀ ಸುರೇಶ್ವರಾಚಾರ್ಯರು ನೈಷ್ಕರ್ಮ್ಯಸಿದ್ಧಿಯಲ್ಲಿ ಹೇಳಿದ್ದಾರೆ.)

ಹಾಗೆ ಆದರೂ ಕೆಡುಕೇನು ? ಎಂದರೆ ಇದೋ ನಿನ್ನ ಗೇಲಿ.

**ಬೋಧಾತ್ಪುರಾ ಮನೋದೋಷಮಾತ್ರಾತ್ ಕ್ಲಿಶ್ಯಾಸ್ಯಥಾ-ಧುನಾ ।**
**ಅಶೇಷಲೋಕನಿಂದಾ ಚೇತ್ಯಹೋ ತೇ ಬೋಧವೈಭ-ವಮ್ ॥೫೫॥**

ಅ:—ಜ್ಞಾನವಾಗುವದಕ್ಕಿಂತ ಮೊದಲು ಆಶೆಯೇ ಮೊದಲಾದ ಮನಸ್ಸಿನ ದೋಷಗಳಿಂದ ದುಃಖವನ್ನನುಭವಿಸುತ್ತಿದ್ದೆ. ಈಗ ಎಲ್ಲ ಜನರ ನಿಂದೆಯೂ ಕೂಡಿತು. ಅಹಾ, ನಿನ್ನ ಬೋಧವೈಭವವು ಎಂಥದು ?

(ಕಾಮಾದಿಗಳಿಂದ ಪಡುವ ಕಷ್ಟವೊಂದು ಮೊದಲಿತ್ತು. ಈಗ ಲೋಕ ನಿಂದೆ ಸಹಿಸುವ ಕಾಟವೊಂದು ಕೂಡಿತು.

ಹಾಗಾದರೆ ಏನು ಮಾಡಬೇಕು ?

**ವಿಡ್ವರಾಹಾದಿತುಲ್ಯತ್ವಂ ಮಾ ಕಾಂಕ್ಷೀಸ್ತತ್ವವಿದ್ಭವಾನ್ ।**
**ಸರ್ವಾಧೀದೋಷಸಂತ್ಯಾಗಾಲ್ಲೋಕೈಃ ಪೂಜ್ಯಸ್ವ ದೇವವತ್ ॥೫೬॥**

ಅ:—ನೀನು ತತ್ವವನ್ನು ತಿಳಿದವನು. ಆದುದರಿಂದ ಹೇಸಿಕೆ ತಿನ್ನುವ ಹಂದಿಯಂತಾಗಬೇಕೆಂದು ಅಪೇಕ್ಷಿಸಬೇಡ. ಬಯಕೆ ಮೊದಲಾದ ಬುದ್ಧಿಯ ದೋಷಗಳನ್ನೆಲ್ಲ ತ್ಯಜಿಸು. ಜನರಿಂದ ದೇವರಂತೆ ಪೂಜಿತನಾಗು.

ಕಾಮಾದಿಗಳನ್ನು ಬಿಡುವ ಉಪಾಯ ಹೇಳುತ್ತಾರೆ.

**ಕಾಮ್ಯಾದಿದೋಷದೃಷ್ಟ್ಯಾದ್ಯಾಃ ಕಾಮಾದಿತ್ಯಾಗಹೇತವಃ ।**
**ಪ್ರಸಿದ್ಧಾ ಮೋಕ್ಷಶಾಸ್ತ್ರೇಷು ತಾನನ್ವಿಷ್ಯ ಸುಖೀ ಭವ ॥೫೭॥**

ಅ:—ಬಯಸತಕ್ಕ ವಸ್ತುಗಳೆಲ್ಲ ಸ್ಥಿರವಾಗಿ ಉಳಿಯತಕ್ಕವಲ್ಲ ಹಾಗೂ ನಿಜವಾದ ತೃಪ್ತಿಯನ್ನು ಕೊಡತಕ್ಕವುಗಳಲ್ಲ ಎಂದು ಮೊದಲಾಗಿ ಅನೇಕ ಉಪಾಯಗಳು ಬಯಕೆ ಮೊದಲಾದವನ್ನು ಬಿಡುವದಕ್ಕೆ ಉಪಾಯಗಳೆಂದು ವೇದಾಂತಶಾಸ್ತ್ರದಲ್ಲಿ ಪ್ರಸಿದ್ಧವಾಗಿವೆ. ಅವುಗಳನ್ನು ಹುಡುಕಿ ತಿಳಿದು ಅನುಸರಿಸಿ ಸುಖಿಯಾಗು.

ಕಾಮಾದಿಗಳು ಅನರ್ಥಕಾರಿ. ಆದುದರಿಂದ ಬಿಡೋಣ. ಬರಿ ಮನೋರಾಜ್ಯಮಾಡಿದರೆ ತಪ್ಪೇನು ?

**ತ್ಯಜ್ಯತಾಮೇಷು ಕಾಮಾದಿರ್ಮನೋರಾಜ್ಯೇ ತು ಕಾ ಕ್ಷತಿಃ ।**
**ಅಶೇಷದೋಷಬೀಜತ್ವಾತ್ ಕ್ಷತಿರ್ಭಗವತೇರಿತಾ ॥೫೮॥**

ಅ:—ಕಾಮಾದಿಗಳನ್ನು ಬಿಡೋಣ. ಆದರೆ ಬರಿ ಮನೋರಾಜ್ಯ ಮಾಡಲಡ್ಡಿ ಏನು ? ಎಂದರೆ ಎಲ್ಲ ದೋಷಗಳ ಬೀಜವಾದ ಮನೋರಾಜ್ಯವು ಬಹಳ ಕೆಡುಕಾದುದೆಂದು ಶ್ರೀ ಕೃಷ್ಣನು ಹೇಳಿದ್ದಾನೆ.

(ಕಾಮಾದಿಗಳಂತೆ ಮನೋರಾಜ್ಯದಿಂದ ಕೂಡಲೇ ಅನರ್ಥಗಳು ಸಂಭವಿಸುವುದಿಲ್ಲವೆಂಬುದು ನಿಜ. ಆದರೆ ಪರಂಪರೆಯಿಂದ ಅವು ಸಂಭವಿಸುವವು.)

ಆ ಪರಂಪರೆ ಹೇಗೆಂಬುದಕ್ಕೆ ಶ್ರೀಕೃಷ್ಣನ ವಚನ.

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ।**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿ-**
**ಜಾಯತೇ ॥೫೯॥**

ಅ:—ವಿಷಯಗಳನ್ನು ಮನಸ್ಸಿನಲ್ಲಿ ಚಿಂತಿಸುವ ಪುರುಷನಿಗೆ ಅದರಲ್ಲಿ ಆಸಕ್ತಿ ಹುಟ್ಟುವದು. ಆಸಕ್ತಿಯಿಂದ ಆಶೆಯು ಪ್ರಬಲವಾಗುವದು. ಆಶೆಯಿಂದ ಕ್ರೋಧವು ಹುಟ್ಟುವದು.

**ಶಕ್ಯಂ ಜೇತುಂ ಮನೋರಾಜ್ಯಂ ನಿರ್ವಿಕಲ್ಪಸಮಾಧಿತಃ ।**
**ಸುಸಂಪಾದಃ ಕ್ರಮಾತ್ಸೋಽಪಿ ಸವಿಕಲ್ಪಸಮಾಧಿನಾ ॥೬೦॥**

ಅ:—ಈ ಮನೋರಾಜ್ಯವು ನಿರ್ವಿಕಲ್ಪ ಸಮಾಧಿಯೋಗದಿಂದ ಗೆಲ್ಲಲು ಸಾಧ್ಯವಿದೆ. ಈ ನಿರ್ವಿಕಲ್ಪ ಸಮಾಧಿಯನ್ನು ಸವಿಕಲ್ಪ ಸಮಾಧಿಯೋಗ ದಿಂದ ಕ್ರಮ ಕ್ರಮವಾಗಿ ಪಡೆಯಬಹುದು.

ಅಷ್ಟಾಂಗಯೋಗವನ್ನು ಅಭ್ಯಾಸಮಾಡುವವರಿಗೆ ಇದೆಲ್ಲ ಸಾಧ್ಯ. ಆದರೆ ಯೋಗಾಭ್ಯಾಸ ಮಾಡದವರು ಮನೋರಾಜ್ಯವನ್ನು ಹೇಗೆ ಗೆಲ್ಲಬೇಕು?

**ಬುದ್ಧತತ್ತ್ವೇನ ಧೀದೋಷಶೂನ್ಯೇನೈಕಾಂತವಾಸಿನಾ ।**
**ದೀರ್ಘಂ ಪ್ರಣವಮುಚ್ಚಾರ್ಯ ಮನೋರಾಜ್ಯಂ**
**ವಿಜೀಯತೇ ॥೬೧॥**

ಅ:—ಯಾರಿಗೆ ತತ್ತ್ವಜ್ಞಾನವಾಗಿರುವದೋ, ಯಾರ ಬುದ್ಧಿದೋಷ ಗಳೆಲ್ಲ ನಷ್ಟವಾಗಿರುವವೋ, ಯಾವನು ಏಕಾಂತಪ್ರಿಯನೋ, ಅಂಥವನು ದೀರ್ಘಪ್ರಣವೋಚ್ಚಾರ ಮಾಡಿ ಮನೋರಾಜ್ಯವನ್ನು ಗೆಲ್ಲುತ್ತಾನೆ.

**ಜಿತೇ ತಸ್ಮಿನ್‌ವೃತ್ತಿಶೂನ್ಯಃ ಮನಸ್ತಿಷ್ಠತಿ ಮೂಕವತ್ ।**
**ಏತತ್ಪದಂ ವಸಿಷ್ಠೇನ ರಾಮಾಯ ಬಹುಧೇರಿತಮ್ ॥೬೨॥**

ಅ:— ಆ ಮನೋರಾಜ್ಯವನ್ನು ಜಯಿಸಿದ ಮೇಲೆ ಮನಸ್ಸು ಮೂಕ ವಾಗಿ ಕ್ರಿಯಾಶೂನ್ಯವಾಗುತ್ತದೆ. ಈ ಅವಸ್ಥೆಯನ್ನು ವಸಿಷ್ಠರು ರಾಮನಿಗೆ ಅನೇಕಬಗೆಯಿಂದ ಹೇಳಿದ್ದಾರೆ.

ಆ ವಸಿಷ್ಠ ವಚನವನ್ನು ಉಲ್ಲೇಖಿಸುತ್ತಾರೆ.

**ದೃಶ್ಯಂ ನಾಸ್ತೀತಿ ಬೋಧೇನ ಮನಸೋ ದೃಶ್ಯಮಾರ್ಜನಮ್ ।**
**ಸಂಪನ್ನಂ ಚೇತ್ತದುತ್ಪನ್ನಾ ಪರಾ ನಿರ್ವಾಣನಿರ್ವೃತಿಃ ॥೬೩॥**

ಅ:—ಹೊರತೋರಿಕೆ ಯಾವುದೂ ಇಲ್ಲ ಎಂಬ ಜ್ಞಾನದಿಂದ ಮನಸ್ಸಿ ನೊಳಗಿನ ತೋರಿಕೆಗಳನ್ನೆಲ್ಲ ತೊಳೆದುಬಿಟ್ಟರೆ, ಆ ನಿರತಿಶಯ ಮೋಕ್ಷಸುಖವು ಹುಟ್ಟುವದು.

**ವಿಚಾರಿತಮಲಂ ಶಾಸ್ತ್ರಂ ಚಿರಮುದ್‌ಗ್ರಾಹಿತಂ ಮಿಥಃ ।**
**ಸತ್ಯಕ್ತ ವಾಸನಾನ್ಮೌನಾದೃತೇ ನಾಸ್ತ್ಯುತ್ತಮಂ ಪದಮ್ ॥೬೪॥**

ಅ:—ಶಾಸ್ತ್ರವಿಚಾರವನ್ನು ಸಾಕಷ್ಟು ಮಾಡಿದುದಾಯಿತು. ಗುರು- ಶಿಷ್ಯರ ಮಾತುಗಳ ರೂಪದಿಂದ ಪರಸ್ಪರ ಚರ್ಚಿಸಿದ್ದಾಯಿತು. ದೃಢಮೂಲ

ವಾದ ಬಯಕೆಗಳನ್ನು ಬಿಟ್ಟು ಮೌನವಾಗಿರುವುದಕ್ಕಿಂತ ಹೆಚ್ಚಿನ ಪುರುಷಾರ್ಥ ವಿಲ್ಲ ಎಂಬುದೇ ನಿಶ್ಚಯ.

ಹೀಗೆ ವೃತ್ತಿಶೂನ್ಯವಾದ ಚಿತ್ತವು ಪ್ರಾರಬ್ಧಕರ್ಮವಶದಿಂದ ಚಂಚಲವಾದರೆ ಅದನ್ನು ನಿಗ್ರಹಿಸುವ ಉಪಾಯವೇನು ?

**ವಿಕ್ಷಿಪ್ಯತೇ ಕದಾಚಿದ್ಧೀಃ ಕರ್ಮಣಾ ಭೋಗದಾಯಿನಾ ।**
**ಪುನಃ ಸಮಾಹಿತಾ ಸಾ ಸ್ಯಾತ್‌ತದೈವಾಭ್ಯಾಸ ಪಾಟವಾತ್ ॥೬೫॥**

ಅ:—ಭೋಗಗಳನ್ನು ಅನುಭವಿಸಹಚ್ಚುವ ಪ್ರಾರಬ್ಧದಿಂದ ಒಂದು ವೇಳೆ ಚಿತ್ತವು ಚಂಚಲವಾಗುತ್ತದೆ. ಆದರೆ ಎಷ್ಟೋದಿನ ಮಾಡಿದ ಅಭ್ಯಾಸ ಬಲದಿಂದ ಅದು ಮರಳಿ ತನ್ನ ಸ್ಥಾನದಲ್ಲಿಯೇ ನಿಲ್ಲಿಸಲಾಗುವದು.

ಯಾರ ಚಿತ್ತವು ಎಂದಿಗೂ ಚಂಚಲವಾಗುವದಿಲ್ಲವೋ ಅವರ ಬ್ರಹ್ಮಜ್ಞತ್ವವು ಔಪಚಾರಿಕ.

**ವಿಕ್ಷೇಪೋ ಯಸ್ಯ ನಾಸ್ತ್ಯಸ್ಯ ಬ್ರಹ್ಮವಿತ್ತ್ವಂ ನ ಮನ್ಯತೇ ।**
**ಬ್ರಹ್ಮೈವಾಯ ಮಿತಿ ಪ್ರಾಹುರ್ಮುನಯಃ ಪಾರದರ್ಶಿನಃ॥೬೬॥**

ಅ:—ಯಾರ ಮನಸ್ಸು ಚಂಚಲಗೊಳ್ಳುವದಿಲ್ಲವೋ, ಅಂಥವರಿಗೆ ಬ್ರಹ್ಮಜ್ಞಾನಿಗಳೆಂದು ಅನ್ನುವದುಕೂಡ ಪಂಡಿತರಿಗೆ ಮಾನ್ಯವಾಗದು. ಹಾಗಾದರೆ ಏನು ? ಎಂದರೆ ಅವನು ಬ್ರಹ್ಮವೇ ಎಂದು ವೇದಾಂತಪಾರಂಗತ ರಾದ ಮುನಿಗಳು ಹೇಳುವರು.

ಈ ವಿಷಯದಲ್ಲಿ ವಸಿಷ್ಠರ ವಚನ.

**ದರ್ಶನಾದರ್ಶನೇ ಹಿತ್ವಾ ಸ್ವಯಂ ಕೇವಲ ರೂಪತಃ।**
**ಯಸ್ತಿಷ್ಠತಿ ಸ ತು ಬ್ರಹ್ಮನ್ ಬ್ರಹ್ಮ ನ ಬ್ರಹ್ಮವಿತ್ ಸ್ವಯಮ್ ॥೬೭॥**

ಅ:—ಎಲೈ ಬ್ರಾಹ್ಮಣನೇ, ನಾನು ಬ್ರಹ್ಮವನ್ನು ಬಲ್ಲೆನು. (ಜ್ಞಾನ) ನಾನು ಬ್ರಹ್ಮವನ್ನು ಅರಿಯೆನು. (ಅಜ್ಞಾನ) ಎಂಬವುಗಳನ್ನು ಬಿಟ್ಟು ಯಾವನು ಸ್ವತಃ ಚೈತನ್ಯರೂಪನಾಗಿರುವನೋ, ಅವನು ಸ್ವತಃ ಬ್ರಹ್ಮವೇ ಸರಿ. ಬ್ರಹ್ಮನನ್ನು ತಿಳಿದವನು ಮಾತ್ರನಲ್ಲ.

ಉಪಸಂಹಾರ.

**ಜೀವನ್ಮುಕ್ತೇಃ ಪರಾ ಕಾಷ್ಠಾ ಜೀವದ್ವೈತ ವಿವರ್ಜನಾತ್ ।**
**ಲಭ್ಯತೇಽಸಾವತೋಽತ್ರೇದಮೀಶದ್ವೈತಾದ್ವಿವೇ-**
**ಚಿತಮ್ ॥೬೮॥**

ಅ:- ಹೀಗೆ ಜೀವನ್ಮುಕ್ತಿಯ ಪರಮಸೀಮೆಯು ಜೀವಸೃಷ್ಟಿಯನ್ನು ತ್ಯಜಿಸುವುದರಿಂದ ಮಾತ್ರ ದೊರೆಯುವದು. ಆದುದರಿಂದ ಇಲ್ಲಿ ಅದನ್ನು ಈ ಸೃಷ್ಟಿಯಿಂದ ಬೇರೆಮಾಡಿ ತೋರಿಸಲಾಯಿತು.

**ಇತಿ ಪಂಚದಶ್ಯಾಂ ದ್ವೈತವಿವೇಕಃ ॥**

## ದ್ವೈತವಿವೇಕ ಪ್ರಕರಣದ ಸಾರ.

ಇಲ್ಲಿ ಈಶನಿರ್ಮಿತ ಸೃಷ್ಟಿ (ದ್ವೈತ)ಯು ಯಾವುದು ? ಜೀವನಿರ್ಮಿತ ಯಾವುದು ? ಎಂಬುದನ್ನು ತಿಳಿಸುತ್ತಾರೆ.

ಈಶ್ವರನು ಮಾಯೆಯ ಸಹಾಯದಿಂದ ಈ ಸಕಲ ಸೃಷ್ಟಿಯನ್ನು ನಿರ್ಮಿಸುತ್ತಾನೆ. ಇದು ಬ್ರಹ್ಮಜ್ಞಾನಕ್ಕೆ ಯಾವಾಗಲು ಅಡ್ಡಿಯಾಗುವದಿಲ್ಲ. ಒಂದು ವೇಳೆ ಸಹಾಯಕವೇ ಎನ್ನಬಹುದು.

ಈ ಈಶ ಸೃಷ್ಟಿಯ ಆಶ್ರಯದಿಂದ ಜೀವನು ತನ್ನ ಮನೋವೃತ್ತಿಗಳ ಸಹಾಯದಿಂದ ತನಗೆ ಬೇಕಾದ ಭೋಗ್ಯರೂಪಗಳನ್ನು ಹುಟ್ಟಿಸಿಕೊಳ್ಳುತ್ತಾನೆ. ಈ ಜೀವಸೃಷ್ಟಿ ಮಾತ್ರ ಯಾವಾಗಲು ಬ್ರಹ್ಮಜ್ಞಾನಕ್ಕೆ ಪ್ರತಿಬಂಧಕವಾಗುವದರಿಂದ ಇದನ್ನು ತ್ಯಾಗಮಾಡಿ ಕಾಮ-ಕ್ರೋಧಗಳನ್ನು ಬಿಟ್ಟು ಜ್ಞಾನಪಡೆಯಬೇಕೆಂಬುದು ಪ್ರಕರಣದ ಸಾರವು.

....O....

# ೫ ಮಹಾವಾಕ್ಯ ವಿವೇಕಃ

ಮುಮುಕ್ಷುವಿಗೆ ಬ್ರಹ್ಮನೊಡನೆ ಒಂದಾಗುವದೇ ಮೋಕ್ಷಸಾಧನವು. ಆದುದರಿಂದ ಋಗ್ವೇದವೇ ಮೊದಲಾದ ನಾಲ್ಕು ವೇದಗಳಲ್ಲಿ ಪ್ರಸಿದ್ಧವಾದ

ನಾಲ್ಕು ಮಹಾ ವಾಕ್ಯಗಳನ್ನು ಕ್ರಮವಾಗಿ ಹೇಳುತ್ತಾರೆ. ಅದರಲ್ಲಿ ಮೊದಲು ಐತರೇಯ ಆರಣ್ಯಕದ "ಪ್ರಜ್ಞಾನಂ ಬ್ರಹ್ಮ" ಎಂಬ ಮಹಾವಾಕ್ಯದಲ್ಲಿಯ ಪ್ರಜ್ಞಾನಂ ಶಬ್ದದ ಅರ್ಥವನ್ನು ಹೇಳುತ್ತಾರೆ.

**ಯೇನೇಕ್ಷತೇ ಶೃಣೋತೀದಂ ಜಿಘ್ರತಿ ವ್ಯಾಕರೋತಿ ಚ ।**
**ಸ್ವಾದ್ವಸ್ವಾದೂ ವಿಜಾನಾತಿ ತತ್ಪ್ರಜ್ಞಾನಮುದೀರಿತಮ್ ॥೧॥**

ಅ:— ನೇತ್ರದ್ವಾರವಾಗಿ ಹೊರಬೀಳುವ ಅಂತಃಕರಣ ವೃತ್ತಿಯಲ್ಲಿ ಪ್ರತಿಬಿಂಬಿಸಿದ ಯಾವ ಚೈತನ್ಯದಿಂದ ನೋಡುವನೋ, ಯಾವದರಿಂದ ಕೇಳುವನೋ, ಯಾವದರಿಂದ ಮೂಸುವನೋ, ಯಾವದರಿಂದ ಮಾತಾಡುವನೋ, ಯಾವದರಿಂದ ಸಿಹಿ-ಕಹಿಗಳನ್ನು ತಿಳಿಯುವನೋ, ಆ ಚೈತನ್ಯಕ್ಕೆ ಪ್ರಜ್ಞಾನವೆಂದು ಹೇಳುವರು.

ಇನ್ನು ಬ್ರಹ್ಮ ಶಬ್ದದ ಅರ್ಥವನ್ನು ಹೇಳುತ್ತಾರೆ.

**ಚತುರ್ಮುಖೇಂದ್ರದೇವೇಷು ಮನುಷ್ಯಾಶ್ವಗವಾದಿಷು ।**
**ಚೈತನ್ಯಮೇಕಂ ಬ್ರಹ್ಮಾತಃ ಪ್ರಜ್ಞಾನಂ ಬ್ರಹ್ಮ ಮಯ್ಯಪಿ ॥೨॥**

ಅ:— ಬ್ರಹ್ಮದೇವ-ಇಂದ್ರ-ದೇವತೆಗಳು ಮುಂತಾದ ಶ್ರೇಷ್ಠರ ಶರೀರಗಳಲ್ಲಿ, ಮನುಷ್ಯನೇ ಮೊದಲಾದ ಮಧ್ಯಮರಲ್ಲಿ, ಕುದುರೆ-ಆಕಳು ಮಂತಾದ ಕನಿಷ್ಠ ಪ್ರಾಣಿಗಳಲ್ಲಿ ಯಾವ ಚೈತನ್ಯ ವ್ಯಾಪಿಸಿರುವದೋ ಅದು ಬ್ರಹ್ಮವು. ಹೀಗೆ ಎಲ್ಲೆಲ್ಲಿಯೂ ವ್ಯಾಪಿಸಿರುವ ಪ್ರಜ್ಞಾನವು ಬ್ರಹ್ಮವಾದುದರಿಂದ ಅದು ನನ್ನಲ್ಲಿಯೂ ಇರುತ್ತದೆ.

ಇನ್ನು ಯಜುರ್ವೇದ ಹಾಗೂ ಬ್ರಹದಾರಣ್ಯಕದಲ್ಲಿರುವ 'ಅಹಾಂಬ್ರಹ್ಮಾಸ್ಮಿ' ಎಂಬ ವಾಕ್ಯಾರ್ಥವನ್ನು ಹೇಳುವಾಗ ಮೊದಲು 'ಅಹಂ, ಶಬ್ದದ ಅರ್ಥವನ್ನು ಹೇಳುತ್ತಾರೆ.

**ಪರಿಪೂರ್ಣಃ ಪರಾತ್ಮಾಸ್ಮಿನ್ದೇಹೇ ವಿದ್ಯಾಧಿಕಾರಿಣಿ ।**
**ಬುದ್ಧೇಃ ಸಾಕ್ಷಿತಯಾ ಸ್ಥಿತ್ವಾ ಸ್ಫುರನ್ನಹಮಿತೀರ್ಯತೇ ॥೩॥**

ಅ:—ಎಲ್ಲಕಡೆಗೆ ಓತ ಪ್ರೋತವಾಗಿ ತುಂಬಿಕೊಂಡಿರುವ ಅಖಂಡನಾದ ಪರಮಾತ್ಮನು ಮಾಯೆಯಿಂದ ನಿರ್ಮಿತವಾದ ಜಗತ್ತಿನಲ್ಲಿ ಜ್ಞಾನ ಸಂಪಾದನೆಗೆ ತಕ್ಕ ಮನುಷ್ಯಾದಿದೇಹಗಳಲ್ಲಿ ಬುದ್ಧಿ ವ್ಯಾಪಾರಗಳಿಗೆ ಸಾಕ್ಷಿಯಾಗಿ

ಇದ್ದು ಪ್ರಕಾಶಮಾನನಾಗುತ್ತಿರುವ ಚೈತನ್ಯಕ್ಕೆ ಅಹಂ ಎಂದರೆ ನಾನು ಎಂದು ಹೇಳುವರು.

ಈಗ ಅದೇ ಮಹಾವಾಕ್ಯದಲ್ಲಿಯ 'ಬ್ರಹ್ಮ' ಶಬ್ದದ ಅರ್ಥವನ್ನು ಹೇಳುತ್ತಾರೆ.

**ಸ್ವತಃ ಪೂರ್ಣಃ ಪರಾತ್ಮಾತ್ರ ಬ್ರಹ್ಮಶಬ್ದೇನ ವರ್ಣಿತಃ ।**
**ಅಸ್ಮೀತ್ಯೈಕ್ಯಪರಾಮರ್ಶಸ್ತೇನ ಬ್ರಹ್ಮ ಭವಾಮ್ಯಹಮ್ ॥೪॥**

ಅ:— ಸ್ವತಃ ಪರಿಪೂರ್ಣನಾದ ಪರಮಾತ್ಮನನ್ನೇ ಈ ವಾಕ್ಯದಲ್ಲಿ ಬ್ರಹ್ಮ ಶಬ್ದದಿಂದ ವರ್ಣಿಸಿದ್ದಾರೆ. 'ಅಸ್ಮಿ' ಎಂಬ ಇದ್ದೇನೆ ಎಂಬುದರಿಂದ ಎರಡೂ ಒಂದೇ ಎಂಬ ಐಕ್ಯವು ತೋರುವದು. ಆದುದರಿಂದ ನಾನು ಬ್ರಹ್ಮನಾಗುತ್ತೇನೆ.

ಇಲ್ಲಿ ಸಾಮ ವೇದದ ಛಾಂದೋಗ್ಯದಲ್ಲಿರುವ 'ತತ್ವಮಸಿ' ಎಂಬ ವಾಕ್ಯದಲ್ಲಿಯ ತತ್ (ಅದು) ಶಬ್ದದ ಲಕ್ಷ್ಯಾರ್ಥವನ್ನು ಹೇಳುತ್ತಾರೆ.

**ಏಕಮೇವಾದ್ವಿತೀಯಂ ಸನ್ನಾಮರೂಪ ವಿವರ್ಜಿತಮ್ ।**
**ಸೃಷ್ಟೇಃ ಪುರಾಽಧುನಾಪ್ಯಸ್ಯ ತಾದೃಕ್ತ್ವಂ**
**ತದಿತೀರ್ಯತೇ ॥೫॥**

ಅ:— ಜಗತ್ತು ಹುಟ್ಟುವದಕ್ಕೆ ಮೊದಲು ನಾಮ-ರೂಪಗಳಿಲ್ಲದ, ಅದ್ವಿತೀಯ ಒಂದೇ 'ಸತ್' ಇದ್ದಿತು. ಈಗ ಕೂಡ ಅದರ ಸ್ವರೂಪವು ಹಾಗೇ ಇದೆ ಎಂಬುದನ್ನು 'ತತ್' ಎಂಬ ಪದದಿಂದ ಹೇಳುತ್ತಾರೆ.

ತ್ವಂ (ನೀನು) ಶಬ್ದದ ಲಕ್ಷ್ಯಾರ್ಥವನ್ನು ಹೇಳುತ್ತಾರೆ.

**ಶ್ರೋತುರ್ದೇಹೇಂದ್ರಿಯಾತೀತಂ ವಸ್ತ್ವತ್ರ ತ್ವಂಪದೇರಿತಮ್ ।**
**ಏಕತಾ ಗ್ರಾಹ್ಯತೇಽಸೀತಿ ತದೈಕ್ಯಮನುಭೂಯತಾಮ್ ॥೬॥**

ಅ:— ವೇದಾಂತಾರ್ಥವನ್ನು ಶ್ರವಣ ಮಾಡುವವನ ಸ್ಥೂಲ-ಸೂಕ್ಷ್ಮ ಕಾರಣ ದೇಹಗಳಿಗೂ, ಇಂದ್ರಿಯಗಳಿಗೂ ಆಚೆಗಿದ್ದು ಸಾಕ್ಷಿ ಎನಿಸುವ ಸದ್ವಸ್ತುವೇ ತ್ವಂ (ನೀನು) ಪದದ ಅರ್ಥ. ಅಸಿ (ಆಗಿದ್ದೀ) ಪದದಿಂದ ಶ್ರುತಿಯು ಅವೆರಡರ ಐಕ್ಯವನ್ನು ಗ್ರಹಣ ಮಾಡಿಸಿತು. ಆದುದರಿಂದ ಐಕ್ಯವನ್ನು ಅನುಭವಿಸಲಿ.

ಅಥರ್ವವೇದ 'ಅಯಂ ಆತ್ಮಾ ಬ್ರಹ್ಮ' (ಈ ಆತ್ಮನು ಬ್ರಹ್ಮನು) ಎಂಬ ವಾಕ್ಯಾರ್ಥವನ್ನು ಹೇಳುವಾಗ 'ಈ ಆತ್ಮನು' ಎಂಬುದರ ಅರ್ಥವನ್ನು ವಿವರಿಸುತ್ತಾರೆ.

**ಸ್ವಪ್ರಕಾಶಾಪರೋಕ್ಷತ್ವಮಯಮಿತ್ಯುಕ್ತಿತೋ ಮತಮ್ ।**
**ಅಹಂಕಾರಾದಿದೇಹಾಂತಾತ್ಪ್ರತ್ಯಗಾತ್ಮೇತಿ ಗೀಯತೇ ॥೭॥**

ಅ:— ಈ ಎಂಬ ಶಬ್ದದಿಂದ ತನ್ನ ಬೆಳಕಿನಿಂದಲೇ ಬೆಳಗುತ್ತ ಪ್ರತ್ಯಕ್ಷವಾಗಿರುವದೆಂದು ಶ್ರುತಿಯ ಮತವು. ಪ್ರಾಣ–ಮನಸ್ಸು–ಇಂದ್ರಿಯ–ದೇಹ ಮೊದಲಾದವುಗಳಿಗೆ ಆಧಾರವಾಗಿದ್ದು, ಅವೆಲ್ಲವುಗಳಿಗೆ ಸಾಕ್ಷಿಯಾಗಿರುವ ಒಳಗಿರುವ ಚೈತನ್ಯವು ಆತ್ಮನೆಂದು ಹೆಸರು ಪಡೆಯುವದು.

ಬ್ರಹ್ಮ ಶಬ್ದವು ಬ್ರಾಹ್ಮಣಜಾತಿ ಮುಂತಾದ ಅರ್ಥಗಳಲ್ಲಿಯೂ ಪ್ರಯೋಗವಾಗುತ್ತದೆ. ಆದುದರಿಂದ ಇಲ್ಲಿ ಅಪೇಕ್ಷಿತವಾದ ಅರ್ಥವನ್ನು ಹೇಳುತ್ತಾರೆ.

**ದೃಶ್ಯಮಾನಸ್ಯ ಸರ್ವಸ್ಯ ಜಗತಸ್ತತ್ವಮೀರ್ಯತೇ ।**
**ಬ್ರಹ್ಮಶಬ್ದೇನ ತದ್ಬ್ರಹ್ಮ ಸ್ವಪ್ರಕಾಶಾತ್ಮರೂಪಕಮ್ ॥೮॥**

ಅ:— ಕಾಣುವ ಎಲ್ಲ ಜಗತ್ತಿನ ಆಧಾರಭೂತವಾದ ತತ್ವರೂಪ ಚೈತನ್ಯಕ್ಕೆ ಬ್ರಹ್ಮವೆನ್ನುವರು. ಆ ಬ್ರಹ್ಮವು ತನ್ನ ಬೆಳಕಿನಿಂದ ಬೆಳಗುವದಾಗಿದ್ದು ಆತ್ಮನೂ ಅದರಂತೆಯೇ ಇರುತ್ತಾನೆ.

**ಇತಿ ಪಂಚದಶ್ಯಾಂ ಮಹಾವಾಕ್ಯ ವಿವೇಕಃ ॥**

## ಮಹಾವಾಕ್ಯ ಪ್ರಕರಣದ ಸಾರ

ವೇದಾಂತ ತತ್ವನಿರ್ಣಯದಲ್ಲಿ ಪ್ರಮಾಣಗ್ರಂಥಗಳೆನಿಸಿದ ಚತುರ್ವೇದಗಳಿಂದ ಪ್ರಸಿದ್ಧವಾದ ನಾಲ್ಕು ಮಹಾವಾಕ್ಯಗಳನ್ನು ಹೇಳಿ ಅವುಗಳ ಅರ್ಥವನ್ನು ವಿವರಿಸಿದ್ದಾರೆ.

ಬ್ರಹ್ಮ ಮತ್ತು ಆತ್ಮ ಇವರ ಐಕ್ಯವಿದೆ ಎಂದು ಸಾಕ್ಷಾತ್ತಾಗಿ ಜ್ಞಾನವನ್ನು ಪಡೆಯುವದೇ ಬಿಡುಗಡೆ (ಮೋಕ್ಷ) ಬೇಕೆಂಬುವವರಿಗೆ ಸಾಧನವಾಗಿದೆ.

ಈ ಸಾಧನವು ಚತುರ್ವೇದಗಳಿಗೂ ಸಮ್ಮತವಾಗಿರುವದೆಂದು ಈ ಪ್ರಕರಣದಲ್ಲಿ ಸಿದ್ಧ ಮಾಡಿ ತೋರಿಸಿದ್ದಾಗಿದೆ.

—○—

# ೬ ಚಿತ್ರದೀಪಃ

ಪರಮಾತ್ಮನಲ್ಲಿ ಆರೋಪಿಸಿದ ಸ್ಥಿತಿಯನ್ನು ದೃಷ್ಟಾಂತಪೂರ್ವಕವಾಗಿ ಹೇಳತೊಡಗುತ್ತಾರೆ.

**ಯಥಾಚಿತ್ರಪಟೇ ದೃಷ್ಟಮವಸ್ಥಾನಾಂ ಚತುಷ್ಟಯಮ್ ।**
**ಪರಮಾತ್ಮನಿ ವಿಜ್ಞೇಯಂ ತಥಾವಸ್ಥಾಚತುಷ್ಟಯಮ್ ॥೧॥**

ಚಿತ್ರವನ್ನು ಬರೆದ ಬಟ್ಟೆಯಲ್ಲಿ ಹೇಗೆ ನಾಲ್ಕು ಅವಸ್ಥೆಗಳು ಕಂಡುಬರುವವೋ ಹಾಗೆ ಪರಮಾತ್ಮನಲ್ಲಿಯಾದರೂ ನಾಲ್ಕು ಅವಸ್ಥೆಗಳಿವೆ ಎಂದು ತಿಳಿಯಬೇಕು.

ದೃಷ್ಟಾಂತವಾದ ಪಟ (ಅರಿವೆ) ದಾರ್ಷ್ಟಾಂತಿಕನಾದ ಇವರಲ್ಲಿ ಕಂಡುಬರುವ ನಾಲ್ಕು ಅವಸ್ಥೆಗಳಾವವು ? ಎಂಬುದನ್ನು ಹೇಳುತ್ತಾರೆ.

**ಯಥಾ ಧೌತೋ ಘಟ್ಟಿತಶ್ಚ ಲಾಂಛಿತೋ ರಂಜಿತಃ ಪಟಃ ।**
**ಚಿದಂತರ್ಯಾಮೀ ಸೂತ್ರಾತ್ಮಾ ವಿರಾಟ್ ಚಾತ್ಮಾ**
**ತಥೇರ್ಯತೇ ॥೨॥**

ಚಿತ್ರವನ್ನು ಬರೆದ ಬಟ್ಟೆಯಲ್ಲಿ ಒಗೆದದ್ದು, ದಪ್ಪಗೊಳಿಸಿದ್ದು, ರೇಖೆಗಳನ್ನು ತೆಗೆದದ್ದು, ಬಣ್ಣವನ್ನು ತುಂಬಿದ್ದು, ಎಂದು ಹೇಗೆ ನಾಲ್ಕು ವಿಧವೋ ಅದರಂತೆ ಆತ್ಮನಲ್ಲಿ ಚಿತ್–ಅಂತರ್ಯಾಮಿ–ಸೂತ್ರಾತ್ಮ–ವಿರಾಟ್ ಎಂದು ಅವಸ್ಥೆಗಳು ತೋರುತ್ತವೆ.

ದೃಷ್ಟಾಂತವಾದ ಅರಿವೆಯ ಸ್ವರೂಪಗಳು ಕ್ರಮವಾಗಿ.

**ಸ್ವತಃ ಶುಭ್ರೋಽತ್ರ ಧೌತಃ ಸ್ಯಾದ್ಘಟ್ಟಿತೋಽನ್ನವಿಲೇಪನಾತ್ ।**
**ಮಷ್ಯಾಕಾರೈರ್ಲಾಂಛಿತಃ ಸ್ಯಾದ್ರಂಜಿತೋ ವರ್ಣ-**
**ಪೂರಣಾತ್ ॥೩॥**

ಅರಿವೆಯ ವಿಷಯವನ್ನು ತೆಗೆದುಕೊಂಡರೆ– ಸ್ವಚ್ಛವಾಗಿರುವದೇ ಒಗೆದದ್ದು. ಅದಕ್ಕೆ ಅನ್ನದ ಗಂಜಿಯನ್ನು ಬಳಿದದ್ದೇ ದಪ್ಪಗೊಳಿಸಿದ್ದು. ಮಸಿಯಿಂದ ಆಕಾರಗಳನ್ನು ರೇಖಿಸಿದ್ದೇ ಗುರುತು ಮಾಡಿದ್ದು. ಅದರಲ್ಲಿ ಯೋಗ್ಯವಾಗಿ ಬಣ್ಣ ತುಂಬಿದ್ದೇ ಬಣ್ಣದಿಂದ ಕೂಡಿದ್ದು.

ಇನ್ನು ದಾರ್ಷ್ಟಾಂತಿಕ ಆತ್ಮನ ನಾಲ್ಕು ಅವಸ್ಥೆಗಳು.

**ಸ್ವತಶ್ಚಿದಂತರ್ಯಾಮೀ ತು ಮಾಯಾವೀ ಸೂಕ್ಷ್ಮಸೃಷ್ಟಿತಃ ।**
**ಸೂತ್ರಾತ್ಮಾ ಸ್ಥೂಲಸೃಷ್ಟ್ಯೈವ ವಿರಾಡಿತ್ಯುಚ್ಯತೇ ಪರಃ ॥೪॥**

ಮಾಯೆಯ ಮತ್ತು ಅದರ ಕಾರ್ಯದ ಸಂಬಂಧಗೊಳ್ಳದೇ ಇರುವ ಶುದ್ಧ ಸ್ವರೂಪವೇ ಚಿತ್. ಅವನೇ ಮಾಯೆಯ ಸಂಬಂಧಗೊಂಡಾಗ ಅಂತರ್ಯಾಮಿ. ಅವನೇ ಸೂಕ್ಷ್ಮ ಶರೀರಗಳ ಒಟ್ಟಿನ ಅಭಿಮಾನ ತಾಳಿದಾಗ ಸೂತ್ರಾತ್ಮ. ಅವನೇ ಸ್ಥೂಲ ಶರೀರಗಳ ಒಟ್ಟಿನ ಅಭಿಮಾನಗೊಂಡಾಗ ವಿರಾಟ್.

ಹೀಗೆ ಪರಮಾತ್ಮನನ್ನು ಚಿತ್ರ ಬರೆದ ಬಟ್ಟೆಗೆ ಹೋಲಿಸುವದಾದರೆ ಅವನಲ್ಲಿ ಚಿತ್ರಗಳು ತೋರಬೇಕಾಯಿತು. ಹಾಗಾದರೆ ಅವು ಯಾವವು ?

**ಬ್ರಹ್ಮಾದ್ಯಾಃ ಸ್ತಂಬಪರ್ಯಂತಾಃ ಪ್ರಾಣಿನೋಽತ್ರ ಜಡಾ ಅಪಿ।**
**ಉತ್ತಮಾಧಮಭಾವೇನ ವರ್ತಂತೇ ಪಟಚಿತ್ರವತ್ ॥೫॥**

ಬ್ರಹ್ಮದೇವನಿಂದ ಆರಂಭಮಾಡಿಕೊಂಡು ಸಣ್ಣ ಹುಳಗಳವರೆಗೆ ಹಾಗೂ ಜಡ ಪದಾರ್ಥಗಳು ಕೂಡ ಬಟ್ಟೆಯ ಮೇಲಿನ ಚಿತ್ರದಂತೆ ಮೇಲು-ಕೀಳೆನಿಸಿಕೊಂಡು ಇರುವವು.

ಬ್ರಹ್ಮಾದಿಗಳಿಗೆ ಚೇತನಭಾವವುಂಟಾಗಲು ಕಾರಣವೇನು ?

**ಚಿತ್ರಾರ್ಪಿತಮನುಷ್ಯಾಣಾಂ ವಸ್ತ್ರಾಭಾಸಾಃ ಪೃಥಕ್ಪೃಥಕ್ ।**
**ಚಿತ್ರಾಧಾರೇಣ ವಸ್ತ್ರೇಣ ಸದೃಶಾ ಇವ ಕಲ್ಪಿತಾಃ ॥೬॥**

ಚಿತ್ರದಲ್ಲಿ ಬರೆದ ಮನುಷ್ಯರಿಗೆ ಆ ಚಿತ್ರಕ್ಕೆ ಆಧಾರವೆನಿಸಿರುವ ಬಟ್ಟೆಯಂತೆಯೇ ಬೇರೆಬೇರೆ ಸುಳ್ಳು (ಅಭಾಸ) ಬಟ್ಟೆಗಳನ್ನು ಕಲ್ಪಿಸಿರುವರು. (ಆ ಬಟ್ಟೆಗಳು ಥಂಡಿ ಮೊದಲಾದವನ್ನು ನಿವಾರಿಸಲಾರವಾದುದರಿಂದ ಸುಳ್ಳು.)

**ಪೃಥಕ್ಪೃಥಕ್ ಚಿದಾಭಾಸಾಶ್ಚೈತನ್ಯಾಧ್ಯಸ್ತದೇಹಿನಾಮ್ ।**
**ಕಲ್ಪ್ಯಂತೇ ಜೀವನಾಮಾನೋ ಬಹುಧಾ ಸಂಸರಂತ್ಯಮೀ ॥೭॥**

ಇದರಂತೆ ಚೈತನ್ಯವೆಂಬ ಬಟ್ಟೆಯ ಮೇಲೆ ಆರೋಪಿತವಾದ ದೇವತೆಗಳು, ಮನುಷ್ಯ-ಪಶು-ಪಕ್ಷಿ ಮುಂತಾದ ಪ್ರಾಣಿಗಳಿಗೆ ಜೀವರೆಂದು ಹೆಸರುಳ್ಳ ಚಿದಾಭಾಸರನ್ನು (ಎಂದರೆ ಚೈತನ್ಯದಂತೆ ತೋರುವ ಚೈತನ್ಯದ ಪ್ರತಿಬಿಂಬ ಸ್ವರೂಪರನ್ನು) ಬೇರೆಬೇರೆಯಾಗಿ ಕಲ್ಪಿಸಿದ್ದಾಗಿದೆ. ಜಡಗಳಿಗೆ ಈ

ಕಲ್ಪನೆ ಇಲ್ಲ. ಯಾಕಂದರೆ ಈ ಪ್ರಾಣಿಶರೀರಗಳಲ್ಲಿದ್ದ ಜೀವರು ಹುಟ್ಟು ಸಾವುಗಳನ್ನು ಪಡೆಯುತ್ತ ತಿರು ತಿರುಗಿ ಸುತ್ತುತ್ತಿರುವರು. ಆದರೆ ಪರಮಾತ್ಮನಿಗೆ ಈ ಸುತ್ತುವಿಕೆ ಇಲ್ಲ.

—ಆದರೆ ಎಲ್ಲ ವಾದಿಗಳು ಹಾಗೂ ಸಾಮಾನ್ಯರು ಆತ್ಮನದೇ ಸಂಸಾರವೆನ್ನುತ್ತಾರೆ. ಅದರ ಕಾರಣವೇನು ?

**ವಸ್ತ್ರಾಭಾಸಸ್ಥಿತಾನ್ ವರ್ಣಾನ್ ಯದ್ವದಾಧಾರವಸ್ತ್ರಗಾನ್ ।**
**ವದಂತ್ಯಜ್ಞಾಸ್ತಥಾ ಜೀವಸಂಸಾರಂ ಚಿದ್ಗತಂ ವಿದುಃ ॥೮॥**

ತಿಳಿಗೇಡಿಗಳು ಚಿತ್ರದಲ್ಲಿ ಗೊಂಬೆಗಳಿಗೆ ಬರೆದ ಸುಳ್ಳು ಬಟ್ಟೆಯ ಬಣ್ಣಗಳನ್ನು ಅದರ ಆಧಾರವಾದ ಬಟ್ಟೆಯದೆಂದು ಹೇಳುವಂತೆ ಜೀವರ ಸುತ್ತುಹಾಕುವಿಕೆಯ ಸಂಸಾರವನ್ನು ಚೈತನ್ಯದ್ದೆಂದು ಹೇಳುವರು.

—ಬೆಟ್ಟ-ನದಿ ಮುಂ. ಗಳಿಗೆ ಚಿದಾಭಾಸದ ಕಲ್ಪನೆ ಇರುವದಿಲ್ಲ.

**ಚಿತ್ರಸ್ಥಪರ್ವತಾದೀನಾಂ ವಸ್ತ್ರಾಭಾಸೋ ನ ಲಿಖ್ಯತೇ ।**
**ಸೃಷ್ಟಿಸ್ಥಮೃತ್ತಿಕಾದೀನಾಂ ಚಿದಾಭಾಸಸ್ತಥಾ ನ ಹಿ ॥೯॥**

ಚಿತ್ರದಲ್ಲಿ ಬರೆದ ಬೆಟ್ಟ-ನದಿಗಳಿಗೆ ಸುಳ್ಳು ಬಟ್ಟೆಯನ್ನು ಬರೆಯುವದಿಲ್ಲ. ಅದರಂತೆ ಜಗತ್ತಿನಲ್ಲಿಗುವ ಮಣ್ಣು-ಕಲ್ಲುಗಳಿಗೆ ಚಿದಾಭಾಸರನ್ನು ಕಲ್ಪಿಸುವದಿಲ್ಲ.

—ಹೀಗೆ ಆತ್ಮನಲ್ಲಿ ಆರೋಪಿತವಾದ ಸಂಸಾರವು ಸರಿಯಾದ ತಿಳಿವಳಿಕೆಯಿಂದ ನಾಶವಾಗುತ್ತದೆ ಎಂಬುದನ್ನು ಸಿದ್ಧಮಾಡಲು ಹಾಗೆ ಆರೋಪಿಸಲು ಕಾರಣವಾದ ಅವಿದ್ಯೆಯನ್ನು ಹೇಳುತ್ತಾರೆ.

**ಸಂಸಾರಃ ಪರಮಾರ್ಥೋಽಯಂ ಸಂಲಗ್ನಃ ಸ್ವಾತ್ಮವಸ್ತುನಿ ।**
**ಇತಿ ಭ್ರಾಂತಿರವಿದ್ಯಾ ಸ್ಯಾದ್ವಿದ್ಯಯೈಷಾ ನಿವರ್ತತೇ ॥೧೦॥**

ಈ ಸಂಸಾರವು ನಿಜವಾದದ್ದು. ಇದು ಆತ್ಮನಿಗೆ ಅಂಟಿಕೊಂಡಿದೆ ಎಂದು ತಿಳಿಯುವ ಭ್ರಾಂತಿಗೆ ಅವಿದ್ಯೆ ಎನ್ನುವರು. ಇದು ವಿದ್ಯೆಯಿಂದ (ಸರಿಯಾದ ತಿಳಿವಳಿಕೆಯಿಂದ) ಇಲ್ಲದಂತಾಗುವದು.

— ಇನ್ನು ವಿದ್ಯೆ ಎಂದರೆ ಏನು ? ಅದು ಹೇಗೆ ದೊರೆಯುವದು ?

**ಆತ್ಮಾಭಾಸಸ್ಯ ಜೀವಸ್ಯ ಸಂಸಾರೋ ನಾತ್ಮವಸ್ತುನಃ ।**
**ಇತಿ ಬೋಧೋ ಭವೇದ್ವಿದ್ಯಾ ಲಭ್ಯತೇಽಸೌ**
**ವಿಚಾರಣಾತ್ ॥೧೧॥**

ಈ ಸಂಸಾರವು ಚೈತನ್ಯದ ಪ್ರತಿಬಿಂಬರೂಪನಾದ ಜೀವನದು; ಆತ್ಮನಿಗಲ್ಲ ಎಂದು ಸರಿಯಾಗಿ ತಿಳಿಯುವದೇ ವಿದ್ಯೆ. ಇದು ಜಗತ್ತು–ಜೀವ-ಪರಮಾತ್ಮರ ವಿಚಾರದಿಂದ ದೊರೆಯುವದು.

—ಅದು ಯಾವ ವಿಚಾರ ?

**ಸದಾ ವಿಚಾರಯೇತ್ತಸ್ಮಾತ್ ಜಗಜ್ಜೀವಪರಾತ್ಮನಃ ।**
**ಜೀವಭಾವ ಜಗದ್ಭಾವಬಾಧೇ ಸ್ವಾತ್ಮೈವ ಶಿಷ್ಯತೇ ॥೧೨॥**

ಆದುದರಿಂದ ಜಗತ್ತು-ಜೀವ-ಪರಮಾತ್ಮರ ಬಗೆಗೆ ಯಾವಾಗಲೂ ವಿಚಾರಿಸುತ್ತಿರಬೇಕು. ಜೀವಸ್ವರೂಪವೂ, ಜಗತ್ಸ್ವರೂಪವೂ ನಾಶವಾದರೆ, ಆತ್ಮನೊಬ್ಬನೇ ಉಳಿಯುವನು.

—ಜಗತ್ತು ಮತ್ತು ಜೀವ ಇಲ್ಲದಂತಾಗುವದೆಂದರೇನು ?

**ನಾ ಪ್ರತೀತಿಸ್ತಯೋರ್ಬಾಧಃ ಕಿಂತು ಮಿಥ್ಯಾತ್ವನಿಶ್ಚಯಃ ।**
**ನೋ ಚೇತ್ಸುಷುಪ್ತಿಮೂರ್ಛಾದೌ ಮುಚ್ಯೇತಾಯತ್ನತೋ**
**ಜನಃ ॥೧೩॥**

ಅವು ಅನುಭವಕ್ಕೆ ಬರುವದಿಲ್ಲ ಎಂದರೆ ಇಲ್ಲದಂತೆ ಆದಹಾಗಲ್ಲ. ಅವು ಮಿಥ್ಯ (ಕಲ್ಪಿತ) ಎಂಬ ನಿಶ್ಚಯಾತ್ಮಕ ತಿಳಿವಳಿಕೆಯಾಗುವದು ಎಂದರೆ ಇಲ್ಲದಂತೆ ಆಗುವದು. ಹಾಗಲ್ಲದಿದ್ದರೆ ಜನರು ಗಾಢನಿದ್ರೆ ಮೂರ್ಛೆಗಳಲ್ಲಿ ಪ್ರಯತ್ನವಿಲ್ಲದೇ ಮುಕ್ತರಾಗುತ್ತಿದ್ದರು.

ಜಗತ್ತು–ಜೀವ ಭಾವನಾಶವಾಗುವದೆಂದರೆ ಅದರಿಂದ ಪರಮಾತ್ಮನ ಸತ್ಯತ್ವಜ್ಞಾನವನ್ನೇ ಹೇಳಿದಂತಾಯಿತು. ಅಲ್ಲದೇ ಅದಕ್ಕಿಂತ ಬೇರೆಯಾದ ಜಗತ್ತಿನ ಮರೆವು ಎಂಬುದನ್ನು ಮುಖ್ಯವಾಗಿ ಹೇಳಲಿಲ್ಲ.

**ಪರಮಾತ್ಮಾವಶೇಷೋಽಪಿ ತತ್ಸತ್ಯತ್ವವಿನಿಶ್ಚಯಃ ।**
**ನ ಜಗದ್ವಿಸ್ಮೃತಿರ್ನೋ ಚೇಜ್ಜೀವನ್ಮುಕ್ತಿರ್ನ**
**ಸಂಭವೇತ್ ॥೧೪॥**

ಪರಮಾತ್ಮನೊಬ್ಬನೇ ಉಳಿದಿರುವನೆಂದರೆ ಸಾಲದು. ಅವನೊಬ್ಬನೇ ಸತ್ಯವೆಂಬ ತಿಳಿವಳಿಕೆಯುಂಟಾಗಬೇಕು. ಜಗತ್ತನ್ನು ಮರೆತರೂ ಅಲ್ಲ. ಹಾಗೆಂದರೆ ಜೀವನ್ಮುಕ್ತಿಯು ಅಸಂಭವವಾದೀತು.

—ಹನ್ನೆರಡನೇ ಶ್ಲೋಕದಲ್ಲಿ ವಿಚಾರಮಾಡಬೇಕೆಂದು ಹೇಳಿದಿರಿ. ಅದೆಲ್ಲಿಯವರೆಗೆ?

**ಪರೋಕ್ಷಾ ಚಾಪರೋಕ್ಷೇತಿ ವಿದ್ಯಾ ದ್ವೇಧಾ ವಿಚಾರಜಾ ।**
**ತತ್ರಾಪರೋಕ್ಷವಿದ್ಯಾಪ್ತೌ ವಿಚಾರೋಽಯಂ ಸಮಾಪ್ಯತೇ॥೧೫॥**

ವಿಚಾರದಿಂದ ಹುಟ್ಟುವ ವಿದ್ಯೆಗಳು ಎರಡು. ಪರೋಕ್ಷ-ಅಪರೋಕ್ಷವೆಂದು. ಅಪರೋಕ್ಷಜ್ಞಾನವಾಗಲು, ವಿಚಾರಮಾಡುವದು ಮುಗಿಯಿತು.

**ಅಸ್ತಿ ಬ್ರಹ್ಮೇತಿ ಚೇದ್ವೇದ ಪರೋಕ್ಷಜ್ಞಾನಮೇವ ತತ್ ।**
**ಅಹಂ ಬ್ರಹ್ಮೇತಿ ಚೇದ್ವೇದ ಸಾಕ್ಷಾತ್ಕಾರಃ ಸ ಉಚ್ಯತೇ ॥೧೬॥**

ಬ್ರಹ್ಮವು ಇರುತ್ತದೆ ಎಂದು ತಿಳಿಯುವಿಕೆ (ಶಬ್ದಜ್ಞಾನ)ಯು ಪರೋಕ್ಷಜ್ಞಾನವು. ನಾನು ಬ್ರಹ್ಮನು ಇರುತ್ತೇನೆ ಎಂದು ತಿಳಿವಳಿಕೆಯುಂಟಾದರೆ ಅದಕ್ಕೆ ಸಾಕ್ಷಾತ್ಕಾರವೆಂದು ಹೇಳುವರು.

**ತತ್ಸಾಕ್ಷಾತ್ಕಾರಸಿಧ್ಯರ್ಥಮಾತ್ಮತತ್ವಂವಿವಿಚ್ಯತೇ ।**
**ಯೇನಾಯಂ ಸರ್ವಸಂಸಾರಾತ್ ಸದ್ಯ ಏವ ವಿಮುಚ್ಯತೇ ॥೧೭॥**

ಸಾಕ್ಷಾತ್ಕಾರದ ಯೋಗದಿಂದ ಪುರುಷನು ಕೂಡಲೇ ಎಲ್ಲ ಪ್ರಪಂಚದಿಂದ ಬಿಡುಗಡೆಹೊಂದುತ್ತಾನೆ. ಆ ಬ್ರಹ್ಮಸಾಕ್ಷಾತ್ಕಾರ ಸಿದ್ಧಿಸುವದಕ್ಕೆ ಆತ್ಮಸ್ವರೂಪವನ್ನು ವಿವೇಚಿಸುತ್ತೇವೆ.

—ಪರಮಾರ್ಥವಾಗಿ ಪರಮಾತ್ಮಸ್ವರೂಪವು ಒಂದೇ. ಆದರೂ ವ್ಯವಹಾರದಲ್ಲಿ ಅದರ ಪ್ರಕಾರಗಳನ್ನು ಹೇಳುತ್ತಾರೆ.

**ಕೂಟಸ್ಥೋ ಬ್ರಹ್ಮ ಜೀವೇಶಾವಿತ್ಯೇವಂ ಚಿಚ್ಚತುರ್ವಿಧಾ ।**
**ಘಟಾಕಾಶಮಹಾಕಾಶೌ ಜಲಾಕಾಶಾಭ್ರಖೇ ಯಥಾ ॥೧೮॥**

ಅಖಂಡವಾದ ಒಂದೇಒಂದು ಬಯಲಿನಲ್ಲಿ ಘಟಾಕಾಶ-ಮಹಾಕಾಶ-ಜಲಾಕಾಶ-ಅಭ್ರಾಕಾಶ (ಮೋಡದೊಳಗೆ ಕಾಣುವ ಬಯಲು) ಹೀಗೆ ನಾಲ್ಕು ಪ್ರಕಾರಗಳು ಕಾಣುವಂತೆ ಅಖಂಡವಾದ ಬ್ರಹ್ಮನು ಒಂದೇಒಂದಾದ

ಪರಮಾತ್ಮ ತತ್ವದಲ್ಲಿ ಕೂಟಸ್ಥ ಬ್ರಹ್ಮ ಜೀವ-ಈಶ್ವರ ಎಂದು ನಾಲ್ಕು ಪ್ರಕಾರಗಳು.

—ಘಟದಿಂದ ಆವರಿಸಿಕೊಂಡ ಆಕಾಶವೆಂದರೆ ಘಟಾಕಾಶ. ಯಾವದರಿಂದಲೂ ಆವರಿಸಿಕೊಳ್ಳದೇ ಎಲ್ಲಕಡೆಗೆ ತುಂಬಿರುವ ಆಕಾಶವೆಂದರೆ ಮಹಾಕಾಶ ಎಂದು ಎಲ್ಲರಿಗೂ ತಿಳಿದ ವಿಷಯ. ಆದುದರಿಂದ ಇಲ್ಲಿ ಜಲಾಕಾಶವನ್ನು ವಿವರಿಸುತ್ತಾರೆ.

**ಘಟಾವಚ್ಛಿನ್ನಖೇ ನೀರಂ ಯತ್ತತ್ರ ಪ್ರತಿಬಿಂಬಿತಃ ।**
**ಸಾಭ್ರನಕ್ಷತ್ರ ಆಕಾಶೋ ಜಲಾಕಾಶ ಉದೀರ್ಯತೇ ॥೧೯॥**

ಘಟದಿಂದ ಆವರಿಸಿದ ಆಕಾಶದಲ್ಲಿ ನೀರು ತುಂಬಿಕೊಳ್ಳಲು ಆ ನೀರಿನಲ್ಲಿ ಮೇಘಗಳಿಂದಲೂ, ನಕ್ಷತ್ರಗಳಿಂದಲೂ ಕೂಡಿದ ಆಕಾಶವು ಪ್ರತಿಬಿಂಬಿಸುವದು. ಅದೇ ಜಲಾಕಾಶವು

—ಇನ್ನು ಅಭ್ರಾಕಾಶ.

**ಮಹಾಕಾಶಸ್ಯ ಮಧ್ಯೇ ಯನ್ಮೇಘಮಂಡಲ ಮೀಕ್ಷ್ಯತೇ ।**
**ಪ್ರತಿಬಿಂಬತಯಾ ತತ್ರ ಮೇಘಾಕಾಶೋ ಜಲೇ ಸ್ಥಿತಃ ॥೨೦॥**

ಮಹಾಕಾಶದಲ್ಲಿ ಕಾಣುವ ಮೋಡಗಳಲ್ಲಿ ಅವುಗಳೊಳಗಿನ ನೀರಿನಲ್ಲಿ ಪ್ರತಿಬಿಂಬಿಸಿದ ಆಕಾಶವೇ ಅಭ್ರಾಕಾಶ.

—ಆದರೆ ಮೇಘದಲ್ಲಿರುವ ನೀರು ಪ್ರತ್ಯಕ್ಷವಾಗಿ ಕಾಣುವುದಿಲ್ಲ. ಹೀಗಿರುವಾಗ ಆ ನೀರಿನಲ್ಲಿ ಪ್ರತಿಬಿಂಬಿಸಿದ ಆಕಾಶ ಜ್ಞಾನವಾಗುವದು ಹೇಗೆ?

**ಮೇಘಾಂಶರೂಪಮುದಕಂ ತುಷಾರಾಕಾರ ಸಂಸ್ಥಿತಮ್ ।**
**ತತ್ರ ಖಪ್ರತಿಬಿಂಬೋಽಯಂ ನೀರತ್ವಾದನುಮೀಯತೇ ॥೨೧॥**

ಮೇಘದ ಅಂಶರೂಪವಾದ ನೀರು ಮಂಜಿನ ಹನಿಯಂತೆ ಇರುವದು. ನೀರಿನಲ್ಲಿ ಆಕಾಶ ಪ್ರತಿಬಿಂಬಿಸುವದಷ್ಟೇ? ಅದರಂತೆ ನೀರೇ ಆದ ಮೋಡದಲ್ಲಿಯೂ ಆಕಾಶವು ಪ್ರತಿಬಿಂಬಿಸಿರುವದೆಂದು ಅನುಮಾನಿಸ ಬಹುದು.

ಹೀಗೆ ದೃಷ್ಟಾಂತ ಭೂತವಾದ ಆಕಾಶದ ನಾಲ್ಕು ಪ್ರಕಾರಗಳನ್ನು ವಿವರಿಸಿ ದಾರ್ಷ್ಟಾಂತಿಕ ಆತ್ಮ ಪ್ರಕಾರಗಳಲ್ಲಿ ಕೂಟಸ್ಥನೆಂದರೆ ಯಾರು ಎಂಬುದನ್ನು ವಿವರಿಸುತ್ತಾರೆ.

**ಅಧಿಷ್ಠಾನತಯಾ ದೇಹದ್ವಯಾವಚ್ಛಿನ್ನ ಚೇತನಃ ।**
**ಕೂಟವನ್ನಿರ್ವಿಕಾರೇಣ ಸ್ಥಿತಃ ಕೂಟಸ್ಥ ಉಚ್ಯತೇ ॥೨೨॥**

ಸ್ಥೂಲ ದೇಹ ಮತ್ತು ಸೂಕ್ಷ್ಮದೇಹಗಳೆರಡಕ್ಕೂ ಆಧಾರವಾಗಿದ್ದು, ಅವೆರಡೂ ದೇಹಗಳಿಂದ ಕೂಡಿ ತಾನು ಅಕ್ಕಸಾಲಿಗನ ಅಡಿಗಲ್ಲಿನಂತೆ ಯಾವ ಬದಲಾವಣೆಯನ್ನೂ ಹೊಂದದೇ ಇರುವ ಚೈತನ್ಯವೇ ಕೂಟಸ್ಥನೆನಿಸುವದು.

—ಕೂಟಸ್ಥನ ಮೇಲೆ ಕಲ್ಪಿಸಿದ ಬುದ್ಧಿಯಲ್ಲಿ ಮೂಡಿದ ಚೈತನ್ಯದ ಪ್ರತಿಬಿಂಬವೇ ಜೀವನು.

**ಕೂಟಸ್ಥೇ ಕಲ್ಪಿತಾ ಬುದ್ಧಿಸ್ತತ್ರ ಚಿತ್ಪ್ರತಿಬಿಂಬಕಃ ।**
**ಪ್ರಾಣಾನಾಂ ಧಾರಣಾಜ್ಜೀವಃ ಸಂಸಾರೇಣ**
**ಸಯುಜ್ಯತೇ ॥೨೩॥**

ಈ ಕೂಟಸ್ಥನಲ್ಲಿಯೇ ಬುದ್ಧಿಯು ಕಲ್ಪಿಸಲ್ಪಟ್ಟಿರುವುದು. ಅದರಲ್ಲಿ ಚೈತನ್ಯದ ಪ್ರತಿಬಿಂಬವು ಒಡಮೂಡಿ ಅದು ಎಲ್ಲ ಪ್ರಾಣಗಳನ್ನು ಧಾರಣ ಮಾಡುವುದರಿಂದ ಜೀವನೆನಿಸುವದು. ಇವನೇ ಪ್ರಪಂಚವನ್ನು ಅನುಭವಿಸುವವನು.

(ಜೀವನು ಪ್ರಾಣಗಳನ್ನು ಧಾರಣಮಾಡುವದೆಂದರೆ ಜ್ಞಾನ-ಕ್ರಿಯಾ ಶಕ್ತಿಗಳ ಧಾರಕ-ಪ್ರೇರಕನೆಂದರ್ಥ)

—ಜೀವನಿಗಿಂತ ಬೇರೆಯಾಗಿ ಕೂಟಸ್ಥನಿರುವನೆಂದರೆ ಅವನ ಅನುಭವ ವೇಕೆ ಬರುವದಿಲ್ಲ?

**ಜಲವ್ಯೋಮ್ನಾ ಘಟಾಕಾಶೋ ಯಥಾ ಸರ್ವಸ್ತಿರೋಹಿತಃ ।**
**ತಥಾ ಜೀವೇನ ಕೂಟಸ್ಥಃ ಸೋಽನ್ಯೋನ್ಯಾಧ್ಯಾಸ**
**ಉಚ್ಯತೇ ॥೨೪॥**

ಘಟಾಕಾಶವೆಲ್ಲ ನೀರಿನಲ್ಲಿ ಪ್ರತಿಬಿಂಬಿಸಿದ ಜಲಾಕಾಶದಿಂದ ಮುಚ್ಚಿ ಹೋಗುವಂತೆ, ಕೂಟಸ್ಥನು ಜೀವನಿಂದ ಮುಚ್ಚಿ ಹೋಗಿರುವನು. ಇದಕ್ಕೇ ಒಬ್ಬರ ಗುಣಧರ್ಮಗಳನ್ನು ಇನ್ನೊಬ್ಬರ ಮೇಲೆ ಹೇರುವಿಕೆ (ಅನ್ಯೋನ್ಯಾಧ್ಯಾಸ) ಎನ್ನುವರು

— ಹೀಗೆ ಅಧ್ಯಾಸವಾಗಲೇನು ಕಾರಣ ?

**ಅಯಂ ಜೀವೋ ನ ಕೂಟಸ್ಥಂ ವಿವಿನಕ್ತಿ ಕದಾಚನ ।**
**ಅನಾದಿರವಿವೇಕೋಽಯಂ ಮೂಲವಿದ್ಯೇತಿ ಗಮ್ಯತಾಮ್॥೨೫॥**

ಜೀವನು (ಸಂಸಾರದ ದೆಶೆಯಲ್ಲಿ) ಎಂದಿಗೂ ಕೂಟಸ್ಥನನ್ನು ತನಗಿಂತ ಬೇರೆ ಎಂದು ತಿಳಿಯಲಾರನು. ಇದಕ್ಕೆ ಮೊದಲು ಎಂದು? ಎಂಬುದು ತಿಳಿಯದಿರುವ ಅವಿವೇಕಕ್ಕೆ ಮೂಲಾ ವಿದ್ಯೆ ಎಂದು ತಿಳಿಯುವದು.

—ಅವಿದ್ಯೆಯಲ್ಲಿರುವ ವಿಭಾಗಗಳು

**ವಿಕ್ಷೇಪಾವೃತ್ತಿರೂಪಾಭ್ಯಾಂ ದ್ವಿಧಾಽವಿದ್ಯಾ ವ್ಯವಸ್ಥಿತಾ ।**
**ನ ಭಾತಿ ನಾಸ್ತಿ ಕೂಟಸ್ಥ ಇತ್ಯಾಪಾದಾನಮಾವೃತಿಃ ॥೨೬॥**

ವಿಕ್ಷೇಪ–ಮತ್ತು ಆವರಣವೆಂದು ಅವಿದ್ಯೆಯು ಎರಡು ವಿಧವಾಗಿ ಸಿದ್ಧವಾಗಿರುವದು. ಕೂಟಸ್ಥನು ಬೆಳಗುವದಿಲ್ಲ- ಕೂಟಸ್ಥನು ಇಲ್ಲ. ಎಂದು ಅನಿಸುವದೆ ಆವರಣ.

(ಆವರಣವಾದರೆ ಮಾತ್ರ ವಿಕ್ಷೇಪ ಸಂಭವಿಸುವದು.)

ಇರಲಿ- ಈ ಆವರಣ-ವಿಕ್ಷೇಪ ಮತ್ತು ಅವಿದ್ಯೆಗಳ ವಿಷಯಕ್ಕೆ ಪ್ರಮಾಣವೇನು?

**ಅಜ್ಞಾನೀ ವಿದುಷಾಪೃಷ್ಟಃ ಕೂಟಸ್ಥಂ ನ ಪ್ರಬುಧ್ಯತೇ ।**
**ನ ಭಾತಿ ನಾಸ್ತಿ ಕೂಟಸ್ಥ ಇತಿ ಬುದ್ಧ್ವಾ ವದತ್ಯಪಿ ॥೨೭॥**

ಪಂಡಿತನಾದವನು ಪಾಮರನನ್ನು ಕೇಳಿದಾಗ ಪಾಮರನು ಕೂಟಸ್ಥನ ವಿಷಯವನ್ನು ತಿಳಿದಿರುವದಿಲ್ಲ. ಕೂಟಸ್ಥನ ಬಾನವಾಗುವದಿಲ್ಲ. ಕೂಟಸ್ಥನಿಲ್ಲ ಎಂದು ತಿಳಿದು ಅವನು ಹೇಳುವನು.

(ಇದೇ ಆವರಣಾನುಭವವು.)

—ಆತ್ಮನು ಸ್ವಪ್ರಕಾಶವುಳ್ಳವನು. ಎಂದರೆ ತನ್ನ ಬೆಳಕಿನಿಂದ ಬೆಳಗುತ್ತಿರುವವನು. ಅಂಥವನನ್ನು ತಿಳಿಯದಿರುವಿಕೆಯ ರೂಪವಾದ ಅವಿದ್ಯೆಯು ಹೇಗೆ ಮುಸುಕುವದು? ಹೀಗೆ ಆ ಅವಿದ್ಯೆ ಇಲ್ಲದಂತಾದರೆ ಆವರಣವೆಲ್ಲಿಯದು? ಎಂದರೆ.

**ಸ್ವಪ್ರಕಾಶೇ ಕುತೋಽವಿದ್ಯಾ ತಾಂ ವಿನಾ ಕಥಮಾವೃತಿಃ ।**
**ಇತ್ಯಾದಿತರ್ಕಜಾಲಾನಿ ಸ್ವಾನುಭೂತಿರ್ಗ್ರಸತ್ಯಸೌ ॥೨೮॥**

ಪ್ರತಿಯೊಬ್ಬರ ಅನುಭವವು ಸ್ವಪ್ರಕಾಶನಾದ ಆತ್ಮನಲ್ಲಿ ಅವಿದ್ಯೆಯು ಎಲ್ಲಿಂದ ಬಂದಿತು. ಅದಿಲ್ಲದೇ ಆವರಣವು ಹೇಗೆ? ಈ ಮೊದಲಾದ ತರ್ಕಜಾಲಗಳನ್ನು ನುಂಗುವುದು.

— ನಾನು ತಿಳಿಯದವನೆಂಬ ರೂಪವಾಗಿ ಅವಿದ್ಯೆಯು ಅನುಭವಕ್ಕೆ ಬರುತ್ತಿರುವಾಗ ಒಣತರ್ಕ-ಯುಕ್ತಿಗಳಿಂದ ತತ್ತ್ವ ನಿಶ್ಚಯವಾಗುವದಿಲ್ಲ.

**ಸ್ವಾನುಭೂತಾವವಿಶ್ವಾಸೇ ತರ್ಕಸ್ಯಾಪ್ಯನವಸ್ಥಿತೇಃ ।**
**ಕಥಂ ವಾ ತಾರ್ಕಿಕಂಮನ್ಯಸ್ತತ್ತ್ವನಿಶ್ಚಯಮಾಪ್ನುಯಾತ್ ॥೨೯॥**

ತನ್ನ ಅನುಭವದಲ್ಲಿಯೇ ತನಗೆ ಅವಿಶ್ವಾಸವುಂಟಾದರೆ ಮತ್ತೊಂದು ತರ್ಕದಿಂದ ಬಾಧಿತವಾಗುವ ತರ್ಕದಿಂದೇನು? ತರ್ಕಕ್ಕೆ ತರ್ಕವೆನ್ನುವ ತಾರ್ಕಿಕನು ತತ್ತ್ವನಿಶ್ಚಯವನ್ನು ಹೇಗೆ ಹೊಂದಬಲ್ಲನು?

(ಕೇವಲ ತರ್ಕವೊಂದೇ ವಸ್ತು ನಿಶ್ಚಯ ಮಾಡಲು ಸಮರ್ಥವಲ್ಲ ಎಂಬುದನ್ನು ತಾರ್ಕಿಕರೂ ಒಪ್ಪುತ್ತಾರೆ.)

ಅನುಭವವು ತತ್ತ್ವ ನಿಶ್ಚಯ ಮಾಡುವಲ್ಲಿ ಸಮರ್ಥವಾಗಿದೆ ಎಂದು ಒಪ್ಪೋಣ. ಆದರೆ ನಾವು ಅನುಭವ ಪಡೆಯಬೇಕಾದ ವಸ್ತುವು ಇದೆಯೋ ? ಇಲ್ಲವೋ ಎಂದು ತಿಳಿಯಬೇಕಾದಾಗ- ತರ್ಕವನ್ನೇ ಅವಲಂಬಿಸಬೇಕಾಗುವದಲ್ಲವೇ? ಎಂದರೆ ಅನುಭವಕ್ಕೆ ಹೊಂದಿಕೊಳ್ಳುವಂತೆ ತರ್ಕ ಮಾಡಬಹುದು. ಅನುಭವಕ್ಕೆ ವಿರುದ್ಧವಾದ ತರ್ಕವು ಪ್ರಯೋಜನವಿಲ್ಲ.

**ಬುದ್ಧ್ಯಾರೋಹಾಯ ತರ್ಕಶ್ಚೇದಪೇಕ್ಷ್ಯೇತ ತಥಾ ಸತಿ ।**
**ಸ್ವಾನುಭೂತ್ಯನುಸಾರೇಣ ತರ್ಕ್ಯತಾಂ ಮಾ ಕುತರ್ಕ್ಯತಾಮ್ ॥೩೦॥**

ಬುದ್ಧಿಗೆ ಒಪ್ಪಿಗೆಯಾಗುವದಕ್ಕೆ ತರ್ಕವು- ಬೇಕೆಂದರೆ-ಅನುಭವಕ್ಕೆ ಹೊಂದಿಕೆಯಾಗುವಂತೆ ತರ್ಕಮಾಡಬೇಕು. ಕುತರ್ಕವನ್ನು ಮಾಡಬಾರದು.

— ಆ ಅನುಭವವು ಯಾವದು?

**ಸ್ವಾನುಭೂತಿರವಿದ್ಯಾಯಾಮಾವೃತೌ ಚ ಪ್ರದರ್ಶಿತಾ ।**
**ಅತಃ ಕೂಟಸ್ಥಚೈತನ್ಯಮವಿರೋಧೀತಿ ತರ್ಕ್ಯತಾಮ್ ॥೩೦॥**

ನಾನು ತಿಳಿಯದವ ಎಂಬ ರೂಪದಲ್ಲಿ ಅವಿದ್ಯೆಯು, ಕೂಟಸ್ಥನು ನನಗೆ ಬೆಳಗುವದಿಲ್ಲ ಎಂಬ ರೂಪದಲ್ಲಿ ಆವರಣವು ನಮ್ಮ ಅನುಭವದಲ್ಲಿರುವ ವೆಂದು ಹಿಂದೆ ತೋರಿಸಿದೆ. ಆದುಪರಿಂದ ಕೂಟಸ್ಥ ಚೈತನ್ಯವು ಅವಿದ್ಯೆ ಮತ್ತು ಆವರಣಗಳಿಗೆ ವಿರೋಧಿಯಲ್ಲ ಎಂದು ತರ್ಕಿಸಬೇಕು.

—ಆ ತರ್ಕದ ರೂಪವು ಹೀಗೆ ?

**ತಚ್ಚೇದ್ವಿರೋಧಿ ಕೇನೇಯಮಾವೃತಿರ್ಹ್ಯನುಭೂಯತಾಮ್ ।**
**ವಿವೇಕಸ್ತು ವಿರೋಧ್ಯಸ್ಯಾಸ್ತತ್ವಜ್ಞಾನಿನಿ ದೃಶ್ಯತಾಮ್ ॥೩೨॥**

ಆ ಕೂಟಸ್ಥ ಚೈತನ್ಯವು ಅವಿದ್ಯಾದಿಗಳಿಗೆ ವಿರೋಧಿಯಾಗಿದ್ದರೆ, ಈ ಆವರಣದ ಅನುಭವವು ಯಾರಿಂದ ಉಂಟಾಯಿತು? ಆದುದರಿಂದ ವಿವೇಕವು ಎಂದರೆ ಕೂಟಸ್ಥನನ್ನು-ಜೀವನನ್ನು ಬೇರ್ಪಡಿಸಿ ತಿಳಿಯುವದು ಅವಿದ್ಯೆಗೆ ವಿರೋಧಿ. ಇದನ್ನು ಜ್ಞಾನಿಗಳಲ್ಲಿ ಕಾಣ ಬಹುದು.

—ಇನ್ನು ವಿಕ್ಷೇಪ ವಿಚಾರ.

**ಅವಿದ್ಯಾವೃತಕೂಟಸ್ಥೇ ದೇಹದ್ವಯಯುತಾ ಚಿತಿಃ ।**
**ಶುಕ್ತೌ ರೂಪ್ಯವದಧ್ಯಸ್ತಾ ವಿಕ್ಷೇಪಾಧ್ಯಾಸ ಏವ ಹಿ ॥೩೩॥**

ಅವಿದ್ಯೆಯಿಂದ ಮುಸುಕುಗೊಂಡ ಕೂಟಸ್ಥನಲ್ಲಿ ಸ್ಥೂಲ-ಮತ್ತು ಸೂಕ್ಷ್ಮ-ಎಂಬ ಎರಡು ದೇಹಗಳಿಂದ ಕೂಡಿದ ಮತ್ತೊಬ್ಬ ಚಿದಾಭಾಸನು-ಕಾಣುವುದೇ ವಿಕ್ಷೇಪ. ಸಿಂಪಿನಲ್ಲಿ ಬೆಳ್ಳಿಯನ್ನು ಆರೋಪಿಸುವಂತೆಯೇ ವಿಕ್ಷೇಪಾಧ್ಯಾಸವು.

—ವಿವರಿಸುತ್ತಾರೆ.

**ಇದಮಂಶಶ್ಚ ಸತ್ಯತ್ವಂ ಶುಕ್ತಿಗಂ ರೂಪ್ಯ ಈಕ್ಷ್ಯತೇ ।**
**ಸ್ವಯಂತ್ವಂ ವಸ್ತುತಾ ಚೈವಂ ವಿಕ್ಷೇಪೇ**
**ವೀಕ್ಷ್ಯತೇಽನ್ಯಗಮ್ ॥೩೪॥**

ಸಿಂಪಿನಲ್ಲಿ ಇದಂ (ಇದು) ಎಂಬ ಅಂಶವೂ, ಸತ್ಯತ್ವ (ನಿಜವಾದ ಇರುವಿಕೆ) ವೂ ಬೆಳ್ಳಿಯಲ್ಲಿ ಕಾಣುವಂತೆ, ಕೂಟಸ್ಥನಲ್ಲಿರುವ ಸಾಮಾನ್ಯವಾದ ತಾನು ಎಂಬ ಭಾವವೂ, ವಿಶೇಷ ಎಂದರೆ (ಅಬಾಧಿತ) ವಾದ ಇರುವಿಕೆಯೂ ವಿಕ್ಷೇಪದಲ್ಲಿ (ಎಂದರೆ ಚಿದಾಭಾಸನಲ್ಲಿ) ಕಂಡು ಬರುವವು.

—ಹೇಗೆ ಸಾಮಾನ್ಯಾಂಶವನ್ನು ಹೇಳಿ ವಿಶೇಷಾಂಶವು ಅನುಭವಕ್ಕೆ ಬರುವದಿಲ್ಲವೆಂದು ತೋರಿಸುತ್ತಾರೆ.

**ನೀಲಪೃಷ್ಠತ್ರಿಕೋಣತ್ವಂ ಯಥಾ ಶುಕ್ತೌ ತಿರೋಹಿತಮ್ ।**
**ಅಸಂಗಾನಂದತಾದ್ಯೇವಂ ಕೂಟಸ್ಥೇಽಪಿ ತಿರೋಹಿತಮ್॥೩೫॥**

ಸಿಂಪಿನಲ್ಲಿರುವ ಕಪ್ಪಾದ ಹಿಂಭಾಗವೂ, ಮೂರುಮೂಲೆಯಾಗಿರುವಿಕೆಯೂ, ಹೇಗೆ ಮರೆಯಾಗಿರುವವೋ ಹಾಗೆ ಕೂಟಸ್ಥನಲ್ಲಿರುವ ಅಸಂಗತ್ವವೂ, ಆನಂದಭಾವವೂ ಮರೆಯಾಗಿರುವವು.

**ಆರೋಪಿತಸ್ಯ ದೃಷ್ಟಾಂತೇ ರೂಪ್ಯಂ ನಾಮ ಯಥಾ ತಥಾ ।**
**ಕೂಟಸ್ಥಾಧ್ಯಸ್ತವಿಕ್ಷೇಪ-ನಾಮಾಹಮಿತಿ ನಿಶ್ಚಯಃ ॥೩೬॥**

ದೃಷ್ಟಾಂತನೆನಿಸಿದ ಸಿಂಪಿನಲ್ಲಿ ಆರೋಪಿಸಿದ ಪದಾರ್ಥಕ್ಕೆ 'ಬೆಳ್ಳಿ' ಎಂಬ ಹೆಸರು ಹೇಗೆ ಬರುವದೋ, ಅದರಂತೆ ಕೂಟಸ್ಥನಲ್ಲಿ ಅವಿದ್ಯೆಯಿಂದ ಆರೋಪಿತವಾದ ಚಿದಾಭಾಸನಕ್ಕೆ 'ನಾನು' ಎಂಬ ಹೆಸರು ನಿಶ್ಚಯವಾಯಿತು.

ಸರಿ—. ದೃಷ್ಟಾಂತದಲ್ಲಿ ಮುಂದೆ ಇರುವ ಸಿಂಪಿನ ಮೇಲೆ ಕಣ್ಣು ಬೀಳಲು (ದೂರತ್ವ, ಅಲ್ಪ ಪ್ರಕಾಶಾದಿ ದೋಷಗಳಿಂದ) ಇದು ಬೆಳ್ಳಿ ಎಂಬ (ಎಂದರೆ ಮೂಲವಸ್ತುವಿಗಿಂತಲೂ ಬೇರೆ ಎನಿಸುವ) ಅಭಿಮಾನವು ಉಂಟಾಗುವದು. ಆದರೆ ಅದರಂತೆ ದಾರ್ಷ್ಟಾಂತಿಕದಲ್ಲಿ ಆತ್ಮನ ಹೊರತೂ ಬೇರೆ ವಸ್ತುವಿನ ಅಭಿಮಾನ ಹುಟ್ಟುವದು ಸಾಧ್ಯವಿಲ್ಲವೆಂದರೆ—

**ಇದಮಂಶಂ ಸ್ವತಃ ಪಶ್ಯನ್ ರೂಪ್ಯಮಿತ್ಯಭಿಮನ್ಯತೇ ।**
**ತಥಾ ಸ್ವಂ ಚ ಸ್ವತಃ ಪಶ್ಯನ್ನಹಮಿತ್ಯಭಿಮನ್ಯತೇ ॥೩೭॥**

ಸಿಂಪಿನಲ್ಲಿರುವ 'ಇದು' ಎಂಬ ಸಾಮಾನ್ಯಾಂಶವನ್ನು ತಾನು ನೋಡಿ ಬೆಳ್ಳಿ ಎಂದು ತಿಳಿಯುತ್ತಾನೆ. ಅದರಂತೆ ತನ್ನನ್ನು ತಾನೇ ನೋಡಿ (ತನ್ನ ಪ್ರತಿಬಿಂಬದಲ್ಲಿ) 'ನಾನು' ಎಂದು ಅಭಿಮಾನ ತಾಳುವನು.

—'ಸ್ವಯಂ' ಮತ್ತು 'ಅಹಂ' ಈ ಶಬ್ದಗಳಿಗೆ ಒಂದೇಅರ್ಥವಿರುವದರಿಂದ ದೃಷ್ಟಾಂತ ಮತ್ತು ದಾರ್ಷ್ಟಾಂತಿಕಗಳಿಗೆ ಸಾಮ್ಯವುಂಟಾಗುವದುಹೇಗೆ ?

**ಇದಂತ್ವರೂಪ್ಯತೇ ಭಿನ್ನೇ ಸ್ವತ್ವಾಹಂತೇ ತಥೇಷ್ಯತಾಮ್ ।**
**ಸಾಮಾನ್ಯಂಚ ವಿಶೇಷಶ್ಚ ಹ್ಯುಭಯತ್ರಾಪಿ ಗಮ್ಯತೇ ॥೩೮॥**

ಇದು ಎಂಬ ಶಬ್ದದ ಅರ್ಥವೂ ಬೆಳ್ಳಿ ಎಂಬ ಶಬ್ದದ ಅರ್ಥವೂ ಹೇಗೆ ಬೇರೆ ಬೇರೆಯೋ ಹಾಗೆ ತಾನು ಎಂಬ ಶಬ್ದದ ಅರ್ಥವೂ ನಾನು ಎಂಬ ಶಬ್ದದ ಅರ್ಥವೂ ಬೇರೆ ಬೇರೆ. ಇದು ಎಂಬುದು ಸಾಮಾನ್ಯ ರೂಪ. ಬೆಳ್ಳಿ ಎಂಬುದು ವಿಶೇಷರೂಪ. ಅದರಂತೆ ತಾನು ಎಂಬುದು ಸಾಮಾನ್ಯ ರೂಪ. ನಾನು ಎಂಬುದು ವಿಶೇಷರೂಪವೆಂದು ತಿಳಿಯಬೇಕು.

(ಸಾಮಾನ್ಯವೆಂದರೆ ಜಾತಿ. ಎಂದರೆ ಅನೇಕ ಪದಾರ್ಥಗಳ ಧರ್ಮ. ವಿಶೇಷವೆಂದರೆ ವ್ಯಕ್ತಿ ಎಂದರೆ ಆ ಅನೇಕ ಪದಾರ್ಥಗಳ ಧರ್ಮದ ಏಕದೇಶ.)

**ದೇವದತ್ತಃ ಸ್ವಯಂ ಗಚ್ಛೇತ್ತ್ವಂ ವೀಕ್ಷಸ್ವ ಸ್ವಯಂ ತಥಾ ।**
**ಅಹಂ ಸ್ವಯಂ ನ ಶಕ್ನೋಮೀತ್ಯೇವಂ ಲೋಕೇ ಪ್ರಯುಜ್ಯತೇ ॥೩೯॥**

ದೇವದತ್ತನು ತಾನೇ ಹೋಗುತ್ತಾನೆ. ನೀನು ತಾನೇ (ನೀನೇ) ನೋಡಿಕೋ. ನಾನು ತಾನೇ (ನಾನೇ) ಶಕ್ತನಲ್ಲ. ಹೀಗೆ ಲೋಕದಲ್ಲಿ ಪ್ರಯೋಗಗಳಿವೆ.

(ಸಂಸ್ಕೃತದಲ್ಲಿ 'ಸ್ವಯಂ' ಶಬ್ದವನ್ನು ಪ್ರಥಮಪುರುಷ-ಮಧ್ಯಮಪುರುಷ-ಉತ್ತಮ ಪುರುಷಗಳಲ್ಲಿ ಸಮಾನವಾಗಿ ಪ್ರಯೋಗಿಸುತ್ತಾರೆ. ಕನ್ನಡದಲ್ಲಿ ಮಧ್ಯಮ-ಉತ್ತಮ ಪುರುಷಗಳಲ್ಲಿ ಸ್ವಯಂ (ತಾನು) ಎಂಬುದನ್ನು ಸಾಮಾನ್ಯವಾಗಿ ಪ್ರಯೋಗಿಸುವ ರೂಢಿ ಇಲ್ಲ. ಹೇಗೆ ಮಾಡಿದರೂ ಅರ್ಥಕ್ಕೇನೂ ಬಾಧೆ ಇಲ್ಲ.).

**ಇದಂ ರೂಪ್ಯಮಿದಂ ವಸ್ತ್ರಮಿತಿ ಯದ್ವದಿದಂ ತಥಾ ।**
**ಅಸೌ ತ್ವಮಹಮಿತ್ಯೇಷು ಸ್ವಯಮಿತ್ಯಭಿಮನ್ಯತೇ ॥೪೦॥**

ಇದು ಬೆಳ್ಳಿ. ಇದು ವಸ್ತ್ರ. ಎಂದು ಮೊದಲಾಗಿ ಎಲ್ಲ ಪದಾರ್ಥಗಳ ವಿಷಯದಲ್ಲಿಯೂ ಇದು ಶಬ್ದದ ಪ್ರಯೋಗವು ಸಾಮಾನ್ಯವಾಗಿದೆ. ಅದರಂತೆ ಅವನು-ನೀನು ನಾನು ಎಂಬ ಅರ್ಥಬರುವಲ್ಲಿ ಸ್ವಯಂ (ತಾನು) ಎಂಬುದು ಪ್ರಯೋಗವಾಗುವದರಿಂದ ಸಾಮಾನ್ಯವೆನಿಸುವದು.

— ವ್ಯವಹಾರದಲ್ಲಿ ಸ್ವಯಂ, ಅಹಂ ಶಬ್ದಗಳ ಅರ್ಥವು ಭಿನ್ನವಾಗಲಿ. ಈ ಭೇದಸಿದ್ಧಿಯಿಂದಾದ ಲಾಭವೇನು.?

**ಅಹಂತ್ವಾದ್ಭಿದ್ಯತಾಂ ಸತ್ವಂ ಕೂಟಸ್ಥೇ ತೇನ ಕಿಂ ತವ ।**
**ಸ್ವಯಂ ಶಬ್ದಾರ್ಥ ಏವೈಷ ಕೂಟಸ್ಥ ಇತಿ ಮೇ ಭವೇತ್॥೪೦॥**

ತಾನು ಎಂಬ ಶಬ್ದಕ್ಕಿಂತ ನಾನು ಎಂಬ ಶಬ್ದಾರ್ಥವು ಬೇರೆಯಾಗಲಿ. ಕೂಟಸ್ಥನ ವಿಷಯದಲ್ಲಿ ಆದ ಲಾಭವೇನು ? ಸ್ವಯಂ ಶಬ್ದದ ಅರ್ಥವೇ ಕೂಟಸ್ಥನೆಂಬ ಲಾಭವು ನನಗೆ ಉಂಟಾಗುವದು.

—ಸ್ವತ್ವ (ತಾನು) ಎಂಬ ಶಬ್ದದ ಅರ್ಥವು ಮತ್ತೊಬ್ಬನಲ್ಲನೆಂಬ ಅರ್ಥವನ್ನು ಕೊಡುತ್ತದೆ. ಅದು ಕೂಟಸ್ಥನನ್ನು ಬೋಧಿಸುವದಿಲ್ಲವಲ್ಲ.

**ಅನ್ಯತ್ವವಾರಕಂ ಸ್ವತ್ವಮಿತಿ ಚೇದನ್ಯವಾರಣಮ್ ।**
**ಕೂಟಸ್ಥಸ್ಯಾತ್ಮತಾಂ ವಕ್ತುರಿಷ್ಟಮೇವ ಹಿ ತದ್ಭವೇತ್ ॥೪೨॥**

ಸ್ವತ್ವವು ಮತ್ತೊಬ್ಬನಲ್ಲವೆಂದು ಹೇಳುವದಾದರೆ, ಕೂಟಸ್ಥನೇ ಆತ್ಮನೆಂದು ಹೇಳುವದಕ್ಕೆ ಅದು ಅನುಕೂಲವೇ ಆಗುತ್ತದೆ.

ಆಕಳು-ಕುದುರೆ ಮುಂತಾದ ಶಬ್ದಗಳ ಉಪಯೋಗ ಹೊಂದುವ ವಸ್ತುಗಳ ಗುಣ-ಧರ್ಮಾದಿಗಳಿಂದ ಅವು ಬೇರೆ ಬೇರೆ ಎಂಬ ಅರ್ಥವಾಗುವದು. ಅದರಂತೆ ತಾನು ಮತ್ತು ಆತ್ಮ ಎಂಬ ಶಬ್ದಗಳ ಅರ್ಥವೂ ಬೇರೆ ಬೇರೆಯಾಕಾಗಬಾರದು ? ಸ್ವಯಂ (ತಾನು) ಎಂಬ ಶಬ್ದಾರ್ಥವು ಕೂಟಸ್ಥನೆಂದರೆ ಅವನೇ ಆತ್ಮನೆಂಬುದು ಹೇಗೆ ? ಆಕಳವು ಕುದುರೆಯಾಗಲಾರದಲ್ಲವೇ ?

**ಸ್ವಯಮಾತ್ಮೇತಿ ಪರ್ಯಾಯೌ ತೇನ ಲೋಕೇ ತಯೋಃ ಸಹ।**
**ಪ್ರಯೋಗೋ ನಾಸ್ತ್ಯತಃ ಸ್ವತ್ವಮಾತ್ಮತ್ವಂ**
**ಚಾನ್ಯವಾರಕಮ್ ॥೪೩॥**

ಸ್ವಯಂ (ತಾನು) ಮತ್ತು ಆತ್ಮ ಎಂಬೆರಡು ಪರ್ಯಾಯ ಶಬ್ದಗಳು. ಆದುದರಿಂದ ವ್ಯವಹಾರದಲ್ಲಿ ಅವೆರಡನ್ನೂ ಒಂದೇ ವಾಕ್ಯದಲ್ಲಿ ಬಳಸುವದಿಲ್ಲ. ಹೀಗಾಗಿ ತಾನೆಂದರೂ ಸರಿ. ಆತ್ಮನೆಂದರೂ ಸರಿ. ಮತ್ತೊಬ್ಬನಲ್ಲವೆಂದು ಅರ್ಥವು.

—ಅಚೇತನವಾದ ಘಟ ಮುಂ. ಪದಾರ್ಥಗಳಲ್ಲಿಯೂ ಸ್ವಯಂಶಬ್ದದ ಪ್ರಯೋಗವಾಗುತ್ತದೆ. ಆದುದರಿಂದ ತಾನು ಮತ್ತು ಆತ್ಮ ಎಂಬವು ಏಕಾರ್ಥವನ್ನು ಕೊಡಲಾರವು.

**ಘಟಃ ಸ್ವಯಂ ನ ಜಾನಾತೀತ್ಯೇವಂ ಸ್ವತ್ವಂ ಘಟಾದಿಷು ।**
**ಅಚೇತನೇಷು ದೃಷ್ಟಂ ಚೇತ್ ದೃಶ್ಯತಾಮಾತ್ಮಸತ್ವತಃ ॥೪೪॥**

ಘಟವು ತಾನು ತಿಳಿಯುವದಿಲ್ಲ; ಹೀಗೆ ಘಟವೇ ಮೊದಲಾದ ಅಚೇತನ ಪದಾರ್ಥಗಳಲ್ಲಿ ಸ್ವತ್ವವು ಕಂಡುಬರುವದು ಎಂದರೆ ಅವುಗಳಲ್ಲಿ ಕೂಡ ಆತ್ಮನ ಸದ್ರೂಪವಿರುವದರಿಂದ ಹಾಗೆ ಕಂಡುಬಂದರೆ ತಪ್ಪಲ್ಲ.

ಎಂದಮೇಲೆ ಚೇತನ-ಅಚೇತನಗಳೆಂಬ ಭೇದಗಳಿಗೇನು ಕಾರಣ?

**ಚೇತನಾಚೇತನಭಿದಾ ಕೂಟಸ್ಥಾತ್ಮಕೃತಾ ನ ಹಿ ।**
**ಕಿಂತು ಬುದ್ಧಿಕೃತಾಭಾಸಕೃತೈವೇತ್ಯವಗಮ್ಯತಾಮ್ ॥೪೫॥**

ಎಂದಮೇಲೆ ಚೇತನ ಅಚೇತನಗಳೆಂಬ ಭೇದಗಳು ಕೂಟಸ್ಥ ಆತ್ಮನಿಂದಾದವುಗಳಲ್ಲ. ಅವು ಬುದ್ಧಿಯಲ್ಲಿ ಒಡಮೂಡಿದ ಚಿದಾಭಾಸನಿಂದ ಆದವುಗಳೆಂದು ತಿಳಿಯಬೇಕು.

— ಹಾಗಾದರೆ ಜಡಪದಾರ್ಥಗಳಲ್ಲಿಯೂ ಆತ್ಮನಿರುವನೆಂದು ತಿಳಿಯುವದು ವ್ಯರ್ಥವೇ ಎಂದಾಯಿತಲ್ಲ.

**ಯಥಾ ಚೇತನ ಆಭಾಸಃ ಕೂಟಸ್ಥೇ ಭ್ರಾಂತಿಕಲ್ಪಿತಃ ।**
**ಅಚೇತನೋ ಘಟಾದಿಶ್ಚ ತಥಾ ತತ್ರೈವ ಕಲ್ಪಿತಃ ॥೪೬॥**

ಚೇತನನಾದ ಚಿದಾಭಾಸನು ಕೂಟಸ್ಥನಲ್ಲಿ ಭ್ರಾಂತಿಯಿಂದ ಹೇಗೆ ಆರೋಪಿತನಾಗಿರುವನೋ ಅದರಂತೆ ಅಚೇತನವೆನಿಸುವ ಘಟ ಮೊದಲಾದವುಗಳು ಕೂಟಸ್ಥನಲ್ಲಿ ಅವಿದ್ಯೆಯಿಂದ ಕಲ್ಪಿತವಾಗಿರುವವು.

—ತಾನು ಮತ್ತು ಆತ್ಮ ಎಂಬ ಎರಡೂ ಶಬ್ದಗಳು ಒಂದೇಅರ್ಥವನ್ನು ಕೂಡತಕ್ಕವುಗಳೆಂದರೆ ಅತಿಪ್ರಸಂಗದೋಷಬರುತ್ತದೆ.

**ತತ್ತ್ವದಂತೇ ಅಪಿ ಸ್ವತ್ವಮಿವ ತ್ವಮಹಮಾದಿಷು ।**
**ಸರ್ವತ್ರಾನುಗತೇ ತೇನ ತಯೋರಪ್ಯಾತ್ಮತೇತಿ ಚೇತ್ ॥೪೭॥**

ನೀನು–ನಾನು ಎಂಬ ಶಬ್ದಗಳಲ್ಲಿ ಸ್ವಯಂ ಎಂಬ ಶಬ್ದವು ಸಾಮಾನ್ಯವಾಗಿ ಪ್ರಯೋಗವಾಗುವಂತೆ ಅದು, ಇದು ಶಬ್ದಗಳು ಕೂಡ ಆ (ಅದು) ನೀನು ಈ(ಇದು) ನಾನು ಎಂದು ಸಾಮಾನ್ಯವೆನಿಸಿ ಪ್ರಯೋಗಹೊಂದುವವು. ಆದುದರಿಂದ ಅವುಗಳಿಗೂ ಸ್ವಯಂಶಬ್ದದಂತೆ ಆತ್ಮವೆಂಬ ಅರ್ಥವೇ ಹೇಗೆ ?

**ತೇ ಆತ್ಮತ್ವೇಽಪ್ಯನುಗತೇ ತತ್ತ್ವದಂತೇ ತತಸ್ತಯೋಃ ।**
**ಆತ್ಮತ್ವಂ ನೈವ ಸಂಭಾವ್ಯಂ ಸಮ್ಯಕ್ತ್ವಾದೇರ್ಯಥಾ ತಥಾ ॥೪೮॥**

ಆ (ಅದು) ಈ (ಇದು) ಎಂಬ ಶಬ್ದಗಳು ಆತ್ಮವಾಚಕಗಳಾದ ನೀನು ನಾನು ಎಂಬ ಶಬ್ದಗಳೊಡನೆ ವ್ಯವಹರಿಸುವವು. (ಅಲ್ಲದೆ ಆ ಘಟ-ಈ ಘಟವೆಂದು ಆತ್ಮಗಳಲ್ಲದ ಜಡಪದಾರ್ಥಗಳೊಡನೆಯೂ ಹೊಂದುವವು. ಹೀಗೆ ಅವು ಜಡಪದಾರ್ಥಗಳೊಡನೆ ಹೊಂದುವದರಿಂದ ಅವು ಆತ್ಮವಾಚಕಗಳಲ್ಲ.) ಒಳ್ಳೆಯಮನುಷ್ಯ-ಕೆಟ್ಟಮನುಷ್ಯ ಎಂಬ ಪದಗಳಲ್ಲಿ ಮನುಷ್ಯ ಎಂಬ ಶಬ್ದದೊಡನೆ ಹೊಂದಿ ಪ್ರಯೋಗವಾಗುವ ಒಳ್ಳೆಯ-ಕೆಟ್ಟ ಎಂಬ ಶಬ್ದಗಳು ಹೇಗೆ ಆತ್ಮವಾಚಕಗಳಲ್ಲವೋ ಅದರಂತೆ ನೀನು-ನಾನು ಎಂಬ ಶಬ್ದಗಳೊಡನೆ ಹೊಂದಿ ಪ್ರಯೋಗವಾಗುವ ಅದು-ಇದು ಎಂಬ ಶಬ್ದಗಳು ಆತ್ಮವೆಂಬ ಅರ್ಥವನ್ನು ಕೊಡುವದಿಲ್ಲ.

—ಲೋಕವ್ಯವಹಾರವೂ ಹೀಗೇ ಇರುವದು ಎನ್ನುತ್ತಾರೆ.

**ತತ್ತ್ವದಂತೇ ಸ್ವತಾನ್ಯತ್ವೇ ತ್ವಂತಾಹಂತೇ ಪರಸ್ಪರಮ್ ।**
**ಪ್ರತಿದ್ವಂದ್ವಿತಯಾ ಲೋಕೇ ಪ್ರಸಿದ್ಧೇ ನಾಸ್ತಿ ಸಂಶಯಃ॥೪೯॥**

ಅದು-ಇದು. ತಾನು-ಅನ್ಯನು. ನೀನು-ನಾನು ಎಂಬ ಜೋಡಿಗಳಲ್ಲಿ ಇರುವವುಗಳೆಲ್ಲ ಒಂದಕ್ಕೊಂದು ವಿರುದ್ಧವಾದವುಗಳೆಂದು ಲೋಕದಲ್ಲಿ ಪ್ರಸಿದ್ಧವಿದೆ. ಇದರಲ್ಲಿ ಸಂಶಯವೇನೂ ಇಲ್ಲ.

**ಅನ್ಯತಾಯಾಃ ಪ್ರತಿದ್ವಂದ್ವೀ ಸ್ವಯಂ ಕೂಟಸ್ಥ ಇಷ್ಯತಾಮ್।**
**ತ್ವಂತಾಯಾಃ ಪ್ರತಿಯೋಗ್ಯೇಷೋಽಹಮಿತ್ಯಾತ್ಮನಿ ಕಲ್ಪಿತಃ ॥೫೦॥**

ಅನ್ಯನು ಎಂಬ ಶಬ್ದಕ್ಕೆ ತಾನು ಎಂಬ ಶಬ್ದದ ಅರ್ಥವಾಗುವ ಕೂಟಸ್ಥನು ಎದುರಾಳಿ. ನೀನು ಎಂಬ ಶಬ್ದಕ್ಕೆ ನಾನು ಎಂಬ ಶಬ್ದದ ಅರ್ಥವಾದ ಚಿದಾಭಾಸನು ಎದುರಾಳಿ. ಈ ಚಿದಾಭಾಸನು ಕೂಟಸ್ಥನಲ್ಲಿ ಕಲ್ಪಿತನಾದವನು.

—ಹೀಗೆ ಜೀವ ಮತ್ತು ಕೂಟಸ್ಥರಲ್ಲಿ ಭೇದವಿರುವದಾದರೆ ಅದು ಎಲ್ಲರಿಗೂ ಯಾಕೆ ತಿಳಿಯುವದಿಲ್ಲ?

**ಅಹಂತಾಸ್ವತ್ವಯೋರ್ಭೇದೇ ರೂಪ್ಯತೇ ದಂತಯೋರಿವ ।**
**ಸ್ಪಷ್ಟೇಽಪಿ ಮೋಹಮಾಪನ್ನಾ ಏಕತ್ವಂ ಪ್ರತಿಪೇದಿರೇ ॥೫೧॥**

'ಇದು' ಎಂಬ ಶಬ್ದದ ಅರ್ಥದ ಹಾಗೂ 'ಬೆಳ್ಳಿ' ಎಂಬ ಶಬ್ದದ ಅರ್ಥದ ಭೇದದಂತೆ ನಾನು-ತಾನು ಎಂಬವುಗಳಲ್ಲಿ ಸ್ಪಷ್ಟಭೇದವಿದ್ದರೂ ಭ್ರಾಂತರಾದ ಜೀವರು ಅವರಿಬ್ಬರಲ್ಲಿ ಏಕತ್ವವನ್ನು ಕಾಣುತ್ತಾರೆ.

—ಆಗಲಿ, ಕೂಟಸ್ಥ-ಮತ್ತು ಜೀವರಲ್ಲಿ (ಚಿದಾಭಾಸ) ಕಂಡುಬರುವ ಏಕತ್ವಭ್ರಾಂತಿಗೆ ಕಾರಣವೇನು ?

**ತಾದಾತ್ಮ್ಯಾಧ್ಯಾಸ ಏವಾತ್ರ ಪೂರ್ವೋಕ್ತಾವಿದ್ಯಯಾ ಕೃತಃ ।**
**ಅವಿದ್ಯಾಯಾಂ ನಿವೃತ್ತಾಯಾಂ ತತ್ಕಾರ್ಯಂ ವಿನಿವರ್ತತೇ ॥೫೨॥**

ಹೀಗೆ ಆಗುವದಕ್ಕೆ ಈ ಮೊದಲು (ಶ್ಲೋಕ ೨೫ ರಲ್ಲಿ) ಹೇಳಿದ ಅವಿದ್ಯೆಯಿಂದಾದ ತಾದಾತ್ಮ್ಯಾಧ್ಯಾಸವೇ ಕಾರಣವು. ಅಜ್ಞಾನರೂಪವಾದ ಅವಿದ್ಯೆಯು ನಾಶವಾದರೆ ಅದರಕಾರ್ಯವೂ ನಾಶವಾಗುವದು.

—ಅಧ್ಯಾಸ ( ಒಂದರಮೇಲೊಂದನ್ನು ಹೇರುವಿಕೆ )ವು ಅವಿದ್ಯೆಯು ಕಾರ್ಯವಾದುದರಿಂದ ಅವಿದ್ಯೆಯ ನಾಶದಿಂದ ಅಧ್ಯಾಸವೂ ನಾಶವಾಗುವದೆಂದು ಹೇಳುವದು ಯೋಗ್ಯವಲ್ಲ. ಯಾಕಂದರೆ ಬ್ರಹ್ಮ ಮತ್ತು ಆತ್ಮರು ಒಂದೇಎಂದು ಜ್ಞಾನವಾದಮೇಲೆ ಕೂಡ ಅವಿದ್ಯೆಯ ಕಾರ್ಯವೆನಿಸುವ ದೇಹವು ಕಂಡೇಕಾಣುತ್ತದೆ ಎಂದರೆ—

**ಅವಿದ್ಯಾವೃತಿ ತಾದಾತ್ಮ್ಯೇ ವಿದ್ಯಯೈವ ವಿನಶ್ಯತಃ ।**
**ವಿಕ್ಷೇಪಸ್ಯ ಸ್ವರೂಪಂತು ಪ್ರಾರಬ್ಧಕ್ಷಯಮೀಕ್ಷತೇ ॥೫೩॥**

ಅವಿದ್ಯೆಯಿಂದಾದ ಆವರಣವೂ ಒಂದನ್ನೊಂದು ತಪ್ಪುತಿಳಿವಳಿಕೆಯೂ (ಎಂದರೆ ಅಧ್ಯಾಸವೂ) ಬ್ರಹ್ಮಜ್ಞಾನದಿಂದ ನಾಶವಾಗುವವು. ಇನ್ನು ಅವಿದ್ಯೆಯ ವಿಕ್ಷೇಪವೆನಿಸುವ ದೇಹಾದಿಗಳು ಪ್ರಾರಬ್ಧಕ್ಷಯವಾಗುವ ದಾರಿಯನ್ನು ಕಾಯಬೇಕಾಗುತ್ತದೆ.

—ಉಪಾದಾನ ಕಾರಣವೆನಿಸುವ ಅವಿದ್ಯೆಯು ನಾಶವಾದಮೇಲೆ ಅದರಕಾರ್ಯವು ಹೇಗೆ ಉಳಿಯುವದು ?

**ಉಪಾದಾನೇ ವಿನಷ್ಟೇಽಪಿ ಕ್ಷಣಂ ಕಾರ್ಯಂ ಪ್ರತೀಕ್ಷತೇ ।**
**ಇತ್ಯಾಹುಸ್ತಾರ್ಕಿಕಾಸ್ತದ್ವದಸ್ಮಾಕಃ ಕಿಂ ನ ಸಂಭವೇತ್ ॥೫೪॥**

ಉಪಾದಾನಕಾರಣದ ನಾಶವಾದಮೇಲೆಯೂ ಕಾರ್ಯವು ಒಂದು ಕ್ಷಣ ಅಸ್ತಿತ್ವದಲ್ಲಿರುವದು. ಹೀಗೆ ತಾರ್ಕಿಕರು ಅನ್ನುತ್ತಾರೆ. ಅದರಂತೆ ನಮ್ಮ ಪಕ್ಷದಲ್ಲಿಯೂ ಯಾಕೆ ಸಂಬಂಧವಿರಬಾರದು ?

( ತಂತು ಎಂದರೆ ಎಳೆ ಅಥವಾ ಧಾರವು. ಪಟ ಎಂದರೆ ವಸ್ತ್ರದ ಉಪಾದಾನಕಾರಣವಾಗಿದೆ. ಒಂದುವೇಳೆ ತಂತುನಾಶವಾದರೂ ಪಟವು ಒಂದು ಕ್ಷಣ ಉಳಿಯುವದು ಎಂದು ತಾರ್ಕಿಕರು ತಿಳಿಯುತ್ತಾರೆ. ಆ ನ್ಯಾಯದಂತೆ ಶರೀರಾದಿಗಳು ತೋರುವದಕ್ಕೆ ಅವಿದ್ಯೆಯು ಉಪಾದಾನಕಾರಣವೆನಿಸುತ್ತದೆ. ಆ ವಿದ್ಯೆಯು ನಷ್ಟವಾದರೂ ಕೂಡ ಪ್ರಾರಬ್ಧವಶದಿಂದ ಶರೀರರೂಪೀ ಕಾರ್ಯವು ಉಳಿದುಕೊಳ್ಳುತ್ತದೆ ಎಂದು ಭಾವವು.)

—ತಾರ್ಕಿಕರು ಕಾರಣವು ನಷ್ಟವಾದಮೇಲೆ ಕಾರ್ಯವು ಒಂದು ಕ್ಷಣ ಉಳಿಯುವದೆಂದು ಹೇಳಿದ್ದು ನಿಜ. ಆದರೆ ನಿಮ್ಮ ವಿಕ್ಷೇಪವು ಅನೇಕವರ್ಷಗಳ ವರೆಗೂ ಇರಬಲ್ಲದು ಎಂದಮೇಲೆ ಅದಕ್ಕೂ ಇವಕ್ಕೂ ಸಾಮ್ಯವು ಹೇಗೆ?

**ತಂತೂನಾಂ ದಿನಸಂಖ್ಯಾನಾಂ ತೈಸ್ತಾದೃಕ್ ಕ್ಷಣ ಈರಿತಃ ।**
**ಭ್ರಮಸ್ಯಾಸಂಖ್ಯ ಕಲ್ಪಸ್ಯ ಯೋಗ್ಯಃ ಕ್ಷಣ**
**ಇಹೇಷ್ಯತಾಮ್ ॥೫೫॥**

ನಮ್ಮ ದಿನಮಾನದ ಎಣಿಕೆಗೆಹೊಂದುವಂತೆ ತಾರ್ಕಿಕರು ತಂತುವಿನ ಕ್ಷಣವನ್ನು ಹೇಳಿದ್ದಾರೆ. ಆದರೆ ನಾವಿಲ್ಲಿ ಅನೇಕಕಲ್ಪಗಳ ಭ್ರಮೆಗೆ ಯೋಗ್ಯವೆನಿಸುವಂತೆ ಅವರ ಕ್ಷಣವೆಂದು ತಿಳಿಯಬೇಕು.

ಕೆಲವೇದಿನಗಳು ನೂತರೆ ತಂತುವು ಸಿದ್ಧವಾಗುತ್ತದೆ; ಅಲ್ಪಕಾಲದಲ್ಲಿ ವಸ್ತ್ರವು ಸಿದ್ಧವಾಗುತ್ತದೆ. ಆ ಮಾನದಿಂದ ತಾರ್ಕಿಕರು ಒಂದುಕ್ಷಣವೆಂದು ಹೇಳುವದು ಯೋಗ್ಯ. ಆದರೆ ನಮ್ಮ ಸಂಸಾರವು ಅನಾದಿಕಾಲದಿಂದ ನಡೆದು ಬಂದಿರುವದರಿಂದ ಬಹುಕಾಲ ಯಾಕಿರಬಾರದು ? ಕುಂಬಾರನು ತನ್ನ ತಿಗರಿಯನ್ನು ತಿರುವಿ ಕೈಬಿಟ್ಟಮೇಲೆಯೂ ಕೆಲಹೊತ್ತು ಆ ತಿಗರಿಯ ಗತಿಯು ಇದ್ದೇ ಇರುತ್ತದ್ದಲ್ಲ. ಅದರಂತೆಯೇ ಇದು.

— ಹಾಗಾದಲ್ಲಿ ತಾರ್ಕಿಕರ ಅಭಿಪ್ರಾಯವು ಸಯುಕ್ತಿಕವಾಗಿರುವಂತೆ ನಿಮ್ಮದೂ ಆಯಿತಲ್ಲವೇ ? ಎದಂರೆ ಹಾಗಲ್ಲ.

**ವಿನಾಕ್ಷೋದಕ್ಷಮಂ ಮಾನಂ ತೈರ್ವೃಥಾ ಪರಿಕಲ್ಪ್ಯತೇ ।**
**ಶ್ರುತಿಯುಕ್ತ್ಯನುಭೂತಿಭ್ಯೋ ವದತಾಂ ಕಿಂ ನು**
**ದುಃಶಕಮ್ ॥೫೬॥**

ಶ್ರುತಿಗೆ ಸಮ್ಮತವಾದ ವಿಚಾರವುಳ್ಳ ಪ್ರಮಾಣಗಳಿಲ್ಲದೇ ಬರಿವ್ಯರ್ಥವಾಗಿ ಕಲ್ಪನೆ ಮಾಡುತ್ತಾರೆ ತಾರ್ಕಿಕರು ಆದರೆ ಶ್ರುತಿ-ಯುಕ್ತಿ-ಅನುಭವಕ್ಕೆ ಹೊಂದುವಂತೆ ಹೇಳುವ ನಮಗೆ ಯಾವದು ಅಶಕ್ಯ ?

(ವಿಚಾರಮಾಡಿನೋಡಿದರೆ ಕಾರಣನಾಶವಾದಮೇಲೆ ಕಾರ್ಯವು ಒಂದು ಕ್ಷಣ ಇರುತ್ತದೆ' ಎಂಬ ತಾರ್ಕಿಕರಮಾತು ನಿಲ್ಲುವದಿಲ್ಲ. ಆದರೂ ಅವರು ಯಾವುದೇ ಬಲವತ್ತರ ಪ್ರಮಾಣವಿಲ್ಲದೇ ಹಾಗೆ ಹೇಳುತ್ತಾರೆ. ನಾವುಮಾತ್ರ ಶ್ರುತಿ-ಯುಕ್ತಿ-ಅನುಭವಗಳ ಪ್ರಮಾಣಗಳನ್ನು ಆಧಾರಿಸಿಹೇಳುತ್ತವೆ.)

— ಇನ್ನು ಪ್ರಾರಂಭಿಸಿದ ವಿಷಯ.

**ಆಸ್ತಾಂ ದುಸ್ತಾರ್ಕಿಕೈಃಸಾಕಂ ವಿವಾದಃ ಪ್ರಕೃತಂ ಬ್ರುವೇ ।**
**ಸ್ವಾಹಮೋಃ ಸಿದ್ಧಮೇಕತ್ವಂ ಕೂಟಸ್ಥ**
**ಪರಿಣಾಮಿನೋಃ ॥೫೭॥**

ಈ ಕುತರ್ಕವಾದಿಗಳೊಡನೆ ವಾದಮಾಡುವದು ಇನ್ನುಸಾಕು. ಸಧ್ಯದ ವಿಷಯವನ್ನು ಹೇಳುತ್ತೇವೆ. ತಾನು ಎಂಬಮಾತಿನ ಅರ್ಥವಾದ ಕೂಟಸ್ಥನೂ ಪರಿಣಾಮೀ ಎಂದರೆ ಚಿದಾಭಾಸನೂ ಒಂದು ಎಂಬುದು ಭ್ರಾಂತಿಯಿಂದ ಸಿದ್ಧವಾದ ವಿಷಯ.

— ಹಾಗೆಂದು ಯಾರಿಗೂ ತಿಳಿಯುವದಿಲ್ಲವಲ್ಲ.

**ಪೂರ್ವಾಪರ ಪರಾಮರ್ಶವಿಕಾಲಾಸ್ತತ್ರ ಕೇಚನ ।**
**ವಾಕ್ಯಾಭಾಬಸಾನ್ ಸ್ವ ಸ್ವಪಕ್ಷೇ ಯೋಜಯಂತ್ಯಪ್ಯ**
**ಲಜ್ಜಯಾ ॥೫೮॥**

ಅದರೊಳಗಿನ ಕೆಲ ತಾರ್ಕಿಕರು ಹಿಂದು ಮುಂದಿನ ವಿಚಾರ ಮಾಡಲು ಅಸಮರ್ಥರಾಗಿ ಮುಖ್ಯವಾಕ್ಯದಂತೆಯೇ ಕಾಣುವ ಗೌಣವಾಕ್ಯಗಳನ್ನು ತಂತಮ್ಮ ಪಕ್ಷಕ್ಕೆ ಹೊಂದಿಸಿಕೊಳ್ಳುತ್ತಾರೆ.

—ಕೇವಲ 'ಪ್ರತ್ಯಕ್ಷ, ಪ್ರಮಾಣವನ್ನು ಗ್ರಹಿಸುವ ಲೋಕಾಯತರೇ ಮುಂ. ಪಕ್ಷವನ್ನು ಅನುವಾದ ಮಾಡುತ್ತಾರೆ.

**ಕೂಟಸ್ಥಾದಿ ಶರೀರಾಂತ ಸಂಘಾತಸ್ಯಾತ್ಮತಾಂ ಜಗುಃ ।**
**ಲೋಕಾಯತಾಃ ಪಾಮರಾಶ್ಚ ಪ್ರತ್ಯಕ್ಷಾಭಾಸಮಾ-**
**ಶ್ರಿತಾಃ ॥೫೯॥**

ತಿಳಿದವರೆನಿಸಿದ ಲೋಕಾಯತರು ತಿಳಿಯದವರೆನಿಸಿದ ಸಾಮಾನ್ಯರು ಕೂಡ ಕೂಟಸ್ಥನನ್ನು ಮೊದಲುಗೊಂಡು ಶರೀರದ ವರೆಗಿನ ಗುಂಪನ್ನು ಆತ್ಮ ವೆಂದು ಹೇಳುವರು.

—ಅಲ್ಲದೇ ಲೋಕಾಯತರೆಂಬ ಹೆಸರುಳ್ಳ ಈ ಚಾರ್ವಾಕರು ತಮ್ಮ ಮತವು ಶ್ರುತಿಗೆ ಸಮ್ಮತವೆಂದು ತೋರಿಸಲು ತಮಗೆ ಅನುಕೂಲ ಶ್ರುತಿ ವಾಕ್ಯಗಳ ಪ್ರಮಾಣಗಳನ್ನು ಕೊಡುವರು.

**ಶ್ರೌತೀಕರ್ತುಂ ಸ್ವಪಕ್ಷಂ ತೇ ಕೋಶಮನ್ನಮಯಂ ತಥಾ ।**
**ವಿರೋಚನಸ್ಯ ಸಿದ್ಧಾಂತಂ ಪ್ರಮಾಣಂ ಪ್ರತಿಜಜ್ಞಿರೇ ॥೬೦॥**

'ದೇಹವೇ ಆತ್ಮ' ಎಂಬ ತಮ್ಮಪಕ್ಷವು ಶ್ರುತಿಗೆ ಒಪ್ಪಿಗೆಯಾಗಿರುವದೆಂದು ತೋರಿಸುವದಕ್ಕಾಗಿ ಅವರು ಅನ್ನಮಯ ಕೋಶ ಪ್ರತಿಪಾದಕವಾಕ್ಯಗಳು ಹಾಗೂ ವಿರೋಚನನ ಸಿದ್ಧಾಂತವನ್ನು ಉದಾಹರಣೆಯಾಗಿ ಹೇಳುತ್ತಾರೆ.

(ಅವರಿಗನುಕೂಲ ಶ್ರುತಿ ಪ್ರಮಾಣಗಳು:—ಸ ವಾ ಏಷ ಪುರುಷೋಽನ್ನ ರಸಮಯಃ। ತೈತ್ತರೀಯ ವಿರೋಚನ ಸಿದ್ಧಾಂತವೆಂದರೆ- ಆತ್ಮೈವೇದ ಮಹಯ್ಯಃ। ಛಾಂದೋಗ್ಯ ಹೀಗೆ ಶ್ರುತಿವಾಕ್ಯಗಳನ್ನು ಅವರು ಹೇಳಿದರೂ ಅವುಗಳನ್ನು ಸಮರ್ಥಿಸುವದು ಅವರಿಂದಾಗುವದಿಲ್ಲ.)

—ಈ ಮತದಲ್ಲಿಯ ದೋಷಗಳು.

**ಜೀವಾತ್ಮನಿರ್ಗಮೇ ದೇಹಮರಣಸ್ಯಾತ್ರ ದರ್ಶನಾತ್ ।**
**ದೇಹಾತಿರಿಕ್ತ ಏವಾತ್ಮೇತ್ಯಾಹುರ್ಲೋಕಾಯತಾಃ ಪರೇ॥೬೧॥**

ಜೀವಾತ್ಮನು ಹೋದ ಮೇಲೆ ದೇಹವು ಸತ್ತು ಬೀಳುವದು ಕಾಣುವದ ರಿಂದ ದೇಹಕ್ಕಿಂತ ಆತ್ಮನು ಬೇರೆಯಾಗಿರಬೇಕೆಂದು ಬೇರೆ ಕೆಲವು ಲೋಕಾ ಯತರು ಅನ್ನುವರು.

—ಅವರ ಅಭಿಪ್ರಾಯದಂತೆ ಆತ್ಮ.

**ಪ್ರತ್ಯಕ್ಷತ್ವೇನಾಭಿಮತಾಹಂಧೀರ್ದೇಹಾತಿರೇಕಿಣಮ್ ।**
**ಗಮಯೇದಿಂದ್ರಿಯಾತ್ಮಾನಂ ವಚ್ಮೀತ್ಯಾದಿ ಪ್ರಯೋಗತಃ ॥೬೨॥**

ನಾನು ಮಾತಾಡುತ್ತೇನೆ. (ನಾನು ನೋಡುತ್ತೇನೆ.) ಇತ್ಯಾದಿ ಪ್ರಯೋಗಗಳಿಂದ ಪ್ರತ್ಯಕ್ಷವಾಗಿ ಸಮ್ಮತವಾಗಿರುವ ಅಹಂಬುದ್ಧಿಯು ಸ್ಥೂಲ ದೇಹಕ್ಕಿಂತಲೂ ಬೇರೆಯಾದ ಇಂದ್ರಿಯ ರೂಪನಾದ ಆತ್ಮನನ್ನು ಸೂಚಿಸುವದು

—ಚೇತನವಾದ ಇಂದ್ರಿಯಗಳು ಅದೆಂತು ಆತ್ಮವಾಗುವವು?

**ವಾಗಾದೀನಾಮಿಂದ್ರಿಯಾಣಾಂ ಕಲಹಃ ಶ್ರುತಿಷು ಶ್ರುತಃ ।**
**ತೇನ ಚೈತನ್ಯಮೇತೇಷಾಮಾತ್ಮತ್ವಂ ತತ ಏವ ಹಿ ॥೬೩॥**

ಶ್ರುತಿಯಲ್ಲಿ ವಾಕ್ (ವಾಣಿ) ಮೊದಲಾದ ಇಂದ್ರಿಯಗಳ ಕಲಹದ ವರ್ಣನೆಯುಂಟು. ಆದುದರಿಂದ ಅವುಗಳಿಗೆ ಚೈತನ್ಯವಿದೆ. ಹಾಗೂ ಆತ್ಮತ್ವವೂ ಇರುತ್ತದೆ.

—ಈ ಮತವನ್ನು ಅಲ್ಲಗಳೆದು ಮತ್ತೊಂದನ್ನು ಹೇಳತೊಡಗುತ್ತಾರೆ.

**ಹೈರಣ್ಯಗರ್ಭಾಃ ಪ್ರಾಣಾತ್ಮವಾದಿನಸ್ತ್ವೇವಮೂಚಿರೇ ।**
**ಚಕ್ಷುರಾದ್ಯಕ್ಷ ಲೋಪೇಽಪಿ ಪ್ರಾಣಸತ್ವೇ ತು ಜೀವತಿ ॥೬೪॥**
**ಪ್ರಾಣೋ ಜಾಗರ್ತಿ ಸುಪ್ತೇಽಪಿ ಪ್ರಾಣಶ್ರೈಷ್ಠ್ಯಾದಿಕಂ ಶ್ರುತಮ್ ।**
**ಕೋಶಃ ಪ್ರಾಣಮಯಃ ಸಮ್ಯಗ್ವಿಸ್ತರೇಣ ಪ್ರಪಂಚಿತಃ ॥೬೫॥**

ಪ್ರಾಣವೇ ಆತ್ಮವೆಂದು ತಿಳಿಯುವ ಹಿರಣ್ಯಗರ್ಭೋಪಾಸಕರು ಹೀಗನ್ನುತ್ತಾರೆ. ಕಣ್ಣು–ಕಿವಿ ಮೊದಲಾದ ಇಂದ್ರಿಯಗಳು ನಾಶವಾದರೂ ಪ್ರಾಣವಿದ್ದರೆ ಸಾಕು. ಬದುಕುತ್ತಾನೆ. ಅಲ್ಲದೇ ಪ್ರಾಣವು ಗಾಢನಿದ್ರೆಯಲ್ಲಿಯೂ ಎಚ್ಚರವಾಗಿರುತ್ತದೆ. ಪ್ರಾಣವೇ ಎಲ್ಲವುಗಳಿಗಿಂತ ಹೆಚ್ಚಿನದು ಎಂದು ಮೊದಲಾಗಿ ಶ್ರುತಿಯಲ್ಲಿದೆ. ಪ್ರಾಣಮಯ ಕೋಶವನ್ನು ಶ್ರುತಿಯಲ್ಲಿ ವಿಸ್ತರವಾಗಿ ವರ್ಣಿಸಿದ್ದಾರೆ. ಆದುದರಿಂದ ಪ್ರಾಣವೇ ಆತ್ಮ.

—ಪ್ರಾಣಕ್ಕಿಂತ ಒಳಗಿರುವ ಮನಸ್ಸು ಆತ್ಮನೆಂದು ಹೇಳುವವರ ಅಭಿಪ್ರಾಯ.

**ಮನ ಆತ್ಮೇತಿ ಮನ್ಯಂತ ಉಪಾಸನಪರಾ ಜನಾಃ ।**
**ಪ್ರಾಣಸ್ಯಾಭೋಕ್ತೃತಾ ಸ್ಪಷ್ಟಾ ಭೋಕ್ತೃತ್ವಂ ಮನಸಸ್ತತಃ॥೬೬॥**

ಬೇರೆ ಕೆಲ ಉಪಾಸಕರು ಮನಸ್ಸೇ ಆತ್ಮವೆಂದು ತಿಳಿಯುವರು. ಪ್ರಾಣವು ಜಡವಾದುದು. ಆದುದರಿಂದ ಅದು ಭೋಗಿಸುವದಲ್ಲವೆಂಬುದು ಸ್ಪಷ್ಟವೇ ಇರುವುದು. ಹೀಗಾಗಿ ಮನಸ್ಸು ಭೋಕ್ತಾ ಎಂಬುದು ಸಿದ್ಧವಾಯಿತು.

—ಮನಸ್ಸೇ ಆತ್ಮನೆಂದು ಹೇಳುವ ಕೆಲವು ಶ್ರುತಿ ಪ್ರಮಾಣಗಳನ್ನು ಹೇಳುವರು.

**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।**
**ಶ್ರುತೋ ಮನೋಮಯಃ ಕೋಶಸ್ತೇನಾತ್ಮೇತೀರಿತಂ ಮನಃ ॥೬೭॥**

ಮನುಷ್ಯನಿಗೆ ಬಂಧವಾಗವುದಕ್ಕೂ ಮೋಕ್ಷವಾಗುವದಕ್ಕೂ ಮನಸ್ಸೇ ಮುಖ್ಯವಾಗಿ ಕಾರಣವೆನಿಸುತ್ತದೆ. ಮನೋಮಯ ಕೋಶವೂ ಶ್ರುತಿಯಲ್ಲಿ ವರ್ಣಿತವಾಗಿದೆ. ಆದುದರಿಂದ-ಮನಸ್ಸೇ ಆತ್ಮವೆಂದು ಹೇಳಬೇಕಾಯಿತು.

—ಈಗ ಮನಸ್ಸಿನಿಂದ ಒಳಗೆ ಇರುವ ವಿಜ್ಞಾನಕ್ಕೆ (ಬುದ್ಧಿಗೆ) ಆತ್ಮನೆನ್ನುನ ಬೌದ್ಧರ ಮತ.

**ವಿಜ್ಞಾನಮಾತ್ಮೇತಿ ಪರ ಆಹುಃ ಕ್ಷಣಿಕ ವಾದಿನಃ ।**
**ಯತೋ ವಿಜ್ಞಾನಮೂಲತ್ವಂ ಮನಸೋ ಗಮ್ಯತೇ ಸ್ಫುಟಮ್ ॥೬೮॥**

ಮನಸ್ಸು ವಿಜ್ಞಾನ ಮೂಲವಾಗಿದೆ. ಎಂದರೆ ಮನಸ್ಸನ್ನರಿಯುವದಕ್ಕೆ ಕ್ಷಣ-ಕ್ಷಣಕ್ಕೆ ಹುಟ್ಟಿ ಸಾಯುತ್ತಿರುವ ಬುದ್ಧಿಯು ಕಾರಣವಾಗಿದೆ. ಆದುದರಿಂದ ಬೌದ್ಧರು ವಿಜ್ಞಾನವೇ ಆತ್ಮವೆಂದು ಹೇಳುತ್ತಾರೆ.

—ವಿಜ್ಞಾನ-ಮತ್ತು ಮನಸ್ಸು ಇವೆರಡು ಶಬ್ದಗಳು ಒಂದೇ ಅಂತಃಕರಣ ವಾಚಕಗಳು. ಎಂದಮೇಲೆ ಅವುಗಳಲ್ಲಿ ಕಾರ್ಯಕಾರಣ ಭಾವವು ಸಂಭವಿಸುವದು ಹೇಗೆ?

**ಅಹಂ ವೃತ್ತಿರಿದಂ ವೃತ್ತಿರಿತ್ಯಂತಃ ಕರಣಂ ದ್ವಿಧಾ ।**
**ವಿಜ್ಞಾನಂ ಸ್ಯಾದಹಂ ವೃತ್ತಿರಿದಂವೃತ್ತಿಮನೋಭವೇತ್ ॥೬೯॥**

ಅಂತಃಕರಣದಲ್ಲಿ 'ನಾನು' ಎಂಬುದೊಂದು, 'ಇದು' ಎಂಬುದೊಂದು ಹೀಗೆ ಎರಡು ಬಗೆಯ ವೃತ್ತಿಗಳಿವೆ. ಬುದ್ಧಿಯು ಅಹಂ ವೃತ್ತಿರೂಪವಾಗಿದೆ. ಮನಸ್ಸು ಇದಂ ವೃತ್ತಿರೂಪವಾಗಿದೆ.

—ಇನ್ನು ಮನಸ್ಸು-ಬುದ್ಧಿಗಳ ಕಾರ್ಯಕಾರಣ ಭಾವವು.

**ಅಹಂ ಪ್ರತ್ಯಯ ಬೀಜತ್ವಮಿದಂ ವೃತ್ತೇರಿತಿ ಸ್ಫುಟಮ್ ।**
**ಅವಿದಿತ್ವಾಸ್ವಮಾತ್ಮಾನಂ ಬಾಹ್ಯಂ ವೇತ್ತಿ ನ ತು ಕ್ವಚಿತ್ ॥೨೦॥**

ಇದು ಎಂಬ ವೃತ್ತಿಗೆ ನಾನು ಎಂಬ ಪ್ರತ್ಯಯವೇ ಬೀಜವೆಂಬದು ಸ್ಪಷ್ಟವಾಗಿದೆ. ಯಾಕಂದರೆ ತನ್ನನ್ನು ಅರಿತು ಕೊಳ್ಳದವನು ತನ್ನಿಂದ ಬೇರೆ ಪದಾರ್ಥವನ್ನು ತಿಳಿಯಲಾರನು.

—ಆ ವಿಜ್ಞಾನ (ಬುದ್ಧಿ)ವು ಕ್ಷಣ-ಕ್ಷಣಕ್ಕೂ ಹುಟ್ಟಿ ಅಡಗುವಂಥದು· ಎಂಬುದಕ್ಕೆ ಅನುಭವವೇ ಪ್ರಮಾಣವಾಗಿದೆ.

**ಕ್ಷಣೇ ಕ್ಷಣೇ ಜನ್ಮನಾಶಾವಹಂ ವೃತ್ತೇರ್ಮಿತೌ ಯತಃ ।**
**ವಿಜ್ಞಾನಂ ಕ್ಷಣಿಕಂ ತೇನ ಸ್ವಪ್ರಕಾಶಂ ಸ್ವತೋ ಮಿತೇಃ ॥೨೧॥**

ಪ್ರತಿಕ್ಷಣಕ್ಕೂ ಅಹಂ ವೃತ್ತಿಯ ಹುಟ್ಟುವಿಕೆ, ನಾಶವಾಗುವಿಕೆಗಳು ಅನುಭವಕ್ಕೆ ಬರುತ್ತವೆ. ಆದುದರಿಂದ ವಿಜ್ಞಾನವು ಕ್ಷಣಿಕ. ಇದು ತನ್ನನ್ನು ತಾನು ತಿಳಿಯುವುದರಿಂದ ತನ್ನ ಬೆಳಕಿನಿಂದಲೇ ಬೆಳಗುವಂಥದು.

(ಇನ್ನೊಂದು ಸಾಧನದ ಅಪೇಕ್ಷೆ ಇಲ್ಲದೇ ಸ್ವತಃ ಸ್ಫೂರ್ತಿ ಗೊಳ್ಳುವ ಪದಾರ್ಥಕ್ಕೆ ಸ್ವಪ್ರಕಾಶವೆನ್ನುತ್ತಾರೆ)

—ವಿಜ್ಞಾನವೇ ಆತ್ಮನೆನ್ನುವದಕ್ಕೆ ಶ್ರುತಿಪ್ರಮಾಣ.

**ವಿಜ್ಞಾನಮಯ ಕೋಶೋಽಯಂ ಜೀವ ಇತ್ಯಾಗಮಾ ಜಗುಃ ।**
**ಸರ್ವಸಂಸಾರ ಏತಸ್ಯ ಜನ್ಮನಾಶ–ಸುಖಾದಿಕಃ ॥೨೨॥**

ಈ ವಿಜ್ಞಾನಮಯ ಕೋಶವೇ ಜೀವನೆಂದು ಶ್ರುತಿಯು ಕೂಡ ಹೇಳುವದು. ಹುಟ್ಟು-ಸಾವು ಸುಖ-ದುಃಖ ಇತ್ಯಾದಿ ಎಲ್ಲ ಸಂಸಾರವೂ ವಿಜ್ಞಾನಕ್ಕೆ.

—ಶೂನ್ಯವಾದೀ ಬೌದ್ಧರ ಮತವು.

**ವಿಜ್ಞಾನಂ ಕ್ಷಣಿಕಂ ನಾತ್ಮಾ ವಿದ್ಯುದಾದಭ್ರನಿಮೇಷವತ್ ।**
**ಅನ್ಯಸ್ಯಾನುಪಲಬ್ಧತ್ವಾಚ್ಛೂನ್ಯಂ ಮಾಧ್ಯಮಿಕಾ ಜಗುಃ॥೨೩॥**

ವಿಜ್ಞಾನವು ಮಿಂಚು-ಮೋಡ-ಕಣ್ಣುರೆಪ್ಪೆಯಂತೆ ಕ್ಷಣಿಕವಾದುದರಿಂದ ಆತ್ಮವಲ್ಲ. ಆ ವಿಜ್ಞಾನಕ್ಕಿಂತ ಬೇರೆ ಇನ್ನೇನೂ ತೋರುವದಿಲ್ಲ. ಆದುದರಿಂದ ಮಾಧ್ಯಮಿಕ ಬೌದ್ಧರು ಶೂನ್ಯವೇ ಆತ್ಮನೆಂದು ಹೇಳುವರು.

—ಈ ವಿಷಯದಲ್ಲಿ ಶ್ರುತಿ ವಚನಗಳನ್ನು ಹೇಳುತ್ತಾರೆ.

**ಅಸದೇವೇದಮಿತ್ಯಾದಾವಿದಮೇವ ಶ್ರುತಂ ತತಃ ।**
**ಜ್ಞಾನಜ್ಞೇಯಾತ್ಮಕಂ ಸರ್ವಂ ಜಗದ್ಭ್ರಾಂತಿ-**
**ಪ್ರಕಲ್ಪಿತಮ್ ॥೭೪॥**

'ಈ ಜಗತ್ತು ಹುಟ್ಟುವದಕ್ಕಿಂತ ಮೊದಲು ಶೂನ್ಯವಾಗಿತ್ತು'. ಇತ್ಯಾದಿ ಶ್ರುತಿಗಳಲ್ಲಿ ಹೀಗೆಯೇ ಹೇಳಿದೆ. ಆದುದರಿಂದ ತಿಳಿವಳಿಕೆ ಹಾಗೂ ತಿಳಿಯತಕ್ಕ ವಸ್ತುಗಳು ಒಟ್ಟು ಎಲ್ಲವೂ ಭ್ರಾಂತಿಯಿಂದ ಕಲ್ಪಿತವಾದವುಗಳು.

—ಗ್ರಂಥಕಾರರು ಶೂನ್ಯವಾದೀ ಮಾಧ್ಯಮಿಕ ಖಂಡನ ಮಾಡುತ್ತಾರೆ.

**ನಿರಧಿಷ್ಠಾನ ವಿಭ್ರಾಂತೇರಭಾವಾದಾತ್ಮನೋಽಸ್ತಿತಾ ।**
**ಶೂನ್ಯಸ್ಯಾಪಿ ಸಸಾಕ್ಷಿತ್ವಾದನ್ಯಥಾ ನೋಕ್ತಿರಸ್ಯ ತೇ ॥೭೫॥**

ಅಧಿಷ್ಠಾನವಿಲ್ಲದೇ ಭ್ರಾಂತಿಯು ಸಂಭವಿಸುವದಿಲ್ಲ. ಆದುದರಿಂದ ಆತ್ಮನ ಅಸ್ತಿತ್ವವು ಸಿದ್ಧವಾಗುವದು. ಅದರಂತೆ ಶೂನ್ಯಕ್ಕೆ ಕೂಡ ಸಾಕ್ಷಿಯು ಇರಲೇಬೇಕು. ಇಲ್ಲವಾದರೆ ಶೂನ್ಯದ ವಿಷಯಕ್ಕೆ ಮಾತ ಡಲು ಬರುವದಿಲ್ಲ.

—ಹಾಗಾದರೆ ಆತ್ಮನು ಯಾರು ?

**ಅನ್ಯೋ ವಿಜ್ಞಾನಮಯತ ಆನಂದಮಯ ಆಂತರಃ ।**
**ಅಸ್ತೀತ್ಯೇವೋಪಲಬ್ಧವ್ಯ ಇತಿವೈದಿಕ-ದರ್ಶನಮ್ ॥೭೬॥**

ವಿಜ್ಞಾನಮಯ ಕೋಶಕ್ಕಿಂತ ಒಳಗೆ ಅದಕ್ಕಿಂತ ಬೇರೆಯಾದ ಆನಂದಮಯ ಕೋಶವೆಂಬುದೊಂದು ಇರುತ್ತದೆ. ಆದುದರಿಂದ ಅವನು ಇರುವನೆಂದೇ ತಿಳಿಯಬೇಕೆಂದು ವೈದಿಕ ದರ್ಶನವು ಹೇಳುತ್ತದೆ.

ಹೀಗೆ ಆತ್ಮಸ್ವರೂಪ ವಿಷಯವಾಗಿದ್ದ ಮತಭೇದಗಳನ್ನು ಹೇಳಿ ಅವನ ಪರಿಮಾಣದ (ಗಾತ್ರ) ವಿಷಯದಲ್ಲಿ ಇರುವ ಮತಭೇದಗಳನ್ನು ಹೇಳುತ್ತಾರೆ.

**ಅಣುರ್ಮಹಾನ್ಮಧ್ಯಮೋ ವೇತ್ಯೇವಂ ತತ್ರಾಪಿವಾದಿನಃ ।**
**ಬಹುಧಾ ವಿವದಂತೇ ಹಿ ಶ್ರುತಿ ಯುಕ್ತಿ ಸಮಾಶ್ರಯಾತ್ ॥೭೭॥**

ಆತ್ಮನು ಅಣುವೋ ? ಮಹತ್ತೋ ? ಅಥವಾ ಮಧ್ಯಮನೋ ಎಂದು ಬಡಿದಾಡುವ ವಾದಿಗಳು ಶ್ರುತಿವಾಕ್ಯ ಮತ್ತು ಯುಕ್ತಿ ಮುಂತಾದವುಗಳನ್ನು ಆಶ್ರಯಿಸಿ ಅನೇಕ ಬಗೆಯಾಗಿ ವಾದ ಮಾಡುತ್ತಾರೆ.

—ಆತ್ಮನು ಅಣುಮಾತ್ರನೆಂಬ ಆಂತರಾಳಿಕರ ಮತವನ್ನು ಮೊದಲು ಹೇಳುತ್ತಾರೆ.

**ಅಣುಂ ವದಂತ್ಯಾಂತರಾಲಾಃ ಸೂಕ್ಷ್ಮನಾಡೀ ಪ್ರಚಾರತಃ ।**
**ರೋಮ್ಣಃ ಸಹಸ್ರಭಾಗೇನ ತುಲ್ಯಾಸು ಪ್ರಚರಂತ್ಯಯಮ್ ॥೭೮॥**

ಆಂತರಾಳಿಕರು ಅಣುವೆನ್ನುತ್ತಾರೆ. ಅವನು ಒಂದು ಕೂದಲೆಳೆಯ ಸಾವಿರದಲ್ಲೊಂದು ಭಾಗದಷ್ಟು ಸಣ್ಣದಾದ ನಾಡಿಯಲ್ಲಿ ಸಂಚಾರ ಮಾಡುತ್ತಿರುವನು.

— ಆತ್ಮನು ಅಣುವೆಂಬುದಕ್ಕೆ ಶ್ರುತಿ ಪ್ರಮಾಣ.

**ಅಣೋರಣೀಯಾನೇಷೋಽಣುಃ ಸೂಕ್ಷ್ಮಾತ್ಸೂಕ್ಷ್ಮತರಂ ತ್ವಿತಿ।**
**ಅಣುತ್ವಮಾಹುಃ ಶ್ರುತಯಃ ಶತಶೋಽಥ ಸಹಸ್ರಶಃ ॥೭೯॥**

ಆತ್ಮನು ಅಣುವಿಗಿಂತ ಅಣುವಾಗಿದ್ದಾನೆ. ಇವನು ಅಣು. ಸೂಕ್ಷ್ಮಕ್ಕಿಂತಲೂ ಇವನು ಸೂಕ್ಷ್ಮ. ಹೀಗೆ ನೂರಾರು ಅದೇಕೆ ಸಾವಿರಾರು ಶ್ರುತಿಗಳು ಆತ್ಮನು ಅಣುವೆಂಬುದನ್ನು ಹೇಳುತ್ತವೆ.

—ಇದರಂತೆ ಇನ್ನೊಂದು.

**ಬಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ।**
**ಭಾಗೋ ಜೀವಃ ಸ ವಿಜ್ಞೇಯ ಇತಿ ಚಾಹಾಪರಾ ಶ್ರುತಿಃ ॥೮೦॥**

ನೂರಾರು ತುಂಡಾಗುವಂತೆ ಕತ್ತರಿಸಿದ ಕೂದಲ ತುದಿಯ ನೂರನೆಯ ಭಾಗದಷ್ಟು ಜೀವನಿರುವನೆಂದು ಬೇರೊಂದು ಶ್ರುತಿಯು ಹೇಳುತ್ತದೆ.

—ಇನ್ನು ಮಧ್ಯಮ ಪರಿಮಾಣದವನೆಂದು ತಿಳಿಯುವ ಜೈನರ ಮತ.

**ದಿಗಂಬರಾ ಮಧ್ಯಮತ್ವಮಾಹುರಾಪಾದಮಸ್ತಕಮ್ ।**
**ಚೈತನ್ಯವ್ಯಾಪ್ತಿಸಂದೃಷ್ಟೇರಾನಖಾಗ್ರಶ್ರುತೇರಪಿ ॥೮೧॥**

ಕಾಲಿನಿಂದ ಹಿಡಿದು ತಲೆಯವರೆಗೆ ಚೈತನ್ಯವು ವ್ಯಾಪಿಸಿಕೊಂಡಿರುವದೆಂದು ಅನುಭವಕ್ಕೆ ಬರುತ್ತಿರುವದರಿಂದ, ಹಾಗೂ ಆತ್ಮನು ಇಲ್ಲಿ ಪ್ರವೇಶಿಸಿ

ಉಗುರ ತುದಿಯವರೆಗೂ ವ್ಯಾಪಿಸಿರುವನೆಂದು ಶ್ರುತಿಯು ಇರುವದರಿಂದ ನಗ್ನ ಸಾಂಪ್ರದಾಯದ ಜೈನರು ಆತ್ಮನ ಮಧ್ಯಮತ್ವ ಎಂದರೆ ಆತ್ಮನು ಶರೀರ ಪ್ರಮಾಣದವನಾಗಿರುವನೆಂದು ಹೇಳುತ್ತಾರೆ.

—ಹೀಗೆ ಹೇಳುವುದಾದರೆ ಶ್ರುತಿಯಲ್ಲಿ ಹೇಳಿದ ಆತ್ಮನ ನಾಡೀ ಪ್ರಚಾರವು ಸಂಭವಿಸುವದಿಲ್ಲ ಎಂದರೆ ಸಮಾಧಾನ.

**ಸೂಕ್ಷ್ಮನಾಡೀ ಪ್ರಚಾರಸ್ತು ಸೂಕ್ಷ್ಮೈರವಯವೈರ್ಭವೇತ್ ।**
**ಸ್ಥೂಲದೇಹಸ್ಯ ಹಸ್ತಾಭ್ಯಾಂ ಕಂಚುಕಪ್ರತಿಮೋಕವತ್ ॥೮೨॥**

ಸ್ಥೂಲ ದೇಹವು ತನ್ನ ಕೈಗಳನ್ನು ಮೊದಲು ಹಾಕಿ ಅಂಗಿಯಲ್ಲಿ ಪ್ರವೇಶಮಾಡುವಂತೆ ಜೀವನು ತನ್ನ ಸೂಕ್ಷ್ಮವಾದ ಅವಯವಗಳಿಂದ ಸೂಕ್ಷ್ಮವಾದ ನಾಡಿಗಳಲ್ಲಿ ಪ್ರವೇಶಮಾಡುತ್ತಾನೆ.

—ಒಳ್ಳೇದು. ಆತ್ಮನಿಗೆ ಹೀಗೆ ಗೊತ್ತಾದ ಒಂದು ಪರಿಮಾಣವುಳ್ಳವನಾದರೆ ಸಣ್ಣ ದೊಡ್ಡ ದೇಹಗಳಲ್ಲಿ ಅವನ ಪ್ರವೇಶವು ಹೇಗೆ ?

**ನ್ಯೂನಾಧಿಕಶರೀರೇಷು ಪ್ರವೇಶೋಽಪಿ ಗಮಾಗಮೈಃ ।**
**ಆತ್ಮಾಂಶಾನಾಂ ಭವೇತ್ತೇನ ಮಧ್ಯಮತ್ವಂ ವಿನಿಶ್ಚಿತಮ್ ॥೮೩॥**

ಆತ್ಮನ ಭಾಗಗಳ ಹಿಗ್ಗುವಿಕೆ ಕುಗ್ಗುವಿಕೆಗಳಿಂದ ಸಣ್ಣ – ದೊಡ್ಡ ದೇಹಗಳಲ್ಲಿ ಅವನ ಪ್ರವೇಶವಾಗುತ್ತದೆ. ಆದುದರಿಂದ ಅವನ ಮಾಧ್ಯಮತ್ವವು ನಿಶ್ಚಯವಾಯಿತು.

—ನಿಮ್ಮಂತೆ ಆತ್ಮನು ಸಾವಯವನೆಂದು ತಿಳಿದರೆ ಘಟಾದಿಗಳಂತೆ ಅವನಿಗೆ ನಾಶವೊದಗುವದಲ್ಲ. ಎಂದರೆ ಗ್ರಂಥಕರ್ತರು ಈ ಮತದಲ್ಲಿ ದೋಷಗಳನ್ನು ಹೇಳುತ್ತಾರೆ.

**ಸಾಂಶಸ್ಯ ಘಟವನ್ನಾಶೋ ಭವತ್ಯೇವ ತಥಾ ಸತಿ ।**
**ಕೃತನಾಶಾಕೃತಾಭ್ಯಾಗಮಯೋಃ ಕೋ ವಾರಕೋ ಭವೇತ್ ॥೮೪॥**

ಸಾವಯವನಾದ ಆತ್ಮನ ನಾಶವು ಘಟದಂತೆ ಆಗಬೇಕು. ಹಾಗಾದಲ್ಲಿ ಕೃತನಾಶ ಅಕೃತಾಭ್ಯಾಗಮ ದೋಷಗಳನ್ನು ನಿವಾರಿಸುವವರು ಯಾರು ?

(ಕೃತನಾಶವೆಂದರೆ – ಮಾಡಿದ ಪುಣ್ಯಪಾಪಗಳು ಫಲಕೊಡದೆ ಹೋಗಬೇಕಾಗುವದು ಎಂದರ್ಥ. ಆತ್ಮನೂ ನಾಶವಾದರೆ ಅದರ ಫಲ ಮುಟ್ಟುವದು ಯಾರಿಗೆ? ಇನ್ನು ಅಕೃತಾಭ್ಯಾಗಮವೆಂದರೆ— ಹಿಂದಿನ ಜನ್ಮದಲ್ಲಿ ಇಲ್ಲದ ಆತ್ಮನು ಹಿಂದಿನ ಜನ್ಮದ ಕರ್ಮಸಂಬಂಧವಿಲ್ಲದೇ ಈ ಜನ್ಮದಲ್ಲಿ ಅನುಭವಿಸಬೇಕಾಗುವದು. ಇವುಗಳ ನಿವಾರಣೆ ಮಾಡುವವರು ಯಾರು? ಎಂದು ಗ್ರಂಥಕಾರರು ಪ್ರಶ್ನೆಮಾಡುತ್ತಾರೆ.)

**ತಸ್ಮಾದಾತ್ಮಾ ಮಹಾನೇವ ನೈವಾಣುರ್ನಾಪಿ ಮಧ್ಯಮಃ ।**
**ಆಕಾಶವತ್ಸರ್ವಗತೋ ನಿರಂಶಃ ಶ್ರುತಿಸಮ್ಮತಃ ॥೮೫॥**

ಆದುದರಿಂದ ಆತ್ಮನು ಮಹತ್ ಪರಿಮಾಣನು. ಅಣುವೂ ಅಲ್ಲ. ಮಧ್ಯಮನೂ ಅಲ್ಲ. ಆಕಾಶದಂತೆ ಅವನು ಎಲ್ಲಕಡೆಗೂ ತುಂಬಿಕೊಂಡಿರುವನು. ಅವನು ಸಾವಯವನಲ್ಲ ಎಂಬುದು ಶ್ರುತಿಗೆ ಒಪ್ಪಿಗೆಯಾದ ಮಾತು.

—ಈ ರೀತಿ ಆತ್ಮನ ವಿಭುತ್ವವನ್ನು ಸಿದ್ಧಮಾಡಿದಮೇಲೆ ಅವನ ಚಿದ್ರೂಪವನ್ನು ಸಿದ್ಧಮಾಡುವದಕ್ಕೆ ಮೊದಲು ವಾದಿಗಳ ಭಿನ್ನಾಭಿಪ್ರಾಯಗಳನ್ನು ಹೇಳುತ್ತಾರೆ.

**ಇತ್ಯುಕ್ತ್ವಾ ತದ್ವಿಶೇಷೇ ತು ಬಹುಧಾ ಕಲಹಂ ಯಯುಃ ।**
**ಅಚಿದ್ರೂಪೋಽಥ ಚಿದ್ರೂಪಶ್ಚಿದಚಿದ್ರೂಪ ಇತ್ಯಪಿ ॥೮೬॥**

ಇಷ್ಟೆಂದು ಆತ್ಮನ ವಿಶೇಷರೂಪದ ವಿಷಯಕ್ಕೆ ಅವನು ಜಡನೋ ಅಥವಾ ಚಿದ್ರೂಪನೋ, ಎರಡುಪ್ರಕಾರದ ರೂಪವುಳ್ಳವನೋ? ಎಂದು ಮೊದಲಾಗಿ ಅನೇಕಬಗೆಯಿಂದ ಜಗಳವಾಡುತ್ತಾರೆ.

— ಈ ಮೂರು ಪ್ರಕಾರದ ವಾದಗಳಲ್ಲಿ 'ಆತ್ಮನು ಜಡ' ಎಂಬ ಮಾತನ್ನು ಹೇಳುತ್ತಾರೆ.

**ಪ್ರಾಭಾಕರಾಸ್ತಾರ್ಕಿಕಾಶ್ಚ ಪ್ರಾಹುರಸ್ಯಾಚಿದಾತ್ಮತಾಮ್ ।**
**ಆಕಾಶವದ್ದ್ರವ್ಯಮಾತ್ಮಾ ಶಬ್ದವತ್ತದ್ಗುಣಶ್ಚಿತಿಃ ॥೮೭॥**

ಪ್ರಾಭಾಕರ ಮೀಮಾಂಸಕರೂ ತಾರ್ಕಿಕರೂ ಆತ್ಮನ ಜಡತ್ವವನ್ನು ಹೇಳುವರು. ಆಕಾಶದಂತೆ ಅವನೊಂದು ದ್ರವ್ಯ. ಆಕಾಶಕ್ಕೆ ಶಬ್ದವೆಂಬುದೊಂದು ಗುಣವಿದ್ದಂತೆ ಜ್ಞಾನವೆಂಬುದು ಆತ್ಮನಗುಣವೆಂದು ಇವರ ಅಭಿಪ್ರಾಯ.

(ಭಟ್ಟ ಮೀಮಾಂಸಕರಲ್ಲಿ ಪ್ರಭಾಕರನೊಬ್ಬ ಮುಖ್ಯನು. ಇವನು ತನ್ನ ಗುರುಗಳಿಗಿಂತ ತುಸು ಬೇರೆಯಾಗಿ ತನ್ನ ಮತವನ್ನು ಮಂಡಿಸಿದನು. ಇವನ ಅನುಯಾಯಿಗಳಿಗೆ 'ಪ್ರಾಭಾಕರ'ರೆನ್ನುವರು. ನೈಯಾಯಿಕರು, ವೈಶೇಷಿಕರು ತಾರ್ಕಿಕರೆನಿಸುವರು.)

—ಅಲ್ಲದೇ ಆತ್ಮನ ವಿಶೇಷ ಗುಣಗಳು.

**ಇಚ್ಛಾದ್ವೇಷಪ್ರಯತ್ನಾಶ್ಚ ಧರ್ಮಾಧರ್ಮೌ ಸುಖಾಸುಖೇ ।**
**ತತ್ಸಂಸ್ಕಾರಾಶ್ಚ ತಸ್ಯೈತೇ ಗುಣಾಶ್ಚಿತಿವದೀರಿತಾಃ ॥೮೮॥**

ಇಚ್ಛಾ–ದ್ವೇಷ–ಪ್ರಯತ್ನ–ಧರ್ಮ–ಅಧರ್ಮ–ಸುಖ–ದುಃಖ ಮತ್ತು ಇವುಗಳ ಸಂಸ್ಕಾರಗಳು ಇವೆಲ್ಲ ಕೂಡ ಆತ್ಮನಿಗೆ ಜ್ಞಾನದಂತೆ ಗುಣಗಳೆಂದು ಹೇಳುತ್ತಾರೆ.

(ಇಲ್ಲಿ ಸಂಸ್ಕಾರಗಳೆಂದರೆ—ನೆನಪು ಮಾಡಿಕೊಳ್ಳುವದಕ್ಕೆ ಉಪಯುಕ್ತ ಭಾವನೆ.)

—ಈ ಗುಣಗಳ ಉತ್ಪತ್ತಿ-ನಾಶಗಳು ಹೇಗೆ ?

**ಆತ್ಮನೋ ಮನಸಾ ಯೋಗೇ ಸ್ವಾದೃಷ್ಟವಶತೋ ಗುಣಾಃ ।**
**ಜಾಯಂತೇಽಥ ಪ್ರಲೀಯಂತೇ ಸುಷುಪ್ತೇಽದೃಷ್ಟ**
**ಸಂಕ್ಷಯಾತ್ ॥೮೯॥**

ತನ್ನ ಅದೃಷ್ಟಯೋಗದಿಂದ ಆತ್ಮನು ಮನಸ್ಸಿನೊಡನೆ ಕೂಡಿದಾಗ ಗುಣಗಳು ಹುಟ್ಟುವವು. ಇನ್ನು ಅದೃಷ್ಟಸಂಯೋಗವು ತಪ್ಪಿದಾಗ ನಿದ್ರೆಯ ಸಮಯದಲ್ಲಿ ಅವೆಲ್ಲ ಲೀನವಾಗುವವು.

(ಅದೃಷ್ಟವೆಂದರೆ ಹಿಂದಿನ ಕರ್ಮಾಕರ್ಮಗಳ ಯೋಗದಿಂದ ಉತ್ಪನ್ನವಾದ ಶಕ್ತಿ.)

—ಆತ್ಮನು ಜಡನೆಂದು ಹೇಳುವಿರಿ. ಅವನಿಗೆ ಚೇತನತ್ವವು ಹೇಗೆ?

**ಚಿತಿಮತ್ತ್ವಾಚ್ಚೇತನೋಽಯ ಮಿಚ್ಛಾ-ದ್ವೇಷ**
**ಪ್ರಯತ್ನವಾನ್॥ ತಃ॥**
**ಸ್ಯಾದ್ಧರ್ಮಾಧರ್ಮಯೋಃ ಕರ್ತಾ ಭೋಕ್ತಾ**
**ದುಃಖಾದಿಮತ್ತ್ವತಃ ॥೯೦॥**

ಜ್ಞಾನವುಳ್ಳವನಾದುದರಿಂದ ಆತ್ಮನು ಚೇತನನು. ಇಚ್ಛಾ-ದ್ವೇಷ-ಪ್ರಯತ್ನಾದಿಗಳಿಂದ ಕೂಡಿರುವದರಿಂದ ಅವನು ಧರ್ಮ-ಅಧರ್ಮಗಳ ಸಂಗ್ರಹ ಮಾಡಬಲ್ಲವನೆಂದೂ ಸುಖ-ದುಃಖಗಳು ಉಳ್ಳವನಾದುದರಿಂದ ತನ್ನ ಕರ್ಮಗಳ ಫಲವನ್ನು ಭೋಗಿಸುವಂಥವನು.

—ಆತ್ಮನು ಒಂದುವೇಳೆ ವಿಭು (ಎಲ್ಲಕಡೆಗೆ ತುಂಬಿದವ) ವಾದರೆ ಬೇರೆ ಬೇರೆ ಲೋಕಗಳಿಗೆ ಹೋಗುವದು-ಬರುವದು ಹೇಗೆ ಸಂಭವಿಸುತ್ತವೆ ?

**ಯಥಾsತ್ರ ಕರ್ಮವಶತಃ ಕಾದಾಚಿತ್ಕಂ ಸುಖಾದಿಕಮ್ ।**
**ತಥಾ ಲೋಕಾಂತರೇ ದೇಹೇ ಕರ್ಮಣೇಚ್ಛಾದಿ ಜನ್ಯತೇ ॥೯೧॥**

ಈ ದೇಹದಲ್ಲಿ ಬಯಕೆ ಮುಂ. ಉಂಟಾದರೆ ಕೆಲವುಸಾರೆ ಸುಖ-ದುಃಖಾದಿಗಳು ಉಂಟಾಗುತ್ತವೆ. ಅದರಂತೆ ಪರಲೋಕದೊಳಗಿನ ದೇಹದಲ್ಲಿ ಕೂಡ ಕರ್ಮದಿಂದ ಇಚ್ಛೆಯೇ ಮುಂ. ಗುಣಗಳು ಹುಟ್ಟುತ್ತವೆ.

**ಏವಂಚ ಸರ್ವಗಸ್ಯಾಪಿ ಸಂಭವೇತಾಂ ಗಮಾಗಮೌ ।**
**ಕರ್ಮಕಾಂಡಃ ಸಮಗ್ರೋsತ್ರ ಪ್ರಮಾಣಮಿತಿ ತೇsವದನ್ ॥೯೨॥**

ಈ ರೀತಿಯಾಗಿ ಸರ್ವವ್ಯಾಪಿಯಾದ ಆತ್ಮನ ಹೋಗುವಿಕೆ, ಬರುವಿಕೆಗಳು (ಔಪಚಾರಿಕವಾಗಿ) ಸಂಭವಿಸುತ್ತವೆ. ಇದಕ್ಕೆ ಸಂಪೂರ್ಣ ಕರ್ಮಕಾಂಡವು ಪ್ರಮಾಣವಾಗಿರುವದೆಂದು ಅವರು ಹೇಳುತ್ತಾರೆ.

—ಮೊದಲು ವಿಜ್ಞಾನಮಯ ಕೋಶದ ಆಚೆಗಿರುವ ಆನಂದಮಯ ಕೋಶ (ಅದರಲ್ಲಿರುವ ಅಸ್ಪಷ್ಟ ಚೈತನ್ಯ)ವೇ ಆತ್ಮವೆಂದಿರಿ. ಈಗ ಅದಕ್ಕಿಂತ ಬೇರೆಯಾಗಿರುವ ಇಚ್ಛೆ ಮುಂ. ಗುಣಗಳುಳ್ಳವನು ಆತ್ಮವೆಂದು ಹೇಳುವಿರಿ. ಇದರಿಂದ ಅದಕ್ಕೂ ಇದಕ್ಕೂ ವಿರೋಧವಾಗುವದಿಲ್ಲವೇ ?

**ಆನಂದಮಯಕೋಶಃ ಯಃ ಸುಷುಪ್ತೌ ಪರಿಶಿಷ್ಯತೇ ।**
**ಅಸ್ಪಷ್ಟಚಿತ್ಸ ಆತ್ಮೈಷಾಂ ಪೂರ್ವಕೋಶೋsಸ್ಯ ತೇ ಗುಣಾಃ॥೯೩॥**

ಗಾಢನಿದ್ರೆಯಲ್ಲಿ ಅಸ್ಪಷ್ಟ ಚೈತನ್ಯವುಳ್ಳ ಆನಂದಮಯ ಕೋಶವು ಉಳಿಯುತ್ತದೆ. ಅದು ಶ್ರುತಿಗಳಲ್ಲಿ ಹೇಳಿದ ಪಂಚಕೋಶಗಳಲ್ಲಿ ಮೊದಲಿನದು. ಇದೇ ಪ್ರಾಭಾಕರಮತದವರ ಆತ್ಮ. ಈ ಆತ್ಮನಿಗೆ ಇದಕ್ಕೂ ಮೊದಲು ಹೇಳಿದ ಜ್ಞಾನ-ಇಚ್ಛಾದಿಗಳು ಗುಣಗಳು.

—ಭಟ್ಟಮೀಮಾಂಸಕರು ಆತ್ಮನು ಚಿತ್-ಜಡ ಎಂಬ ಎರಡುಬಗೆಯ ಸ್ವರೂಪವುಳ್ಳವನೆಂದು ಹೇಳುವರು.

**ಗೂಢಂ ಚೈತನ್ಯಮುತ್ಪ್ರೇಕ್ಷ್ಯ ಜಡಬೋಧಸ್ವರೂಪತಾಮ್ ।**
**ಆತ್ಮನೋ ಬ್ರುವತೇ ಭಾಟ್ಟಾಶ್ಚಿದುತ್ಪ್ರೇಕ್ಷೋತ್ಥಿತಸ್ಮೃತೇಃ॥೯೪॥**

ಭಟ್ಟಮೀಮಾಂಸಕರು ಆತ್ಮನ ಗುಪ್ತ ಚೈತನ್ಯವನ್ನು ಊಹಿಸಿ, ಅವನು ಚಿತ್-ಜಡಸ್ವರಪದವನಾಗಿರುವನೆಂದು ಹೇಳುತ್ತಾರೆ. ಮಲಗಿಕೊಂಡು ಎದ್ದ ಮೇಲೆ ಮನುಷ್ಯನಿಗೆ ನಿದ್ದೆಯ ಅನುಭವವು ಸ್ಮರಣಕ್ಕೆ ಬರುವದರಿಂದ ಆತ್ಮನ ತರ್ಕವುಂಟಾಗುತ್ತದೆ. —ಅದು ಹೇಗೆ ?

**ಜಡೋ ಭೂತ್ವಾ ತದಾಽಸ್ವಾಪ್ಸಮಿತಿ ಜಾಡ್ಯಸ್ಮೃತಿಸ್ತದಾ ।**
**ವಿನಾ ಜಾಡ್ಯಾನುಭೂತಿಂ ನ ಕಥಂಚಿದುಪಪದ್ಯತೇ ॥೯೫॥**

ಗಾಢನಿದ್ದೆಯಲ್ಲಿ ನಾನು ಏನೂ ಅರಿಯದೆ ಮಲಗಿದ್ದೆ ಎಂದು ಅಜ್ಞಾನದ ನೆನಪು ಬರುತ್ತದೆ. ಆ ನೆನಪು ಅನುಭವವಿಲ್ಲದೇ ಬೇರೆ ಬಗೆಯಿಂದ ಉಂಟಾಗಲಾರದು.

—ಗಾಢನಿದ್ದೆಯಲ್ಲಿ ಚೈತನ್ಯದ ಲೋಪವಿಲ್ಲ ಎಂಬುದಕ್ಕೆ ಪ್ರಮಾಣ.

**ದ್ರಷ್ಟುರ್ದೃಷ್ಟೇರಲೋಪಶ್ಚ ಶ್ರುತಃ ಸುಪ್ತೌ ತತಸ್ತ್ವಯಮ್ ।**
**ಅಪ್ರಕಾಶಪ್ರಕಾಶಾಭ್ಯಾಮಾತ್ಮಾ ಖದ್ಯೋತವದ್ಯುತಃ ॥೯೬॥**

ಗಾಢನಿದ್ದೆಯಲ್ಲಿ ನೋಡುವವನ ನೋಟಕ್ಕೆ ಲೋಪವಿಲ್ಲವೆಂದು ಶ್ರುತಿಯಲ್ಲಿ ಹೇಳಿದೆ. ಆದುದರಿಂದ ಈ ಆತ್ಮನು ಮಿಂಚುಹುಳದಂತೆ (ಹೊನ್ನೇಹುಳ) ಒಮ್ಮೆ ಬೆಳಗುವಿಕೆ, ಒಮ್ಮೆ ಬೆಳಗದಿರುವಿಕೆಗಳಿಂದ ಕೂಡಿರುವನು.

—ಈ ಭಾಟ್ಟ ಮತದಲ್ಲಿ ಯಾವ ದೋಷ ಉಂಟಾಗುವದೆಂಬುದನ್ನು ಹೇಳಿ ಸಾಂಖ್ಯಮತವನ್ನು ತಿಳಿಸುತ್ತಾರೆ.

**ನಿರಂಶಸ್ಯೋಭಯಾತ್ಮತ್ವಂ ನ ಕಥಂಚಿದ್ಘಟಿಷ್ಯತೇ ।**
**ತೇನ ಚಿದ್ರೂಪ ಏವಾತ್ಮೇತ್ಯಾಹುಃ ಸಾಂಖ್ಯವಿವೇಕಿನಃ ॥೯೭॥**

ನಿರಂಶ (ಅವಯವವಿಲ್ಲದ) ಆತ್ಮನು ಬೆಳಗುತ್ತ-ಬೆಳಗದೇ ಇರುವನೆಂಬ ಎರಡುಬಗೆಯು ಎಂದಿಗೂ ಸಲ್ಲದು. ಆದುದರಿಂದ ಆತ್ಮನು ಚಿದ್ರೂಪನೇ ಸರಿ. ಎಂದು ಸಾಂಖ್ಯಪಂಡಿತರು ಹೇಳುತ್ತಾರೆ.

—ಹಾಗೆಂದರೆ ಗಾಢನಿದ್ದೆಯಲ್ಲಿ ಅನುಭವಕ್ಕೆ ಬರುವ ಜಡತ್ವದ ಗತಿ?

**ಜಾಡ್ಯಾಂಶಃ ಪ್ರಕೃತೇ ರೂಪಂ ವಿಕಾರಿ ತ್ರಿಗುಣಂ ಚ ತತ್ ।**
**ಚಿತೋ ಭೋಗಾಪವರ್ಗಾರ್ಥಂ ಪ್ರಕೃತಿಃ ಸಾ ಪ್ರವರ್ತತೇ॥೯೮॥**

ಗಾಢನಿದ್ದೆಯಲ್ಲಿ ಅನುಭವಕ್ಕೆ ಬರುವ ಜಾಡ್ಯಾಂಶವು ವಿಕಾರವುಳ್ಳ ಪ್ರಕೃತಿಯ ತ್ರಿಗುಣಾತ್ಮಕ(ಸತ್ವ-ರಜ-ತಮ)ರೂಪವು. ಆಪ್ರಕೃತಿಯು ಪುರುಷ (ಆತ್ಮ)ನಿಗೆ ಭೋಗ-ಮೋಕ್ಷಗಳನ್ನು ಕೊಡುವುದಕ್ಕೆ ಯತ್ನಮಾಡುತ್ತದೆ.

ಆದರೆ ಪುರುಷನು. ಅಸಂಗನು ಪ್ರಕೃತಿ ಮತ್ತು ಪುರುಷರು ಭಿನ್ನಸ್ವಭಾವರು. ಅಂದಮೇಲೆ ಪ್ರಕೃತಿಯ ಪ್ರಯತ್ನದಿಂದ ಪುರುಷನಿಗೆ ಭೋಗ-ಮೋಕ್ಷಗಳು ಹೇಗೆ ದೊರೆಯಬಲ್ಲವು!

**ಅಸಂಗಾಯಾಶ್ಚಿತೇರ್ಬಂಧ ಮೋಕ್ಷೌ ಭೇದಾಗ್ರಹಾನ್ಮತೌ ।**
**ಬಂಧಮುಕ್ತಿವ್ಯವಸ್ಥಾರ್ಥಂ ಪೂರ್ವೇಷಾಮಿವ ಚಿದ್ಭಿದಾ॥೯೯॥**

ಪ್ರಕೃತಿ ಮತ್ತು ಪುರುಷರಲ್ಲಿರುವ ಭೇದವನ್ನು ತಿಳಿಯದಿರುವಿಕೆಯಿಂದ ಬಂಧ ಮೋಕ್ಷಗಳು ಸಂಭವಿಸುವವು. ಈ ಬಂದಮೋಕ್ಷಗಳು ಹೊಂದಿಕೆಯಾಗುವದಕ್ಕೆ ಪ್ರಭಾಕರ ಮೊದಲಾದವರಿಗೆ ಹೇಗೋಹಾಗೆ ನಾವು ಅನೇಕ ಪುರುಷರನ್ನು ತಿಳಿಯುತ್ತೇವೆ.

(ತಾರ್ಕಿಕರಂತೆ ಸಾಂಖ್ಯರೂ ಪ್ರತ್ಯೇಕಶರೀರದಲ್ಲಿ ಆತ್ಮರು ಭಿನ್ನ ಭಿನ್ನರುಇರುವರೆಂದು ಸಾಂಖ್ಯರು ತಿಳಿಯುತ್ತಾರೆ).

**ಮಹತಃ ಪರಮವ್ಯಕ್ತಮಿತ ಪ್ರಕೃತಿರುಚ್ಯತೇ ।**
**ಶ್ರುತಾವಸಂಗತಾ ತದ್ವದಸಂಗೋ ಹೀತ್ಯತಃ ಸ್ಫುಟಾ ॥೧೦೦॥**

"ಮಹತ್ತಿಗಿಂತ ಆಚಗೆ ಅವ್ಯಕ್ತವಿರುತ್ತದೆ, ಎಂಬ ಅರ್ಥದ ಶ್ರುತಿಯಲ್ಲಿ ಪ್ರಕೃತಿಯ ಉಲ್ಲೇಖವಿದೆ. ಅದರಂತೆ, ಈಪುರುಷನು ಅಸಂಗನು' ಎಂಬಲ್ಲಿ ಅವನ ಅಸಂಗತ್ವವನ್ನು ಸ್ಪಷ್ಟವಾಗಿ ವರ್ಣಿಸಿದ್ದಾರೆ.

ಹೀಗೆವಾದಿಗಳ ಅನೇಕ ಮತಗಳನ್ನು ಹೇಳಿ ಈಗ ಈಶ್ವರನ ರೂಪವನ್ನು ಹೇಳುತ್ತಾರೆ.

**ಚಿತ್ಸನ್ನಿಧೌ ಪ್ರವೃತ್ತಾಯಾಃ ಪ್ರಕೃತೇರ್ಹಿ ನಿಯಾಮಕಮ್ ।**
**ಈಶ್ವರಂ ಬ್ರುವತೇ ಯೋಗಾಃ ಸ ಜೀವೇಭ್ಯಃಪರಃ ಶ್ರುತಃ ॥೧೦೧॥**

ಯೋಗ ಶಾಸ್ತ್ರಜ್ಞರು (ಎಂದರೆ ಪಾತಂಜಲರು) ಆತ್ಮನ ಸನ್ನಿಧಿಯಲ್ಲಿ ಪ್ರವರ್ತಿಸುತ್ತಿರುವ ಜಗತ್ತಿಗೆ ಈಶ್ವರನು ನಿಯಾಮಕನೆಂದು ಹೇಳುವರು. ಅವನೇ ಜೀವಂಗಿಂತ ಶ್ರೇಷ್ಟನೆಂದು ಶ್ರುತಿಯಲ್ಲಿಗುವದು.

—ಈಶ್ವರನ ಅಸ್ತಿತ್ವವನ್ನು ಹೇಳುವ ಶ್ರುತಿ.

**ಪ್ರಧಾನಕ್ಷೇತ್ರಜ್ಞ ಗುಣೇಶ ಇತಿ ಹಿ ಶ್ರುತಿಃ ।**
**ಆರಣ್ಯಕೇಽಸಂಭ್ರಮೇಣ ಹ್ಯಂತರ್ಯಾಮ್ಯುಪ-**
**ಪಾದಿತಃ ॥೧೦೨॥**

ಗುಣಸಾಮ್ಯಾವಸ್ಥಾರೂಪಪ್ರಧಾನ ( ಪ್ರಕೃತಿ ) ಮತ್ತು ಜೀವರಪತಿ ಎಂದರೆ ಸ್ವಾಮಿ ಅಲ್ಲದೇ ಸತ್ವಾದಿಗುಣಗಳನಿಯಾಮಕ ಎಂದು ಮೊದಲಾಗಿ ಶ್ರುತಿ ಪ್ರಸಿದ್ಧವಾಗಿದೆ. ಅದರಂತೆ ಆರಣ್ಯಕದ ಅಂತರ್ಯಾಮಿ ಬ್ರಾಹ್ಮಣದಲ್ಲಿ ಕೂಡ ಇದನ್ನು ಅನೇಕಪ್ರಕಾರವಾಗಿ ವರ್ಣಿಸಿದ್ದಾರೆ.

(ಪ್ರಕೃತಿ-ಮತ್ತು ಜೀವರನಿಯಾಮಕನು ಈಶ್ವರನೆಂದು ಶ್ವೇತಾಶ್ವತರ ಹಾಗೂ ಬ್ರಹದಾರಣ್ಯಕದ ಅಂತರ್ಯಾಮಿ ಬ್ರಾಹ್ಮಣದಲ್ಲಿ ಹೇಳಿದೆ. )

—ಈಶ್ವರನ ವಿಷಯದಲ್ಲಿ ವಾದಿಗಳ ಮತಭೇದಗಳು ಹೇಗಿವೆ ?

**ಅತ್ರಾಪಿ ಕಲಹಾಯಂತೇ ವಾದಿನಃ ಸ್ವಸ್ವಯುಕ್ತಿಭಿಃ ।**
**ವಾಕ್ಯಾನ್ಯಪಿ ಯಥಾ ಪ್ರಜ್ಞಂ ದಾರ್ಢ್ಯಾಯೋದಾ-**
**ಹರಂತಿ ಹಿ ॥೧೦೩॥**

ಈಶ್ವರನ ವಿಷಯದಲ್ಲಿಯೂ ವಾದಿಗಳು ತಮ್ಮ ತಮ್ಮ ಯುಕ್ತಿಗನುಸಾರವಾಗಿ ಜಗಳವಾಡುತ್ತಾರೆ ಮತ್ತು ಸ್ವಮತವನ್ನು ಬಲಗೊಳಿಸಿಕೊಳ್ಳಲು ಶ್ರುತಿಯ ಬೇರೆ ಬೇರೆ ವಾಕ್ಯಗಳನ್ನು ತಮ್ಮ ತಿಳಿವಳಿಕೆಯಂತೆ ಪ್ರಮಾಣವಾಗಿ ಉದಹರಿಸುತ್ತಾರೆ.

—ಈಗ ಮಹರ್ಷಿ ಪತಂಜಲಿಗಳ ಈಶ್ವರಪ್ರತಿಪಾದಕ ( ಯೋಗ) ಸೂತ್ರದ ಅರ್ಥ.

**ಕ್ಲೇಶಕರ್ಮವಿಪಾಕೈಸ್ತದಾಶಯೈರಪ್ಯಸಂಯುತಃ ।**
**ಪುಂ ವಿಶೇಷೋಭವೇದೀಶೋ ಜೀವವತ್**
**ಸೋಽಪ್ಯಸಂಗಚಿತ್ ॥೧೦೪॥**

ಅವಿದ್ಯೆ (ಅಜ್ಞಾನ) ಅಸ್ಮಿತೆ (ಗರ್ವ) ರಾಗ, ದ್ವೇಷ, ಅಭಿನಿವೇಶ ಎಂಬ ಐದು ಕ್ಲೇಶಗಳನ್ನೂ ಶುಕ್ಲ (ಪುಣ್ಯ) ಕೃಷ್ಣ (ಪಾಪ) ಅಶುಕ್ಲಕೃಷ್ಣ (ಪಾಪ–ಪುಣ್ಯಗಳೆರಡೂ ಅಲ್ಲದ್ದು) ಎಂಬ ಮೂರುಬಗೆಯ ಕರ್ಮಗಳನ್ನೂ ಆ ಕರ್ಮಗಳ ಫಲ ವಿಶೇಷವೆನಿಸುವ ಮನುಷ್ಯ ಮೊದಲಾದ ಜಾತಿ-ಆಯುಷ್ಯ ತಕ್ಕಸುಖ–ದುಃಖಗಳು ಎಂಬ ವಿಪಾಕಗಳನ್ನು ಅವುಗಳ ಸಂಸ್ಕಾರಗಳನ್ನು ಎಂದಿಗೂ ಹಚ್ಚಿಕೊಳ್ಳದ ಪುರುಷನು ಈಶ್ವರನು. ಅವನೂ ಜೀವನಂತೆ ಅಸಂಗ ಚಿದ್ರೂಪನಾಗಿರುವನು.

—ಹಾಗಿದ್ದರೆ ಅವನು ಪ್ರಕೃತಿ–ಕ್ಷೇತ್ರಜ್ಞಾದಿಗಳ ನಿಯಾಮಕನು ಹೇಗಾಗಬಲ್ಲನು ?

**ತಥಾಽಪಿ ಪುಂವಿಶೇಷತ್ವಾದ್ ಘಟತೇಽಸ್ಯ ನಿಯಂತೃತಾ ।**
**ಅವ್ಯವಸ್ಥೌ ಬಂಧಮೋಕ್ಷಾವಾಪತೇತಾಮಿಹಾನ್ಯಥಾ ॥೧೦೫॥**

ಆದರೂ ಕೂಡ ಅವನು ಪುರುಷ ವಿಶೇಷನೆನಿಸುವದರಿಂದ ಅವನಿಗೆ ನಿಯಾಮಕತ್ವವು ಉಂಟಾಗುವದು. ಹಾಗಿಲ್ಲವೆಂದರೆ ಜೀವರಬಂಧ–ಮೋಕ್ಷಗಳ ವ್ಯವಸ್ಥೆಯೇ ಉಳಿಯದೇಹೋಗುವದು.

—ಯೋಗಿಗಳು ಹೇಳುವದೇನಂದರೆ— ನಮ್ಮ ಅಭಿಪ್ರಾಯವು ಅಪ್ರಮಾಣವೆಂದು ಅನ್ನದಿರಿ. ಯಾಕಂದರೆ—

**ಭೀಷಾಽಸ್ಮಾದಿತ್ಯೇವ ಮಾದಾವಸಂಗಸ್ಯ ಪರಾತ್ಮನಃ ।**
**ಶ್ರುತಂ ತದುಕ್ತಮಪ್ಯಸ್ಯಕ್ಲೇಶಕರ್ಮಾದ್ಯಸಂಗಮಾತ್॥೧೦೬॥**

ಈಶ್ವರನ ಭಯದಿಂದಲೇ ಗಾಳಿಬೀಸುತ್ತದೆ ಇತ್ಯಾದಿ ಶ್ರುತಿಗಳಲ್ಲಿ ಅಸಂಗನೆನಿಸುವ ಪರಮಾತ್ಮನ ಮೇಲೆಯೂ ನಿಯಾಮಕತ್ವವನ್ನು ಹೊರೆಸಿರುತ್ತದೆ. ಕ್ಲೇಶ–ಕರ್ಮಾದಿಗಳನ್ನು ಹಚ್ಚಿಕೊಳ್ಳದ ಪರಮಾತ್ಮನ ವಿಷಯದಲ್ಲಿ ಇದು ಯೋಗ್ಯವೇ ಆಗಿದೆ.

—ಅದರೆ ಜೀವಕೂಡ ಯಾವದನ್ನೂ ಹಚ್ಚಿಕೊಳ್ಳದವನು, ಚಿದ್ರೂಪನೂ ಆಗಿರುವನು. ಎಂದ ಮೇಲೆ ಅವನು ಕೂಡ ಕ್ಲೇಶ–ಕರ್ಮಾದಿಗಳಿಂದ ರಹಿತನಾಗಿರಬೇಕು ಹೀಗಿರುವಾಗ ಜೀವ–ಮತ್ತು ಈಶ್ವರರಲ್ಲಿ ಹೆಚ್ಚು ಕಡಿಮೆ ಏನು ?

**ಜೀವಾನಾಮಪ್ಯಸಂಗತ್ವಾತ್ ಕ್ಲೇಶಾದಿರ್ನಹ್ಯಥಾಪಿಚ ।**
**ವಿವೇಕಾಗ್ರಹತಃ ಕ್ಲೇಶಕರ್ಮಾದಿ ಪ್ರಾಗುದಿರೀತಮ್ ॥೧೦೭॥**

ಯಾವದನ್ನು ಹಚ್ಚಿಕೊಳ್ಳದವನಾದುದರಿಂದ ಜೀವನಿಗೆಕೂಡ ಕ್ಲೇಶಾದಿ ದೋಷಗಳು ಇಲ್ಲ. ಆದರೂ ಕೂಡ ಅವನು ವಿವೇಕವನ್ನು ಮಾಡಿಕೊಳ್ಳಲಾರದವನಾದುದರಿಂದ ಅವನಿಗೆ ಕ್ಲೇಶ–ಕರ್ಮಗಳು ಗಂಟುಬೀಳುತ್ತವೆಂದು ಮೊದಲು ಹೇಳಿದೆ.

—ಈಶ್ವರನು ಜೀವರಿಗಿಂತ ಬೇರೆಎನ್ನುವ ತಾರ್ಕಿಕರು ಮುಖ್ಯವಾಗಿ ಈಶ್ವರನು ಜ್ಞಾನ–ಇಚ್ಛಾ–ಪ್ರಯತ್ನಗಳೆಂಬ ಮೂರು ನಿತ್ಯಗುಣಗಳಿಂದ ಕೂಡಿರುವನು ಎನ್ನುತ್ತಾರೆ.

**ನಿತ್ಯಜ್ಞಾನ ಪ್ರಯತ್ನೇಚ್ಛಾ ಗುಣಾನೀಶಸ್ಯ ಮನ್ವತೇ ।**
**ಅಸಂಗಸ್ಯ ನಿಯಂತೃತ್ವಮಯುಕ್ತಮಿತಿ ತಾರ್ಕಿಕಾಃ ॥೧೦೮॥**

ಯಾವದನ್ನೂ ಹಚ್ಚಿಕೊಳ್ಳದವನು ನಿಯಾಮಕನೆನ್ನುವದು ಯೋಗ್ಯವಲ್ಲ. ಆದುದರಿಂದ ತಾರ್ಕಿಕರು ಈಶ್ವರನು ಜ್ಞಾನ–ಇಚ್ಛಾ–ಪ್ರಯತ್ನಗಳೆಂಬ ನಿತ್ಯಗುಣಗಳಿಂದ ಕೂಡಿದವನೆಂದು ತಾರ್ಕಿಕರು ತಿಳಿಯುತ್ತಾರೆ.

ಇಚ್ಛಾದಿಗುಣಗಳಿಂದ ಕೂಡಿದ ಈಶ್ವರನು ಜೀವರಿಗಿಂತ ವಿಲಕ್ಷಣನೆನಿಸುವ ಪುರುಷವಿಶೇಷನು ಹೇಗೆ ?

**ಪುಂ ವಿಶೇಷತ್ವಮಪ್ಯಸ್ಯ ಗುಣೈರೇವ ನ ಚಾನ್ಯಥಾ ।**
**ಸತ್ಯಕಾಮಃ ಸತ್ಯಸಂಕಲ್ಪ ಇತ್ಯಾದಿ ಶ್ರುತಿರ್ಜಗೌ ॥೧೦೯॥**

ಇವನ ಪುರುಷವಿಶೇಷತ್ವವು ಗುಣಗಳಯೋಗದಿಂದ ಬಂದದ್ದು. ಮತ್ತಾವದರಿಂದಲೂ ಅಲ್ಲ. ಈಶ್ವರನು ಸತ್ಯಕಾಮನೆಂದೂ, ಸತ್ಯಸಂಕಲ್ಪನೆಂದೂ ಶ್ರುತಿಯು ಹೇಳುತ್ತದೆ.

ಈ ಮತದಲ್ಲಿಯೂ ದೋಷಗಳನ್ನು ಕಂಡು ಬೇರೊಂದು ಮತ ಹೇಳುತ್ತಾರೆ.

**ನಿತ್ಯಜ್ಞಾನಾದಿಮತ್ವೇಽಸ್ಯ ಸೃಷ್ಟಿರೇವ ಸದಾ ಭವೇತ್ ।**
**ಹಿರಣ್ಯಗರ್ಭ ಈಶೋಽತೋ ಲಿಂಗದೇಹೇನ ಸಂಯುತಃ ॥೧೧೦॥**

ಹೀಗೆ ಪರಮಾತ್ಮನು ಯಾವಾಗಲೂ ನಿತ್ಯಜ್ಞಾನಾದಿಗಳಿಂದ ಕೂಡಿದವನೆಂದರೆ ಹಾಗೇ ಸೃಷ್ಟಿಯು ನಡೆದು ಪ್ರಳಯವೆಂದಿಗೂ ಆಗುತ್ತಿರಲಿಲ್ಲ. (ಸೃಷ್ಟಿ ಮೊದಲಾದವುಗಳಿಗಾಗಿಯೇ ಈಶ್ವರನಲ್ಲಿ ಜ್ಞಾನಾದಿಗಳಿರುವವೆಂದು ತಿಳಿಯಲಾಗಿದೆ.) ಆದುದರಿಂದ ಎಲ್ಲ ಲಿಂಗ ಶರೀರಾಭಿಮಾನಿಯಾದ ಹಿರಣ್ಯಗರ್ಭನೇ ಈಶ್ವರನು.

—ಇದಕ್ಕೆ ಪ್ರಮಾಣವೇನು ?

**ಉದ್ಗೀಥಬ್ರಾಹ್ಮಣೇ ತಸ್ಯ ಮಾಹಾತ್ಮ್ಯಮತಿವಿಸ್ತೃತಮ್ ।**
**ಲಿಂಗಸತ್ತ್ವೇಽಪಿ ಜೀವತ್ವಂ ನಾಸ್ಯಕರ್ಮಾದ್ಯಭಾವತಃ ॥೧೧೧॥**

ಉದ್ಗೀಥ ಬ್ರಾಹ್ಮಣ (ಛಾಂದೋಗ್ಯ)ದಲ್ಲಿ ಅವನ ಮಹಿಮೆಯನ್ನು ವಿಸ್ತಾರಪೂರ್ವಕವಾಗಿ ವರ್ಣಿಸಲಾಗಿದೆ. ಲಿಂಗಶರೀರಾಭಿಮಾನಿಯಾದರೂ ಜೀವರಂತೆ ಇವನಿಗೆ ಅವಿದ್ಯೆ-ಕಾಮ-ಕರ್ಮಗಳಿಲ್ಲದ್ದರಿಂದ ಇವನು ಜೀವರಂತಾಗಲಾರನು.

ಸ್ಥೂಲದೇಹವಿಲ್ಲದೇ ಲಿಂಗದೇಹವು ಎಲ್ಲಿಯೂ ಕಾಣುವದಿಲ್ಲ. ಆದುದರಿಂದ ಎಲ್ಲ ಸ್ಥೂಲದೇಹಗಳ ಅಭಿಮಾನತಾಳುವ ವಿರಾಟ್ಪುರುಷನೇ ಈಶ್ವರನು. (ಇದು ವಿರಾಡೋಪಾಸಕರು ಅಥವಾ ವಿಶ್ವರೂಪೋಪಾಸಕರ ಮತವು.)

**ಸ್ಥೂಲದೇಹಂ ವಿನಾ ಲಿಂಗದೇಹೋ ನ ಕ್ವಾಪಿ ದೃಶ್ಯತೇ ।**
**ವೈರಾಜೋ ದೇಹ ಈಶೋಽತಃ ಸರ್ವತೋ ಮಸ್ತ-**
**ಕಾದಿಮಾನ್ ॥೧೧೨॥**

ಸ್ಥೂಲದೇಹವಿಲ್ಲದೇ ಲಿಂಗದೇಹವು ಎಲ್ಲಿಯೂ ಕಾಣಸಿಗುವದಿಲ್ಲ. ಆದುದರಿಂದ ಎಲ್ಲ ಕಡೆಗೆ ತಲೆ-ಕಾಲು-ಕಣ್ಣುಗಳುಳ್ಳ ದೇಹದವನಾದ ವಿರಾಟ್ಪುರುಷನೇ ಈಶ್ವರನು. ಇದಕ್ಕೆ ಶ್ರುತಿಪ್ರಮಾಣ.

**ಸಹಸ್ರಶೀರ್ಷೇತ್ಯೇವಂ ಚ ವಿಶ್ವತಶ್ಚಕ್ಷುರಿತ್ಯಪಿ ।**
**ಶ್ರುತಮಿತ್ಯಾಹುರನಿಶಂ ವಿಶ್ವರೂಪಸ್ಯ ಚಿಂತಕಾಃ ॥೧೧೩॥**

ಅವನಿಗೆ 'ಸಾವಿರಾರು ತಲೆಗಳಿವೆ' ಮತ್ತು ಅವನಿಗೆ 'ಎಲ್ಲ ಕಡೆಗೂ ಕಣ್ಣುಗಳಿವೆ.' ಹೀಗೆಂದು ಶ್ರುತಿಗಳಲ್ಲಿ ಹೇಳಿದೆ. ಹೀಗೆ ವಿಶ್ವರೂಪನ ಉಪಾಸನೆ ಮಾಡುವವರು ಹೇಳುತ್ತಾರೆ.

—ಈ ಮತದಲ್ಲಿಯೂ ಅನೇಕ ದೋಷಗಳಿರುವವೆಂದು ಕೆಲವರು ಬೇರೆ–ಬೇರೆ ದೇವರನ್ನು ಆಶ್ರಯಿಸುತ್ತ ನಡೆದರು.

**ಸರ್ವತಃ ಪಾಣಿಪಾದತ್ವೇ ಕ್ರಿಮ್ಯಾದೇರಪಿ ಚೇಶತಾ ।**
**ತತಶ್ಚತುರ್ಮುಖೋ ದೇವ ಏವೇಶೋ ನೇತರಃ**
**ಪುಮಾನ್ ॥೧೧೪॥**

ಈಶ್ವರನಿಗೆ ಎಲ್ಲ ಕಡೆಗೂ ಕೈ-ಕಾಲುಗಳುಂಟು ಎಂದು ತಿಳಿಯುವ ದಾದರೆ ಕೆಲವು ಕೀಟ (ಬೆಟ್ಟೇಬೆನಕ-ಜಿರಲೆ ಮುಂ.) ಗಳು ಕೂಡ ದೇವರಾ ದಾವು. ಆದುದರಿಂದ ಚತುರ್ಮುಖನಾದ ದೇವನೇ ಈಶ್ವರನು. ಇತರ ಯಾವದೇ ಪುರುಷನಲ್ಲ.

ಈ ವಿಷಯದಲ್ಲಿ ಶ್ರುತಿಪ್ರಮಾಣ.

**ಪುತ್ರಾರ್ಥಂ ತಮುಪಾಸೀನಾ ಏವ ಮಾಹುಃ ಪ್ರಜಾಪತಿಃ ।**
**ಪ್ರಜಾ ಅಸೃಜತೇತ್ಯಾದಿಶ್ರುತಿಂ ಚೋದಾಹರಂತ್ಯಮೀ ॥೧೧೫॥**

ಮಕ್ಕಳಿಗಾಗಿ ಅವನನ್ನು ಉಪಾಸನೆ ಮಾಡುವವರು ಹೀಗನ್ನುತ್ತಾರೆ. "ಪ್ರಜಾಪತಿಯು ಪ್ರಜೆಗಳನ್ನು ಹುಟ್ಟಿಸಿದನು" ಎಂದು (ತೈತ್ತರೀಯ) ಶ್ರುತಿ ಪ್ರಮಾಣವನ್ನು ಹೇಳುತ್ತಾರೆ.

— ಭಾಗವತ ಮತವನ್ನು ಹೇಳುತ್ತಾರೆ.

**ವಿಷ್ಣೋರ್ನಾಭೇಃ ಸಮುದ್‌ಭೂತೋ ವೇಧಾಃ**
**ಕಮಲಜಸ್ತತಃ ।**
**ವಿಷ್ಣುರೇವೇಶ ಇತ್ಯಾಹುರ್ಲೋಕೇ ಭಾಗವತಾ ಜನಾಃ ॥೧೧೬॥**

ಕಮಲೋದ್ಭವನೆನಿಸುವ ಬ್ರಹ್ಮದೇವನು ವಿಷ್ಣುವಿನ ನಾಭಿಕಮಲದಿಂದ ಹುಟ್ಟಿರುವನು. ಆದುದರಿಂದ ವಿಷ್ಣುವೇ ಈಶ್ವರನು, ಎಂದು ಭಾಗವತ ಸಾಂಪ್ರದಾಯಕರು ಹೇಳುವರು.

—ಪೌರಾಣಿಕ ಆಖ್ಯಾನಗಳಿಂದಲೇ ಶೈವರು ಈ ಮತವನ್ನು ಖಂಡಿಸುವರು.

**ಶಿವಸ್ಯ ಪಾದಾವನ್ವೇಷ್ಟುಂ ಶಾಙ್ಗ್ರ್ಯಶಕ್ತಸ್ತತಃ ಶಿವಃ ।**
**ಈಶೋ ನ ವಿಷ್ಣುರಿತ್ಯಾಹುಃ ಶೈವಾ ಆಗಮಮಾನಿನಃ ॥೧೧೭॥**

ವಿಷ್ಣುವು ಶಿವನ ಪಾದಗಳನ್ನು ಹುಡುಕಿ ಕಾಣದಾದನು. ಆದುದರಿಂದ ಶಿವನೇ ಈಶ್ವರನು. ವಿಷ್ಣುವಲ್ಲ. ಹೀಗೆಂದು ಶಿವಾಗಮಗಳ ಅಭಿಮಾನಿಗಳಾದ ಶೈವರು ಹೇಳುವರು.

(ಶಿವ ಪುರಾಣ ಹಾಗೂ ಮಹಿಮ್ನಸ್ತೋತ್ರದಲ್ಲಿ ಮೇಲಿನ ಆಖ್ಯಾಯಿಕೆ ಬಂದಿರುತ್ತದೆ.)

—ಗಾಣಪತ್ಯರು.

**ಪುರತ್ರಯಂ ಸಾದಯಿತುಂ ವಿಘ್ನೇಶಂ ಸೋಽಪ್ಯಪೂಜಯತ್ ।**
**ವಿನಾಯಕಂ ಪ್ರಾಹುರೀಶಂ ಗಾಣಪತ್ಯಮತೇ ರತಾಃ ॥೧೧೮॥**

(ಈ ಕಥೆ ಗಣೇಶ ಪುರಾಣದಲ್ಲಿ ಬಂದಿರುತ್ತದೆ.)

ಇದೇ ನ್ಯಾಯವು ಇತರ ವಾದಿಗಳಿಗೂ ಅನ್ವಯಿಸುತ್ತದೆ.

**ಏವಮನ್ಯೇ ಸ್ವಸ್ವಪಕ್ಷಾಭಿಮಾನೇನಾನ್ಯಥಾಽನ್ಯಥಾ ।**
**ಮಂತ್ರಾರ್ಥವಾದ ಕಲ್ಪಾದೀನಾಶ್ರಿತ್ಯ ಪ್ರತಿಪೇದಿರೇ ॥೧೧೯॥**

ಹೀಗೆ ಬೇರೆ ವಾದಿಗಳು ಕೂಡ ಮಂತ್ರ-ಫಲಶ್ರುತಿ-ವ್ರತಕಲ್ಪ ಮೊದಲಾದವುಗಳ ಆಧಾರವನ್ನು ಮುಂದೆಮಾಡಿ ತಮ್ಮ ತಮ್ಮ ಮತಾಭಿಮಾನದಿಂದ ಬೇರೆ-ಬೇರೆ ರೀತಿಯಾಗಿ ಈಶ್ವರನನ್ನು ಪ್ರತಿಪಾದಿಸುವದುಂಟು.

—ಹಾಗಾದರೆ ಈಶ್ವರನಬಗೆಗೆ ಎಷ್ಟುಪ್ರಕಾರದ ಅಭಿಪ್ರಾಯಗಳು ?

**ಅಂತರ್ಯಾಮಿಣಮಾರಭ್ಯ ಸ್ಥಾವರಾಂತೇಶವಾದಿನಃ ।**
**ಸಂತ್ಯಶ್ವತ್ಥಾರ್ಕವಂಶಾದೇಃ ಕುಲದೈವತದರ್ಶನಾತ್ ॥೧೨೦॥**

ಅಂತರ್ಯಾಮಿಯನ್ನು ಮೊದಲು ಮಾಡಿಕೊಂಡು ಗಿಡ–ಮರ–ಕಲ್ಲು–ದುಂಡಿಗಳನ್ನು ಈಶ್ವರನೆಂದು ತಿಳಿಯುವವರುಂಟು. ಅರಳೀಗಿಡ–ಎಕ್ಕೀಗಿಡ-ಬಿದಿರು ಇತ್ಯಾದಿಗಳನ್ನು ಕುಲದೇವರೆಂದು ಭಾವಿಸುವವರು ಕಂಡುಬರುತ್ತಾರೆ.

—ಇರಲಿ, ಇವುಗಳಲ್ಲಿ ಸ್ವೀಕಾರಯೋಗ್ಯಯಾವುದು ? ತ್ಯಾಜ್ಯ ಯಾವುದು ?

**ತತ್ವನಿಶ್ಚಯ ಕಾಮೇನ ನ್ಯಾಯಾಗಮ ವಿಚಾರಿಣಾಮ್ ।**
**ಏಕೈವ ಪ್ರತಿಪತ್ತಿಃ ಸ್ಯಾತ್ ಸಾಽಪ್ಯತ್ರ ಸ್ಫುಟ-**
**ಮುಚ್ಯತೇ ॥೧೨೧॥**

ತತ್ವದ ವಿಷಯದಲ್ಲಿ ನಿಶ್ಚಯ ಮಾಡಿಕೊಳ್ಳಬೇಕೆಂದು ನ್ಯಾಯ-ವೇದ ಮುಂತಾದವುಗಳ ವಿಚಾರ ಮಾಡುವವರಿಗೆ ಒಂದೇ ಒಂದು ತಿಳಿವಳಿಕೆಯು ಇರುತ್ತದೆ. ಇಲ್ಲಿ ಅದನ್ನು ಸ್ಪಷ್ಟವಾಗಿ ಹೇಳಲಾಗುತ್ತದೆ.

—ಅದು ಏನು ?

**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಮ್।**
**ಅಸ್ಯಾವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ।೧೨೨॥**

ಮಾಯೆಯು ಪ್ರಕೃತಿ. ಮಾಯೆಯನ್ನು ಅಧೀನದಲ್ಲಿಟ್ಟುಕೊಂಡವನು ಮಹೇಶ್ವರ. ಆ ಪರಮೇಶ್ವರನ ಅವಯವ ರೂಪರಾದ ಜೀವದಿಂದ ಈ ಜಗತ್ತು ತುಂಬಿದೆ.

—ಈ ಶ್ರುತಿ (ಶ್ವೇತಾಶ್ವತರ) ಗನುಸಾರವಾಗಿ ಈಶ್ವರನನ್ನು ನಿರ್ಣಯಿಸುವದು ಯೋಗ್ಯ.

**ಇತಿ ಶ್ರುತ್ಯಾನುಸಾರೇಣ ನ್ಯಾಯೋ ನಿರ್ಣಯ ಈಶ್ವರೇ ।**
**ತಥಾ ಸತ್ಯವಿರೋಧಃ ಸ್ಯಾತ್ ಸ್ಥಾವರಾಂತೇಶ**
**ವಾದಿನಾಮ್ ॥೧೨೩॥**

ಈ ಶ್ರುತಿಗನುಸಾರವಾಗಿ ಈಶ್ವರನ ವಿಷಯದಲ್ಲಿ ನಿರ್ಣಯ ಮಾಡುವುದು ಉಚಿತವಾಗಿದೆ. ಹೀಗೆ ನಿರ್ಣಯ ಮಾಡುವದರಿಂದಲೇ ಸ್ಥಾವರ ಪದಾರ್ಥಗಳವರೆಗೆ ಈಶ್ವರನೆಂದು ಭಾವಿಸುವವರ ಅಭಿಪ್ರಾಯಕ್ಕೆ ವಿರೋಧವು ಬರುವದಿಲ್ಲ.

—ಈ ಜಗತ್ತಿನ ಉಪಾದಾನಭೂತ ಮಾಯೆಯ ಸ್ವರೂಪವೇನು?

**ಮಾಯಾ ಚೇಯಂ ತಮೋರೂಪಾ ತಾಪನೀಯೇ ತದೀರಿಣಾತ್।**
**ಅನುಭೂತಿಂ ತತ್ರ ಮಾನಂ ಪ್ರತಿಜಜ್ಞೇ ಶ್ರುತಿಃ**
**ಸ್ವಯಮ್ ॥೧೨೪॥**

ಈ ಮಾಯೆಯು ತಮೋ ರೂಪವಾಗಿದೆ. ನೃಸಿಂಹೋತ್ತರ ತಾಪನೀಯೋಪನಿಷತ್ತಿನಲ್ಲಿ ಹಾಗೆ ಹೇಳಿದೆ. ಆ ವಿಷಯದಲ್ಲಿ ಸ್ವತಃ ಶ್ರುತಿಯು ‘ ಅನುಭವವೇ ಪ್ರಮಾಣ, ವೆಂದು ಪ್ರತಿಜ್ಞೆ ಮಾಡಿದೆ.

—ಮಾಯೆಯ ಈ ತಮೋ ರೂಪದ ಅನುಭವವೆಲ್ಲಿ ಬರುತ್ತದೆ?

**ಜಡಂ ಮೋಹಾತ್ಮಕಂ ತಚ್ಚೇತ್ಯನುಭಾವಯತಿ ಶ್ರುತಿಃ ।**
**ಆಬಾಲಗೋಪಂ ಸ್ಪಷ್ಟತ್ವಾದಾನಂತ್ಯಂ ತಸ್ಯ ಸಾಽಬ್ರವೀತ್ ॥೧೨೫॥**

ಅದು ಜಡವೂ, ಮೋಹಾತ್ಮಕವೂ ಆಗಿದೆ, ಎಂದು ಶ್ರುತಿಯು ಅದರ ಅನುಭವವನ್ನು ಹೇಳುತ್ತದೆ. ಹಾಗೆ ಅದರ ಅನುಭವವು ಸಣ್ಣ ಹುಡುಗರನ್ನು ಮೊದಲು ಮಾಡಿಕೊಂಡು ದನಕಾಯುವವರ ವರೆಗೆ ಇರುವದರಿಂದ ಶ್ರುತಿಯು ಕೊನೆ ಇಲ್ಲದ್ದೆಂದು ಹೇಳುವುದು.

('ತದೇತಜ್ಜಡಂ ಮೋಹಾತ್ಮಕಂ, ಎಂಬುದು ಸ್ವರೂಪ. ಅದರ ಕಾರ್ಯ ಸ್ವರೂಪ ಅನಂತಂತುಚ್ಛಂ ಇದಂ ರೂಪಂ, ಎಂಬುದು)

—ಜಡವೆಂದರೇನು? ಮೋಹವೆಂದರೇನು?

**ಅಚಿದಾತ್ಮಘಟಾದೀನಾಂ ಯತ್ಸ್ವರೂಪಂ ಜಡಂ ಹಿ ತತ್ ।**
**ಯತ್ರ ಕುಂಠೀಭವೇದ್ಬುದ್ಧಿಃ ಸಮೋಹ ಇತಿ ಲೌಕಿಕಾಃ ॥೧೨೬॥**

ಚೈತನ್ಯಶೂನ್ಯವಾಗಿರುವ (ಮಾಯೆಯ ಕಾರ್ಯವೇ ಆಗಿರುವ) ಘಟಾದಿಗಳಸ್ವರೂಪಕ್ಕೇ ಜಡವೆನ್ನುವರು. ಯಾವ ಪ್ರಸಂಗದಲ್ಲಿ ಬುದ್ಧಿಯು ಮುಂದುಗಾಣದೇ ನಿಂತುಕೊಳ್ಳುವುದೋ ಅದು ಮೋಹವೆಂದು ಸಾಮಾನ್ಯ ಜನರು ಕೂಡ ಹೇಳುವರು.

—ಹೀಗೆ ಸರ್ವರಿಗೂ ಅನುಭವಕ್ಕೆ ಬರುತ್ತಿರುವ ಮಾಯಾಕಾರ್ಯದ ವ್ಯಾಪಕತ್ವವು ಸಿದ್ಧವಾಯಿತು.

**ಇತ್ಥಂ ಲೌಕಿಕದೃಷ್ಟ್ಯೈತತ್ ಸರ್ವೈರಪ್ಯನುಭೂಯತೇ ।**
**ಯುಕ್ತಿದೃಷ್ಟ್ಯಾತ್ವನಿರ್ವಾಚ್ಯಂ ನಾಸದಾಸೀದಿತಿ ಶ್ರುತೇಃ ॥೧೨೭॥**

ಹೀಗೆ ಲೌಕಿಕ ದೃಷ್ಟಿಯಿಂದ ತಮೋರೂಪವಾದ ಮಾಯೆಯನ್ನು ಎಲ್ಲರೂ ಅನುಭವಿಸುವರು. ಯುಕ್ತಿ ದೃಷ್ಟಿಯಿಂದ ಅದು ಅನಿರ್ವಚನೀಯ ವಾಗಿದೆ. ಆ ವಿಷಯದಲ್ಲಿ 'ನಾ ಸದಾ ಸೀತ್, ಎಂದರೆ ಆಗ ಸತ್ ಇರಲಿಲ್ಲ ಹಾಗೂ ಅಸತ್ ಇರಲಿಲ್ಲ ಎಂಬ ಶ್ರುತಿಯು ಪ್ರಮಾಣವಾಗಿದೆ.

(ಅನಿರ್ವಚನೀಯವೆಂದರೆ ಇರುವುದೆನ್ನಲಿಕ್ಕೂ, ಇಲ್ಲವೆನ್ನಲಿಕ್ಕೂ ಬಾರದಂಥದು)

—ಆ ಶ್ರುತಿಯ ಅಭಿಪ್ರಾಯ.

**ನಾಸದಾಸೀದ್ವಿಭಾತತ್ವಾನ್ನೋ ಸದಾಸೀಚ್ಚ ಬಾಧನಾತ್ ।**
**ವಿದ್ಯಾದೃಷ್ಟ್ಯಾ ಶ್ರುತಂ ತುಚ್ಛಂ ತಸ್ಯ ನಿತ್ಯನಿವೃತ್ತಿತಃ ॥೧೨೮॥**

ಸ್ಪಷ್ಟವಾಗಿ ಕಾಣುವವರಿಂದ ಸುಳ್ಳಲ್ಲ. ಶ್ರುತಿಯು ನಿಷೇಧ ಮಾಡಿದ್ದರಿಂದ ನಿಜವೂ ಅಲ್ಲ. ಕೊನೆಯವರೆಗೆ ಅದು ತೊಲಗುವಂಥದಾದುದರಿಂದ ಜ್ಞಾನ ದೃಷ್ಟಿಯಲ್ಲಿ ಅದು ತುಚ್ಛವಾಗಿದೆ ಎಂದು ಶ್ರುತಿಯು ಹೇಳಿದೆ.

—ಇದುವರೆಗೆ ಹೇಳಿದ್ದರ ಉಪಸಂಹಾರ.

**ತುಚ್ಛಾऽನಿರ್ವಚನೀಯಾ ಚ ವಾಸ್ತವೀ ಚೇತ್ಯಸೌ ತ್ರಿಧಾ ।**
**ಜ್ಞೇಯಾ ಮಾಯಾ ತ್ರಿಭಿರ್ಬೋಧೈಃ ಶ್ರೌತಯೌಕ್ತಿಕ ಲೌಕಿಕೈಃ ॥೧೨೯॥**

ಈ ಮಾಯೆಯು ಶ್ರುತಿ-ಯುಕ್ತಿ-ಮತ್ತು ವ್ಯಾವಹಾರಿಕವೆಂಬ ಮೂರು ಜ್ಞಾನಗಳಿಂದ ತುಚ್ಛ, ಅನಿರ್ವಚನೀಯ, ವ್ಯವಹಾರದ ಮಾತಿಗೆ ಸತ್ಯ ಎಂದು ಮೂರು ಬಗೆಯಾಗಿದೆ ಎಂದು ತಿಳಿಯಬೇಕು.

—ಮಾಯೆಯು ಏನು ಮಾಡುವದೆಂಬುದನ್ನು ತಾಪನೀಯ ಶ್ರುತಿಯ ಆಧಾರದಿಂದ ಹೇಳುವರು.

**ಅಸ್ಯ ಸತ್ವಮಸತ್ವಂ ಚ ಜಗತೋ ದರ್ಶಯತ್ಯಸೌ ।**
**ಪ್ರಸಾರಣಾಚ್ಚ ಸಂಕೋಚಾದ್ಯಥಾ ಚಿತ್ರಪಟಸ್ತಥಾ ॥೧೩೦॥**

ಚಿತ್ರಪಟವನ್ನು ಹರವಿದಾಗ ಚಿತ್ರವಿದ್ದಂತೆ ಸುತ್ತಿದಾಗ ಇಲ್ಲದಂತೆ ಹೇಗೆ ಚಿತ್ರಪಟವು ತೋರಿಸುವದೋ ಅದರಂತೆ ಈ ಮಾಯೆಯೂ ಒಮ್ಮೆ ಜಗತ್ತು ಇರುವಂತೆ, ಒಮ್ಮೆ ಇಲ್ಲದಂತೆ ತೋರಿಸುವದು.

—ಶ್ರುತಿಯು ಈ ಮಾಯೆಯು ಸ್ವತಂತ್ರವೋ, ಅಸ್ವತಂತ್ರವೋ ಎಂಬುದನ್ನು ಹೇಳಿದೆ.

**ಅಸ್ವತಂತ್ರಾ ಹಿ ಮಾಯಾ ಸ್ಯಾದಪ್ರತೀತೇರ್ವಿನಾ ಚಿತಿಮ್ ।**
**ಸ್ವತಂತ್ರಾऽಪಿ ತಥೈವ ಸ್ಯಾದಸಂಗಸ್ಯಾನ್ಯಥಾಕೃತೇಃ ॥೧೩೧॥**

ಚೈತನ್ಯದ ಹೊರತೂ ಇದು ಅನುಭವಕ್ಕೆ ಬರುವದಿಲ್ಲವಾದುದರಿಂದ ಮಾಯೆಯು ಅಸ್ವತಂತ್ರವೆನಿಸುವದು. ಅದರಂತೆ ಅಸಂಗವೆನಿಸಿದ ಚೈತನ್ಯಕ್ಕೆ ಸಂಗವನ್ನು ಮಾಡಿಸುವದರಿಂದ ಸ್ವತಂತ್ರವೆನಿಸುವದು.

—ಈ ಮಾಯೆಯು ಚೈತನ್ಯದಲ್ಲಿ ವಿಪರೀತ ಭಾವವನ್ನು ಹೇಗೆ ಹುಟ್ಟಿಸುವದೆಂದರೆ—

**ಕೂಟಸ್ಥಾಸಂಗಮಾತ್ಮಾನಂ ಜಗತ್ವೇನ ಕರೋತಿ ಸಾ ।**
**ಚಿದಭಾಸಸ್ವರೂಪೇಣ ಜೀವೇಶಾವಪಿ ನಿರ್ಮಮೇ ॥೧೩೨॥**

ಅದು ಯಾವ ವಿಕಾರವನ್ನೂ ಹೊಂದದ-ಹಾಗೂ ಯಾವುದನ್ನೂ ಹಚ್ಚಿಕೊಳ್ಳದ ಆತ್ಮನು ಜಗದ್ರೂಪವಾಗಿ ಕಾಣುವಂತೆ ಮಾಡುವದು. ಅದರಂತೆ ಚೈತನ್ಯದ ಪ್ರತಿಬಿಂಬರೂಪನಾದ ಜೀವ-ಮತ್ತು ಈಶ್ವರರನ್ನೂ ನಿರ್ಮಿಸುತ್ತದೆ.

(ಅಜ್ಞಾನದ ಒಟ್ಟಿನ ಸ್ವರೂಪವಾದ ಮಾಯೆಯಲ್ಲಿ ಪ್ರತಿಬಿಂಬಿಸಿದ ಚೈತನ್ಯವು ಈಶ್ವರ. ಅಜ್ಞಾನದ ಬಿಡಿ ಬಿಡಿ ಸ್ವರೂಪವಾದ ಅವಿದ್ಯೆಯಲ್ಲಿ ಪ್ರತಿಬಿಂಬಿಸಿದ ಚೈತನ್ಯವು ಜೀವ)

—ಒಳ್ಳೇದು. ಮಾಯೆಯು ಹೀಗೆ ಆತ್ಮನನ್ನು ವಿಪರೀತವಾಗಿ ಕಾಣುವಂತೆ ಮಾಡುವದಾದರೆ ಅವನ ಕೂಟಸ್ಥತ್ವವು ಹೇಗೆ ಉಳಿಯುವದು?

**ಕೂಟಸ್ಥಮನುಪದ್ರುತ್ಯ ಕರೋತಿ ಜಗದಾದಿಕಮ್ ।**
**ದುರ್ಘಟೈಕವಿಧಾಯಿನ್ಯಾಂ ಮಾಯಾಯಾಂ ಕಾ ಚಮತ್ಕೃತಿಃ ॥೧೩೩॥**

ಮಾಯೆಯು ಕೂಟಸ್ಥ ಆತ್ಮನಿಗೆ ಯಾವುದೇ ಉಪದ್ರವ—ವಿಕಾರಾದಿಗಳನ್ನು ಉಂಟು ಮಾಡದೇ ಜಗತ್ತು ಮೊದಲಾದ ರೂಪವಾಗಿ ಕಾಣುವಂತೆ ಮಾಡುವದು. ಅಶಕ್ಯವಾದುದನ್ನು ಶಕ್ಯವಾಗಿ ಮಾಡುವಂಥ ಮಾಯೆಯ ವಿಷಯದಲ್ಲಿ ಯಾವುದು ಆಶ್ಚರ್ಯ? —ಉದಾಹರಣೆ

**ದ್ರವತ್ವಮುದಕೇ ವಹ್ನಾವೌಷ್ಣ್ಯಂ ಕಾಠಿಣ್ಯಮಶ್ಮನಿ ।**
**ಮಾಯಾಯಾ ದುರ್ಘಟತ್ವಂ ಚ ಸ್ವತಃ ಸಿದ್ಧ್ಯತಿ ನಾನ್ಯತಃ ॥೧೩೪॥**

ನೀರಿನಲ್ಲಿ ಹರಿದಾಡುವಿಕೆ, ಬೆಂಕಿಯಲ್ಲಿ ಬಿಸಿಯಾಗಿಸುವಿಕೆ, ಕಲ್ಲಿನಲ್ಲಿ ಬಿರುಸಾಗಿರುವಿಕೆ ಹೇಗೋ ಅದರಂತೆ ಅಶಕ್ಯವಾದುದನ್ನು ಶಕ್ಯವಾಗಿಸುವದು ಮಾಯೆಯ ಸ್ವಭಾವಗುಣ.

—ಮಾಯೆಯ ಈ ಕಾರ್ಯ ಆಶ್ಚರ್ಯಕರವಲ್ಲವೇ? ಅಲ್ಲ. ಅದು ಹೇಗೆ?

**ನವೇತ್ತಿ ಲೋಕೋಯಾವತ್ತಂ ಸಾಕ್ಷಾತ್ತಾವಚ್ಚಮತ್ಕೃತಿಮ್।**
**ಧತ್ತೇ ಮನಸಿ ಪಶ್ಚಾತ್ತು ಮಾಯೈಷೇತ್ಯುಪಶಾಮ್ಯತಿ ॥೧೩೫॥**

ಮನುಷ್ಯನು ಎಲ್ಲಿಯ ವರೆಗೆ ಮಾಯೆಗೆ ಪ್ರೇರಕನಾದ ಪರಮಾತ್ಮನನ್ನು ಪ್ರತ್ಯಕ್ಷವಾಗಿ ತಿಳಿಯುವುದಿಲ್ಲವೋ, ಅಲ್ಲಿಯವರೆಗೆ ಮಾಯೆಗೆ ಮನದಲ್ಲಿ ಬೆರಗಾಗುತ್ತಾನೆ. ಆದರೆ ಆವನನ್ನು ತಿಳಿದಮೇಲೆ ಇದೆಲ್ಲ ಅವನ ಮಾಯೆ ಎಂದು ಶಾಂತನಾಗುತ್ತಾನೆ.

—ಕೂಟಸ್ಥನಿಗೆ ಉಪದ್ರವ ಕೊಡದೇ ಮಾಯೆಯು ಅವನು ಜಗದ್ರೂಪವಾಗಿ ಕಾಣುವಂತೆ ಹೇಗೆ ಮಾಡಿತು?

**ಪ್ರಸರಂತಿ ಹಿ ಚೋದ್ಯಾನಿ ಜಗದ್ವಸ್ತುತ್ವವಾದಿಷು ।**
**ನ ಚೋದನೀಯಂ ಮಾಯಾಯಾಂ ತಸ್ಯಾಶ್ಚೋದ್ಯೈಕ**
**ರೂಪತಃ ॥೧೩೬॥**

ಇಂಥ ಪ್ರಶ್ನಗಳನ್ನು ಜಗತ್ತು ಸತ್ಯವಾಗಿದೆ ಎನ್ನುವ ತಾರ್ಕಿಕರೇ ಮೊದಲಾದವರಿಗೆ ಕೇಳಬೇಕು. ಮಾಯಾವಾದಿಗಳಿಗೆ ಇಂಥ ಪ್ರಶ್ನೆ ಹೂಡುವದು ಯೋಗ್ಯವಲ್ಲ. ಯಾಕಂದರೆ ಆ ಮಾಯೆಯೇ ಅನೇಕ ಪ್ರಶ್ನಗಳ ರೂಪವಾಗಿರುವದರಿಂದ ಅಲ್ಲಿ ಪ್ರಶ್ನಗಳಿಗೆ ಅವಕಾಶವಿಲ್ಲ.

ಒಂದುವೇಳೆ ಮಾಯಾವಾದಿಗಳಿಗೆ ಪ್ರಶ್ನೆ ಮಾಡಿದರೆ ಅತಿ ಪ್ರಸಂಗ ದೋಷ.

**ಚೋದ್ಯೇಽಪಿ ಯದಿ ಚೋದ್ಯಂ ಸ್ಯಾತ್ ತ್ವಚ್ಚೋದ್ಯೇ**
**ಚೋದ್ಯತೇ ಮಯಾ ।**
**ಪರಿಹಾರ್ಯಂ ತತಶ್ಚೋದ್ಯಂ ನ ಪುನಃ**
**ಪ್ರತಿಚೋದ್ಯತಾಮ್ ॥೧೩೭॥**

ಆಕ್ಷೇಪಗಳ ರೂಪವೇ ಎನಿಸಿದ ಮಾಯೆಯ ವಿಷಯದಲ್ಲಿಯೇ ಪ್ರಶ್ನೆ ಮಾಡುವದಾದರೆ ನಾನೂ ನಿನ್ನ ಪ್ರಶ್ನಕ್ಕೆ ಮತ್ತೊಂದು ಪ್ರಶ್ನಮಾಡುತ್ತೇನೆ. (ಇದಕ್ಕೆ ಕೊನೆಎಲ್ಲಿ?) ಆದುದರಿಂದ ಪ್ರಶ್ನಕ್ಕೆ ಪರಿಹಾರ ಕಾಣಬೇಕೆ ಹೊರತು ತಿರುತಿರುಗಿ ಪ್ರಶ್ನಮಾಡಬಾರದು.

**ವಿಸ್ಮಯೈಕ ಶರೀರಾಯಾ ಮಾಯಾಯಾಶ್ಚೋದ್ಯ ರೂಪತಃ ।**
**ಅನ್ವೇಷ್ಯಃ ಪರಿಹಾರೋಽಸ್ಯಾ ಬುದ್ಧಿಮದ್ಭಿಃ**
**ಪ್ರಯತ್ನತಃ ॥೧೩೯॥**

ಆಶ್ಚರ್ಯವನ್ನೇ ರೂಪಗೊಂಡಂತಿರುವ ಮಾಯೆಯು ಆಕ್ಷೇಪರೂಪವೇ. ಬುದ್ಧಿವಂತರಾದವರು ಪ್ರಯತ್ನಪೂರ್ವಕವಾಗಿ ಅದಕ್ಕೆ ಪರಿಹಾರವನ್ನು ಹುಡುಕಬೇಕು.

—ಮಾಯೆಯ ಸ್ವರೂಪವು ಹೀಗಿದೆ ಎಂದು ತಿಳಿದ ಮೇಲಲ್ಲವೇ ಅದರ ಪರಿಹಾರೋಪಾಯ ಹುಡುಕುವದು. ಆದರೆ ಇದುವರೆಗೆ ಮಾಯೆಯ ಸ್ವರೂಪವೇ ನಿರ್ಣಯವಾಗಿಲ್ಲ.

**ಮಾಯಾತ್ವಮೇವ ನಿಶ್ಚೇಯಮಿತಿ ಚೇತ್ತರ್ಹಿ ನಿಶ್ಚಿನು ।**
**ಲೋಕಪ್ರಸಿದ್ಧ ಮಾಯಾಯಾ ಲಕ್ಷಣಂ ಯತ್ತದೀಕ್ಷ್ಯ-**
**ತಾಮ್ ॥೧೩೯॥**

ಮಾಯೆಯ ಸ್ವರೂಪವೆಂಥದು ? ಎಂಬುದನ್ನು ಮೊದಲು ತಿಳಿಯಬೇಕು. ಎಂದರೆ ಅವಶ್ಯತಿಳಿ. ಲೋಕದಲ್ಲಿ ಪ್ರಸಿದ್ಧವಾದ ಮಾಯೆಗೆ ಯಾವ ಲಕ್ಷಣವುಂಟೋ ಅದನ್ನು ನೋಡು.

—ಲೌಕಿಕ ಮಾಯೆಯ ಲಕ್ಷಣವಾದರೂ ಏನು?

**ನ ನಿರೂಪಯಿತುಂ ಶಕ್ಯಾ ವಿಸ್ಪಷ್ಟಂ ಭಾಸತೇ ಚ ಯಾ ।**
**ಸಾ ಮಾಯೇತೀಂದ್ರಜಾಲಾದೌ ಲೋಕಾಃ ಸಂಪ್ರತಿ-**
**ಪೇದಿರೇ ॥೧೪೦॥**

ಹೀಗೆಯೇ ಸರಿ ಎಂದು ಯಾವದರ ಸ್ವರೂಪವನ್ನು ಹೇಳಲಾಗುವದಿಲ್ಲವೋ, ಆದರೂ ಸ್ಪಷ್ಟವಾಗಿ ಕಂಡು ಬರುವದೋ, ಅದು ಮಾಯೆಯು ಎಂದು ಇಂದ್ರಜಾಲ ಮುಂ. ಗಳಲ್ಲಿ ಜನರು ತಿಳಿಯುತ್ತಾರೆ.

ಇದೇ ಲಕ್ಷಣವು ಜಗತ್ಕಾರಣವೆನಿಸುವ ಮಾಯೆಗೂ ಅನ್ವಯಿಸುವದೇ?

**ಸ್ಪಷ್ಟಂ ಭಾತಿ ಜಗಚ್ಚೇದಮಶಕ್ಯಂ ತನ್ನಿರೂಪಣಮ್ ।**
**ಮಾಯಾಮಯಂ ಜಗತ್ತಸ್ಮಾದೀಕ್ಷಸ್ವಾಪ-**
**ಕ್ಷಪಾತತಃ ॥೧೪೧॥**

ಈ ಜಗತ್ತು ಸ್ಪಷ್ಟವಾಗಿ ಕಾಣುತ್ತದೆ. ಆದರೆ ಇದು ಏನು? ಎಂದು ಹೇಳುವದು ಸಾಧ್ಯವಿಲ್ಲ. ಆದುದರಿಂದ ಜಗತ್ತು ಮಾಯೆಯಿಂದಾಗಿರುವದೆಂದು ನಿಷ್ಪಕ್ಷಪಾತ ಬುದ್ಧಿಯಿಂದತಿಳಿ.

—ಜಗತ್ತಿನ ನೆಲೆ ಏನೆಂದು ಹೇಳಲಿಕ್ಕೆ ಯಾಕೆ ಬರುವದಿಲ್ಲ.

**ನಿರೂಪಯಿತುಮಾರಬ್ಧೇ ನಿಖಿಲೈರಪಿ ಪಂಡಿತೈಃ ।**
**ಅಜ್ಞಾನಂ ಪುರತಸ್ತೇಷಾಂ ಭಾತಿ ಕಕ್ಷಾಸು ಕಾಸುಚಿತ್ ॥೧೪೨॥**

ಎಲ್ಲ ಪಂಡಿತರು ಕೂಡಿಕೊಂಡು ಜಗತ್ತಿನ ಬಗೆಗೆ ಹೇಳ ಹೊರಟರೂ ಕೂಡ ಒಂದೆರಡು ಹಂತಗಳನ್ನು ದಾಟಿದ ಮೇಲೆ ಅಜ್ಞಾನವವು ಅವರ ಮುಂದೆ ಬಂದು ನಿಲ್ಲುವದು.

—ಜಗತ್ತಿನ ಬಗೆಗೆ ಹೇಳುವದು ಹೇಗೆ ಅಶಕ್ಯವಿದೆ? ಎಂಬುದನ್ನು ಉದಾಹರಣೆಯಿಂದ ಹೇಳುತ್ತಾರೆ.

**ದೇಹೇಂದ್ರಿಯಾದಯೋಭಾವಾ ವೀರ್ಯೇಣೋತ್ಪಾದಿತಾಃ ಕಥಮ್ ।**
**ಕಥಂ ವಾ ತತ್ರ ಚೈತನ್ಯಮಿತ್ಯುಕ್ತೇ ತೇ ಕಿಮುತ್ತರಮ್॥೧೪೩॥**

ದೇಹ-ಇಂದ್ರಿಯ ಮುಂ. ಗಳು ಸ್ತ್ರೀ-ಪುರುಷರ ವೀರ್ಯದಿಂದ ಹೇಗೆ ಉತ್ಪನ್ನವಾದವು? ಅವುಗಳಲ್ಲಿ ಚೈತನ್ಯವು ಹೇಗೆ ಬಂದಿತು? ಎಂದು ಕೇಳಿದರೆ ನಿನ್ನ ಉತ್ತರವೇನು?

—ಈ ಪ್ರಸಂಗದಲ್ಲಿ ಸ್ವಭಾವವಾದಿಗಳು ಏನು ಹೇಳುವರೆಂಬುದನ್ನು ತಿಳಿಸಿ ಅವರ ಮತವನ್ನು ಅಲ್ಲಗಳೆಯುತ್ತಾರೆ.

**ವೀರ್ಯಸ್ಯೈಷ ಸ್ವಭಾವಶ್ಚೇತ್ಕಥಂ ತದ್ವಿದಿತಂ ತ್ವಯಾ ।**
**ಅನ್ವಯ ವ್ಯತಿರೇಕೌ ಯೌ ಭಗ್ನೌ ತೌ ವಂಧ್ಯವೀರ್ಯತಃ॥೧೪೪॥**

ಇದು ವೀರ್ಯದ ಸ್ವಭಾವವು. ಎಂದರೆ ಅದು ನಿನಗೆ ಹೇಗೆ ತಿಳಿಯಿತು? 'ಅನ್ವಯ-ವ್ಯತಿರೇಕನ್ಯಾಯ, ದಿಂದ ಎಂದು ಹೇಳಿದರೆ ಬಂಜೆಯಲ್ಲಿ ಸೇರಿದ ವೀರ್ಯದಿಂದ ಯಾಕೆ ದೇಹೇಂದ್ರಿಯಾದಿಗಳು ಹುಟ್ಟಲಿಲ್ಲ ?

(ಇಲ್ಲಿ ಅನ್ವಯ ವ್ಯತಿರೇಕವೆಂದರೆ-ವೀರ್ಯವು ಸೇರಿದಕಡೆಯಲ್ಲಿ ದೇಹೇಂದ್ರಿಯಗಳು ಹುಟ್ಟುತ್ತವೆ ಎಂಬುದು ಅನ್ವಯ. ವೀರ್ಯವು ಸೇರದ

ಕಡೆಯಲ್ಲಿ ಅವು ಹುಟ್ಟುವದಿಲ್ಲ ಎಂಬುದು ವ್ಯತಿರೇಕ. ಇರಲಿ-ದ್ರೋಣ-ಅಗಸ್ತ್ಯ ಮುಂತಾದವರಿಗೆ ಸ್ತ್ರೀಯರ ವೀರ್ಯದ ಸಂಬಂಧವಿಲ್ಲ. ಧೃಷ್ಟದ್ಯುಮ್ನ ದ್ರೌಪದಿ ಮುಂತಾದವರಿಗೆ ಸ್ತ್ರೀಪುರುಷರಿಬ್ಬರ ವೀರ್ಯದ ಸಂಬಂಧವೂ ಇಲ್ಲ. ಸೀತೆ ಮುಂತಾದವರು ಸ್ತ್ರೀ-ಪುರುಷರಲ್ಲಿ ಹುಟ್ಟಿದವರಲ್ಲ. ಎಂದು ಶ್ರೀ ಶಂಕರಾಚಾರ್ಯರು 'ಸ್ಮರ್ಯತೇಽಪಿ ಚ ಲೋಕೇ, ಎಂಬ ಬ್ರ. ಸೂ. ಭಾಷ್ಯದಲ್ಲಿ ಉದಾಹರಿಸಿದ್ದಾರೆ)

**ನ ಜಾನಾಮಿ ಕಿಮಪ್ಯೇತದಿತ್ಯಂತೇ ಶರಣಂ ತವ ।**
**ಅತ ಏವ ಮಹಾಂತೋಽಸ್ಯ ಪ್ರವದಂತೀಂದ್ರ**
**ಜಾಲವತ್ ॥೧೪೫॥**

ನಾನು ಯಾವದನ್ನೂ ತಿಳಿಯುವದಿಲ್ಲ ಎಂದು ಕೊನೆಗೆ ನೀನು ಅನ್ನಲೇಬೇಕಾಗುವದು. ಆದುದರಿಂದಲೇ ಮಹಾತ್ಮರಾದ ತತ್ವಜ್ಞರು ಈ ಜಗತ್ತು ಐಂದ್ರಜಾಲಿಕವೆನ್ನುವರು.

—ಈ ವಿಷಯದಲ್ಲಿ ಪ್ರಾಚೀನರು ಕೂಡ ಇಂದ್ರಜಾಲವೆಂದು ಒಪ್ಪುತ್ತಾರೆ.

**ಏತಸ್ಮಾತ್ಕಿಮಿವೇಂದ್ರಜಾಲಮಪರಂ ಯದ್ಗರ್ಭವಾಸಸ್ಥಿತಮ್ ।**
**ರೇತಶ್ಚೇತತಿ ಹಸ್ತಮಸ್ತಕ ಪದಪ್ರೋದ್ಭೂತನಾನಾಂಕುರಮ್ ॥**
**ಪರ್ಯಾಯೇಣ ಶಿಶುತ್ವಯೌವನ ಜರಾವೇಷೈರನೇಕೈರ್ವೃತಂ ।**
**ಪಶ್ಯತ್ಯತ್ತಿಶೃಣೋತಿ ಜಿಘ್ರತಿ ತಥಾ ಗಚ್ಛತ್ಯಥಾ ಗಚ್ಛತಿ॥೧೪೬॥**

ಹೆಂಗಸರ ಗರ್ಭಕೋಶವನ್ನು ಸೇರಿದ ವೀರ್ಯವು ಕೈ-ಕಾಲು-ತಲೆ ಮೊದಲಾದ ಅನೇಕ ಮೊಳಿಕೆಗಳಾಗಿ ಚೇತನವನ್ನು ಪಡೆಯುತ್ತದೆ. ಹಾಗೂ ಬಾಲತ್ವ-ತಾರುಣ್ಯ-ವೃದ್ಧತ್ವ ಇತ್ಯಾದಿ ಅನೇಕ ಬಗೆಯ ವೇಷಗಳನ್ನು ಬೇರೆ ಬೇರೆ ಕಾಲದಲ್ಲಿ ಧರಿಸಿಕೊಂಡು ನೋಡುತ್ತದೆ. ಮೂಸಿನೋಡುತ್ತದೆ. ಹಾಗೆಯೇ ಹೋಗುತ್ತದೆ. ಬರುತ್ತದೆ. ಇದಕ್ಕಿಂತ ಬೇರೆ ಇಂದ್ರಜಾಲ ವಿನ್ನೇನು.

—ಈ ಮನುಷ್ಯರ ಮಾತಿರಲಿ. ಆಲದಗಿಡ ಮೊದಲಾದ ಸರ್ವ ಸೃಷ್ಟಿಗೂ ಇದೇ ನ್ಯಾಯವು ಅನ್ವಯಿಸುತ್ತದೆ.

**ದೇಹವದ್ವಟಧಾನಾದೌ ಸುವಿಚಾರ್ಯ ವಿಲೋಕ್ಯತಾಮ್ ।**
**ಕ್ವ ಧಾನಾಃ ಕುತ್ರ ವಾ ವೃಕ್ಷಸ್ತಸ್ಮಾನ್ಮಾಯೇತಿ ನಿಶ್ಚಿನು॥೧೪೭॥**

ಈ ದೇಹದ ಹುಟ್ಟುವಿಕೆಯನ್ನು ವಿಚಾರಮಾಡಿದಂತೆ ಆಲದ ಬೀಜ ಮುಂತಾದವನ್ನು ವಿಚಾರಮಾಡಿ ನೋಡಬೇಕು. ಅದರ ಬೀಜವೆಷ್ಟು ಸಣ್ಣದು, ಮರವೆಷ್ಟು ದೊಡ್ಡದು ? ಆದುದರಿಂದ ಇದು ಮಾಯೆ ಎಂದು ನಿಶ್ಚಯಮಾಡು-

—ನಮಗೆ ಪ್ರಪಂಚದ ನೆಲೆ ಏನು ಎಂಬುದು ಹೇಳಲಿಕ್ಕೆ ಬರದಿದ್ದರೂ ಉದಯನಾಚಾರ್ಯರೇ ಮೊದಲಾದ ಅಂದಿನ-ಇಂದಿನ ತಾರ್ಕಿಕರು ಹೇಳುವರಲ್ಲ ಎಂದರೆ—

**ನಿರುಕ್ತಾವಭಿಮಾನಂ ಯೇ ದಧತೇ ತಾರ್ಕಿಕಾದಯಃ ।**
**ಹರ್ಷಮಿಶ್ರಾದಿಭಿಸ್ತೇ ತು ಖಂಡನಾದೌ ಸುಶಿಕ್ಷಿತಾಃ ॥೧೪೮॥**

ಕೆಲವರು ತಾರ್ಕಿಕರು ಜಗತ್ತಿನ ಸ್ವರೂಪವನ್ನು ಹೇಳಬಲ್ಲೆವೆಂದು ಅಭಿಮಾನ ತಾಳುತ್ತಾರೆ. ಆದರೆ ಅದ್ವೈತಾಚಾರ್ಯರೆನಿಸಿದ ಹರ್ಷ ಮಿಶ್ರಾಚಾರ್ಯರೇ ಮುಂತಾದವರು ಖಂಡನ ಖಂಡನಖಾದ್ಯ ಮೊದಲಾದ ಗ್ರಂಥಗಳಲ್ಲಿ ತಾರ್ಕಿಕರಿಗೆ ಚನ್ನಾಗಿ ಬುದ್ಧಿಗಲಿಸಿದ್ದಾರೆ.

—ಇದಕ್ಕೆ ವೇದಾಂತ ಸಾಂಪ್ರದಾಯದ ಪ್ರಾಚೀನರ ವಾಕ್ಯಗಳು ಅನುಕೂಲವಾಗಿವೆ.

**ಅಚಿಂತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಷು**
**ಯೋಜಯೇತ್ ।**
**ಅಚಿಂತ್ಯರಚನಾರೂಪಂ ಮನಸಾಽಪಿ ಜಗತ್ಖಲು ॥೧೪೯॥**

ಅಚಿಂತನೀಯವೆನಿಸುವ ವಿಚಾರಗಳನ್ನು ತರ್ಕಮಾಡಿ ನೋಡಲು ಹೋಗಬಾರದು. ನಿಜವಾಗಿಯೂ ಈ ಜಗದ್ರಚನೆಯನ್ನು ಮನಸ್ಸಿನಿಂದ ಕೂಡ ಕಲ್ಪಿಸಲು ಆಗುವಂತಿಲ್ಲ ಎಂಬಹಾಗಿದೆ.

—ಅಚಿಂತನೀಯವಿರಲಿ. ಅದುಮಾಯಿಕವೆಂಬ ನಿಶ್ಚಯವೆಂತು ?

**ಅಚಿಂತ್ಯ ರಚನಾಶಕ್ತಿಬೀಜಂ ಮಾಯೇತಿ ನಿಶ್ಚಿನು ।**
**ಮಾಯಾಬೀಜಂ ತದೇವೈಕಂ ಸುಷುಪ್ತಾವನುಭೂಯತೇ॥೧೫೦॥**

ಯೋಚನೆಗೆ ನಿಲುಕದ ಶಕ್ತಿಯಿಂದ ಕೂಡಿದ ಬೀಜವೇ ಮಾಯೆ ಎಂದು ನಿಶ್ಚಯ ಮಾಡು. ಆ ಮಾಯಾಬೀಜವು ತಾನೊಂದೇ ಆಗಿ ಗಾಢನಿದ್ದೆಯಲ್ಲಿ ಪ್ರತಿಯೊಬ್ಬರ ಅನುಭವಕ್ಕೂ ಒದಗುವದು.

—ಮಾಯೆಯು ಜಗತ್ತಿನ ಬೀಜವು ಹೇಗೆ ?

**ಜಾಗ್ರತ್ ಸ್ವಪ್ನ ಜಗತ್ತತ್ರ ಲೀನಂ ಬೀಜ ಇವದ್ರುಮಃ ।**
**ತಸ್ಮಾದಶೇಷ ಜಗತೋ ವಾಸನಾಸ್ತತ್ರ ಸಂಸ್ಥಿತಾಃ ॥೧೫೧॥**

ಬೀಜದಲ್ಲಿ ಗಿಡವು ಅಡಗಿರುವಂತೆ ಎಚ್ಚರ-ಕನಸುಗಳ ಜಗತ್ತು ಗಾಢ ನಿದ್ರಾರೂಪವಾದ ಮಾಯೆಯಲ್ಲಿ ಅಡಗಿರುವದು. ಯಾಕಂದರೆ ಅದರಲ್ಲಿ ಜಗತ್ತಿನ ಎಲ್ಲ ಪ್ರಕಾರದ ವಾಸನೆಗಳೂ ಹುದುಗಿರುವವು.

**ಯಾ ಬುದ್ಧಿವಾಸನಾಸ್ತಾಸು ಚೈತನ್ಯಂ ಪ್ರತಿಬಿಂಬತಿ ।**
**ಮೇಘಾಕಾಶವದಸ್ಪಷ್ಟಚಿದಾಭಾಸೋಽನು ಮೀಯ-**
**ತಾಮ್ ॥೧೫೨॥**

ಗಾಢನಿದ್ರೆಯ ರೂಪವಾದ ಮಾಯೆಯಲ್ಲಿರುವ ಬುದ್ಧಿಯವಾಸನೆಗಳಲ್ಲಿ ಚೈತನ್ಯವು ಪ್ರತಿಬಿಂಬಿಸುವ್ವದು. ಅದು ಮೋಡದಲ್ಲಿ ಪ್ರತಿಬಿಂಬಿಸಿರುವ ಆಕಾಶದಂತೆ ಅಸ್ಪಷ್ಟವಾಗಿದ್ದರೂ ಊಹಿಸಿಕೊಳ್ಳುವಂಥದು.

—ಕೊಡದಲ್ಲಿಯ ನೀರಿನಲ್ಲಿ ಆಕಾಶದ ಪ್ರತಿಬಿಂಬವು ಸ್ಪಷ್ಟವಾಗಿ ಕಾಣಿಸುವದು. ಆದುದರಿಂದ ಮೇಘಾಂಶವೇ ಎನಿಸಿದ ಜಲದಲ್ಲಿ ಮೂಡಿದ ಆಕಾಶದ ಪ್ರತಿಬಿಂಬವು ಅಸ್ಪಷ್ಟವಾಗಿದ್ದರೂ ಅದನ್ನು ಊಹಿಸಲು ಶಕ್ಯವಿದೆ. ಆದರೆ ವಾಸನಾಪ್ರತಿಬಿಂಬವನ್ನು ತೋರಿಸಲು ಅಂಥ ದೃಷ್ಟಾಂತವಿಲ್ಲದ್ದರಿಂದ ಅನುಮಾನಿಸಲು ಅವಕಾಶವೆಲ್ಲಿ ?

**ಸಾಭಾಸಮೇವ ತದ್ಬೀಜಂ ಧೀರೂಪೇಣ ಪ್ರರೋಹತಿ ।**
**ಅತೋ ಬುದ್ಧಾ ಚಿದಾಭಾಸೋ ವಿಸ್ಪಷ್ಟಂ**
**ಪ್ರತಿಭಾಸತೇ ॥೧೫೩॥**

ಚಿದಾಭಾಸನಿಂದ ಕೂಡಿಕೊಂಡಿರುವ ಆ ಬೀಜ ಭೂತ ಅಜ್ಞಾನವೇ ಬುದ್ಧಿರೂಪವಾಗಿ ಮೊಳಿಕೆಯಾಗುವದು. ಆದುದರಿಂದಲೇ ಚಿದಾಭಾಸನು ಬುದ್ಧಿಯಲ್ಲಿ ಸ್ಪಷ್ಟವಾಗಿ ಕಾಣುವನು.

—ಹೀಗೆ ಜೀವ ಮತ್ತು ಈಶ್ವರರಿಬ್ಬರೂ ಮಾಯೆಯಿಂದ ಆದವರೆಂಬುದನ್ನು ಶ್ರುತಿ ಪ್ರಮಾಣಗಳಿಂದ ತಿಳಿಸಿ ಈಗ ಅದನ್ನೇ ಉಪಸಂಹಾರ ಮಾಡುತ್ತಾರೆ.

**ಮಾಯಾಭಾಸೇನ ಜೀವೇಶೌ ಕರೋತೀತಿ ಶ್ರುತೌ ಶ್ರುತಮ್ ।**
**ಮೇಘಾಕಾಶ ಜಲಾಕಾಶಾವಿವ ತೌ ಸುವ್ಯವಸ್ಥಿತೌ ॥೧೫೪॥**

ಮಾಯಾಶಕ್ತಿಯು ಚಿದಾಭಾಸರೂಪದಿಂದ ಜೀವ ಮತ್ತು ಈಶ್ವರರನ್ನು ಮಾಡುತ್ತಿರುವದೆಂದು ವೇದದಲ್ಲಿ ಹೇಳಿದೆ. ಮೇಘಾಕಾಶ-ಜಲಾಕಾಶದಂತೆ ಅವರಿಬ್ಬರು ಅಸ್ಪಷ್ಟ ಮತ್ತು ಸ್ಪಷ್ಟರಾಗಿರುವರು.

—ಈಶ್ವರನು ಮೇಘಾಕಾಶದಂತೆ ಹೇಗಿರುವನೆಂಬುದನ್ನು ಸ್ಪಷ್ಟಗೊಳಿಸುತ್ತಾರೆ.

**ಮೇಘವದ್ವರ್ತತೇ ಮಾಯಾ ಮೇಘಸ್ಥಿತತುಷಾರವತ್ ।**
**ಧೀವಾಸನಾಶ್ಚಿದಾಭಾಸಸ್ತುಷಾರಸ್ಥ ಖವತ್ ಸ್ಥಿತಃ ॥೧೫೫॥**

ಮಾಯೆಯು ಮೋಡದಂತಿರುತ್ತದೆ. ಮೋಡದಲ್ಲಿರುವ ಹನಿಗಳಂತೆ ಬುದ್ಧಿಯವಾಸನೆಗಳು ಇರುತ್ತವೆ. ಚಿದಾಭಾಸನು ಆ ಹನಿಗಳಲ್ಲಿ ಆಕಾಶದಂತೆ ಇರುತ್ತಾನೆ.

—ಮಾಯೆಯಲ್ಲಿ ಪ್ರತಿಬಿಂತವಾದ ಚೈತನ್ಯವೇ ಈಶ್ವರನೆಂಬುದಕ್ಕೆ ಪ್ರಮಾಣವೇನು ?

**ಮಾಯಾಧೀನಶ್ಚಿದಾಭಾಸಃ ಶ್ರುತೋ ಮಾಯೀ ಮಹೇಶ್ವರಃ ।**
**ಅಂತರ್ಯಾಮೀಚ ಸರ್ವಜ್ಞೋ ಜಗದ್ಯೋನಿಃ ಸ ಏವ ಹಿ ॥೧೫೬॥**

ಮಾಯೆಯಲ್ಲಿ ಪ್ರತಿಬಿಂಬಿಸಿರುವ ಚಿದಾಭಾಸನೇ ಮಾಯೆಯನ್ನಾಳುವ ಈಶ್ವರನೆಂದು ಶ್ರುತಿ ಹೇಳುತ್ತದೆ. ಅವನೇ ಅಂತರ್ಯಾಮಿ. ಅವನೇ ಸರ್ವಜ್ಞ. ಅವನೇ ಜಗತ್ತಿನ ಕಾರಣ.

(ಇವೆರಡು ವಿಷಯಗಳು ಶ್ವೇತಾಶ್ವರ ಹಾಗೂ ಬ್ರಹದಾರಣ್ಯಕದಲ್ಲಿ ಬಂದಿರುತ್ತವೆ.)

—ಬುದ್ಧಿವಾಸನೆಯಲ್ಲಿಯ ಪ್ರತಿಬಿಂಬಕ್ಕೆ ಈಶ್ವರತ್ವವು ಹೇಗೆ ಸಿದ್ಧವಾಯಿತು ?

**ಸೌಷುಪ್ತಮಾನಂದಮಯಂ ಪ್ರಕ್ರಮ್ಯೈವಂ ಶ್ರುತಿರ್ಜಗೌ ।**
**ಏಷ ಸರ್ವೇಶ್ವರ ಇತಿ ಸೋಽಯಂ ವೇದೋಕ್ತ ಈಶ್ವರಃ॥೧೫೭॥**

ಗಾಢನಿದ್ದೆಯಲ್ಲಿರುವ ಆನಂದಮಯ ಕೋಶವನ್ನು ಹೇಳುತ್ತ ಶ್ರುತಿಯು 'ಇವನು ಈಶ್ವರನು ಸರ್ವೇಶ್ವರನು' ಇತ್ಯಾದಿಯಾಗಿ ಹೇಳಿದೆ. ಇವನೇ ವೇದದಲ್ಲಿ ಹೇಳಿರುವ ಈಶ್ವರನು.

**ಸರ್ವಜ್ಞತ್ವಾದಿಕೇ ತಸ್ಯ ನೈವ ವಿಪ್ರತಿಪದ್ಯತಾಮ್ ।**
**ಶ್ರೌತಾರ್ಥಸ್ಯಾವಿತರ್ಕ್ಯತ್ವಾನ್ಮಾಯಾಯಾಂ ಸರ್ವ**
**ಸಂಭವಾತ್ ॥೧೫೮॥**

ಅವನ ಸರ್ವಜ್ಞತ್ವಾದಿಗಳು ಕಂಡುಬರುವದಿಲ್ಲವೆಂದು ಕುತರ್ಕವನ್ನು ಮಾಡಬಾರದು. ಶ್ರುತಿಯಲ್ಲಿ ಹೇಳಿದ ಅರ್ಥವು ತರ್ಕಗಮ್ಯವಿರುವದಿಲ್ಲ. ಅಲ್ಲದೇ ಮಾಯೆಯಿಂದ ಏನುಬೇಕಾದರೂ ಆಗಬಹುದು.

—ಶ್ರುತಿಪ್ರಾಮಾಣ್ಯ ಸಿದ್ಧಿಗೆ ಈಗ ಸರ್ವೇಶ್ವರತ್ವವನ್ನು ತಿಳಿಸುತ್ತಾರೆ.

**ಅಯಂ ಯತ್ಸೃಜತೇ ವಿಶ್ವಂ ತದನ್ಯಥಯಿತುಂ ಪುಮಾನ್ ।**
**ನ ಕೋಽಪಿ ಶಕ್ತಸ್ತೇನಾಯಂ ಸರ್ವೇಶ್ವರ ಇತೀರಿತಃ ॥೧೫೯॥**

ಆನಂದಮಯ ಕೋಶಾಭಿಮಾನಿಯಾದ ಈ ಈಶ್ವರನು ನಿರ್ಮಿಸುವ ಎಚ್ಚರ-ಕನಸುಗಳ ಜಗತ್ತನ್ನು ಬದಲು ಮಾಡಲು ಯಾವ ಪುರುಷನೂ ಸಮರ್ಥನಲ್ಲ. ಹಾಗೆಂದು ಶ್ರುತಿಯಲ್ಲಿ ಇವನಿಗೆ ಸರ್ವೇಶ್ವರನೆಂದು ಹೇಳಿದೆ.

—ಇನ್ನು ಸರ್ವಜ್ಞತ್ವ.

**ಅಶೇಷಪ್ರಾಣಿ ಬುದ್ಧೀನಾಂ ವಾಸನಾಸ್ತತ್ರ ಸಂಸ್ಥಿತಾಃ ।**
**ತಾಭಿಃ ಕ್ರೋಡೀಕೃತಂ ಸರ್ವಂ ತೇನ ಸರ್ವಜ್ಞ**
**ಈರಿತಃ ॥೧೬೦॥**

ಈ ಆನಂದಮಯ ಕೋಶದಲ್ಲಿರುವ ಒಟ್ಟು ಅಜ್ಞಾನದಲ್ಲಿ ಸರ್ವಪ್ರಾಣಿಗಳ ಬುದ್ಧಿಗಳ ವಾಸನೆಗಳೂ ಇರುತ್ತವೆ. ಅವು ಸರ್ವ ಜಗತ್ತನ್ನೂ ಅರಿಯುತ್ತವೆ. ಆದುದರಿಂದ ಇವನು ಸರ್ವಜ್ಞನೆಂದು ಹೇಳುವರು.

—ಹಾಗಿದ್ದರೆ ಅವನ ಸರ್ವಜ್ಞತ್ವದ ಅನುಭವವು ನಮಗೇಕಿಲ್ಲ ?

**ವಾಸನಾನಾಂ ಪರೋಕ್ಷತ್ವಾತ್ಸರ್ವಜ್ಞತ್ವಂ ನ ಹೀಕ್ಷ್ಯತೇ ।**
**ಸರ್ವಬುದ್ಧಿಷು ತದ್ದೃಷ್ಟ್ವಾ ವಾಸನಾಸ್ವನುಮೀಯ-**
**ತಾಮ್ ॥೧೬೦॥**

ಬುದ್ಧಿಗಳ ವಾಸನೆಗಳು ನಮಗೆ ಕಾಣತಕ್ಕವುಗಳಲ್ಲ. ಬುದ್ಧಿಗಳ ಒಟ್ಟಿನಲ್ಲಿ ಸರ್ವಜ್ಞತ್ವವಿರುವದನ್ನು ತಿಳಿದು ವಾಸನೆಗಳಲ್ಲಿಯೂ ಇರಬೇಕೆಂದು ಅನುಮಾನ ಮಾಡಬಹುದು.

(ಬಟ್ಟೆಯ ಬಣ್ಣವು ನೂಲಿನಲ್ಲಿಯೂ ಇರುವದೆಂದು ಅನುಮಾನದಿಂದ ತಿಳಿಯುವಂತೆ ಬುದ್ಧಿಯ ಸರ್ವಜ್ಞತ್ವವು ಬುದ್ಧಿಯ ವಾಸನೆಗಳಲ್ಲಿ ಇರುವ ದೆಂದು ಅನುಮಾನಿಸಬಹುದು.)

—ಅಂತರ್ಯಾಮಿತ್ವ.

**ವಿಜ್ಞಾನಮಯಮುಖ್ಯೇಷು ಕೋಶೇಷ್ವನ್ಯತ್ರ ಚೈವ ಹಿ ।**
**ಅಂತಸ್ತಿಷ್ಠನ್ ಯಮಯತಿ ತೇನಾಂತರ್ಯಾಮಿತಾಂ**
**ವ್ರಜೇತ್ ॥೧೬೧॥**

ವಿಜ್ಞಾನಮಯವೇ ಮೊದಲಾದ ಕೋಶಗಳಲ್ಲಿ ಹಾಗೂ ಪೃಥ್ವಿ ಮೊದ ಲಾದ ಭೂತಗಳಲ್ಲಿಯೂ ಒಳಗಿದ್ದುಕೊಂಡು ಎಲ್ಲವುಗಳನ್ನು ಆಳುತ್ತಾನೆ. ಆದುದರಿಂದ ಅವನು ಅಂತರ್ಯಾಮಿ ಎನಿಸುವನು.

**ಬುದ್ಧೌ ತಿಷ್ಠನ್ನಾಂತರೋಽಸ್ಯಾ ಧಿಯಾನೀಕ್ಷ್ಯಶ್ಚ ಧೀವಪುಃ ।**
**ಧಿಯಮಂತರ್ಯಮಯತೀತ್ಯೇವಂ ವೇದೇನ**
**ಘೋಷಿತಮ್ ॥೧೬೨॥**

ಈ ಬುದ್ಧಿಯಲ್ಲಿರುವವನು ಅದರಒಳಗೂ ಇರುತ್ತಾನೆ. ಆದರೆ ಬುದ್ಧಿಗೆ ಗೋಚರನಲ್ಲ. ಬುದ್ಧಿಯೇ ಅವನ ಶರೀರ. ಒಳಗಿನಿಂದಲೇ ಆ ಬುದ್ಧಿಯನ್ನು ನಿಯಮನಗೊಳಿಸುತ್ತಾನೆ ಎಂದು ವೇದವು ಸ್ಪಷ್ಟವಾಗಿಹೇಳಿದೆ.

—'ಯಃ ಸರ್ವೇಷು ಭೂತೇಷು ತಿಷ್ಠನ್' ಎಂಬ ವಾಕ್ಯದ ಅರ್ಥ ವನ್ನು ದೃಷ್ಟಾಂತದಿಂದ ಹೇಳುತ್ತಾರೆ.

**ತಂತುಃ ಪಟೇ ಸ್ಥಿತೋ ಯದ್ವದುಪಾದಾನತಯಾ ತಥಾ ।**
**ಸರ್ವೋಪಾದಾನ ರೂಪತ್ವಾತ್ ಸರ್ವತ್ರಾಯ ಮನಸ್ಥಿತಃ॥೧೬೩॥**

ಉಪಾದಾನ ರೂಪದಿಂದ ನೂಲು ಹೇಗೆ ಬಟ್ಟೆಯಲ್ಲಿರುವದೋ, ಹಾಗೆ ಆತ್ಮನು ಎಲ್ಲವುಗಳ ಉಪಾದಾನರೂಪನಾದುದರಿಂದ ಇವನು ಎಲ್ಲಕಡೆಗೂ ಇರುತ್ತಾನೆ.

—ಹಾಗೆ ಉಪಾದಾನ ರೂಪನಾಗಿ ಎಲ್ಲಕಡೆಗಿದ್ದರೂ ಕಾಣುವದಿಲ್ಲ ವೇಕೆ ?

**ಪಟಾದಪ್ಯಾಂತರಸ್ತಂತುಸ್ತಂತೋರಪ್ಯಂಶುರಾಂತರಃ ।**
**ಆಂತರತ್ವಸ್ಯ ವಿಶ್ರಾಂತಿರ್ಯತ್ರಾಸಾವನುಮೀಯತಾಮ್ ॥೧೬೫॥**

ಅರಿವೆಗಿಂತ ನೂಲು ಒಳಗಿನದು. ನೂಲಿಗಿಂತ ಅರಳೆಯ ಅಂಶ ಒಳಗಿನದು. ಹೀಗೆ ಒಳ-ಒಳಗಿನ ಸೂಕ್ಷ್ಮತ್ವದ ಮರ್ಯಾದೆಯು ಎಲ್ಲಿಗೆ ಮುಗಿಯುವದೋ ಅಲ್ಲಿಯೇ ಆತನಿರುವದು. ಹೀಗೆ ಅನುಮಾನಿಸಬೇಕು.

—ಎಲ್ಲದರ ಒಳಗಿರುವವನೂ, ಅತ್ಯಂತ ಸೂಕ್ಷ್ಮನೂ ಆದ ಆತ್ಮನು ಅರಳೆಯ ಸೂಕ್ಷ್ಮಾಂಶದಂತೆ ಯಾಕೆ ಗೊತ್ತಾಗಬಾರದು ?

**ದ್ವಿತ್ರ್ಯಾಂತರತ್ವಕಕ್ಷಾಣಾಂ ದರ್ಶನೇಽಪ್ಯಯಮಾಂತರಃ ।**
**ನ ವೀಕ್ಷ್ಯತೇ ತತೋಯುಕ್ತಿಶ್ರುತಿಭ್ಯಾಮೇವ ನಿರ್ಣಯಃ॥೧೬೬॥**

ಎರಡು-ಮೂರು ಸೂಕ್ಷ್ಮಾಂಶಗಳು ಗೋಚರಿಸಿದರೂ ಈ ಸರ್ವಾಂತರ್ಯಾಮಿಯು ಕಾಣುವದಿಲ್ಲ. ಆದುದರಿಂದ ಅವನನ್ನು ಶ್ರುತಿ ಮತ್ತು ಯುಕ್ತಿಗಳಿಂದ ಗೊತ್ತುಮಾಡಬೇಕು.

**ಪಟರೂಪೇಣ ಸಂಸ್ಥಾನಾತ್ ಪಟಸ್ತಂತೋರ್ವಪುರ್ಯಥಾ ।**
**ಸರ್ವರೂಪೇಣ ಸಂಸ್ಥಾನಾತ್ ಸರ್ವಮಸ್ಯ ವಪುಸ್ತಥಾ॥೧೬೭॥**

ಬಟ್ಟೆಯ ಸ್ವರೂಪವನ್ನು ತಾಳಿದ್ದರಿಂದ ಬಟ್ಟೆಯು ನೂಲಿನದೇಹವೆನಿಸುವಂತೆ, ಮಾಯಾವಿಯಾದ ಈಶ್ವರನು ಸರ್ವರೂಪನಾದುದರಿಂದ ಸರ್ವವೂ ಅವನ ಶರೀರವು.

**ತಂತೋಃ ಸಂಕೋಚ ವಿಸ್ತಾರ ಚಲನಾದೌ ಪಟಸ್ತಥಾ ।**
**ಅವಶ್ಯಮೇವ ಭವತಿ ನಸ್ವಾತಂತ್ರ್ಯಂ ಪಟೇ ಮನಾಕ್ ॥೧೬೮॥**
**ತಥಾಂಹಿತರ್ಯಾಮ್ಯಯಂ ಯತ್ರಯಯಾ ವಾಸನಯಾಯಥಾ ।**
**ವಿಕ್ರಿಯೇತ ತಥಾಽವಶ್ಯಂ ಭವತ್ಯೇವ ನ ಸಂಶಯಃ ॥೧೬೯॥**

ನೂಲನ್ನು ಮುದುಡಿ ಮಾಡುವದು, ಹಿಗ್ಗಿಸುವದು, ಕದಲಿಸುವದು ಮೊದಲಾದವುಗಳಲ್ಲಿ ಬಟ್ಟೆಯೂ ಹಾಗೆ ಹಾಗೆಯೇ ಆಗುವದು. ಆದುದರಿಂದ ಬಟ್ಟೆಗೆ ಸ್ವಾತಂತ್ರ್ಯವೆಷ್ಟೂ ಇಲ್ಲ. ಅದರಂತೆ ಈ ಅಂತರ್ಯಾಮಿಯು ಎಲ್ಲಿ ಯಾವ ವಾಸನೆಯಿಂದ ಹೇಗೆ ವಿಕಾರ ಹೊಂದುವನೋ ಅಲ್ಲಿ ಆ ಕಾರ್ಯವು ಅವಶ್ಯವಾಗಿ ಆಗುತ್ತದೆ. ಇದರಲ್ಲಿ ಸಂಶಯವೇನೂ ಇಲ್ಲ.

(ಪೃಥ್ವಿ ಮೊದಲಾದವುಗಳಲ್ಲಿ ಉಪಾದಾನ ಕಾರಣನೆನಿಸಿರುವ ಅಂತರ್ಯಾಮಿಯು ಯಾವ ವಾಸನೆಯಿಂದ ಘಟವೇ ಮೊದಲಾದ ಕಾರ್ಯರೂಪವಾಗಿ ವಿಕಾರವನ್ನು ಹೊಂದುವನೋ ಅದರಂತೆ ಆ ಕಾರ್ಯವು (ಘಟ-ಮುಂ. ಗಳು) ಆಗಿಯೇ ಆಗುವವು.)

—ಹೀಗೆ ಶ್ರುತಿಪ್ರಮಾಣಗಳನ್ನು ಹೇಳಿ ಸ್ಮೃತಿಯ ಪ್ರಮಾಣ ತಿಳಿಸುತ್ತಾರೆ.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥೧೭೦॥**

ಅರ್ಜುನನೇ, ಅಂತರ್ಯಾಮಿಯಾದ ಈಶ್ವರನು ಯಂತ್ರಗಳನ್ನೇರಿದಂತಿರುವ ಎಲ್ಲ ಪ್ರಾಣಿಗಳನ್ನು ಮಾಯಾಸೂತ್ರದಿಂದ ತಿರುಗಿಸುತ್ತ ಎಲ್ಲ ಪ್ರಾಣಿಗಳ ಹೃದಯದಲ್ಲಿರುತ್ತಾನೆ.

—ಈ ಸ್ಮೃತಿವಾಕ್ಯದಲ್ಲಿರುವ 'ಸರ್ವಭೂತಾನಾಂ' ಎಂಬುದರ ಅರ್ಥ ಹೇಳುವದು.

**ಸರ್ವಭೂತಾನಿ ವಿಜ್ಞಾನಮಯಾಸ್ತೇ ಹೃದಯೇ ಸ್ಥಿತಾಃ ।**
**ತದುಪಾದಾನ ಭೂತೇಶಸ್ತತ್ರ ವಿಕ್ರಿಯತೇ ಖಲು ॥೧೭೧॥**

ಎಲ್ಲ ಪ್ರಾಣಿಗಳೆಂದರೆ ವಿಜ್ಞಾನಮಯರು. ಅವರೆಲ್ಲ ಹೃದಯದಲ್ಲಿರುವರು. ಅವರಿಗೆಲ್ಲ ಉಪಾದಾನ ಕಾರಣಭೂತನಾದ ಈಶ್ವರನು ವಿಜ್ಞಾನಮಯ ಆಕಾರವನ್ನು ತಾಳುವನು. ಇದು ನಿಶ್ಚಯ.

—ಈಗ ಸ್ಮೃತಿ ವಚನದೊಳಗಿನ 'ಯಂತ್ರ' 'ಆರೋಹ' 'ಭ್ರಮಣ' ಶಬ್ದದ ಅರ್ಥಗಳನ್ನು ಹೇಳುತ್ತಾರೆ.

**ದೇಹಾದಿ ಪಂಜರಂ ಯಂತ್ರ ತದಾರೋಹೋಽಭಿಮಾನಿತಾ ।**
**ವಿಹಿತಪ್ರತಿಷಿದ್ಧೇಷು ಪ್ರವೃತ್ತಿರ್ಭ್ರಮಣಂ ಭವೇತ್ ॥೧೭೨॥**

ದೇಹ, ಇಂದ್ರಿಯ ಮೊದಲಾದವುಗಳಿಂದಾದ ಪಂಜರವೇ ಯಂತ್ರ. ಅದರ ಮೇಲೆ ಅಭಿಮಾನವುಳ್ಳವನಾಗಿ 'ಅದೇ ನಾನು' ಎಂದು ತಿಳಿಯುವದೇ ಅದನ್ನೇರುವಿಕೆ. ಪುಣ್ಯ ಮತ್ತು ಪಾಪ ಕರ್ಮಗಳಲ್ಲಿ ಪ್ರವೃತ್ತಿ ತಾಳುವುದೇ ಭ್ರಮಣ.

**ವಿಜ್ಞಾನಮಯರೂಪೇಣ ತತ್ಪ್ರವೃತ್ತಿ ಸ್ವರೂಪತಃ ।**
**ಸ್ವಶಕ್ತ್ಯೇಶೋ ವಿಕ್ರಿಯತೇ ಮಾಯಯಾ ಭ್ರಾಮಣಂ ಹಿ ತತ್ ೧೭೩॥**

ಈಶ್ವರನು ತನ್ನ ಶಕ್ತಿಯಿಂದ ವಿಜ್ಞಾನಮಯ ಕೋಶರೂಪನಾಗಿಯೂ, ಅದರ ಕ್ರಿಯಾರೂಪವಾಗಿಯೂ ವಿಕಾರವನ್ನು ಪಡೆಯುತ್ತಾನೆ. ಇದೇ ಮಾಯೆಯಿಂದ ತಿರುಗಿಸುವಿಕೆ ಎಂಬುದು.

—ಶ್ರುತಿಯಲ್ಲಿ ಬಂದ 'ಯಮಯತಿ' ಎಂಬ ಶಬ್ದಕ್ಕೂ ಕೂಡ ಇದೇ ಅರ್ಥವೆಂದು ಹೇಳುತ್ತಾರೆ.

**ಅಂತರ್ಯಮಯತೀತ್ಯುಕ್ತ್ಯಾಽಯಮೇವಾರ್ಥಃ ಶ್ರುತೌ ಶ್ರುತಃ।**
**ಪೃಥಿವ್ಯಾದಿಷು ಸರ್ವತ್ರ ನ್ಯಾಯೋಽಯಂ ಯೋಜ್ಯತಾಂ ಧಿಯಾ ॥೧೭೪॥**

ಶ್ರುತಿಯಲ್ಲಿ ಒಳಗಿದ್ದುಕೊಂಡು ನಿಯಮನಮಾಡುತ್ತಾನೆ ಎಂಬ ಶಬ್ದದಿಂದ ಇದೇ ಅರ್ಥವು ವ್ಯಕ್ತವಾಗಿದೆ. ಇದೇ ನ್ಯಾಯವನ್ನು ಭೂಮಿ ಮೊದಲಾದ ಕಡೆಗಳಲ್ಲಿ ಬುದ್ಧಿವಂತಿಕೆಯಿಂದ ಹೊಂದಿಸಿಕೊಳ್ಳಬೇಕು.

—ಪ್ರಾಮಾಣಿಕ ವೃತ್ತಿಗಳೆಲ್ಲ ಈಶ್ವರಾಧೀನವಾಗಿವೆ ಎಂಬ ವಿಷಯದಲ್ಲಿ ಒಂದು ಪುರಾತನ ವಚನವನ್ನು ಉದಾಹರಿಸುತ್ತಾರೆ.

**ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿರ್ಜಾನಾಮ್ಯಧರ್ಮಂ ನ ಚ ಮೇನಿವೃತ್ತಿಃ ।**
**ಕೇನಾಪಿ ದೇವೇನ ಹೃದಿ ಸ್ಥಿತೇನ ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ ॥೧೭೫॥**

ನಾನು ಧರ್ಮವನ್ನು ತಿಳಿಯುತ್ತೇನೆ. ಆದರೆ ಅದರಲ್ಲಿ ಮುಂದುವರಿಯು ವಿಕೆ ನನ್ನಿಂದ ಆಗುವದಿಲ್ಲ. ಅದರಂತೆ ನಾನು ಅಧರ್ಮವನ್ನು ತಿಳಿಯುತ್ತೇನೆ. ಆದರೆ ಅದರಿಂದ ನಿವೃತ್ತನಾಗುವದು ಸಾಧ್ಯವಿಲ್ಲ. ನನ್ನ ಹೃದಯದಲ್ಲಿ ನೆಲೆ ಸಿದ ಯಾರೋ ದೇವನಿಂದ ನನಗೆ ಪ್ರೇರಣೆಯಾದಂತೆ ನಾನು ಮಾಡುತ್ತೇನೆ.

— ಎಲ್ಲ ಪ್ರವೃತ್ತಿಗಳೂ ಹೀಗೆ ಈಶ್ವರಾಧೀನವೆಂದುಬಿಟ್ಟರೆ ಪುರುಷ ಪ್ರಯತ್ನವು ವ್ಯರ್ಥವಾದಂತಾಯಿತಲ್ಲ.

**ನಾರ್ಥಃ ಪುರುಷಕಾರೇಣೇತ್ಯೇವಂ ಮಾ ಶಂಕ್ಯತಾಂ ಯತಃ ।**
**ಈಶಃ ಪುರುಷಕಾರಸ್ಯ ರೂಪೇಣಾಪಿ ವಿವರ್ತತೇ ॥೧೭೬॥**

ಈಶ್ವರನೇ ಪ್ರಯತ್ನರೂಪವಾಗಿ ಪರಿಣಾಮವನ್ನು ಹೊಂದುವದರಿಂದ, ಪುರುಷಪ್ರಯತ್ನದಿಂದೇನೂ ಉಪಯೋಗವಿಲ್ಲವೆಂದು ತಿಳಿಯಬಾರದು.

—ಪುರುಷಪ್ರಯತ್ನವೂ ಈಶ್ವರೂಪವೆಂದುಬಿಟ್ಟರೆ ಅವನು ನಿಯಮನ ಮಾಡುತ್ತಾನೆ, ಭ್ರಮಣ ಮಾಡಿಸುತ್ತಾನೆ, ಇತ್ಯಾದಿಗಳಿಂದ ಕಂಡುಬರುವ ಅವನ ಪ್ರೇರಕತ್ವವೆಲ್ಲಿ ?

**ಈ ದೃಗ್ಬೋಧೇನೇಶ್ವರಸ್ಯ ಪ್ರವೃತ್ತಿರ್ನೈವ ವಾರ್ಯತಾಮ್ ।**
**ತಥಾಽಪೀಶಸ್ಯ ಬೋಧೇನ ಸ್ವಾತ್ಮಾ ಸಂಗತ್ವಧೀಜನಿಃ ॥೧೭೭॥**

ಈಶ್ವರನ ವಿಷಯಕವಾದ ಈ ತಿಳಿವಳಿಕೆಯಿಂದ ಅವನ ನಿಯಾಮಕತ್ವಾ ದಿಗಳನ್ನು ಅಲ್ಲಗಳೆಯಬಾರದು. ಹಾಗೆ ಎಲ್ಲವೂ ಅವನ ಅಧೀನವೆಂಬ ಈಶ್ವರನ ತಿಳಿವಳಿಕೆಯಿಂದ ಆತ್ಮನು ಅಸಂಗನೆಂಬ ಬುದ್ಧಿಯು ಹುಟ್ಟುವದು.

—ಆತ್ಮನು ಅನಂಗನೆಂಬ ಜ್ಞಾನದ ಉಪಯೋಗವೇನು ?

**ತಾವತಾ ಮುಕ್ತಿರಿತ್ಯಾಹುಃ ಶ್ರುತಯಃ ಸ್ಮೃತಯಸ್ತಥಾ ।**
**ಶ್ರುತಿ-ಸ್ಮೃತೀ ಮಮೈವಾಜ್ಞೇ ಇತ್ಯಪೀಶ್ವರಭಾಷಿತಮ್॥೧೭೮॥**

ಈ ಅರಿವಿನಿಂದಲೇ ಮೋಕ್ಷವೆಂದು ಶ್ರುತಿ-ಸ್ಮೃತಿಗಳೆರಡೂ ಹೇಳುವವು. ಅಲ್ಲದೇ ಶ್ರುತಿ-ಸ್ಮೃತಿಗಳೆರಡೂ ನನ್ನ ಆಜ್ಞೆಗಳೆಂದು ಈಶ್ವರನು ಹೇಳಿರುವನು.

(ಶ್ರುತಿ-ಸ್ಮೃತಿಗಳಲ್ಲಿ ಹೇಳಿದ ಮಾತು ಅನುಲ್ಲಂಘನೀಯವೆಂದು ತಾತ್ಪರ್ಯ.)

— ಶ್ರುತಿಯು ಕೂಡ ಈಶ್ವರನು ಭಯದ ಕಾರಣನೆಂದು ಹೇಳಿದೆ,

**ಆಜ್ಞಾಯಾ ಭೀತಿಹೇತುತ್ವಂ ಭೀಷಾಸ್ಮಾದಿತಿ ಹಿ ಶ್ರುತಮ್ ।**
**ಸರ್ವೇಶ್ವರತ್ವ ಮೇತತ್ಸ್ಯಾದಂತರ್ಯಾಮಿತ್ವತಃ ಪೃಥಕ್॥೧೭೯॥**

ಆ ಸರ್ವೇಶ್ವರನ ಭೀತಿಯಿಂದ ಎಂದು ಶ್ರುತಿಯಲ್ಲಿದೆ. ಅದುದರಿಂದ ಈಶ್ವರನ ಆಜ್ಞೆಯೇ ಭೀತಿಯ ಕಾರಣವೆನಿಸುತ್ತದೆ. ಈ ಸರ್ವೇಶ್ವರತ್ವವು ಅಂತರ್ಯಾಮಿತ್ವದಿಂದ ಬೇರೆಯಾಗಿರುವದು.

—ಭೂತ ಮಾತ್ರಗಳನ್ನು ಒಳ-ಹೊರಗೆ ನಿಯಮನಗೊಳಿಸುವವನು ಈಶ್ವರನೇ ಆಗಿರುವನು ಎಂಬ ಬಗೆಗೆ ಶ್ರುತಿವಚನ ಪ್ರಮಾಣ-

**ಏತಸ್ಯ ವಾ ಅಕ್ಷರಸ್ಯ ಪ್ರಶಾಸನ ಇತಿ ಶ್ರುತಿಃ ।**
**ಅಂತಃ ಪ್ರವಿಷ್ಟಃ ಶಾಸ್ತಾsಯಂ ಜನಾನಾಮಿತಿ ಚ ಶ್ರುತಿಃ॥೧೮೦॥**

ಅಳಿವಿಲ್ಲದ ಪರಮಾತ್ಮನ ಆಜ್ಞೆಯಲ್ಲಿಯೇ ಸೂರ್ಯ–ಚಂದ್ರರು ಇರುತ್ತಾರೆ. ಮತ್ತು ಎಲ್ಲ ಜೀವರ ಶರೀರದಲ್ಲಿ ಪ್ರವೇಶ ಮಾಡಿ ಅವರನ್ನು ನಿಯಮನ ಮಾಡುತ್ತಾನೆ ಎಂದು ಶ್ರುತಿವಾಕ್ಯಗಳಿವೆ.

(ಮೊದಲಿನದು ಕಾಣ್ವಶಾಖೀಯವಾಜಸನೇಯೀ ಬ್ರಾಹ್ಮಣದಲ್ಲಿ. ಎರಡನೆಯದು ತೈತ್ತರೀಯದಲ್ಲಿ.)

**ಜಗದ್ಯೋನಿರ್ಭವೇದೇಷ ಪ್ರಭವಾಪ್ಯಯ ಕೃತ್ವತಃ ।**
**ಆವಿರ್ಭಾವತಿರೋಭಾವಾವುತ್ಪತ್ತಿ ಪ್ರಲಯೌ ಮತೌ ॥೧೮೧॥**

ಜಗತ್ತಿನ ಉತ್ಪತ್ತಿ–ಪ್ರಲಯಗಳನ್ನು ಮಾಡುತ್ತಿರುವದರಿಂದ ಇವನು ಜಗದ್ಯೋನಿ ಎನಿಸುವನು. ಈ ಉತ್ಪತ್ತಿ-ಪ್ರಲಯಗಳೆಂದರೆ ಕಾಣಿಸುವಂತೆ ಮಾಡುವಿಕೆ ಎಂಬ ಅರ್ಥ.

—ಈಶ್ವರನು ಜಗತ್ತು ಕಾಣಿಸುವಂತೆ ಹೇಗೆ ಮಾಡುವನೆಂಬುದನ್ನು ದೃಷ್ಟಾಂತರೂಪವಾಗಿ ಹೇಳುತ್ತಾರೆ.

**ಆವಿರ್ಭಾವಯತಿ ಸ್ವಸ್ಮಿನ್ ವಿಲೀನಂ ಸಕಲಂ ಜಗತ್ ।**
**ಪ್ರಾಣಿ ಕರ್ಮವಶಾದೇಷ ಪಟೋ ಯದ್ವತ್ಪ್ರಸಾರಿತಃ ॥೧೮೨॥**

ಹಾಸಿದಂಥ ಚಿತ್ರಪಟವು ತನ್ನಲ್ಲಿರುವ ಚಿತ್ರಗಳನ್ನು ತೋರಿಸುವಂತೆ, ಪ್ರಾಣಿಗಳ ಕರ್ಮಾನುಸಾರವಾಗಿ ಈಶ್ವರನು ತನ್ನಲ್ಲಿ ಅಡಗಿರುವ ಎಲ್ಲ ಜಗತ್ತನ್ನು ಪ್ರಕಟಗೊಳಿಸುವನು.

— ಅವನು ಪ್ರಲಯಕಾರಣನೂ ಆಹುದು ಎಂಬುದನ್ನು ದೃಷ್ಟಾಂತ ಪೂರ್ವಕ ಹೇಳಿರುವರು.

**ಪುನಸ್ತಿರೋಭಾವಯತಿ ಸ್ವಾತ್ಮನ್ಯೇವಾಖಿಲಂ ಜಗತ್ ।**
**ಪ್ರಾಣಿಕರ್ಮಕ್ಷಯವಶಾತ್ ಸಂಕೋಚಿತಪಟೋ ಯಥಾ॥೧೮೩॥**

ಮುದ್ದೆಮಾಡಿದ ಚಿತ್ರಪಟದಲ್ಲಿ ಹೇಗೆ ಎಲ್ಲ ಚಿತ್ರಗಳು ಅಡಗುವವೋ ಹಾಗೆ ಪ್ರಾಣಿಗಳ ಕರ್ಮಗಳು ಮುಗಿದುದರಿಂದ ತನ್ನಲ್ಲಿಯೇ ಈಶ್ವರನು ಎಲ್ಲ ಜಗತ್ತನ್ನು ಅಡಗಿಸಿಕೊಳ್ಳುತ್ತಾನೆ.

—ಆವಿರ್ಭಾವ-ತಿರೋಭಾವಗಳ ಬಗೆಗೆ ಮತ್ತೆ ನಾಲ್ಕು ದೃಷ್ಟಾಂತಗಳು.

**ರಾತ್ರಿಘಸ್ರೌ ಸುಪ್ತಿಬೋಧಾವುನ್ಮೀಲನ ನಿಮೀಲನೇ ।**
**ತೂಷ್ಣೀಂಭಾವ ಮನೋರಾಜ್ಯೇ ಇವ ಸೃಷ್ಟಿಲಯಾ-**
**ವಿಮೌ ॥೧೮೪॥**

ಸೃಷ್ಟಿಯ ಈ ಉತ್ಪತ್ತಿ-ಪ್ರಲಯಗಳು, ರಾತ್ರಿ ಮತ್ತು ಹಗಲು, ನಿದ್ದೆ ಮತ್ತು ಎಚ್ಚರ, ಕಣ್ಣು ತೆರೆಯುವಿಕೆ ಮತ್ತು ಮುಚ್ಚುವಿಕೆ, ಸುಮ್ಮನಿರುವಿಕೆ ಮತ್ತು ಹಂಬಲಿಸುವಿಕೆಯಂತೆ ಇರುವವು.

— ಈಶ್ವರನು ಜಗತ್ಕಾರಣನೆಂದು ಹೇಳಿದಿರಿ. ಇದು ಮಣ್ಣಿನಿಂದ ಕೊಡದ ಆರಂಭವಾಗುತ್ತದೆ ಎಂದಂತೆ ಆರಂಭವಾದವ್ರೋ, ಹಾಲಿನಿಂದ ಮೊಸರಾಗುತ್ತದೆ ಎಂದಂತೆ ಪರಿಣಾಮವಾದವ್ರೋ ?

**ಆವಿರ್ಭಾವ ತಿರೋಭಾವಶಕ್ತಿ ಮತ್ತ್ವೇನ ಹೇತು ನಾ ।**
**ಆರಂಭ ಪರಿಣಾಮಾದಿಚೋದ್ಯಾನಾಂ ನಾತ್ರ ಸಂಭವಃ ॥೧೮೫॥**

ಈಶ್ವರನಲ್ಲಿ ಪ್ರಕಟಗೊಳಿಸುವಿಕೆ ಮತ್ತು ಅಡಗಿಸುವಿಕೆ ಎಂಬ ಶಕ್ತಿಗಳಿರುವದರಿಂದ ಅವನ ವಿಷಯದಲ್ಲಿ ಆರಂಭವಾದ ಪರಿಣಾಮವಾದಗಳ ಪ್ರಶ್ನೆಗಳಿಗೆ ಅವಕಾಶವಿಲ್ಲ.

(ಈಶ್ವರನು ಎರಡನೆಯದಿಲ್ಲದವನಾದುದರಿಂದ ಆರಂಭವಾದಕ್ಕೂ, ನಿರವಯವನಾದುದರಿಂದ ಪರಿಣಾಮವಾದಕ್ಕೂ ಇಲ್ಲಿ ಸ್ಥಳವಿಲ್ಲ.)

—ಇರಲಿ. ಒಬ್ಬನೇ ಈಶ್ವರನು ಜಡ ಮತ್ತು ಚೇತನಾತ್ಮಕವಾದ ಜಗತ್ತಿಗೆ ಉಪಾದಾನ ಕಾರಣನು ಹೇಗಾಗುವನು ?

**ಅಚೇತನಾನಾಂ ಹೇತುಃ ಸ್ಯಾಜ್ಜಾಡ್ಯಾಂಶೇನೇಶ್ವರಸ್ತಥಾ ।**
**ಚಿದಾಭಾಸಾಂಶತಸ್ತ್ವೇಷ ಜೀವಾನಾಂ ಕಾರಣಂ ಭವೇತ್ ॥೧೮೬॥**

ಈಶ್ವರನು ಜಡ ಪ್ರಕೃತಿ ಪ್ರಾಧಾನ್ಯದಿಂದ ಅಚೇತನ ಪದಾರ್ಥಗಳಿಗೆ ಕಾರಣನಾದನು. ಅದರಂತೆ ಸ್ವಕೀಯಚೇತನಪ್ರಾಧಾನ್ಯದಿಂದ ಜೀವರಿಗೆ ನಿಮಿತ್ತಕಾರಣನಾದನು.

— ಮಾಯಾವಿಯಾದ ಈಶ್ವರನು ಜಗತ್ಕಾರಣನೆಂಬುದು ಯೋಗ್ಯವಲ್ಲ. ಸುರೇಶ್ವರಾಚಾರ್ಯರು ಪರಮಾತ್ಮನೇ ಜಗತ್ಕಾರಣನೆಂದಿರುವರು.

**ತಮಃ ಪ್ರಧಾನಃ ಕ್ಷೇತ್ರಾಣಾಂ ಚಿತ್ರಧಾನಶ್ಚಿದಾತ್ಮನಾಮ್ ।**
**ಪರಃ ಕಾರಣತಾಮೇತಿ ಭಾವನಾಜ್ಞಾನ ಕರ್ಮಭಿಃ ॥೧೮೭॥**
**ಇತಿ ವಾರ್ತಿಕಕಾರೇಣ ಜಡಚೇತನಹೇತುತಾ ।**
**ಪರಮಾತ್ಮನ ಏವೋಕ್ತಾ ನೇಶ್ವರಸ್ಯೇತಿ ಚೇತ್ ಶ್ರುಣು॥೧೮೮॥**

ಮಾಯೋಪಾಧಿಕನಾದ ಪರಮಾತ್ಮನು ಜಡವಾದ ಶರೀರಾದಿ ಪದಾರ್ಥಗಳಿಗೂ, ಚೈತನ್ಯ ಪ್ರಧಾನನಾದ ಪರಮಾತ್ಮನು ಜೀವರಿಗೂ, ಸಂಸ್ಕಾರ-ಧ್ಯಾನ-ಜ್ಞಾನ ಮತ್ತು ಪುಣ್ಯವೇ ಮೊದಲಾದ ಕರ್ಮಯೋಗಗಳಿಂದಲೂ ಜಗತ್ಕಾರಣತ್ವವನ್ನು ಹೊಂದುತ್ತಾನೆ.

ಈ ಪ್ರಕಾರವಾಗಿ ವಾರ್ತಿಕಕಾರರಾದ ಸುರೇಶ್ವರಾಚಾರ್ಯರಿಂದ ಜಡ ಮತ್ತು ಚೇತನ ಪದಾರ್ಥಗಳ ಕಾರಣವು ಹೇಳಿದುದಾಗಿದೆ. ಈಶ್ವರನಿಗೆ ಕಾರಣತ್ವವನ್ನು ಹೇಳಿಲ್ಲವೆನ್ನುವೆಯಾದರೆ ಕೇಳು.

**ಅನ್ಯೋನ್ಯಾಧ್ಯಾಸಮತ್ರಾಪಿ ಜೀವಕೂಟಸ್ಥಯೋರಿವ ।**
**ಈಶ್ವರ ಬ್ರಹ್ಮಣೋಃ ಸಿದ್ಧಂ ಕೃತ್ವಾ ಬ್ರೂತೇ ಸುರೇಶ್ವರಃ॥೧೮೯॥**

ಜೀವ ಮತ್ತು ಕೂಟಸ್ಥರಲ್ಲಿ ಅನ್ಯೋನ್ಯಾಧ್ಯಾಸ (ಎಂದರೆ ಒಂದನ್ನು ಬೇರೊಂದು ತಿಳಿಯುವಿಕೆ) ಮಾಡಿಕೊಂಡಿರುವಂತೆ ಇಲ್ಲಿಕೂಡ ಎಂದರೆ ಈಶ್ವರ-ಬ್ರಹ್ಮರಲ್ಲಿ ಮಾಡಿ ಸುರೇಶ್ವರಾಚಾರ್ಯರು ಹಾಗೆ ಹೇಳಿರುವರು.

(ಪೂರ್ವಾಪರ ಸಂಬಂಧವನ್ನು ವಿಚಾರಿಸಿ ನೋಡಿದರೆ 'ಶುದ್ಧ ಪರಬ್ರಹ್ಮನೇ ಚರಾಚರ ಸೃಷ್ಟಿಕಾರಣನು, ಎಂಬ ಮಾತು ವಾರ್ತಿಕಕಾರರಿಗೆ ಒಪ್ಪಿಗೆಯಾದುದಲ್ಲ.)

—ನೀವು ಹೇಳುವದೇ ಸರಿ ಎಂದು ಹೇಗೆ ಹೇಳುವಿರಿ ?

**ಸತ್ಯಂ ಜ್ಞಾನಮನಂತಂ ಯತ್ ಬ್ರಹ್ಮ ತಸ್ಮಾತ್ ಸಮುತ್ಥಿತಾಃ।**
**ಖಂ ವಾಯ್ವಗ್ನಿಜಲೋರ್ವ್ಯೋಷಧ್ಯನ್ನದೇಹಾ ಇತಿ**
**ಶ್ರುತಿಃ ॥೯೯॥**

ಸತ್ಯಜ್ಞಾನಾನಂತರೂಪ ಬ್ರಹ್ಮದಿಂದ ಆಕಾಶ ಮೊದಲಾದ ಭೂತಗಳು, ಔಷಧಿಗಳು, ಅನ್ನ-ದೇಹ ಮೊದಲಾದ ಪದಾರ್ಥಗಳು ಹುಟ್ಟಿದವು ಎಂದು ಶ್ರುತಿ ಇರುತ್ತದೆ.

**ಆಪಾದೃಷ್ಟಿತಸ್ತತ್ರ ಬ್ರಹ್ಮಣೋ ಭಾತಿ ಹೇತುತಾ ।**
**ಹೇತೋಶ್ಚ ಸತ್ಯತಾ ತಸ್ಮಾದನ್ಯೋನ್ಯಾಧ್ಯಾಸ**
**ಇಷ್ಯತೇ ॥೯೦॥**

ಆ ಶ್ರುತಿಯನ್ನು ಸ್ಥೂಲ ದೃಷ್ಟಿಯಿಂದ ನೋಡಿದರೆ ಬ್ರಹ್ಮವೇ ಜಗತ್ತಿನ ಕಾರಣವೆಂದು ಅನಿಸುತ್ತದೆ. ಮತ್ತು ಈ ಜಗತ್ಕಾರಣವು ಸತ್ಯವೆಂದೂ ತೋರುತ್ತದೆ. ಆದುದರಿಂದ ಅನ್ಯೋನ್ಯಾಧ್ಯಾಸವುಂಟೆಂದು ತಿಳಿಯಬೇಕಾಗುತ್ತದೆ.

(ಸಾಮಾನ್ಯಜನರು ಮಾಯೋಪಾಧಿಕನಾದ ಈಶ್ವರ ಮತ್ತು ಸತ್ಯಸ್ವರೂಪನಾದ ಶುದ್ಧಬ್ರಹ್ಮ ಇವರಿಬ್ಬರು ಒಂದೇ ತಿಳಿದಿರುವ ದೃಷ್ಟಿಯನ್ನನುಸರಿಸಿ ಸುರೇಶ್ವರಾಚಾರ್ಯರು ಹಾಗೆ ಹೇಳಿರುವರೆಂದು ಇಲ್ಲಿ ತಿಳಿಯಬೇಕು.)

—ಈ ರೀತಿ ಸಿದ್ಧವಾದ ಈಶ್ವರ ಮತ್ತು ಬ್ರಹ್ಮರ ಐಕ್ಯವು ಹಿಂದೆ ಹೇಳಿದ ಅನ್ನದ ಗಂಜಿ ಬಳಿದ ಅರಿವೆಯ ದೃಷ್ಟಾಂತದ ನೆನಪು ಕೊಟ್ಟು ಅದರಂತೆ ಎನ್ನುತ್ತಾರೆ.

**ಅನ್ಯೋನ್ಯಾಧ್ಯಾಸರೂಪೋಽಸಾವನ್ನಲಿಪ್ತಪಟೋ ಯಥಾ।**
**ಘಟ್ಟಿತೇನೈಕತಾ ಮೇತಿ ತದ್ವದ್ಭ್ರಾಂತ್ಯೈಕತಾಂ**
**ಗತಃ ॥೯೨॥**

ಅನ್ನದ ಗಂಜಿಯನ್ನು ಬಳಿದ ಅರಿವೆಯು ಒಂದೆಂದು ಕಾಣುವಂತೆ ಅನ್ಯೋನ್ಯಾಧ್ಯಾಸರೂಪಗೊಂಡ ಈ ಚಿದಾತ್ಮನು ಭ್ರಾಂತಿಯಿಂದ ಒಂದುಗೂಡುವಿಕೆಯನ್ನು ಹೊಂದಿದ್ದಾನೆ.

**ಮೇಘಾಕಾಶ ಮಹಾಕಾಶೌ ವಿವಿಚ್ಯೇತೇ ನ ಪಾಮರೈಃ ।**
**ತದ್ವದ್ ಬ್ರಹ್ಮೇಶಯೋರೈಕ್ಯಂ ಪಶ್ಯಂತ್ಯಾಪಾತದರ್ಶಿನಃ ॥೧೯॥**

ಸ್ಥೂಲದೃಷ್ಟಿಯುಳ್ಳ ಅಜ್ಞಾನಿಗಳು ಮೇಘಾಕಾಶ ಮತ್ತು ಮಹಾಕಾಶ ಗಳನ್ನು ವಿಂಗಡಿಸಿ ತಿಳಿಯುವದಿಲ್ಲ. ಅವೆರಡೂ ಒಂದೆ ಎಂದು ತಿಳಿಯು ವಂತೆ ಬ್ರಹ್ಮ-ಈಶ್ವರರನ್ನು ವಿಂಗಡಿಸಿ ತಿಳಿಯಲಾರದೇ ಒಂದೇ ಎಂದು ತಿಳಿ ಯುವರು.

—ಹಾಗಾದರೆ ಬ್ರಹ್ಮ ಮತ್ತು ಈಶ್ವರರಲ್ಲಿ ಭೇದವುಂಟೆಂದು ತಿಳಿಯುವ ಉಪಾಯ ?

**ಉಪಕ್ರಮಾದಿಭಿರ್ಲಿಂಗೈಸ್ತಾತ್ಪರ್ಯಸ್ಯ ವಿಚಾರಣಾತ್ ।**
**ಅಸಂಗಂ ಬ್ರಹ್ಮ ಮಾಯಾವೀ ಸೃಜತ್ಯೇಷ ಮಹೇಶ್ವರಃ ॥೧೯೦॥**

ಉಪಕ್ರಮ (ಆರಂಭ) ವೇ ಮೊದಲಾದ ತಾತ್ಪರ್ಯ ನಿರ್ಣಯಿಸುವ ಲಕ್ಷಣಗಳಿಂದ ತಾತ್ಪರ್ಯವನ್ನು ವಿಚಾರಿಸಿದರೆ ಬ್ರಹ್ಮನು ಅಸಂಗನು ಮತ್ತು ಮಾಯಾವಿಯಾದ ಈಶ್ವರನು ಸೃಷ್ಟಿಕರ್ತನು ಎಂದು ತಿಳಿಯುವದು.

(ಉಪಕ್ರಮೋಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ ಮತ್ತು ಉಪಪತ್ತಿ ಎಂಬ ಲಕ್ಷಣಗಳಮೇಲಿಂದ ಯಾವುದೊಂದು ಪ್ರಕರಣದ ತಾತ್ಪರ್ಯವನ್ನು ನಿರ್ಣಯಿಸಬೇಕೆಂದು ಮೀಮಾಂಸಕರ ಸೂಚನೆಯನ್ನು ಬಹುತರ ಎಲ್ಲ ವಾದಿಗಳೂ ಒಪ್ಪುತ್ತಾರೆ.)

—ಶ್ರುತಿಯಲ್ಲಿ ಉಪಕ್ರಮ-ಉಪಸಂಹಾರಗಳ ಐಕ್ಯವಿರುವದನ್ನು ತೋರಿಸಿ ಸ್ಪಷ್ಟವಾಗಿ ಹೇಳಿದ ಬ್ರಹ್ಮನ ಅಸಂಗತ್ವವನ್ನು ಹೇಳುತ್ತಾರೆ.

**ಸತ್ಯಂ ಜ್ಞಾನಮನಂತಂ ಚೇತ್ಯುಪಕ್ರಮ್ಯೋಪಸಂಹೃತಮ್ ।**
**ಯತೋ ವಾಚೋ ನಿವರ್ತಂತ ಇತ್ಯಸಂಗತ್ವ**
**ನಿರ್ಣಯಃ ॥೧೯೧॥**

ಬ್ರಹ್ಮವು ಸತ್ಯಜ್ಞಾನಾನಂತರೂಪವೆಂದು ಆರಂಭಿಸಿದ ಶ್ರುತಿಯು ಮಾತು ಬ್ರಾಹ್ಮನನ್ನು ಮುಟ್ಟಲಾರದೇ ಮನಸ್ಸಿನೊಡನೆ ಕೂಡಿಕೊಂಡು ಹಿಂದಿರುಗುತ್ತದೆ ಎಂದು ಕೊನೆಗೆ ಉಪಸಂಹಾರ ಮಾಡಿದೆ. ಇದರಿಂದ ಬ್ರಹ್ಮನ ಅಸಂಗತ್ವದ ನಿರ್ಣಯವಾಗುತ್ತದೆ.

(ತೈತ್ತರೀಯೋಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ ಮೇಲಿನ ಶ್ರುತಿವಾಕ್ಯವಿದೆ)

**ಮಾಯೀ ಸೃಜತಿ ವಿಶ್ವಂ ಸನ್ನಿರುದ್ಧಸ್ತತ್ರ ಮಾಯಯಾ ।**
**ಅನ್ಯ ಇತ್ಯಪರಾ ಬ್ರೂತೇ ಶ್ರುತಿಸ್ತೇನೇಶ್ವರಃ ಸೃಜೇತ್ ॥೧೯೭॥**

ಮಾಯಾವಿಯಾದ ಈಶ್ವರನು ಈ ವಿಶ್ವವನ್ನು ನಿರ್ಮಾಣಮಾಡುವನು ಅವನಿಂದ ಬೇರೆ ಎನಿಸುವ ಜೀವನು ಮಾಯೆಯಿಂದ ಜಗತ್ತಿನಲ್ಲಿ ಸಿಕ್ಕು ಬೀಳುವನು. ಹೀಗೆ ಮತ್ತೊಂದು ಶ್ರುತಿಯು ಹೇಳುತ್ತದೆ. ಆದುದರಿಂದ ಈಶ್ವರನೇ ಸೃಷ್ಟಿಯನ್ನು ರಚಿಸುತ್ತಾನೆ.

—ಇನ್ನು ಅವನಿಂದ ಜಗತ್ತಿನ ಉತ್ಪತ್ತಿಯು ಹೇಗೆ ಆಗುವದೆಂದರೆ-

**ಆನಂದಮಯ ಈಶೋಽಯಂ ಬಹು ಸ್ಯಾಮಿತ್ಯವೈಕ್ಷತ ।**
**ಹಿರಣ್ಯಗರ್ಭರೂಪೋಽಭೂತ್ ಸುಪ್ತಿಃ ಸ್ವಪ್ನೋ ಯಥಾ ಭವೇತ್ ॥೧೯೮॥**

ಗಾಢನಿದ್ರೆಯು ಅಲ್ಪಸಂಕಲ್ಪದಿಂದ ಕನಸಾಗುವಂತೆ ಆನಂದಮಯನಾದ ಈಶ್ವರನು 'ಬಹು ಆಗುವೆನು' ಎಂದು ವಿಚಾರಿಸಿದನು. ಹಾಗೆ ವಿಚಾರಿಸಿ ತಾನೇ ಹಿರಣ್ಯಗರ್ಭರೂಪವನ್ನು ಹೊಂದಿದನು.

ಆ ಈಶ್ವರನಿಂದ ಕ್ರಮವಾಗಿ ಎಂದರೆ ಆಕಾಶ ಮೊದಲಾದ ಭೂತ ಕ್ರಮದಿಂದ ಅಥವಾ ಒಂದೇಸಾರಿಗೆ ಸೃಷ್ಟಿಯ ಉತ್ಪತ್ತಿಯನ್ನು ಹೇಳುತ್ತಾರೆ. ಇದರಲ್ಲಿ ಯಾವದು ನಿಜ ?

**ಕ್ರಮೇಣ ಯುಗಪದ್ವೈಷಾ ಸೃಷ್ಟಿರ್ಜ್ಞೇಯಾ ಯಥಾಶ್ರುತಿ ।**
**ದ್ವಿವಿಧ ಶ್ರುತಿ ಸದ್ಭಾವಾತ್ ದ್ವಿವಿಧಸ್ವಪ್ನದರ್ಶನಾತ್ ॥೧೯೯॥**

ಎರಡೂಬಗೆಯ ಶ್ರುತಿಗಳಿರುವದರಿಂದ ಕನಸಿನಲ್ಲಿ ಒಂದುಸಾರೆ ಕ್ರಮವಾಗಿ, ಒಂದುಸಾರೆ ಒಮ್ಮೆಲೇ ಪದಾರ್ಥಗಳನ್ನು ಕಾಣುವಂತ ಶ್ರುತಿಯಲ್ಲಿಹೇಳಿದ ಹಾಗೆ ಕ್ರಮವಾಗಿ ಅಥವಾ ಒಮ್ಮೆಲೇ ಸೃಷ್ಟಿಯಾಗುವದೆಂದು ತಿಳಿಯಬೇಕು.

—ಹಿರಣ್ಯಗರ್ಭನ ಸ್ವರೂಪ.

**ಸೂತ್ರಾತ್ಮಾ ಸೂಕ್ಷ್ಮದೇಹಾಖ್ಯಃ ಸರ್ವಜೀವ ಘನಾತ್ಮಕಃ ।**
**ಸರ್ವಾಹಂಮಾನಧಾರಿತ್ವಾತ್ ಕ್ರಿಯಾಜ್ಞಾನಾದಿ ಶಕ್ತಿಮಾನ್ ॥೨೦೦॥**

ಬಟ್ಟೆಗಳಲ್ಲಿ ನೂಲು ಹಾಸುಹೊಕ್ಕಾಗಿರುವಂತೆ ಈ ಹಿರಣ್ಯಗರ್ಭನು ಜಗತ್ತಿನಲ್ಲಿ ಎಲ್ಲ ಕಡೆಗೂ ವ್ಯಾಪಿಸಿರುವದರಿಂದ ಸೂತ್ರಾತ್ಮನು. ಎಲ್ಲ ಜೀವಗಳ ಸಮುದಾಯರೂಪನು. ಎಲ್ಲ ಸೂಕ್ಷ್ಮದೇಹ ಸಂಜ್ಞಕನು. ಎಲ್ಲ ಸೂಕ್ಷ್ಮದೇಹಗಳಲ್ಲಿ ಅಭಿಮಾನಹೊಂದಿರುವದರಿಂದ ಸರ್ವಜೀವ ಘನಾತ್ಮಕನು ಮತ್ತು ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಯಿಂದ ಕೂಡಿದವನು.

—ಈಶ್ವರನು ಈ ಹಿರಣ್ಯಗರ್ಭಾವಸ್ಥೆಯಲ್ಲಿರುವಾಗ ಜಗತ್ತು ಹೇಗೆ ಕಾಣುವದು ?

**ಪ್ರತ್ಯೂಷೇ ವಾ ಪ್ರದೋಷೇ ವಾ ಮಗ್ನೋ ಮಂದೇ**
**ತಮಸ್ಯಯಮ್ ।**
**ಲೋಕೋ ಭಾತಿ ಯಥಾ ತದ್ವದಸ್ಪಷ್ಟಂ ಜಗದೀಕ್ಷತೇ ॥೨೦೦॥**

ಬೆಳಗಾದಾಗ ಅಥವಾ ಸಂಜೆಯಾದಾಗ ಮಬ್ಬುಗತ್ತಲೆಯಲ್ಲಿ ಮುಳುಗಿ ಅಸ್ಪಷ್ಟವಾಗಿರುವ ಜಗತ್ತಿನಂತೆ ಕಾಣುವದು.

(ಈ ಸೂಕ್ಷ್ಮಾವಸ್ಥೆಯಲ್ಲಿ ಸೃಷ್ಟಿಯು ಸಂಕಲ್ಪಮಯವಾಗಿರುವದು.)

—ಅದಕ್ಕೊಂದು ಚಿತ್ರಪಟದ ದೃಷ್ಟಾಂತ ಕೊಡುತ್ತಾರೆ.

**ಸರ್ವತೋ ಲಾಂಛಿತೋ ಮಷ್ಯಾ ಯಥಾ ಸ್ಯಾದ್ ಘಟ್ಟಿತಃ**
**ಪಟಃ ।**
**ಸೂಕ್ಷ್ಮಾಕಾರೈಸ್ತಥೇಶಸ್ಯ ವಪುಃ ಸರ್ವತ್ರ ಲಾಂಛಿತಮ್॥೨೦೧॥**

ಅನ್ನದ ಗಂಜಿಯನ್ನು ಬಳಿದುದರಿಂದ ದಪ್ಪವಾದ ಅರಿವೆಯ ಮೇಲೆ ಚಿತ್ರಮಯ ಆಕಾರಗಳನ್ನು ಮಸಿಯಿಂದ ಬರೆಯುವಂತೆ ಈಶ್ವರನ ದೇಹವು ಆ ಕಾಲದಲ್ಲಿ ಸೂಕ್ಷ್ಮಚಿಹ್ನಗಳಿಂದ ಗುರುತು ಹಾಕಿದ್ದಾಗುತ್ತದೆ.

—ಈ ಸಿದ್ಧಾಂತವು ಮನದಟ್ಟಾಗಬೇಕೆಂದ ಇನ್ನೊಂದು ದೃಷ್ಟಾಂತ.

**ಸಸ್ಯಂ ವಾ ಶಾಕಜಾತಂ ವಾ ಸರ್ವತೋಽಙ್ಕುರಿತಂ ಯಥಾ ।**
**ಕೋಮಲಂ ತದ್ವದೇವೈಷ ಪೇಲವೋ ಜಗದಂಕುರಃ ॥೨೦೨॥**

ಸಸಿಗಳಾಗಲಿ; ಸೊಪ್ಪುಗಳಾಗಲಿ ಆದೇ ಮೊಳೆತಿರುವಾಗ ಕೋಮಲವಾಗಿರುವಂತೆ ಈ ಜಗತ್ತಿನ ಮೊಳಕೆಯು ಹಿರಣ್ಯಗರ್ಭಾವಸ್ಥೆಯಲ್ಲಿ ಮೃದುವಾಗಿರುವದು.

—ಹೀಗೆ ಸೂತ್ರಾತ್ಮನ ವಿವರಣೆ ಕೊಟ್ಟು ಅವನ ಅವಸ್ಥಾಂತರವೇ ಎನಿಸುವ ಪಂಚೀಕೃತ (ಮಿಶ್ರ) ಭೂತಕಾರ್ಯೋಪಾಧಿಕನಾದ ವಿರಾಟ್ ರೂಪನ ವಿವರಣೆ.

**ಆತಪಾಭಾತ ಲೋಕೋ ವಾ ಪಟೋ ವಾ ವರ್ಣಪೂರಿತಃ ।**
**ಸಸ್ಯಂ ವಾ ಫಲಿತಂ ಯದ್ವತ್ತಥಾ ಸ್ಪಷ್ಟ ವಪುರ್ವಿರಾಟ್ ॥೨೦೪॥**

ಬಿಸಿಲಿನಿಂದ ಬೆಳಗುವ ಜಗತ್ತಾಗಲಿ, ಬಣ್ಣದುಂಬಿದ ಬಟ್ಟೆಯಾಗಲಿ, ಅಥವಾ ಹಂಪಾದ ಸಸ್ಯಗಳಾಗಲಿ ಹೇಗೆ ಸ್ಪಷ್ಟವಾಗಿ ಕಾಣುವವೋ ಹಾಗೆ ರೂಪಗೊಂಡ ವಿರಾಟ್ಪುರುಷನು ಸ್ಪಷ್ಟವಾಗಿ ತೋರುವನು.

—ವಿರಾಟ್ಪುರುಷನಿರುವನೆಂಬ ವಿಷಯದಲ್ಲಿ ಶ್ರುತಿ ಪ್ರಮಾಣ.

**ವಿಶ್ವ ರೂಪಾಧ್ಯಾಯ ಏಷ ಉಕ್ತಃ ಸೂಕ್ತೇಽಪಿ ಪೌರುಷೇ ।**
**ಧಾತ್ರಾದಿ ಸ್ತಂಬ ಪರ್ಯಂತಾನೇತಸ್ಯಾವಯುವಾನ್ವಿದುಃ ॥೨೦೫॥**

ಭಗವದ್ಗೀತೆಯ ವಿಶ್ವರೂಪಾಧ್ಯಾಯದಲ್ಲಿಯೂ, ವೇದದ ಪುರುಷ ಸೂಕ್ತದಲ್ಲಿಯೂ ಇವನದೇ ವರ್ಣನೆ ಇರುತ್ತದೆ. ನಾಲ್ಮೊಗದ ಬ್ರಹ್ಮನಿಂದ ಮೊದಲುಮಾಡಿ ಹುಲ್ಲುಗಡ್ಡೆಯ ವರೆಗೆ ಎಲ್ಲವೂ ಇವನ ಅವಯುವಗಳೆಂದು ಜ್ಞಾನಿಗಳು ತಿಳಿಯುತ್ತಾರೆ.

—ಈಶ್ವರನ ಈ ವಿಸ್ತೃತ ವಿವೇಚನೆಯಿಂದ ಏನು ಸಿದ್ಧವಾದಂತಾಯಿತು?

**ಈಶ ಸೂತ್ರ ವಿರಾಡ್ವೇಧೋ ವಿಷ್ಣು ರುದ್ರೇಂದ್ರ ವಹ್ನಯಃ ।**
**ವಿಘ್ನಭೈರವ ಮೈರಾಲ ಮಾರಿಕಾ ಯಕ್ಷ ರಾಕ್ಷಸಾಃ ॥೨೦೬॥**
**ವಿಪ್ರಕ್ಷತ್ರಿಯ ವಿಟ್ ಶೂದ್ರಾ ಗವಾಶ್ವ ಮೃಗಪಕ್ಷಿಣಃ ।**
**ಅಶ್ವತ್ಥ ವಟಚೂತಾದ್ಯಾಯುವವ್ರೀಹಿ ತೃಣಾದಯಃ ॥೨೦೭॥**
**ಜಲಪಾಷಾಣ ಮೃತ್ಕಾಷ್ಠವಾಸ್ಯ ಕುದ್ದಾಲ ಕಾದಯಃ ।**
**ಈಶ್ವರಾಃ ಸರ್ವ ಏವೈತೇ ಪೂಜಿತಾಃ ಫಲದಾಯಿನಃ ॥೨೦೮॥**

ಅಂತರ್ಯಾಮಿಯಾದ ಈಶ್ವರ, ಸೂತ್ರಾತ್ಮನೆನಿಸುವ ಹಿರಣ್ಯಗರ್ಭ, ವಿರಾಟ್ಪುರುಷ, ಬ್ರಹ್ಮದೇವ, ವಿಷ್ಣು, ಶಿವ, ಇಂದ್ರ, ಅಗ್ನಿ, ಗಜಾನನ, ಭೈರವ, ಮೈರಾಳ, ಮಾರಿಕಾದೇವಿ, ಯಕ್ಷ, ರಾಕ್ಷಸ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಆಕಳು, ಕುದುರೆ, ಮೃಗ, ಪಕ್ಷಿ, ಅರಳೆಮರ, ಆಲದಮರ,

ಮಾವಿನಮರ, ಗೋದಿ, ಛತ್ರ, ಹುಲ್ಲು, ನೀಗು, ಕಲ್ಲು, ಮಣ್ಣು, ಕಟ್ಟಿಗೆ, ಬಡಿಗನಬಾಚಿ, ಗುದ್ದಲಿ ಇವೆಲ್ಲವುಗಳೂ ಈಶ್ವರರೂಪವಾದವು. ಅವುಗಳಲ್ಲಿ ಯಾವದೊಂದರ ಪೂಜೆ ನಡೆದರೂ ಅವು ಫಲ ಕೊಡುತ್ತವೆ.

—ಇವುಗಳನ್ನು ಹೇಗೆ ಉಪಾಸನೆ ಮಾಡುವರೋ ಹಾಗೆ ಫಲ ಹೊಂದುತ್ತಾರೆ.

**ಯಥಾಯಥೋಪಾಸತೇ ತಂ ಫಲಮೀಯುಸ್ತಥಾ ತಥಾ ।**
**ಫಲೋತ್ಕರ್ಷಾ ಪಕರ್ಷೌ ತು ಪೂಜ್ಯ ಪೂಜಾನುಸಾರತಃ॥೨೦೮॥**

ಅವನನ್ನು ಯಾವ ಯಾವ ಭಾವದಿಂದ ಉಪಾಸನೆ ಮಾಡುವರೋ ಅದಕ್ಕೆ ತಕ್ಕಂತೆ ಫಲವು ದೊರೆಯುವದು. ಆದರೆ ಪೂಜೆಗೊಳ್ಳುವ ದೇವತೆಯ ರೂಪಭೇದ, ಪೂಜಿಸುವವನ ಸಾತ್ವಿಕ ಮುಂ. ಪೂಜಾಭೇದಗಳಿಂದ ಫಲದ ಹೆಚ್ಚುಕಡಿಮೆಯಾಗುವದು.

—ಹೀಗೆ ಸಾಂಸಾರಿಕ ಫಲದ ಸಿದ್ಧಿಯಾಗಲಿ. ಮುಕ್ತಿಯು ಯಾವ ಉಪಾಸನೆಯಿಂದ ?

**ಮುಕ್ತಿಸ್ತು ಬ್ರಹ್ಮತತ್ವಸ್ಯ ಜ್ಞಾನಾದೇವ ನ ಚಾನ್ಯಥಾ ।**
**ಸ್ವಪ್ರಬೋಧಂ ವಿನಾನೈವ ಸ್ವಸ್ವಪ್ನೋ ಹೀಯತೇ**
**ಯಥಾ ॥೨೦೯॥**

ತಾನು ಎಚ್ಚರಗೊಳ್ಳದವಿನಾ ಕಂಡಕನಸು ಹೇಗೆ ನಾಶವಾಗುವದಿಲ್ಲವೋ ಹಾಗೆ ಬ್ರಹ್ಮತತ್ವದ ಜ್ಞಾನದಿಂದಲೇ ಮುಕ್ತಿ ದೊರೆಯುವದು. ಮತ್ತೆ ಯಾತರಿಂದಲೂ ಅಲ್ಲ.

—ನಿಮ್ಮ ದೃಷ್ಟಾಂತ ಸಮಂಜಸವಲ್ಲ. ಯಾಕೆಂದರೆ ತತ್ವಜ್ಞಾನದಿಂದ ಇಲ್ಲಿ ದ್ವೈತವು ನಾಶವಾಗಬೇಕು. ಅದು ಕನಸಿನಂತಲ್ಲ.

**ಅದ್ವಿತೀಯ ಬ್ರಹ್ಮತತ್ವೇ ಸ್ವಪ್ನೋಽಯಮಖಿಲಂ ಜಗತ್ ।**
**ಈಶ ಜೀವಾದಿರೂಪೇಣ ಚೇತನಾಚೇತನಾತ್ಮಕಮ್ ॥೨೧೦॥**

ಈಶ್ವರ-ಜೀವರು ಇತ್ಯಾದಿರೂಪದಿಂದ ಜಡ–ಚೈತನ್ಯರೂಪವಾಗಿರುವ ಇದೆಲ್ಲ ಜಗತ್ತು ಎರಡನೆಯದೆಂಬುದಿಲ್ಲದ ಬ್ರಹ್ಮನಲ್ಲಿ ಕನಸಿನಂತೆಯೇ ಇರುವದು.

ಈಶ್ವರ ಮತ್ತು ಜೀವರು ಬ್ರಹ್ಮಕ್ಕಿಂತ ಬೇರೆಯಲ್ಲವೆಂದು ಹೇಳಿದ್ದೀರಿ. ಈಗ ಅವರನ್ನು ಜಗತ್ತಿನಲ್ಲಿ ಸೇರಿಸಿ ಮಾತಾಡುವದು ಯೋಗ್ಯವೇ ?

**ಆನಂದಮಯ ವಿಜ್ಞಾನ ಮಯಾವೀಶ್ವರ ಜೀವಕೌ ।**
**ಮಾಯಯಾ ಕಲ್ಪಿತಾವೇತೌ ತಾಭ್ಯಾಂ ಸರ್ವಂ ಪ್ರಕಲ್ಪಿತಮ್ ॥೨೧೧॥**

ಆನಂದಮಯ ಕೋಶಾಭಿಮಾನಿಯಾದ ಈಶ್ವರನು, ವಿಜ್ಞಾನಮಯ ಕೋಶಾಭಿಮಾನಿಯಾದ ಜೀವನು ಇಬ್ಬರೂ ಮಾಯೆಯಿಂದ ಕಲ್ಪಿತರಾದವರು. ಅವರೇ ಮುಂದೆ ಈ ಜಗತ್ತನ್ನೆಲ್ಲ ಹುಟ್ಟಿಸಿದವರು.

—'ಅವರೇ ಈ ಜಗತ್ತನ್ನೆಲ್ಲ ಹುಟ್ಟಿಸಿದವರು' ಎಂದು ಹೇಳಿದಿರಿ. ಯಾರು ಯಾರು ಏನೇನು ಸೃಷ್ಟಿಸಿದರು ?

**ಈಕ್ಷಣಾದಿ ಪ್ರವೇಶಾಂತಾ ಸೃಷ್ಟಿರೀಶೇನ ಕಲ್ಪಿತಾ ।**
**ಜಾಗ್ರದಾದಿ ವಿಮೋಕ್ಷಾಂತಃ ಸಂಸಾರೋ ಜೀವಕಲ್ಪಿತಃ॥೨೧೨॥**

ಜಗತ್ತನ್ನು ನಿರ್ಮಿಸಬೇಕೆಂದು ಸಂಕಲ್ಪಮಾಡಿ ಭೂತಾದಿಗಳನ್ನು ನಿರ್ಮಿಸಿ ಅವುಗಳಲ್ಲೆಲ್ಲ ಪ್ರವೇಶ ಮಾಡಿದವರೆಗಿನ ಸೃಷ್ಟಿಯು ಈಶ್ವರನದು. ಎಚ್ಚರ ಮೊದಲುಗೊಂಡು ಮೋಕ್ಷದವರೆಗಿನ ಶಾಸ್ತ್ರೀಯ ಮತ್ತು ಅಶಾಸ್ತ್ರೀಯವಾದ ಸಂಸಾರವೆಲ್ಲ ಜೀವನದು.

—ಆಗಲಿ. ಬ್ರಹ್ಮವೇ ಪಾರಮಾರ್ಥಿಕ ಸತ್ಯ. ಎಂದಮೇಲೆ ವಾದಿಗಳು ಜೀವೇಶ್ವರರ ಸ್ವರೂಪ ವಿಷಯದಲ್ಲಿ ಬಡಿದಾಡುವರೇಕೆ ?

**ಅದ್ವಿತೀಯಂ ಬ್ರಹ್ಮ ತತ್ತ್ವಮಸಂಗಂ ತನ್ನ ಜಾನತೇ ।**
**ಜೀವೇಶಯೋರ್ಮಾಯಿಕಯೋರ್ವೃಥೈವ ಕಲಹಂ ಯಯುಃ ॥೨೧೩॥**

ಎರಡನೆಯದಿಲ್ಲದುದೂ, ಯಾವುದನ್ನೂ ಹಚ್ಚಿಕೊಳ್ಳದಂತಹುದೂ, ಆದ ಬ್ರಹ್ಮತತ್ತ್ವವನ್ನು ವಾದಿಗಳು ತಿಳಿಯುವದಿಲ್ಲ. ಆದುದರಿಂದ ಮಾಯೆಯಿಂದ ಹುಟ್ಟಿದ ಜೀವ–ಈಶ್ವರರ ವಿಷಯದಲ್ಲಿ ಬಡಿದಾಡುತ್ತಿರುವರು.

—ಹಾಗೆ ಮತಭೇದ ಹೊಂದಿ ಬಡಿದಾಡುವ ಅಜ್ಞಾನಿಗಳಿಗೆ ನೀವು ತತ್ತ್ವಬೋಧ ಮಾಡಬಾರದೇಕೆ ?

**ಜ್ಞಾತ್ವಾ ಸದಾ ತತ್ತ್ವನಿಷ್ಠಾನನು ಮೋದಾವಹೇ ವಯಮ್ ।**
**ಅನುಶೋಚಾಮ ಏವಾನ್ಯಾನ್ನ ಭ್ರಾಂತ್ಯೈರ್ವಿವದಾ-**
**ಮಹೇ ॥೨೧೪॥**

ನಾವು ತತ್ತ್ವನಿಷ್ಠರಾದವರನ್ನು ಕಂಡು ಯಾವಾಗಲೂ ಸಂತೋಷದಿಂದ ಸರಿ ಎನ್ನುತ್ತೇವೆ. ಉಳಿದವರನ್ನು ಕಂಡು ಮರುಗುತ್ತೇವೆ. ಆದರೆ ತಲೆ ತಿರುಕರೊಡನೆ ವಾದಿಸಲಾರೆವು.

—ಈಶ್ವರನ ಬಗೆಗೆ ಭ್ರಾಂತರು ಯಾರು ? ಜೀವನ ಬಗೆಗೆ ಭ್ರಾಂತರು ಯಾರು ? ಎಂಬುದನ್ನು ಹೇಳುತ್ತಾರೆ.

**ತೃಣಾರ್ಚಕಾದಿಯೋಗಾಂತಾ ಈಶ್ವರೇ ಭ್ರಾಂತಿಮಾಶ್ರಿತಾಃ ।**
**ಲೋಕಾಯತಾದಿ ಸಾಂಖ್ಯಾಂತಾ ಜೀವೇ ವಿಭ್ರಾಂತಿ**
**ಮಾಶ್ರಿತಾಃ ॥೨೧೫॥**

ಹುಲ್ಲನ್ನು ಪೂಜಿಸುವವರೇ ಮೊದಲಾಗಿ, ಯೋಗ ಮತದವರೆಗಿನವರು (ಹಿಂದೆ ಇವರ ಪಟ್ಟಿ ಬಂದಿದೆ) ಈಶ್ವರನ ವಿಷಯದಲ್ಲಿ ತಪ್ಪಾಗಿ ತಿಳಿದು ತಲೆತಿರುಕರಾದರು. ಚಾರ್ವಾಕರಿಂದ ಮೊದಲಾಗಿ ಸಾಂಖ್ಯರವರೆಗಿನ ವಾದಿಗಳು ಜೀವನ ವಿಷಯವನ್ನು ತಪ್ಪಾಗಿ ತಿಳಿದು ಎಂದರೆ ಜೀವಸ್ವರೂಪವನ್ನು ತಿಳಿಯದೇ ಪಂಚಕೋಶಗಳಲ್ಲಿ ಒಂದೊಂದನ್ನು ಜೀವವೆಂದು ತಿಳಿದು ತಲೆ ತಿರುಕರಾದರು.

—ಆದರೆ ಅವರೆಲ್ಲ ಭ್ರಾಂತರೆಂದು ಹೇಗೆ ಅನ್ನಬೇಕು ?

**ಅದ್ವಿತೀಯ ಬ್ರಹ್ಮತತ್ತ್ವಂ ನಜಾನಂತಿ ಯದಾ ತದಾ ।**
**ಭ್ರಾಂತಾ ಏವಾಖಿಲಾಸ್ತೇಷಾಂ ಕ್ವ ಮುಕ್ತಿಃ ಕ್ವೇಹ ವಾ**
**ಸುಖಮ್ ॥೨೧೬॥**

ಎಲ್ಲಿಯವರೆಗೆ ಅದ್ವಿತೀಯ ಬ್ರಹ್ಮತತ್ತ್ವವನ್ನು ತಿಳಿಯುವದಿಲ್ಲವೋ ಅಲ್ಲಿಯವರೆಗೆ ಎಲ್ಲರೂ ತಪ್ಪು ತಿಳಿವಳಿಕೆಯಿಂದ ಕೂಡಿದ ತಲೆತಿರುಕರೇ.

—ಒಳ್ಳೇದು. ಅವರಲ್ಲಿ ಬ್ರಹ್ಮವಿದ್ಯೆಯ ಅಭಾವವಿದ್ದರೂ ಅನೇಕ ವಿದ್ಯೆಗಳು ಇರುತ್ತವೆ. ಅವುಗಳಿಂದ ಶ್ರೇಷ್ಠತ್ವ–ಕನಿಷ್ಠತ್ವಗಳು ಅವರಲ್ಲಿ ಕಂಡುಬರುತ್ತವೆ. ಆ ಕಾರಣದಿಂದ ಶ್ರೇಷ್ಠರಿಗೆ ಸುಖವಾಗಲಾರದೇ ?

**ಉತ್ತಮಾಧಮಭಾವಶ್ಚೇತ್ತೇಷಾಂ ಸ್ಯಾದಸ್ತು ತೇನ ಕಿಮ್ ।**
**ಸ್ವಪ್ನಸ್ಥ ರಾಜ್ಯಭಿಕ್ಷಾಭ್ಯಾಂ ನ ಬುದ್ಧಃ ಸ್ಪೃಶ್ಯತೇ ಖಲು॥೨೧೭॥**

ಅವರಲ್ಲಿ ಕೂಡ ಉತ್ತಮಾಧಮ ಜನರಿರುತ್ತಾರೆ. ಇರಲಿ. ಅದರಿಂದಾಗುವದೇನು ? ಎಚ್ಚರಗೊಂಡವನು ಕನಸಿನ ರಾಜ್ಯ ಅಥವಾ ಭಿಕ್ಷೆಯಿಂದ ಸಂಬಂಧಗೊಳ್ಳಲಾರನಷ್ಟೇ ?

—ಜೀವ-ಮತ್ತು ಈಶ್ವರವಾದವು ಮುಕ್ತಿಗೆ ಸಹಾಯಕವಾಗಲಾರದು. ಆದುದರಿಂದ ಮೋಕ್ಷವನ್ನು ಪಡೆಯಬೇಕೆನ್ನುವವರು ಆ ವಾದದಲ್ಲಿ ಬುದ್ಧಿಯನ್ನು ದಣಿಸಬಾರದು.

**ತಸ್ಮಾನ್ಮುಮುಕ್ಷುಭಿರ್ನೈವ ಮತಿರ್ಜೀವೇಶವಾದಯೋಃ ।**
**ಕಾರ್ಯಾ ಕಿಂತು ಬ್ರಹ್ಮತತ್ತ್ವಂ ವಿಚಾರ್ಯಾಂ ಬುಧ್ಯತಾಂ ಚ ತತ್ ॥೨೧೮॥**

ಆದುದರಿಂದ ಮುಮುಕ್ಷುಗಳು ಜೀವ-ಈಶ್ವರರ ವಾದದಲ್ಲಿ ಬಹಳ ಆಸಕ್ತಿಯನ್ನು ತೋರಬಾರದು. ಆದರೆ ಬ್ರಹ್ಮತತ್ವವನ್ನು ವಿಚಾರಮಾಡಿ ಅದನ್ನು ಅರಿತುಕೊಳ್ಳಬೇಕು.

—ಬ್ರಹ್ಮತತ್ವದ ನಿಶ್ಚಯಕ್ಕೆ ಜೀವ-ಮತ್ತು ಈಶ್ವರರ ಸ್ವರೂಪವನ್ನು ತಿಳಿಯುವ ಅವಶ್ಯವಿಲ್ಲ ಎಂದು ತಿಳಿಯ ಬೇಕಾದರೂ ಮೊದಲು ಅವುಗಳನ್ನು ಅರಿಯುವದು ಅವಶ್ಯವಲ್ಲವೇ?

**ಪೂರ್ವಪಕ್ಷತಯಾ ತೌ ಚೇತ್ತತ್ವ ನಿಶ್ಚಯ ಹೇತುತಾಮ್ ।**
**ಪ್ರಾಪ್ನುತೋಽಸ್ತು ನಿಮಜ್ಜಸ್ವ ತಯೋರ್ನೈತಾವತಾಽವಶಃ ॥೨೧೯॥**

ಈ ಜೀವೇಶ್ವರವಾದವು ಪೂರ್ವ ಪಕ್ಷವೆನಿಸುವದರಿಂದ ತತ್ವನಿಶ್ಚಯ ಮಾಡುವದಕ್ಕೆ ಕಾರಣವಾಗುವದು ಎಂದು ಅಭಿಪ್ರಾಯ ಪಡುವದಾದರೆ, ಆಗಲಿ. ಆದರೆ ಹಾಗಿರುವದೆಂದು ವಿವೇಕವಿಲ್ಲದೇ ಅದರಲ್ಲಿಯೇ ಮುಳುಗಿ ಹೋಗಬೇಡ.

—ಸಾಂಖ್ಯ-ಮತ್ತು ಯೋಗ ಶಾಸ್ತ್ರಗಳಲ್ಲಿ ಜೀವೇಶ್ವರರು ಅಸಂಗ ಚಿದ್ರೂಪರೆಂದು ಹೇಳುತ್ತಾರೆ. ಅದು ನಿಮಗೂ ಒಪ್ಪಿಗೆಯಾಗಿದೆ. ಆ ಸಾಂಖ್ಯ

ಯೋಗ–ಶಾಸ್ತ್ರಗಳ ಜೀವೇಶ್ವರರನ್ನು ಪೂರ್ವಪಕ್ಷವೆಂದು ಹೇಳಲಾಗುವದಿಲ್ಲ. ಎಂದರೆ–

**ಅಸಂಗ ಚಿದ್ವಿಭುರ್ಜೀವಃ ಸಾಂಖ್ಯೋಕ್ತಸ್ತಾದೃಗೀಶ್ವರಃ ।**
**ಯೋಗೋಕ್ತಸ್ತತ್ತ್ವಮೋರರ್ಥೌ ಶುದ್ಧೌ ತಾವಿತಿ ಚೇತ್**
**ಶೃಣು ॥೨೨೦॥**

ಸಾಂಖ್ಯಶಾಸ್ತ್ರದಲ್ಲಿ ಹೇಳಿದ ಜೀವನು ಅಸಂಗನು, ಚೈತನ್ಯರೂಪನು, ಮತ್ತು ವ್ಯಾಪಕನು. ಯೋಗಶಾಸ್ತ್ರದಲ್ಲಿ ಹೇಳಿದ ಈಶ್ವರನರೂಪವೂ ಹಾಗೇ ಇರುವದು. ಅವರೇ ನಿಮ್ಮ ತತ್ ಮತ್ತು ತ್ವಂಪದದ ಶುದ್ಧ ಅರ್ಥವಾಗಿರುವರು. ಹೀಗನ್ನುವದಾದರೆ ಕೇಳು.

**ನ ತತ್ತ್ವಮೋರುಭಾವಾರ್ಥಾವಸ್ಮತ್ ಸಿದ್ಧಾಂತತಾಂ ಗತೌ ।**
**ಅದ್ವೈತ ಬೋಧನಾಯೈವ ಸಾ ಕಕ್ಷಾ ಕಾಚಿದಿಷ್ಯತೇ ॥೨೨೧॥**

ಅವರು ಹೇಳುವ ತತ್–ಮತ್ತು ತ್ವಂ ಪದಗಳ ಅರ್ಥಗಳು ನಮ್ಮ ಸಿದ್ಧಾಂತಕ್ಕೆ ಹೊಂದುವದಿಲ್ಲ. ಅದ್ವೈತವನ್ನು ಬೋಧಿಸುವದಕ್ಕಾಗಿ ಮಾತ್ರ ಅದೊಂದು ಅನುವಾದವೆಂದು ನಾವು ಸ್ವೀಕರಿಸುತ್ತೇವೆ.

(ಜೀವ-ಮತ್ತು ಈಶ್ವರರಲ್ಲಿ ಭೇದವುಂಟೆಂದು ಸಾಂಖ್ಯ–ಯೋಗ ಮತಾಭಿಮಾನಿಗಳು ಸ್ವೀಕರಿಸುವರು. ಆದರೆ ಅದ್ವೈತ ಸಿದ್ಧಾಂತದಲ್ಲಿ ಅವರ ಭೇದವು ಒಪ್ಪಿಗೆ ಯಾಗುವಂಥದಲ್ಲ. ನಾವು ಹೇಳುವ ತ್ವಂ ಪದದ ಅರ್ಥವೆನಿಸಿದ ಕೂಟಸ್ಥನೂ, ತತ್ಪದದ ಅರ್ಥವಾದ ಬ್ರಹ್ಮನೂ ಬೇರೆ ಬೇರೆ ಎಂದು ಹೇಳುತ್ತಿರುವದು ಲೋಕದ ಸಾಮಾನ್ಯರು ತಿಳಿದಿರುವ ಭೇದವನ್ನು ನಿರಾಕರಿಸಿ ಅವರ ಐಕ್ಯವನ್ನು ಬೋಧಿಸುವದಕ್ಕಾಗಿಯೇ ಹೊರತು ನಿಜವಾಗಿ ಭೇದವುಂಟೆಂದು ಹೇಳುವದಕ್ಕಲ್ಲ. ಅಭೇದವು ನಮ್ಮ ಸಿದ್ಧಾಂತ)

—ಹಾಗಿದ್ದರೆ ತ್ವಂ ಪದಾರ್ಥನೆನಿಸುವ ಜೀವ ಹಾಗೂ ತತ್ ಪದಾರ್ಥವೆನಿಸುವ ಬ್ರಹ್ಮ ಶೋಧನೆ ಮಾಡುವದೇಕೆ?

**ಅನಾದಿ ಮಾಯಯಾ ಭ್ರಾಂತಾ ಜೀವೇಶೌ ಸುವಿಲಕ್ಷಣೌ ।**
**ಮನ್ಯಂತೇ ತದ್ವ್ಯುದಾಸಾಯ ಕೇವಲಂ ಶೋಧನಂ**
**ತಯೋಃ ॥೨೨೨॥**

ಕಾರಣ ಶೂನ್ಯವೆನಿಸಿದ ಅನಾದಿ ಮಾಯೆಯಿಂದ ಭ್ರಮೆಗೊಂಡವರು, ಜೀವ-ಮತ್ತು ಈಶ್ವರರು ಅತ್ಯಂತ ಭಿನ್ನರೆಂದು ತಿಳಿಯುತ್ತಾರೆ. ಆದುದರಿಂದ ಆ ಭೇದವನ್ನು ನಿವಾರಿಸಬೇಕೆಂದು ನಾವು ಅವರ ಶೋಧನ ಮಾಡುತ್ತೇವೆ.

ಇಲ್ಲಿ ಮಾಯಾ ಶಬ್ದದಿಂದ ಅದು ತನ್ನ ಆಶ್ರಯವೆನಿಸುವ ವಸ್ತುವನ್ನೂ ಮೋಹಗೊಳಿಸುವ ಅವಿದ್ಯೆಯನ್ನೂ ಒಳಗೊಳ್ಳುವದೆಂದು ತಿಳಿಯಬೇಕು. ಈ ಅವಿದ್ಯೆಗೊಳಗಾದವರು ಜೀವನಲ್ಲಿ ಕರ್ತೃತ್ವವನ್ನು ಈಶ್ವರನಲ್ಲಿ ಸರ್ವಜ್ಞತ್ವವನ್ನು ಆರೋಪಿಸಿ ಈ ಧರ್ಮಗಳು ಸತ್ಯವೆಂದು ತಿಳಿಯುವರು. ಅವರ ಆ ವಿಪರೀತ ಭಾವನೆಯನ್ನು ಕಳೆಯುವದಕ್ಕಾಗಿ ಆ ಆ ಪದಾರ್ಥಗಳ ಶೋಧನೆ ಮಾಡಬೇಕಾಗುವದು.

— ಪದಾರ್ಥ ಶೋಧನೆಯ ಪ್ರಕಾರವನ್ನು ತೋರಿಸುವದಕ್ಕಾಗಿ-ಆ ಶೋಧನೆಯ ಉಪಾಯ ಮತ್ತು ದೃಷ್ಟಾಂತಗಳನ್ನು ಸ್ಮರಿಸುತ್ತಾರೆ.

**ಅತ ಏವಾತ್ರ ದೃಷ್ಟಾಂತೋ ಯೋಗ್ಯಃ ಪ್ರಾಕ್ ಸಮ್ಯಗೀರಿತಃ|**
**ಘಟಾಕಾಶಮಹಾಕಾಶ ಜಲಾಕಾಶಾಭ್ರಖಾತ್ಮಕಃ ||೨೨||**

ಆದುದರಿಂದ ಇದೇ ಪ್ರಕರಣದಲ್ಲಿ ಹಿಂದೆ ಘಟಾಕಾಶಾದಿ ರೂಪ ದೃಷ್ಟಾಂತಗಳನ್ನು ಸ್ಪಷ್ಟವಾಗಿ ಹೇಳಿರುವೆವು.

—ಪದಾರ್ಥಶೋಧನ ಪ್ರಕಾರ.

**ಜಲಾಭ್ರೋಪಾಧ್ಯಧೀನೇ ತೇ ಜಲಾಕಾಶಾಭ್ರಖೇ ತಯೋಃ |**
**ಆಧಾರೌತು ಘಟಾಕಾಶ ಮಹಾಕಾಶೌ ಸುನಿರ್ಮಲೌ ||೨೩||**

ನೀರಿನಲ್ಲಿ ಕಾಣುವ ಆಕಾಶವು ನೀರಿಗೂ, ಮೋಡದಲ್ಲಿ ಕಾಣುವ ಆಕಾಶವು ಮೋಡಕ್ಕೂ ಅಧೀನವಾಗಿರುವವು. ಆದರೆ ಅವುಗಳ ಆಧಾರವೆನಿಸುವ ಘಟಾಕಾಶ-ಮಹಾಕಾಶಗಳು ಅತಿಶಯ ನಿರ್ಮಲವಾಗಿ ಸ್ವತಂತ್ರವೆನಿಸುವವು.

**ಏವಮಾನಂದವಿಜ್ಞಾನಮಯೌ ಮಾಯಾಧಿಯೋರ್ವಶೌ |**
**ತದಧಿಷ್ಠಾನ ಕೂಟಸ್ಥ ಬ್ರಹ್ಮಣೀ ತು ನಿರ್ಮಲೇ ||೨೪||**

ಇದರಂತೆ ಆನಂದಮಯಾಭಿಮಾನಿಯಾದ ಈಶ್ವರನು ಮಾಯೆಗೂ, ವಿಜ್ಞಾನಮಯಾಭಿಮಾನಿಯಾದ ಜೀವನು ಬುದ್ಧಿಗೂ ಅಧೀನರಾಗಿರುವರು.

ಆದರೆ ಅವರಿಗೆ ಅನುಕ್ರಮವಾಗಿ ಆಧಾರವೆನಿಸಿದ ಬ್ರಹ್ಮಚೈತನ್ಯವೂ, ಕೂಟಸ್ಥ ಚೈತನ್ಯವೂ ನಿರ್ಮಲವಾಗಿರುವವು.

—ಈ ಪ್ರಕಾರಗಳನ್ನು ತಿಳಿದುಕೊಳ್ಳುವದಕ್ಕೆ ಸಹಾಯಕವೆಂದಾದರೂ ಸಾಂಖ್ಯ ಮತ್ತು ಯೋಗ ಮತಗಳನ್ನು ಒಪ್ಪಬಹುದೆಂದಾಯಿತಲ್ಲ.

**ಏತತ್‌ಕಷೋಪ ಯೋಗೇನ ಸಾಂಖ್ಯಯೋಗೌ ಮತೌಯದಿ ।**
**ದೇಹೋಽನ್ನಮಯ ಕಕ್ಷತ್ವಾದಾತ್ಮತ್ವೇನಾಭ್ಯುಪೇಯ ತಾಮ್ ॥೨೨೬॥**

ಇವೆಲ್ಲ ವಿಷಯ ತಿಳಿವಳಿಕೆಗೆ ಉಪಯುಕ್ತವೆಂದು ಸಾಂಖ್ಯ ಮತ್ತು ಯೋಗ ಮತಗಳನ್ನು ಒಪ್ಪಬೇಕೆಂದರೆ ಅನ್ನಮಯ ಕೋಶವನ್ನು ಅರಿಯುವದೂ ಒಂದು ವಿಧಾನವಾಗಿದೆ. ಹಾಗೆಂದು ದೇಹವೇ ಆತ್ಮನೆನ್ನುವ ಚಾರ್ವಾಕರ ಮತವನ್ನೂ ಸ್ವೀಕರಿಸಬೇಕಾದೀತು.

—ಹೀಗಿರುವದಾದರೆ ಸಾಂಖ್ಯ-ಯೋಗ ಮತಗಳು ವೇದಾಂತಕ್ಕೆ ಯಾವಬಗೆಯಿಂದ ವಿರೋಧಿಗಳಾಗಿವೆ ?

**ಆತ್ಮಭೇದೋ ಜಗತ್ಸತ್ಯಮೀಶೋಽನ್ಯ ಇತಿ ಚೇತ್‌ತ್ರಯಮ್ ।**
**ತ್ಯಜ್ಯತೇ ತೈಸ್ತದಾ ಸಾಂಖ್ಯಯೋಗ ವೇದಾಂತ ಸಮ್ಮತಿಃ॥೨೨೭॥**

ಆತ್ಮನಲ್ಲಿರುವ ಭೇದ. ಜಗತ್ತು ಸತ್ಯವೆಂಬುದು. ಈಶ್ವರನು ತಟಸ್ಥನಾಗಿ ಬೇರೆ ಇರುವನು. ಈ ಮೂರು ಅಭಿಪ್ರಾಯಗಳನ್ನು ಅವರು ಬಿಟ್ಟರೆ ಅವರಿಬ್ಬರ ಮತಗಳು ವೇದಾಂತಕ್ಕೆ ಒಪ್ಪಿಗೆಯಾಗುವವು.

(ಜೀವರು ಅಸಂಖ್ಯರು ಮತ್ತು ಜಗತ್ತು ಸತ್ಯವಾದುದು ಎಂದು ಸಾಂಖ್ಯರು ತಿಳಿಯುತ್ತಾರೆ. ಇವು ಶ್ರುತಿ ವಿರೋಧವಾದ ಅಭಿಪ್ರಾಯಗಳು. ಉಭಯಮತೀಯರು ಮೇಲಿನ ಅಭಿಪ್ರಾಯಗಳನ್ನು ಬಿಟ್ಟರೆ ಶ್ರುತಿ ವಿರುದ್ಧವಾದ ಅಭಿಪ್ರಾಯಗಳು ಎಲ್ಲಿಯೂ ಇರುವದಿಲ್ಲ.)

—ಸರಿ. ಪುರುಷನು ಅಸಂಗನು ಎಂದು ತಿಳಿದಮಾತ್ರಕ್ಕೆ ಮುಕ್ತಿಯಾಗುತ್ತಿದ್ದರೆ ಆ ಅದ್ವೈತಜ್ಞಾನದಿಂದೇನು ಉಪಯೋಗ ?

**ಜೀವೋಽಸಂಗತ್ವಮಾತ್ರೇಣ ಕೃತಾರ್ಥ ಇತಿ ಚೇತ್ತದಾ ।**
**ಸ್ರಕ್‌ಚಂದನಾದಿನಿತ್ಯತ್ವ ಮಾತ್ರೇಣಾಪಿ ಕೃತಾರ್ಥತಾ ॥೨೨೮॥**

ಜೀವನಿಗೆ ನಾನು ಅಸಂಗನು ಎಂದು ಜ್ಞಾನವಾದ ಮಾತ್ರಕ್ಕೆ ಮುಕ್ತಿಯಾಗುತ್ತದೆ ಎಂದುಬಿಟ್ಟರೆ ಪುಷ್ಪಮಾಲಿಕೆ, ಗಂಧ ಮೊದಲಾದ ಪದಾರ್ಥಗಳು ನಿತ್ಯವಾದವುಗಳು ಎಂದು ತಿಳಿವಳಿಕೆಯಾದರೂ ಕೂಡ ಅವನು ಮುಕ್ತನಾಗಬೇಕಾದೀತು.

(ಯಾಕಂದರೆ ಎರಡೂ ಜ್ಞಾನಗಳೇ ಆಗಿವೆ.)

—ಅದ್ವೈತಜ್ಞಾನದಿಂದಲೇ ಮೋಕ್ಷವೆಂದು ತಿಳಿಸುತ್ತಾರೆ.

**ಯಥಾ ಸ್ರಗಾದಿ ನಿತ್ಯತ್ವ ದುಃಸಂಪಾದ್ಯ ತಥಾತ್ಮನಃ ।**
**ಅಸಂಗತ್ವಂ ನ ಸಂಭಾವ್ಯಂ ಜೀವತೋರ್ಜಗದೀಶಯೋಃ॥೨೦೯॥**

ಪುಷ್ಪಮಾಲಿಕೆ–ಗಂಧಾದಿಗಳಿಂದ ಕೂಡಿದ ಜಗತ್ತಿನ ನಿತ್ಯತ್ವವನ್ನು ಸಿದ್ಧಮಾಡುವದು ಬಹಳ ಕಠಿಣವಾದ ವಿಷಯವು ಹೇಗೋ ಹಾಗೆ ಜಗತ್ತು-ಮತ್ತು ಈಶ್ವರನು ನಿತ್ಯವೆಂದು ತಿಳಿದಿರುವವರೆಗೆ ಆತ್ಮನ ಅಸಂಗತ್ವವು ಕೂಡ ಸಿದ್ಧವಾಗುವದು ಶಕ್ಯವಿಲ್ಲ.

(ಜಗತ್ತು ಸತ್ಯವೆಂದು ಹೇಳುತ್ತಿರುವ ಸಾಂಖ್ಯರಿಗೆ ಕೂಡ ಪುಷ್ಪಮಾಲಿಕೆ-ಗಂಧಾದಿಗಳನ್ನು ಕೊನೆಯವರೆಗೆ ಉಳಿಸಿಕೊಳ್ಳುವದು ಸಾಧ್ಯವಾಗಿಲ್ಲ. ಈಶ್ವರ–ಜಗತ್ತುಗಳು ವಿಶೇಷ್ಯ–ವಿಶೇಷಣಗಳೆನಿಸಿ ತೋರುತ್ತಿರುವವರೆಗೆ ಆತ್ಮನು ಅಸಂಗನು ಎಂದು ಜ್ಞಾನವಾಗುವದು ಸಾಧ್ಯವಿಲ್ಲ.)

—ಹೀಗೇಕೆ ?

**ಅವಶ್ಯಂ ಪ್ರಕೃತಿಃ ಸಂಗಂ ಪುರೇವಾಪಾದಯೇತ್ತಥಾ ।**
**ನಿಯಚ್ಛತ್ಯೇತಮೀಶೋಽಪಿ ಕೋಽಸ್ಯ ಮೋಕ್ಷಸ್ತಥಾ ಸತಿ ॥೨೧೦॥**

ಪ್ರಕೃತಿಯು ಮೊದಲಿನಂತೆ ಜೀವನನ್ನು ಮರುಳುಗೊಳಿಸುತ್ತದೆ. ಅದರಂತೆ ಈಶ್ವರನು ಕೂಡ ನಿಯಂತ್ರಣಗೊಳಿಸುತ್ತಾನೆ. ಹೀಗಾದಲ್ಲಿ ಇವನಿಗೆ ಮೋಕ್ಷವೆಲ್ಲಿಯದು ?

(ನಾನು ಅಸಂಗನು ಎಂಬ ಶಾಬ್ದಿಕ ಜ್ಞಾನವು ಜೀವನಿಗಾದಮೇಲೆ ಕೂಡ ಒಂದುಕಡೆಯಿಂದ ಪ್ರಕೃತಿ ಒಂದುಕಡೆಯಿಂದ ಈಶ್ವರ ಕೂಡಿ ಜೀವನನ್ನು ನಿಯಂತ್ರಿಸತೊಡಗಿದರೆ ಅವನಿಗೆ ಮೋಕ್ಷವು ಹೇಗೆ ಸಂಭವಿಸಬೇಕು?)

—ಆಸಕ್ತಗೊಳಿಸುವಿಕೆ ಮತ್ತು ನಿಯಮನ ಮುಂ. ಅವಿವೇಕದ ಕಾರ್ಯಗಳು. ವಿವೇಕೋದಯವಾದಮೇಲೆ ಆ ಸಂಗಾದಿಗಳು ಇರಲಾರವು.

**ಅವಿವೇಕಕೃತಃ ಸಂಗೋ ನಿಯಮಶ್ಚೇತಿ ಚೇತ್ತದಾ ।**
**ಬಲಾದಾಪತಿತೋ ಮಾಯಾವಾದಃ ಸಾಂಖ್ಯಸ್ಯ**
**ದುರ್ಮತೇಃ ॥೨೩೦॥**

ಸಂಗ ಮತ್ತು ನಿಯಮನಗೊಳಿಸುವಿಕೆಗಳು ಅವಿವೇಕದಿಂದಾಗುವವೆಂದರೆ, ಆ ಹಟವಾದಿ ಸಾಂಖ್ಯರ ಕೊರಳಿಗೆ ಮಾಯಾವಾದವು ಬಲಾತ್ಕಾರದಿಂದ ಬಂದು ಬಿದ್ದಂತೆಯೇ ಸರಿ.

(ಅವಿವೇಕವೆಂದರೆ ವಿವೇಕ ಇಲ್ಲದಿರುವಿಕೆ. ಅರ್ಥಾತ್ ವಿವೇಕದ ಅಭಾವ. ಈ ಅಭಾವದಿಂದ ಭಾವವು ಹುಟ್ಟುವದು ಅಶಕ್ಯ. ಆದುದರಿಂದ ಸಾಂಖ್ಯರು ಕೂಡ ವಿವರ್ತ (ಮಾಯಾ) ವಾದವನ್ನು ಸ್ವೀಕರಿಸಬೇಕಾಗುತ್ತದೆ.)

—ಅದ್ವೈತಜ್ಞಾನವೇ ಅಂಗೀಕೃತವಾದರೆ ಬಂಧ-ಮೋಕ್ಷಗಳು ಉಳಿಯಲಾರವು. ಆದುದರಿಂದ ಪ್ರತಿಶರೀರದಲ್ಲಿರುವ ಆತ್ಮರಲ್ಲಿ ಭೇದವುಂಟೆಂದು ತಿಳಿಯುವದು ಅವಶ್ಯವಾಯಿತು.

**ಬಂಧಮೋಕ್ಷವ್ಯವಸ್ಥಾರ್ಥಮಾತ್ಮನಾನಾತ್ವಮಿಷ್ಯತಾಮ್ ।**
**ಇತಿ ಚೇನ್ನ ಯತೋ ಮಾಯಾ ವ್ಯವಸ್ಥಾಪಯಿತುಂ**
**ಕ್ಷಮಾ ॥೨೩೧॥**

ಬಂಧ ಮತ್ತು ಮೋಕ್ಷಗಳನ್ನು ಸಯುಕ್ತಿಕವಾಗಿ ಹೊಂದಿಸಬೇಕಾಗುವದರಿಂದ ಆತ್ಮರು ಅನೇಕರು ಎಂಬುದನ್ನು ಒಪ್ಪಬೇಕು. ಎಂದರೆ ಅದು ಸರಿಯಲ್ಲ. ಯಾಕಂದರೆ ಮಾಯೆಯು ಆ ಕಾರ್ಯವನ್ನು ಮಾಡುತ್ತಿರುವದು.

—ಅಘಟಿತ ಕಾರ್ಯಗಳನ್ನು ಮಾಯೆಯಾದರೂ ಹೇಗೆಮಾಡುವದು?

**ದುರ್ಘಟಂ ಘಟಯಾಮೀತಿ ವಿರುದ್ಧಂ ಕಿನ್ನ ಪಶ್ಯಸಿ ।**
**ವಾಸ್ತವೌ ಬಂಧಮೋಕ್ಷೌ ತು ಶ್ರುತಿರ್ನ ಸಹತೇತರಾಮ್॥೨೩೨॥**

ಅಸಾಧ್ಯವಾದುದನ್ನು ಸಾಧಿಸುತ್ತೇನೆ ಎಂಬ ಒಂದಕ್ಕೊಂದು ವಿರುದ್ಧವಾದ ಮಾತನ್ನು ಕೇಳುವೆಯಲ್ಲ. (ಅದರಂತೆ ಇಂದ್ರಜಾಲ ಮುಂ.)

ಬಂಧ–ಮೋಕ್ಷಗಳು ಸತ್ಯವೆಂದು ಶ್ರುತಿಯು ಎಷ್ಟುಮಾತ್ರಕ್ಕೂ ಸಹನ ಮಾಡುವದಿಲ್ಲ.

ಯಾತರಮೇಲಿಂದ ?

**ನ ನಿರೋಧೋ ನ ಚೋತ್ಪತ್ತಿರ್ನ ಬದ್ಧೋ ನ ಚ ಸಾಧಕಃ ।**
**ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ॥೨೩೬॥**

ಆತ್ಮನಿಗೆ ಅಳಿವಿಲ್ಲ. ಹುಟ್ಟುವಿಕೆ ಇಲ್ಲ. ಸುಖ–ದುಃಖಗಳನ್ನು ಹೊಂದತಕ್ಕವನೂ ಅಲ್ಲ. ಸಾಧಕನೂ ಅಲ್ಲ. ಮೋಕ್ಷವನ್ನು ಬಯಸುವವನೂ ಅಲ್ಲ. ಮುಕ್ತನೂ ಅಲ್ಲ. ಇದಾವುದರ ಸಂಬಂಧವೂ ಇಲ್ಲವೆಂಬುದು ನಿಜಸ್ಥಿತಿ.

(ಅಮೃತಬಿಂದೂಪನಿಷತ್ತಿನಲ್ಲಿ ಹೇಳಿದ ಮಂತ್ರವಿದೆ.)

—ಹೀಗೆ ಜೀವೇಶ್ವರ ಮಾಯಾಮಯತ್ವವನ್ನು ಹೇಳಿ ಅದರ ಉಪಸಂಹಾರ ಮಾಡುತ್ತಾರೆ.

**ಮಾಯಾಖ್ಯಾಯಾಃ ಕಾಮಧೇನೋರ್ವತ್ಸೌ ಜೀವೇಶ್ವರಾವುಭೌ ।**
**ಯಥೇಚ್ಛಂ ಪಿಬತಾಂ ದ್ವೈತಂ ತತ್ತ್ವಂ ತದ್ವೈತಮೇವಹಿ॥೨೩೭॥**

ಮಾಯೆ ಎಂಬುದು ಕಾಮಧೇನು. ಜೀವನು ಮತ್ತು ಈಶ್ವರನು ಅದರ ಎರಡು ಕರುಗಳು. ಭೇದರೂಪವಾದ ಹಾಲನ್ನು ಬೇಕಾದಷ್ಟು ಕುಡಿಯಲಿ. ನಿಜವಾಗಿಯೂ ತತ್ತ್ವವೆಂದರೆ ಅದ್ವೈತವೇ.

ಜೀವೇಶ್ವರರ ಭೇದವು ಮಾಯಿಕವೆಂದು ಒಪ್ಪೋಣ. ಅರ್ಥಾತ್ ಸುಳ್ಳು ಎನ್ನೋಣ. ಆದರೆ ಕೂಟಸ್ಥ ಬ್ರಹ್ಮರ ಭೇದವನ್ನಾದರೂ ಸತ್ಯವೆನಬೇಕಾಯಿತು.

**ಕೂಟಸ್ಥ ಬ್ರಹ್ಮಣೋರ್ಭೇದೋ ನಾಮಮಾತ್ರಾದೃತೇ ನ ಹಿ ।**
**ಘಟಾಕಾಶ ಮಹಾಕಾಶೌ ವಿಯುಜ್ಯೇತೇ ನಹಿ ಕ್ವಚಿತ್ ॥೨೩೮॥**

ಬರಿ ಹೆಸರಿನ ಹೊರತು ಕೂಟಸ್ಥ–ಬ್ರಹ್ಮರಲ್ಲಿ ಭೇದವಿಲ್ಲ. ಯಾಕಂದರೆ ಘಟಾಕಾಶ–ಮಹಾಕಾಶಗಳು ಎಂದೂ ಒಂದಕ್ಕೊಂದು ಬೇರೆಅಲ್ಲ.

(ವಸ್ತುತಃ ಘಟಾಕಾಶ-ಮಹಾಕಾಶಗಳು ಎರಡು ಬೇರೆ ಪದಾರ್ಥಗಳಲ್ಲ.)

—ಹೀಗೆ ಸಿದ್ಧಮಾಡಿದ್ದರಿಂದೇನಾಯಿತು ?

**ಯದದ್ವೈತಂ ಶ್ರುತಂ ಸೃಷ್ಟೇಃ ಪ್ರಾಕ್ತದೇವಾದ್ಯ ಚೋಪರಿ ।**
**ಮುಕ್ತಾವಪಿ ವೃಥಾ ಮಾಯಾ ಭ್ರಾಮಯತ್ಯಖಿ-**
**ಲಾಂಜನಾನ್ ॥೨೩೭॥**

ಸೃಷ್ಟಿಗಿಂತ ಮೊದಲು ಇನ್ನೊಂದಿಲ್ಲದ ಒಂದೇ ಒಂದಾದ ಬ್ರಹ್ಮವೇ ಈಗಲೂ ಇರುತ್ತದೆ. ಮುಂದೆ ಮೋಕ್ಷಕಾಲದಲ್ಲಿಯೂ ಇರುತ್ತದೆ. ಹೀಗಿದ್ದರೂ ಈ ಮಾಯೆಯು ಎಲ್ಲರನ್ನು ದ್ವೈತ ಭ್ರಮೆಯಲ್ಲಿ ನೂಕುವದು.

—ಹೀಗೆಲ್ಲ ಹೇಳುವವರೂ ಸಂಸಾರಿಗಳಂತೆಯೇ ಇರುತ್ತಾರೆ ಎಂದ ಮೇಲೆ ತತ್ವಜ್ಞಾನದಿಂದಾಗುವ ಲಾಭವೇನು ?

**ಯೇ ವದಂತೀತ್ಥಮೇತೇಽಪಿ ಭ್ರಾಮ್ಯಂತೇಽವಿದ್ಯಯಾತ್ರ ಕಿಮ್।**
**ನ ಯಥಾ ಪೂರ್ವಮೇತೇಷಾಮತ್ರ ಭ್ರಾಂತೇರದರ್ಶನಾತ್॥೨೩೮॥**

ಹೀಗೆ ಹೇಳುವವರು ಕೂಡ ಅವಿದ್ಯೆಯ ಯೋಗದಿಂದ ಭ್ರಾಂತರಾಗುತ್ತಾರೆ. ಎಂದಮೇಲೆ ತತ್ವಜ್ಞಾನದ ಲಾಭವೇನು ? ಅವಿವೇಕದಶೆಯಲ್ಲಿರುವಾಗಿನಂತೆ ಅವರ ಭ್ರಮಣವು ಈಗಿರುವದಿಲ್ಲ. ಯಾಕಂದರೆ ಈಗ ಅವರಿಗೆ ದ್ವೈತ-ಅದ್ವೈತಗಳ ಭ್ರಾಂತಿ ಇರುವದಿಲ್ಲ.

—ಜ್ಞಾನಿಗಳಿಗೆ ಭ್ರಾಂತಿ ಇರುವದೆಂದು ತೋರಿಸಲು ಮೊದಲು ಅಜ್ಞರ ವಿಚಾರ ಹೇಳುತ್ತಾರೆ.

**ಐಹಿಕಾಮುಷ್ಮಿಕಃ ಸರ್ವಂ ಸಂಸಾರೋ ವಾಸ್ತವಸ್ತತಃ ।**
**ನ ಭಾತಿ ನಾಸ್ತಿ ಚಾದ್ವೈತಮಿತ್ಯಜ್ಞಾನಿವಿನಿಶ್ಚಯಃ ॥೨೩೯॥**

ಎಲ್ಲ ಐಹಿಕ ಮತ್ತು ಪಾರಲೌಕಿಕ ಸಂಸಾರವು ನಿಜವಾದುದು. ಅದ್ವೈತವೆನಿಸುವ ಬ್ರಹ್ಮವು ತೋರುವದಿಲ್ಲ. ಆದುದರಿಂದ ಅದು ಇಲ್ಲ. ಹೀಗೆಂದು ಅಜ್ಞಾನಿಗಳು ದೃಢವಾಗಿ ತಿಳಿದಿರುತ್ತಾರೆ.

—ಆದರೆ ಆತ್ಮಜ್ಞಾನಿಗಳು ಹೀಗೆ ತಿಳಿಯುವದಿಲ್ಲ.

**ಜ್ಞಾನಿನೋ ವಿಪರೀತೋಽಸ್ಮಾನ್ನಿಶ್ಚಯಃ ಸಮ್ಯಗೀಕ್ಷ್ಯತೇ ।**
**ಸ್ವಸ್ವನಿಶ್ಚಯತೋ ಬದ್ಧೋ ಮುಕ್ತೋಽಹಃ ಚೇತಿ**
**ಮನ್ಯತೇ ॥೨೪೦॥**

ಜ್ಞಾನಿಗಳ ನಿಶ್ಚಯವು ಇದಕ್ಕಿಂತ ಬೇರೆಯಾಗಿರುವದು ಎಂದು ಸ್ಪಷ್ಟ ವಾಗಿ ಅನುಭವಕ್ಕೆ ಬರುತ್ತದೆ. ತಮ್ಮ ತಮ್ಮ ನಿಶ್ಚಯದಂತೆ ಮನುಷ್ಯರು ನಾನು ಬದ್ಧನು ನಾನು ಮುಕ್ತನು ಎಂದು ತಿಳಿಯುತ್ತಾರೆ.

—ಅದ್ವೈತವು ಭಾಸವಾಗುತ್ತದೆ ಎಂಬ ಮಾತು ಕೇವಲ ಶಾಸ್ತ್ರದ್ದು ಅನುಭವದ್ದಲ್ಲ. ಆದುದರಿಂದ ಅದರ ನಿಶ್ಚಯವಾಗುವದು ಶಕ್ಯವಿಲ್ಲ.

**ನಾದ್ವೈತಮಪರೋಕ್ಷಂ ಚೇನ್ನ ಚಿದ್ರೂಪೇಣ ಭಾಸನಾತ್ ।**
**ಅಶೇಷೇಣ ನಭಾತಂ ಚೇತ್ ದ್ವೈತಂ ಕಿಂಭಾಸತೇಽ-**
**ಖಿಲಮ್ ॥೨೪೧॥**

ಅದ್ವೈತವು ಅನುಭವಕ್ಕೆ ಬರುವದಿಲ್ಲವೆಂದರೆ ಅದು ಸರಿಯಲ್ಲ. ಯಾಕಂದರೆ ಚಿದ್ರೂಪದಿಂದ ಅದು ಅನುಭವಕ್ಕೆ ಪ್ರತ್ಯಕ್ಷವಾಗಿ ಬರುವದು. ಇನ್ನು ಅದು ಪೂರ್ಣವಾಗಿ ಕಾಣುವದೇ?

—ಹೀಗೆ ಎರಡೂ ಪಕ್ಷಗಳಲ್ಲಿರುವ ದೋಷಸಾಮ್ಯವನ್ನು ತೋರಿಸಿ ಪರಿಹಾರ ಸಾಮ್ಯವನ್ನು ಹೇಳುತ್ತಾರೆ.

**ದಿಙ್ಮಾತ್ರೇಣ ವಿಭಾನಂತು ದ್ವಯೋರಪಿ ಸಮಂ ಖಲು ।**
**ದ್ವೈತಸಿದ್ಧಿವದ್ವೈತಸಿದ್ಧಿಸ್ತೇ ತಾವತಾ ನ ಕಿಮ್ ॥೨೪೨॥**

ಏಕ ದೇಶೀಯ ಜ್ಞಾನವು ಎರಡೂ ಪಕ್ಷಗಳಲ್ಲಿ ಸಮಾನವಾಗಿದೆ. ಅಷ್ಟ ರಿಂದ ನಿನ್ನ ದ್ವೈತಸಿದ್ಧಿಯಾಗುವದಾದರೆ ಅದ್ವೈತ ಸಿದ್ಧಿಯು ಯಾಕೆ ಆಗಲಾರದು?

—ಮತ್ತೊಂದು ಬಗೆಯಿಂದ ಅದ್ವೈತ ಸಿದ್ಧಿ ಇಲ್ಲವೆಂದು ಆಕ್ಷೇಪ.

**ದ್ವೈತೇನ ಹೀನಮದ್ವೈತಂ ದ್ವೈತಜ್ಞಾನೇ ಕಥಃ ತ್ವಿದಮ್ ।**
**ಚಿದ್ಭಾನಂ ತ್ವವಿರೋಧ್ಯಸ್ಯದ್ವೈತಸ್ಯಾತೋಽಸಮೇ ಉಭೇ॥೨೪೩॥**

ದ್ವೈತವಿಲ್ಲದ್ದು ಅದ್ವೈತವು. ದ್ವೈತವು ಪ್ರತಕ್ಷ ಕಾಣುತ್ತಿರುವಾಗ ಅದ್ವೈತವೆಲ್ಲಿಯದು? ಚಿದ್ರೂಪದ ಸ್ಫುರಣವು ದ್ವೈತಕ್ಕೆ ವಿರೋಧವಾದುದಲ್ಲ. ಆದುದರಿಂದ ದ್ವೈತ-ಅದ್ವೈತ ತಿಳಿವಳಿಕೆಗಳು ಒಂದೇ ಪ್ರಕಾರದವುಗಳಲ್ಲ.

(ಅದ್ವೈತವೆಂದರೆ ದ್ವೈತವಿಲ್ಲದ್ದು. ಅವೆರಡೂ ಒಂದಕ್ಕೊಂದು ವಿರೋಧಿ. ಅದ್ವೈತದ ಅನುಭವದಲ್ಲಿ ದ್ವೈತವಿಲ್ಲ. ದ್ವೈತದ ಅನುಭವದಲ್ಲಿ

ಅದ್ವೈತವಿಲ್ಲ. ಆದರೆ ಚಿದ್ರೂಪದ ಅನುಭವವೇ ಅದ್ವೈತಾನುಭವ ವೆನಿಸುವದರಿಂದಲೂ ಆ ಅನುಭವವು ದ್ವೈತಕ್ಕೆ ವಿರೋಧವಿಲ್ಲದ್ದರಿಂದಲೂ ದ್ವೈತ–ಅದ್ವೈತಕ್ಕೆ ಸಾಮ್ಯವಿಲ್ಲ. ಯಾಕಂದರೆ ಚೈತನ್ಯದ ಜ್ಞಾನವೂ ದ್ವೈತದ ಎಂದರೆ ಪ್ರಾಪಂಚಿಕ ವಸ್ತು ಜ್ಞಾನವು ಕೂಡಿ ಇರ ಬಹುದಾಗಿದೆ. ಆದುದರಿಂದ ಚೈತನ್ಯದ ಜ್ಞಾನವು ದ್ವೈತಕ್ಕೆ ವಿರೋಧವಲ್ಲದ್ದು.)

—ಬರಿ ತೋರಿಕೆಯದಾಗಿರುವ ದ್ವೈತವು ಅದ್ವೈತವನ್ನು ಮರೆ ಮಾಡಲಾರದು.

**ಏವಂ ತರ್ಹಿ ಶೃಣು ದ್ವೈತಮಸನ್ಮಾಯಾಮಯತ್ವತಃ |**
**ತೇನ ವಾಸ್ತವಮದ್ವೈತಂ ಪರಿಶೇಷಾದ್ವಿಭಾಸತೇ ||೨೪೪||**

ಹಾಗನ್ನುವದಾದರೆ ಈಗ ಕೇಳು. ದ್ವೈತವು ಮಾಯೆಯ ಆಧಾರದಿಂದ ಬದುಕುವದರಿಂದ ಅದು ಸುಳ್ಳು. ಹೀಗೆ ದ್ವೈತವು ಸುಳ್ಳೆನಿಸುವದರಿಂದ ಉಳಿ ಯುವ ಅದ್ವೈತವು ನಿಜವಾದುದು.

—ಅದ್ವೈತವು ಹೇಗೆ ಉಳಿಯುವದೆಂಬುದನ್ನು ತೋರಿಸುತ್ತಾರೆ.

**ಅಚಿಂತ್ಯರಚನಾರೂಪಂ ಮಾಯೈವ ಸಕಲಂ ಜಗತ್ |**
**ಇತಿನಿಶ್ಚಿತ್ಯವಸ್ತುತ್ವಮದ್ವೈತೇ ಪರಿಶೇಷ್ಯತಾಮ್ ||೨೪೫||**

ಮನಸ್ಸಿನಿಂದ ವಿಚಾರಮಾಡಲಿಕ್ಕೆ ಶಕ್ಯವಿಲ್ಲದ ರಚನಾಚಮತ್ಕೃತಿ ಯಿಂದ ಕೂಡಿದ ಜಗತ್ತು ಮಾಯೆಯೇಸರಿ, ಎಂದು ತಿಳಿದು ಅದ್ವೈತದಲ್ಲಿ ಸತ್ಯವನ್ನು ಉಳಿಸಿಕೊಳ್ಳಬೇಕು.

—ಹೀಗೆ ಮಾಡಿದರೂ ಪೂರ್ವಸಂಸ್ಕಾರದಿಂದ ದ್ವೈತವು ಸತ್ಯವೆನಿ ಸುವದಲ್ಲ.

**ಪುನರ್ದ್ವೈತಸ್ಯ ವಸ್ತುತ್ವಂ ಭಾತಿ ಚೇತ್ತ್ವಂ ತಥಾ ಪುನಃ |**
**ಪರಿಶೀಲಯ ಕೋ ವಾತ್ರ ಪ್ರಯಾಸಸ್ತೇನ ತೇ ವದ ||೨೪೬||**

ದ್ವೈತ (ಪ್ರಪಂಚ)ದ ವಸ್ತುತ್ವವು (ಸತ್ಯತ್ವ) ತಿರುತಿರುಗಿ ಅನುಭವಕ್ಕೆ ಬರುವದಲ್ಲ ಎಂದರೆ ನೀನು ಪುನಃ ವಿಚಾರಮಾಡು. ವಿಚಾರ ಮಾಡುವದ ರಿಂದ ನಿನಗೆ ಶ್ರಮವೇನಾಗಬೇಕಾಗಿದೆ? ಹೇಳು.

(ಆವೃತ್ತಿರಸಕೃದುಪದೇಶಾಚ್ಚ ಎಂಬ ಬ್ರಹ್ಮ ಸೂತ್ರದಲ್ಲಿ ವೇದಾಂತ ಶ್ರವಣಾದಿಗಳ ಆವೃತ್ತಿ ಮಾಡಬೇಕೆಂದು ಹೇಳಿದೆ.)

—ಎಷ್ಟುದಿನಗಳವರೆಗೆ ವಿಚಾರ ಮಾಡಬೇಕು?

**ಕಿಯಂತಂ ಕಾಲಮಿತಿ ಚೇತ್ ಖೇದೋಽಯಂ ದ್ವೈತ ಇಷ್ಯತಾಮ್ ।**
**ಅದ್ವೈತೇ ತು ನಾಯುಕ್ತೋಽಯಂ ಸರ್ವಾನರ್ಥ-ನಿವಾರಣಾತ್ ॥೨೪೭॥**

ಹೀಗೆ ಎಷ್ಟುಡಿನ ವಿಚಾರ ಮಾಡಬೇಕೆಂದರೆ ಆ ದುಃಖದ ವಿಚಾರವು ದ್ವೈತದಲ್ಲಿರುವದೆಂದು ತಿಳಿ. ಅದ್ವೈತದಲ್ಲಿದುಃಖವೆಂಬ ಮಾತೇ ಸಲ್ಲದು. ಯಾಕಂದರೆ ಅದ್ವೈತ ವಿಚಾರದಿಂದ ಎಲ್ಲ ಅನರ್ಥಗಳೂ ನಿವಾರಣೆಯಾಗುವವು.

(ಅಪರೋಕ್ಷ ಜ್ಞಾನವಾದೊಡನೆ ಈ ವಿಚಾರವು ಮುಗಿಯುವುದೆಂದು ಹಿಂದೆ ಇದೇ ಪ್ರಕರಣದ ೧೫೫ ನೆಯ ಶ್ಲೋಕದಲ್ಲಿ ಹೇಳಿದೆ )

—ಒಳ್ಳೇದು. ಅದ್ವೈತ ಜ್ಞಾನವಾಗಿರುವ ನನಗೆ ಕೂಡ ಹಸಿವೆ–ನೀರ ಡಿಕೆ ಮುಂ. ಅನರ್ಥಗಳು ಅನುಭವಕ್ಕೆ ಬರುತ್ತವೆ. ಅಂದಮೇಲೆ ಆತ್ಮ ಜ್ಞಾನಕ್ಕೆ ಅನರ್ಥ ನಿವಾರಕ ಶಕ್ತಿಯುಂಟು ಎನ್ನಲು ಬರುವದಿಲ್ಲ.

**ಕ್ಷುತ್ಪಿಪಾಸಾದಯೋ ದೃಷ್ಟಾ ಯಥಾಪೂರ್ವಂ ಮಯೀತಿ ಚೇತ್ ।**
**ಮಚ್ಛಬ್ದವಾಚ್ಯೇಽಹಂಕಾರೇ ದೃಶ್ಯತಾಂ ನೇತಿ ಕೋವ-ದೇತ್ ॥೨೪೮॥**

ಹಸಿವೆ, ನೀರಡಿಕೆ ಮುಂ. ಮೊದಲಿನಂತೆಯೇ ನನಗಿರುವವಲ್ಲ ಎಂದರೆ ನ್ಯಾನು ಎಂಬ ಮಾತಿನ ವಾಚ್ಯಾರ್ಥವಾದ ಅಹಂಕಾರದಲ್ಲಿ ಕಾಣುವವಷ್ಟೇ? ಕಾಣಲಿ. ಅವುಗಳು ಇಲ್ಲವೆಂದು ಯಾರು ಅನ್ನುತ್ತಾರೆ?

—ಭ್ರಾಂತಿಯಿಂದ ಅವು ಚಿದಾತ್ಮನಲ್ಲಿರುವಂತೆ ಭಾಸವಾಗುತ್ತದೆ. ಎಂದರೆ ಭ್ರಾಂತಿಯಾಗದಂತೆ ಇರಬೇಕು ಎನ್ನುತ್ತಾರೆ.

**ಚಿದ್ರೂಪೇಽಪಿ ಪ್ರಸಜ್ಯೇರಂಸ್ತಾದಾತ್ಮ್ಯಾಧ್ಯಾಸತೋ ಯದಿ ।**
**ಮಾಽಧ್ಯಾಸಂ ಕುರು ಕಿಂ ತು ತ್ವಂ ವಿವೇಕಂ ಕುರು ಸರ್ವದಾ ॥೨೪೯॥**

ಚಿಜ್ಜಡ ತಾದಾತ್ಮ್ಯದಿಂದ ಎಂದರೆ ಚಿದ್ರೂಪ-ಮತ್ತು ಅಹಂಕಾರ ಎರಡನ್ನೂ ಒಂದುಕೂಡಿಸಿಕೊಂಡು ನೋಡುವಾಗ (ಭ್ರಾಂತಿ ಹೊಂದಿದಾಗ) ಚಿದ್ರೂಪನಲ್ಲಿಯೇ ವಿಕಾರಗಳು ಕಂಡುಬಂದಂತಾದರೆ ತಾದಾತ್ಮ್ಯರೂಪ ಅಧ್ಯಾಸ (ಭ್ರಾಂತಿ)ವಾಗದಂತಿರು. ಹಾಗೂ ಯಾವಾಗಲೂ ಅವರಿಬ್ಬರು ಬೇರೆ ಬೇರೆ ಎಂದು ತಿಳಿ. —ಒಂದುವೇಳೆ.

**ಝುಟಿತ್ಯಧ್ಯಾಸ ಆಯಾತಿ ದೃಢವಾಸನಯೇತಿ ಚೇತ್ ।**
**ಆವರ್ತಯೇದ್ವಿವೇಕಂ ಚ ದೃಢಂ ವಾಸಯಿತುಂ ಸದಾ ॥೨೫೦॥**

ಎಂದಿನಿಂದಲೋ ದೃಢಮೂಲವಾದ ಸಂಸ್ಕಾರಗಳಿಂದ ಒಮ್ಮೆಲೇ ಅಧ್ಯಾಸವು ಹಣಿ ಇಕ್ಕಬಹುದು ಎಂದರೆ ಅದನ್ನು ನಿವಾರಿಸಿಕೊಳ್ಳುವದಕ್ಕೆ ಮತ್ತೆ ವಿವೇಕವನ್ನು ತಂದುಕೊ?

—ಪ್ರಪಂಚ (ದ್ವೈತ)ವೆಲ್ಲ ಮಾಯೆ ಎನ್ನುವದು ಯುಕ್ತಿಯಾಯಿತು. ಅನುಭವಕ್ಕೆ ಬರಲಿಲ್ಲ. ಎಂದರೆ–

**ವಿವೇಕೇ ದ್ವೈತಮಿಥ್ಯಾತ್ವಂ ಯುಕ್ತ್ಯೈವೇತಿ ನ ಭಣ್ಯತಾಮ್ ।**
**ಅಚಿಂತ್ಯರಚನಾತ್ವಸ್ಯಾನುಭೂತಿರ್ಹಿ ಸ್ವಸಾಕ್ಷಿಕೀ ॥೨೫೧॥**

ವಿವೇಕ ಮಾಡಿಕೊಂಡಮೇಲೆ ಪ್ರಪಂಚವು ಸುಳ್ಳು ಎನಿಸುವದು. ಬರಿ ಯುಕ್ತಿಯಿಂದ ಮಾತ್ರ ಎನ್ನಬಾರದು. ಯಾಕಂದರೆ ಈ ಪ್ರಪಂಚದ ರಚನಾ ವಿಶೇಷವು ಮನಸ್ಸಿನಿಂದ ಕೂಡ ಊಹಿಸಲು ಸಾಧ್ಯವಿಲ್ಲ ಎಂದು ಅನಿಸುವದರಿಂದ ಅದು ಸುಳ್ಳೆಂದು ತಾನೇ ತಿಳಿಯುವಂಥದು.

—ಮನಸ್ಸಿನಿಂದ ಕೂಡ ಊಹಿಸಲಿಕ್ಕಾಗುವದಿಲ್ಲ ಎಂಬುದು ಸುಳ್ಳಿನ ಲಕ್ಷಣವಾದರೆ ಕೂಟಸ್ಥ ಚೈತನ್ಯನಿಗೂ ಆ ಲಕ್ಷಣ ಅನ್ವಯಿಸಲಾರದೇ ಯಾಕಂದರೆ ಅವನ ಸ್ವರೂಪವೂ ಮನಸ್ಸಿಗೆ ನಿಲುಕದ್ದಾಗಿದೆ.

**ಚಿದಪ್ಯಚಿಂತ್ಯರಚನಾ ಯದಿ ತರ್ಹ್ಯಸ್ತು ನೋವಯಮ್ ।**
**ಚಿತಿಂ ಸುಚಿಂತ್ಯರಚನಾಂ ಬ್ರೂಮೋ ನಿತ್ಯತ್ವಕಾರಣಾತ್॥೨೫೨॥**

ಒಂದುವೇಳೆ ಚೈತನ್ಯವು ಕೂಡ ಅಚಿಂತ್ಯ ರಚನಾರೂಪವಿದೆ ಎಂದರೆ ಇರಲಿ- ನಿತ್ಯನಾಗಿ ಇರುವಂಥದೆಂದು ಚೈತನ್ಯದ ರಚನೆಯು ಸುಲಭವಾಗಿ ವಿಚಾರ ಮಾಡುವಂಥದೆಂದು ನಾವು ಹೇಳುವದಿಲ್ಲ.

—ಚೈತನ್ಯವು ನಿತ್ಯವಾಗಿರುವದೆಂಬುದು ಯಾತರಮೇಲಿಂದ?

**ಪ್ರಾಗಭಾವೋ ನಾನುಭೂತಶ್ಚಿತೇರ್ನಿತ್ಯಾ ತತ್ವಶಿತಿಃ।**
**ದ್ವೈತಸ್ಯ ಪ್ರಾಗಭಾವಸ್ತು ಚೈತನ್ಯೇನಾನುಭೂಯತೇ ॥೨೫೪॥**

ಮೊದಲು ಚೈತನ್ಯವು ಇರಲಿಲ್ಲವೆಂಬ ಅನುಭವವು ಯಾರಿಗೂ ಬಂದಿಲ್ಲ. ಆದುದರಿಂದ ಅದು ನಿತ್ಯವು. ಆದರೆ ದ್ವೈತವು ಮೊದಲು ಇರಲಿಲ್ಲ ಎಂಬ ಅನುಭವವನ್ನು ಮಾತ್ರ ಚೈತನ್ಯವು ಪಡೆಯಬಲ್ಲದು.

ಚೈತನ್ಯವು ಮೊದಲು ಇರಲಿಲ್ಲವೆಂದು ವಾದಿಸಿದರೆ ಅದರ ಅನುಭವವನ್ನು ಪಡೆದವರುಯಾರು? ಎನ್ನಬೇಕಾಗುತ್ತದೆ. ಚೈತನ್ಯ ಒಂದನ್ನು ಬಿಟ್ಟರೆ ಬೇರೆ ಪದಾರ್ಥಗಳು ಜಡವೆನಿಸುವದರಿಂದ ಚೈತನ್ಯವೇ ಅನುಭವಪಡೆಯಿತೆಂದು ಹೇಳಬೇಕಾಯಿತು. ಈ ಚೈತನ್ಯ ಬೇರೆಯಾದುದೋ! ಚೈತನ್ಯವೇ ಚೈತನ್ಯದ ಅನುಭವಪಡೆಯಿತೋ? ಒಂದು ಚೈತನ್ಯವನ್ನು ಒಪ್ಪದ ವಿನಃ ಮತ್ತೊಂದನ್ನು ಸ್ವೀಕರಿಸಲು ಸಾಧ್ಯವಿಲ್ಲ. ಅದ್ವೈತದಲ್ಲಿ ಚೈತನ್ಯ ಒಂದೇ ಆಗಿದೆ. ಚೈತನ್ಯವು ಅನುಭವಕ್ಕೆ ವಿಷಯವಾಗುವದೆಂದರೆ, ಚೈತನ್ಯಕ್ಕೆ ಜಡತ್ವವು ಬರುತ್ತದೆ. ಇನ್ನು ತನ್ನ ಅನುಭವವನ್ನು ತಾನೇ ಪಡೆಯುವದು ಅಶಕ್ಯ. ಗಾಢನಿದ್ರೆಯಲ್ಲಿ ಎಚ್ಚರ-ಕನಸಿನ ದ್ವೈತವು ಸಾಕ್ಷಿಯ ಅನುಭವಕ್ಕೆ ಬರುತ್ತದೆ.

—ಹೀಗೆ ಪ್ರಪಂಚವು ಪ್ರಾಗಭಾವದಿಂದ ಯುಕ್ತವಾಗಿದ್ದು ವಿಚಾರ ಮಾಡಲಿಕ್ಕೆ ಅಸಾಧ್ಯರೂಪವುಳ್ಳದ್ದಾಗಿದೆ. ಆದುದರಿಂದ ಅದು ಮಿಥ್ಯೆ ಎಂಬುದು ಸಿದ್ಧವಾಯಿತು.

**ಪ್ರಾಗಭಾವಯುತಂ ದ್ವೈತಂ ರಚ್ಯತೇ ಹಿ ಘಟಾದಿವತ್ ।**
**ತಥಾಪಿ ರಚನಾಽಚಿಂತ್ಯಾ ಮಿಥ್ಯಾ ತೇನೇಂದ್ರ-**
**ಜಾಲವತ್ ॥೨೫೫॥**

ಹುಟ್ಟುವದಕ್ಕಿಂತ ಮೊದಲು ಇಲ್ಲದಿರುವ ಘಟಾದಿಗಳಂತೆಯೇ ಈ ಪ್ರಪಂಚದ ರಚನೆ ಎಂಬುದು ಸ್ಪಷ್ಟ. ಆದರ ರಚನೆ ಊಹಿಸಲಿಕ್ಕೆ ಕೂಡ ಬರುವಂತಿಲ್ಲ, ಆದುದರಿಂದ ಇಂದ್ರಜಾಲದಂತೆ ಅದು ಸುಳ್ಳು.

—ಅರ್ಥಾತ್

**ಚಿತ್ತ್ರತತ್ತ್ವ್ಯಕ್ಷಾ ತತೋಽನ್ಯಸ್ಯ ಮಿಥ್ಯಾತ್ವಂ ಚಾನುಭೂಯತೇ ।**
**ನಾದ್ವೈತಮಪರೋಕ್ಷಂ ಚೇತ್ಚೈತನ್ನ ವ್ಯಾಹತಂ ಕಥಮ್ ॥೨೫೫॥**

ಚೈತನ್ಯವು ಯಾವಾಗಲೂ ಬೆಳಗುತ್ತ ಪ್ರತ್ಯಕ್ಷವಾಗಿದೆ. ಅದಕ್ಕಿಂತ ಬೇರೆ ಎನಿಸುವಂಥವುಗಳೆಲ್ಲ ಸುಳ್ಳೆಂದು ಅನುಭವಕ್ಕೆ ಬರುತ್ತದೆ. ಇಷ್ಟಾದರೂ ಅದ್ವೈತವು ಪ್ರತ್ಯಕ್ಷವಲ್ಲ ಎಂಬ ಮಾತು ವ್ಯಾಹತ ದೋಷದಿಂದ ಕೂಡಿದುದಾಗದೇ ಹೇಗೆ ?

(ವ್ಯಾಹತ = ಖಂಡಿತ, ಬಾಧೆಗೊಳಗಾಗುವ.)

—ಇಷ್ಟೆಲ್ಲ ವೇದಾಂತಾರ್ಥವನ್ನು ತಿಳಿದವರಿಗೂ ಕೆಲವರಿಗೆ ಅದರಮೇಲೆ ವಿಶ್ವಾಸ ಹುಟ್ಟುವದು ಕಠಿಣವಾಗುತ್ತದಲ್ಲ.

**ಇತ್ಥಂ ಜ್ಞಾತ್ವಾಽಪ್ಯಸಂತುಷ್ಟಾಃ ಕೇಚಿತ್ಕುತ ಇತೀರ್ಯತಾಮ್।**
**ಚಾರ್ವಾಕಾದೇಃ ಪ್ರಬುದ್ಧಸ್ಯಾಪ್ಯಾತ್ಮಾ ದೇಹಃ ಕುತೋವದ ॥೨೫೬॥**

ಇಷ್ಟೆಲ್ಲ ತಿಳಿದರೂ ಕೆಲವರು ಅಸಂತುಷ್ಟರು ಯಾಕಿರುತ್ತಾರೆ? ಹೇಳಿರಿ. ಎಂದರೆ–ಊಹಾಪೋಹಕುಶಲರಾದ ಚಾರ್ವಾಕರೇ ಮೊದಲಾದವರಿಗೆ ದೇಹವೇ ಆತ್ಮವೆಂದು ಅನಿಸುವದಕ್ಕೆ ಕಾರಣವೇನು? ಹೇಳು.

**ಸಮ್ಯಗ್ವಿಚಾರೋ ನಾಸ್ತ್ಯಸ್ಯ ಧೀದೋಷಾದಿಸತಿ ಚೇತ್ತಥಾ ।**
**ಅಸಂತುಷ್ಟಾಸ್ತು ಶಾಸ್ತ್ರಾರ್ಥಂ ನ ತ್ವೈಕ್ಷಂತ ವಿಶೇಷತಃ ॥೨೫೭॥**

ಬುದ್ಧಿದೋಷದಿಂದ ಅವರಿಗೆ ಚನ್ನಾಗಿ ವಿಚಾರಮಾಡಲು ಬರುವದಿಲ್ಲ ಎನ್ನುವದಾದರೆ ಅದರಂತೆಯೇ ಅಸಂತುಷ್ಟರು ಬುದ್ಧಿದೋಷದಿಂದ ವೇದಾಂತದ ಅರ್ಥವನ್ನು ಚನ್ನಾಗಿ ವಿಚಾರಮಾಡಿ ನಿಶ್ಚಯ ಮಾಡಿಕೊಳ್ಳಲಿಲ್ಲ.

ಜ್ಞಾನದ ಫಲವನ್ನು ಹೇಳುವ ಶ್ರುತಿವಚನ.

**ಯದಾ ಸರ್ವೇ ಪ್ರಮುಚ್ಯಂತೇ ಕಾಮಾಯೇಽಸ್ಯ ಹೃದಿಶ್ರಿತಾಃ।**
**ಇತಿ ಶ್ರೌತಂ ಫಲಂ ದೃಷ್ಟಂ ನೇತಿ ಚೇದ್ದೃಷ್ಟಮೇವ ತತ್ ॥೨೫೮॥**

ಈ ಪುರುಷನ ಮನಸ್ಸಿನಲ್ಲಿ ಅಡಗಿರುವ ಬಯಕೆಗಳೆಲ್ಲ ಜ್ಞಾನವಾದ ಕೂಡಲೇ ಇಲ್ಲದಂತಾಗುವವು ಇತ್ಯಾದಿ ಶ್ರುತಿಯಲ್ಲಿ ಹೇಳಿದ ಫಲವು ಕಂಡುಬರುವದಿಲ್ಲ ಎಂದರೆ ಛೀ ಅದು ಅನುಭವಸಿದ್ಧ.

(ಮೇಲಿನ ಶ್ರುತಿಯ ಅರ್ಥದ ಮುಂದಿನ ಭಾಗವು ಹೀಗಿದೆ. 'ಅಥ ಮರ್ತ್ಯೋಽಮೃತೋಭವತ್ರ ಬ್ರಹ್ಮ ಸಮಶ್ನುತೇ||)

—ಮತ್ತೊಂದು ಶ್ರುತಿವಚನವನ್ನು ಹೇಳಿ ಅರ್ಥವನ್ನು ನಿರೂಪಿಸುತ್ತಾರೆ.

**ಯದಾ ಸರ್ವೇ ಪ್ರಭಿದ್ಯಂತೇ ಹೃದಯ ಗ್ರಂಥಯಸ್ತ್ವಿತಿ ।**
**ಕಾಮಾ ಗ್ರಂಥಿ ಸ್ವರೂಪೇಣ ವ್ಯಾಖ್ಯಾತಾ**
**ವಾಕ್ಯಶೇಷತಃ ||೨೫||**

'ಮನಸ್ಸಿನಲ್ಲಿರುವ ಕಗ್ಗಂಟುಗಳೆಲ್ಲ ಯಾವಾಗ ಕಳಚಿಕೊಳ್ಳುವವೋ' ಎಂದು ಮೊದಲಾಗಿ ಹೇಳಿದ ಶ್ರುತಿಯಲ್ಲಿ ಬಯಕೆಗಳಿಗೇ ಗಂಟುಗಳೆಂದು ಹೇಳಿದ್ದಾರೆ.

—ಇಚ್ಛೆ ಎಂಬ ಶಬ್ದಕ್ಕೆ ಪ್ರತಿಯಾಗಿ ಕಾಮವೆಂದು ಹೇಳುತ್ತಿರುವಾಗ ಅವುಗಳನ್ನು ಕಗ್ಗಂಟು ಎಂದು ಕರೆಯುವದು ಹೇಗೆ?

**ಅಹಂಕಾರ ಚಿದಾತ್ಮಾನಾವೇಕೀಕೃತ್ಯಾ ವಿವೇಕತಃ ।**
**ಇದಂ ಮೇ ಸ್ಯಾದಿದಂ ಮೇ ಸ್ಯಾದಿತೀಚ್ಛಾ**
**ಕಾಮಶಬ್ದಿತಾಃ ||೨೬||**

ಅವಿವೇಕದಿಂದ ಅಹಂಕಾರವನ್ನು ಕೂಟಸ್ಥನನ್ನು ಒಂದುಗೂಡಿಸಿಕೊಂಡು ಇದು ನನಗೆ ಬೇಕು, ಇದು ನನಗೆ ಬೇಕು ಎಂದು ಹುಟ್ಟುವ ಬಯಕೆಗಳೇ ಕಾಮ ಎನಿಸುವವು.

ಅಧ್ಯಾಸದಿಂದ ಬರುವ ಇಚ್ಛೆಗಳನ್ನೆಲ್ಲ ಬಿಡಬೇಕು ಎಂದು ಹೇಳುವಿರಿ. ಅಂದಮೇಲೆ ಅಧ್ಯಾಸವಿಲ್ಲದ ಇಚ್ಛೆಗಳನ್ನು ಮಾಡಬಹುದು ಎಂದಾಯಿತಲ್ಲ.

**ಅಪ್ರವೇಶ್ಯ ಚಿದಾತ್ಮಾನಂ ಪೃಥಕ್ ಪಶ್ಯನ್ನಹಂಕೃತಿಮ್ ।**
**ಇಚ್ಛಂಸ್ತು ಕೋಟಿವಸ್ತೂನಿ ನ ಬಾಧೋ ಗ್ರಂಥಿ**
**ಭೇದತಃ ||೨೭||**

ಚಿದಾತ್ಮನನ್ನು ಅಹಂಕಾರದಲ್ಲಿ ಸೇರಿಸಿಕೊಳ್ಳದೇ ಅಹಂಕಾರವನ್ನು ಬೇರೆಯಾಗಿ ನೋಡುತ್ತ ಕೋಟಿವಸ್ತುಗಳನ್ನು ಬಯಸಿದರೂ ಆ ಎರಡನ್ನೂ ಒಂದಾಗಿ ತಿಳಿಯುವ ಭ್ರಾಂತಿಯ ಗಂಟು ಹೋಗಿರುವದರಿಂದ ಬಾಧಕವಿಲ್ಲ.

— ಆದರೆ ಅಧ್ಯಾಸವು ಕಳೆದಮೇಲೆ ಬಯಕೆಗಳು ಹೇಗೆ ಹುಟ್ಟುವವು ?

**ಗ್ರಂಥಿಭೇದೇಽಪಿ ಸಂಭಾವ್ಯಾ ಇಚ್ಛಾಃ ಪ್ರಾರಬ್ಧದೋಷತಃ ।**
**ಬುಧ್ವಾಽಪಿ ಪಾಪಬಾಹುಲ್ಯಾದಸಂತೋಷೋ ಯಥಾ ತವ ॥೨೬೨॥**

ವೇದಾಂತದ ಅರ್ಥವನ್ನು ತಿಳಿದರೂ ಪಾಪದ ಹೆಚ್ಚಳದಿಂದ ನಿನಗೆ ಅಸಂತೋಷವಿರುವದೋ ಹಾಗೆ ಭ್ರಾಂತಿಯ ಗಂಟು ಕಳಚಿಬಿದ್ದರೂ ಪ್ರಾರಬ್ಧ ಕರ್ಮವಾಸನೆಯಿಂದ ಜ್ಞಾನಿಗೂ ಬಯಕೆಗಳು ಹುಟ್ಟುವವು.

—ಆದರೆ ಆಗಿನ ಇಚ್ಛೆಗಳಿಂದ ಬಾಧಕವೇನೂ ಇಲ್ಲವೆಂದು ಎರಡು ದೃಷ್ಟಾಂತಗಳು.

**ಅಹಂಕಾರಗತೇಚ್ಛಾದ್ಯೈರ್ದೇಹವ್ಯಾಧ್ಯಾದಿಭಿಸ್ತಥಾ ।**
**ವೃಕ್ಷಾದಿಜನ್ಮನಾಶೈರ್ವಾ ಚಿದ್ರೂಪಾತ್ಮನಿ ಕಿಂ ಭವೇತ್ ॥೨೬೩॥**

ದೇಹಕ್ಕೆ ಗಂಟುಬಿದ್ದ ಬೇನೆ ಮೊದಲಾದವುಗಳಿಂದ, ಮರ ಗಿಡ ಮುಂ. ಗಳ ಹುಟ್ಟು ಸಾವಿನಿಂದ ಸಾಕ್ಷಿರೂಪ ಚೈತನ್ಯಾತ್ಮನಿಗೇನು ಹಾನಿ ? ಇದರಂತೆ ಅಹಂಕಾರದಲ್ಲಿ ಸೇರಿದ ಇಚ್ಛೆಗಳಿಂದ ಆತ್ಮನಿಗೇನು ಆಗುತ್ತದೆ ?

—ಅಸಂಗ ಚಿದ್ರೂಪನಾದ ಆತ್ಮನಿಗೆ ಯಾವಾಗಲೂ ಬಯಕೆಗಳ ಬಾಧೆ ಇಲ್ಲವೆಂದರೆ ಸರಿ. ಅದನ್ನು ಮರೆಯಬೇಡವೆನ್ನುತ್ತಾರೆ.

**ಗ್ರಂಥಿಭೇದಾತ್ಪುರಾಽಪ್ಯೇವಮಿತಿ ಚೇತ್ತನ್ನ ವಿಸ್ಮರ ।**
**ಅಯಮೇವ ಗ್ರಂಥಿಭೇದಸ್ತವ ತೇನ ಕೃತೀ ಭವಾನ್ ॥೨೬೪॥**

ಭ್ರಾಂತಿಯ ಗಂಟು ಕಳಚುವುದಕ್ಕೆ ಮೊದಲುಕೂಡ ಹೀಗೆಯೇ ಸ್ಥಿತಿ ಎಂದರೆ ಅದನ್ನು ಮರೆಯಬೇಡ. ಇದೇ ನಿನ್ನ ಗಂಟು ಕಳಚುವಿಕೆ. ಅದರಿಂದ ನೀನು ಕೃತಾರ್ಥನಾಗುವೆ.

—ಹೀಗೆ ಆತ್ಮನನ್ನು ಅಸಂಗನೆಂದು ಅರಿಯದಿರುವಿಕೆಯೇ ಗ್ರಂಥಿ (ಗಂಟು) ಎಂದು ಹೇಳುತ್ತಾರೆ.

**ನೈವಂ ಜಾನಂತಿ ಮೂಢಾಶ್ಚೇತ್ಸೋಽಯಂ ಗ್ರಂಥಿರ್ನ ಚಾಪರಃ।**
**ಗ್ರಂಥಿ ತದ್ಭೇದ ಮಾತ್ರೇಣ ವೈಷಮ್ಯಂ ಮೂಢ**
**ಬುದ್ಧಯೋಃ ||೨೬೫||**

ಮೂಢರಾದವರು ಇದನ್ನು ಅರಿಯಲಾರರು ಎಂದರೆ ಅದೇ ಭ್ರಾಂತಿಯ ಗಂಟು, ಮತ್ತೊಂದಲ್ಲ. ಮೂಢರಿಗೆ ಆ ಗಂಟಿರುವದು. ಜ್ಞಾನಿಗಳಿಗೆ ಅದು ಕಳಚಿರುವದು. ಇದೇ ಅವರಿಬ್ಬರಿಗೂ ಇರುವ ಹೆಚ್ಚುಕಡಿಮೆ.

—ಈ ಕಾರಣದ ವಿನಾ ಜ್ಞಾನಿ ಮತ್ತು ಅಜ್ಞಾನಿ ಇವರಿಬ್ಬರಲ್ಲಿ ಭೇದವಿಲ್ಲ.

**ಪ್ರವೃತ್ತೌವಾ ನಿವೃತ್ತೌ ವಾ ದೇಹೇಂದ್ರಿಯ**
**ಮನೋಧಿಯಾಮ್ ।**
**ನ ಕಿಂಚಿದಪಿ ವೈಷಮ್ಯ ಮಸ್ತ್ಯಜ್ಞಾನಿವಿಬುದ್ಧಯೋಃ ||೨೬೬||**

ದೇಹ–ಇಂದ್ರಿಯ–ಮನಸ್ಸು–ಬುದ್ಧಿ ಇವುಗಳ ವ್ಯವಹಾರದಲ್ಲಿ ಅಜ್ಞಾನಿ ಇರಲಿ, ಜ್ಞಾನಿ ಇರಲಿ ಎಳ್ಳಷ್ಟೂ ಭೇದವಿಲ್ಲ.

—ಇದನ್ನೇ ದೃಷ್ಟಾಂತರೂಪದಿಂದ ಸ್ಪಷ್ಟಗೊಳಿಸುತ್ತಾರೆ.

**ವ್ರಾತ್ಯಶ್ರೋತ್ರಿಯಯೋರ್ವೇದ ಪಾಠಾಪಾಠಕೃತಾ ಭಿದಾ ।**
**ನಾಹಾರಾದಾವಸ್ತಿಭೇದಃ ಸೋಽಯಂ ನ್ಯಾಯೋತ್ರ**
**ಯೋಜ್ಯತಾಮ್ ||೨೬೭||**

ಸಂಸ್ಕಾರ ಹೊಂದಿರುವ ಬ್ರಾಹ್ಮಣ, ವೇದವನ್ನು ಕಲಿತಿರುವ ಬ್ರಾಹ್ಮಣ ಇವರಿಬ್ಬರಲ್ಲಿ ಮೊದಲಿನವನು ವೇದವನ್ನು ಕಲಿತಿಲ್ಲ. ಎರಡನೆಯವನು ಕಲಿತಿದ್ದಾನೆ ಎಂಬುದಷ್ಟೇ ಭೇದ. ಊಟ, ನಿದ್ರೆ ಮುಂತಾದವುಗಳಲ್ಲಿ ಏನೂ ಭೇದವಿಲ್ಲ. ಈ ನ್ಯಾಯವನ್ನೇ ಅಜ್ಞಾನಿ-ಜ್ಞಾನಿಗಳ ವಿಷಯದಲ್ಲಿ ಯೋಚಿಸಬೇಕು.

( ಹದಿನಾರು ವರ್ಷಗಳ ವರೆಗೆ ಉಪನಯನವಾಗದ ಬ್ರಾಹ್ಮಣ, ಇಪ್ಪತ್ತೆರಡು ವರ್ಷಗಳ ವರೆಗೆ ಉಪನಯನವಾಗದ ಕ್ಷತ್ರಿಯ, ಇಪ್ಪತ್ತನಾಲ್ಕು ವರ್ಷಗಳ ವರೆಗೆ ಉಪನಯನವಾಗದ ವೈಶ್ಯ ಇವರಿಗೆ ವ್ರಾತ್ಯ (ಸಂಸ್ಕಾರಹೀನ)ರೆಂದು ಹೆಸರು. )

—ಜ್ಞಾನಿಯಾದವನಿಗೆ ಭ್ರಾಂತಿಯ ಗಂಟು ಇರುವದಿಲ್ಲ ಎಂಬುದಕ್ಕೆ ಗೀತಾವಾಕ್ಯದ ಪ್ರಮಾಣ.

**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ।**
**ಉದಾಸೀನವದಾಸೀನ ಇತಿ ಗ್ರಂಥಿಭಿದೋಚ್ಯತೇ ॥೨೬೮॥**

ದುಃಖಗಳು ಬಂದರೆ ಜ್ಞಾನಿಯು ಅವುಗಳನ್ನು ದ್ವೇಷಿಸುವುದಿಲ್ಲ. ಸುಖವು ಹಿಮ್ಮೆಟ್ಟಿದರೆ ಅವುಗಳನ್ನು ಬಯಸುವದಿಲ್ಲ. ಅವುಗಳ ವಿಷಯಕ್ಕೆ ಉದಾಸೀನನಂತೆ ಇರುತ್ತಾನೆ ಈ ವಾಕ್ಯದಿಂನ ಭ್ರಾಂತಿಯ ಗಂಟಿನ ಭೇದನ ವಿಷಯವನ್ನೇ ಹೇಳಿದೆ.

—ಈ ಗೀತೆಯ ವಾಕ್ಯದಿಂದ 'ಜ್ಞಾನವಾದಮೇಲೆಯೂ ಉದಾಸೀನನಾಗಿರಬೇಕು' ಎಂದು ವಿಧಿಸಿದೆ ಎಂದರೆ ಅದು ಯೋಗ್ಯವಲ್ಲ.

**ಔದಾಸೀನ್ಯಂ ವಿಧೇಯಂ ಚೇದ್ವಚ್ಛಬ್ದ ವ್ಯರ್ಥತಾ ತದಾ ।**
**ನ ಶಕ್ತಾ ಅಸ್ಯ ದೇಹಾದ್ಯಾ ಇತಿ ಚೇದ್ರೋಗ ಏವ ಸಃ ॥೨೬೯॥**

ಈ ವಾಕ್ಯದಲ್ಲಿ ಉದಾಸೀನನಾಗಿರಬೇಕೆಂದು ಅಪ್ಪಣೆಯೇ ಇರುತ್ತದೆ. ಎಂದರೆ ವತ್, (ಅಂತೆ, ಹಾಗೆ) ಎಂಬ ಶಬ್ದವು ವ್ಯರ್ಥವಾಗುತ್ತದೆ. ಅವನ ದೇಹಾದಿಗಳು ಜ್ಞಾನಾನಂತರದಲ್ಲಿ ಅಶಕ್ತವಾಗುತ್ತವೆ ಎಂದರೆ ಅದು ರೋಗವೇ ಎನಿಸೀತು.

—ಜ್ಞಾನವೂ ಒಂದು ರೋಗವೆಂದು ತಿಳಿದರೆ ಅಡ್ಡಿ ಏನು ?

**ತತ್ವಬೋಧಂ ಕ್ಷಯಂ ವ್ಯಾಧಿಂ ಮನ್ಯಂತೇ ಯೇ ಮಹಾಧಿಯಃ ।**
**ತೇಷಾಂ ಪ್ರಜ್ಞಾತಿವಿಶದಾ ಕಿಂ ತೇಷಾಂ ದುಃಶಕಂ ವದ ॥೨೭೦॥**

ತತ್ವಜ್ಞಾನವೆಂದರೆ ಅದೊಂದು ಕ್ಷಯರೋಗವೆಂದು ತಿಳಿಯುವವರ ಬುದ್ಧಿ ಬಹಳ ದೊಡ್ಡದು. ಅವರಿಗೆ ಯಾವದು ತಾನೇ ಅಶಕ್ಯ ಹೇಳು.

— ನೀವು ನಮ್ಮ ಹಾಸ್ಯ-ನಿಂದೆಗಳನ್ನು ಮಾಡುವಿರಿ. ಪುರಾಣ ಗ್ರಂಥಗಳಲ್ಲಿ ಜ್ಞಾನಿಗಳಾದವರು ಯಾವದರಲ್ಲಿಯೂ ತೊಡಗುತ್ತಿರಲಿಲ್ಲವೆಂದು ವರ್ಣನೆಗಳಿವೆಯಲ್ಲ.

**ಭರತಾದೇರಪ್ರವೃತ್ತಿಃ ಪುರಾಣೋಕ್ತೇತಿ ಚೇಚ್ಛೃಣು ।**
**ಜಕ್ಷನ್ ಕ್ರೀಡನ್ ರತಿಂ ವಿಂದನಿತ್ಯಶ್ರೌಷೀರ್ನ ಕಿಂ**
**ಶ್ರುತಿಮ್ ॥೨೭೦॥**

ಜಡಭರತಾದಿಗಳು ಯಾವದರಲ್ಲಿಯೂ ತೊಡಗುತ್ತಿರಲಿಲ್ಲವೆಂದು ಪುರಾಣಗಳಲ್ಲಿ ಹೇಳಿದೆಯಲ್ಲ ಎನ್ನುವೆಯಾದರೆ ಜ್ಞಾನಿಯು ತಿನ್ನುತ್ತ, ಕ್ರೀಡಿಸುತ್ತ, ಸ್ತ್ರೀಯರೊಡನೆ ಮಾತಾಡುತ್ತಿದ್ದರೂ ದೇಹಭಾವವಿಲ್ಲ ದವನಾಗಿರುವನು. ಎಂದು ಮೊದಲಾದ ಶ್ರುತಿಯನ್ನು ನೀನು ಕೇಳಿಲ್ಲವೇ ?

—ಹೀಗೆ ಹೇಳುವದಾದರೆ ಅಂಥ ಪುರಾಣವಾಕ್ಯಗಳ ಅರ್ಥವೇನು ?

**ನ ಹ್ಯಾಹಾರಾದಿ ಸಂತ್ಯಜ್ಯ ಭರತಾದ್ಯಾಃ ಸ್ಥಿತಾಃ ಕ್ವಚಿತ್ ।**
**ಕಾಷ್ಠಪಾಷಾಣವತ್ಕಿಂತು ಸಂಗಭೀತಾ ಉದಾಸತೇ ॥೨೭೧॥**

ಜಡಭರತನೇ ಮೊದಲಾದವರು ಆಹಾರ-ನಿದ್ರೆ ಮೊದಲಾದವನ್ನು ಬಿಟ್ಟು ಕಟ್ಟಿಗೆ–ಕಲ್ಲಿನಂತೆ ಎಂದೂ ಇರಲಿಲ್ಲ. ಅವರು ವಿಷಯಾಸಕ್ತರ ಸಹ ವಾಸಕ್ಕೆ ಹೆದರಿ ಉದಾಸೀನರಂತೆ ನಡೆದುಕೊಂಡರು.

—ಅಂಥವರು ಜನರ ಸಹವಾಸಕ್ಕೆ ಹೆದರುವಕಾರಣವೇನು?

**ಸಂಗೀ ಹಿ ಬಾಧ್ಯತೇ ಲೋಕೇ ನಿಃಸಂಗಃ ಸುಖಮಶ್ನುತೇ ।**
**ತೇನ ಸಂಗಃ ಪರಿತ್ಯಾಜ್ಯಃ ಸರ್ವದಾ ಸುಖಮಿಚ್ಛತಾ ॥೨೭೪॥**

ವಿಷಯಾಸಕ್ತರ ಸಹವಾಸದಿಂದ ಜ್ಞಾನಿಗೆ ಅನೇಕತೊಂದರೆಗಳು ಬರು ವವು. ಅವರ ಸಹವಾಸವನ್ನು ತೊರೆದರೆ ಸಮಾಧಾನದೊರೆಯುವದು. (ಹೀಗೆ ಅನುಭವವುಂಟು.) ಆದುದರಿಂದ ಯಾವಾಗಲೂ ನಿರ್ಮಲಸೌಖ್ಯವನ್ನು ಬಯಸುವವರು ಎಲ್ಲ ಸಹವಾಸವನ್ನು ಬಿಟ್ಟು ಇರಬೇಕು.

—ಮಾನಸ ಸಹವಾಸವು ವರ್ಜ್ಯವೆಂದು ಬೇಕಾದರೆ ಒಪ್ಪೋಣ. ಹಾಗೆ ಅಂತಃಕರಣದಲ್ಲಿ ನಿಃಸಂಗರಾಗಿದ್ದು ಹೊರಗೆ ವ್ಯವಹಾರ ಮಾಡುತ್ತಿರು ವವರನ್ನು ವ್ಯವಹಾರಿಕರು ಅಜ್ಞರೆಂದು ಯಾಕೆ ಹೇಳುವರು ?

**ಅಜ್ಞಾತಾವಶಾಸ್ತ್ರಹೃದಯಂ ಮೂಢೋ ವಕ್ತ್ಯನ್ಯಥಾನ್ಯಥಾ ।**
**ಮೂರ್ಖಾಣಾಂ ನಿರ್ಣಯಸ್ತ್ವಾಸ್ತಾಮಸ್ಮತ್ ಸಿದ್ಧಾಂತ**
**ಉಚ್ಯತೇ ॥೨೭೪॥**

ಶಾಸ್ತ್ರದ ರಹಸ್ಯವನ್ನರಿಯದೇ ಮೂಢರು ಬೇಕುಬೇಕಾದಂತೆ ಆಡಿಕೊಳ್ಳುವರು. ಆ ಮೂರ್ಖರನ್ನಾತಿರಲಿ, ಈಗ ನಾವು ನಮ್ಮ ಸಿದ್ಧಾಂತವನ್ನು ಹೇಳುತ್ತೇವೆ.

—ಆ ವೇದಾಂತ ಸಿದ್ಧಾಂಥವನ್ನು ಹೇಳುತ್ತಾರೆ.

**ವೈರಾಗ್ಯಬೋಧೋ ಪರಮಾಃ ಸಹಾಯಾಸ್ತೇ ಪರಸ್ಪರಮ್ ।**
**ಪ್ರಾಯೇಣ ಸಹವರ್ತಂತೇ ವಿಯುಜ್ಯಂತೇ ಕ್ವಚಿತ್**
**ಕ್ವಚಿತ್ ॥೨೭೫॥**

ವೈರಾಗ್ಯ-ಬೋಧ-ಶಾಂತಿ ಈ ಮೂರು ಒಂದಕ್ಕೊಂದು ಸಹಾಯ ಮಾಡುತ್ತಲೇ ಇರುವವು. ಬಹುತೇಕವಾಗಿ ಇವು ಜತೆಯಾಗಿಯೇ ಇರುವವು. ಕೆಲವುಸಾರೆ ಹೆಚ್ಚು ಕಡಿಮೆಯಾಗುತ್ತವೆ.

(ದೇಶ-ಕಾಲ ಮತ್ತು ಜ್ಞಾನದತಾರತಮ್ಯದಿಂದ ಕೆಲವುಸಾರೆ ಒಂದು ಕಡಿಮೆ-ಹೆಚ್ಚು ಇರುವದುಂಟು.)

—ಇರಲಿ, ನೀವು ಇವುಗಳನ್ನು ಬೇರೆ ಬೇರೆ ಎಂದು ಯಾಕೆ ತಿಳಿಯುತ್ತೀರಿ?

**ಹೇತು ಸ್ವರೂಪಕಾರ್ಯಾಣಿ ಭಿನ್ನಾನ್ಯೇಷಾಮಸಂಕರಃ ।**
**ಯಥಾವದವಗಂತವ್ಯಃ ಶಾಸ್ತ್ರಾರ್ಥಂ ಪ್ರವಿಚಿನ್ವತಾ ॥೨೭೬॥**

ಇವುಗಳ ಕಾರಣವೂ, ಸ್ವರೂಪವೂ, ಕಾರ್ಯವೂ ಬೇರೆ ಬೇರೆ ಆಗಿರುತ್ತವೆ. ಆದುದರಿಂದ ಇವು ಒಂದಲ್ಲೊಂದು ಕಲೆತುಹೋಗುವದಿಲ್ಲ. ಶಾಸ್ತ್ರಾರ್ಥವನ್ನು ಪರಿಶೀಲಿಸಿ ತಿಳಿಯಬೇಕೆನ್ನುವವರು ಯೋಗ್ಯರೀತಿಯಿಂದ ಇವುಗಳನ್ನು ತಿಳಿದಿರಬೇಕು.

—ಈಗ ವೈರಾಗ್ಯದ ಕಾರಣ-ಸ್ವರೂಪ-ಕಾರ್ಯಗಳನ್ನು ಹೇಳುತ್ತಾರೆ.

**ದೋಷ ದೃಷ್ಟಿರ್ಜಿಹಾಸಾ ಚ ಪುನರ್ಭೋಗೇಷ್ವದೀನತಾ ।**
**ಅಸಾಧಾರಣಹೇತ್ವಾದ್ಯಾ ವೈರಾಗ್ಯಸ್ಯ ತ್ರಯೋಽಪ್ಯಮೀ॥೨೭೭॥**

ವಿಷಯಗಳೆಲ್ಲ ತೀರತಕ್ಕಂಥವು, ಅರ್ಥಾತ್ ವಿನಾಶಹೊಂದತಕ್ಕಂಥವು ಎಂದು ಮೊದಲಾಗಿ ದೋಷಗಳನ್ನು ಚಿಂತಿಸುವದು ಕಾರಣ. ವಿಷಯಗಳ ಭೋಗಗಳನ್ನು ಬಿಡುವದೇ ಸ್ವರೂಪ. ಮತ್ತೆ ಮತ್ತೆ ಭೋಗಗಳಿಗಾಗಿ ಬಾಯಿ

ಬಿಡದಿರುವದೇ ಕಾರ್ಯ. ಇವು ಮೂರೂ ವೈರಾಗ್ಯದ ಅಸಾಧಾರಣ ಹೇತು ಮೊದಲಾದವುಗಳು.

—ಜ್ಞಾನದ ಕಾರಣ ಮುಂ. ಯಾವವು ?

**ಶ್ರವಣಾದಿತ್ರಯಂ ಯದ್ವತ್ ತತ್ವಮಿಥ್ಯಾ ವಿವೇಚನಮ್ ।**
**ಪುನರ್ಗ್ರಂಥೇರನುದಯೋ ಬೋಧಸ್ಯೈತೇ ತ್ರಯೋ ಮತಾಃ ॥೨೭೮॥**

ಜ್ಞಾನಕ್ಕೆ ಶ್ರವಣ–ಮನನ-ನಿದಿಧ್ಯಾಸನ ಇವು ಮೂರು ಕಾರಣಗಳು. ಕೂಟಸ್ಥ (ಸತ್ಯ) ಅಹಂಕಾರ (ಮಿಥ್ಯೆ) ಇವುಗಳ ವಿವೇಚನಮಾಡುವದು ಸ್ವರೂಪ, ಮತ್ತೆ ಹೃದಯಗ್ರಂಥಿಯನ್ನು ಹುಟ್ಟಿಸಿಕೊಳ್ಳದಿರುವದು ಕಾರ್ಯ. ಇವು ಜ್ಞಾನಕ್ಕೆ ಮೂರು ಸಾಧನಗಳು.

—ಇನ್ನು ಉಪರತಿಯ ಕಾರಣ–ಸ್ವರೂಪ-ಕಾರ್ಯವನ್ನು ಹೇಳುತ್ತಾರೆ.

**ಯಮಾದಿರ್ಧೀನಿರೋಧಶ್ಚ ವ್ಯವಹಾರಸ್ಯ ಸಂಕ್ಷಯಃ ।**
**ಸ್ಯುರ್ಹೇತ್ವಾದ್ಯಾ ಉಪರತೇರಿತ್ಯಸಂಕರ ಈರಿತಃ ॥೨೭೯॥**

ಉಪರತಿ ( ಶಾಂತಿ )ಗೆ ಯಮ-ನಿಯಮ ಮೊದಲಾದ ಅಷ್ಟಾಂಗಗಳು ಕಾರಣ. ಮನಸ್ಸಿನ ನಿಗ್ರಹವೇ ಸ್ವರೂಪ. ವ್ಯವಹಾರವನ್ನು ಬಿಡುವದು ಕಾರ್ಯ. ಇವು ಉಪರತಿಯ ಕಾರಣ ಮೊದಲಾದವುಗಳು. ಹೀಗಿರುವದರಿಂದ ಇವುಗಳಲ್ಲಿ ಭೇದವನ್ನು ಹೇಳಿದೆ.

—ಒಳ್ಳೆಯದು, ಈ ಮೂರರಲ್ಲಿ ಮುಖ್ಯಯಾವದು ?

**ತತ್ವಬೋಧಃ ಪ್ರಧಾನಂ ಸ್ಯಾತ್ ಸಾಕ್ಷಾನ್ಮೋಕ್ಷ ಪ್ರದತ್ವತಃ ।**
**ಬೋಧೋಪಕಾರಿಣಾವೇತೌ ವೈರಾಗ್ಯೋಪರಮಾವುಭೌ ॥೨೮೦॥**

ಸಾಕ್ಷಾತ್ತಾಗಿ ಮೋಕ್ಷವನ್ನು ಕೊಡುತ್ತಿರುವದರಿಂದ ಇವುಗಳಲ್ಲಿ ಜ್ಞಾನವು ಹೆಚ್ಚಿನದು. ವೈರಾಗ್ಯ–ಮತ್ತು ಉಪರತಿಗಳು ಜ್ಞಾನಕ್ಕೆ ಉಪಕಾರಿಗಳು.

—ವೈರಾಗ್ಯಾದಿ ಮೂರು ಭಾವಗಳು ಬಹುತರವಾಗಿ ಕೂಡಿಕೊಂಡಿರುವವು. ಕೆಲವು ಸಾರೆ ಹೆಚ್ಚುಕಡಿಮೆ ಇರುವವು ಎಂದು ಹೇಳಿದುದೇಕೆ?

**ತ್ರಯೋಽಪ್ಯತ್ಯಂತ ಪಕ್ವಾಶ್ಚೇನ್ಮಹತಸ್ತಪಸಃ ಫಲಮ್ ।**
**ದುರಿತೇನ ಕ್ವಚಿತ್ ಕಿಂಚಿತ್ ಕದಾಚಿತ್ ಪ್ರತಿಬಧ್ಯತೇ ॥೨೮೧॥**

ಇವು ಮೂರೂ ಕೂಡಿ ಹಣ್ಣಾದರೆ ಅದು ಬಹುದೊಡ್ಡ ತಪಸ್ಸಿನ ಫಲ. ಆದರೆ ಪಾಪದಿಂದ ಕೆಲವರಲ್ಲಿ ಕೆಲವು ವೇಳೆ ಒಂದು–ಎರಡು ಹೆಚ್ಚು ಕಡಿಮೆ ಇರುವದುಂಟು.

— ಇವುಗಳಲ್ಲಿಯ ತತ್ತ್ವಜ್ಞಾನಕ್ಕೆ ಪ್ರತಿಬಂಧವಾದರೆ ?

**ವೈರಾಗ್ಯೋಪರತೀ ಪೂರ್ಣೇ ಬೋಧಸ್ತು ಪ್ರತಿಬಧ್ಯತೇ ।**
**ಯಸ್ಯ ತಸ್ಯ ನ ಮೋಕ್ಷೋಽಸ್ತಿ ಪುಣ್ಯಲೋಕಸ್ತಪೋ**
**ಬಲಾತ್ ॥೨೮೨॥**

ಯಾರಲ್ಲಿ ವೈರಾಗ್ಯ ಮತ್ತು ಶಾಂತಿಗಳು ಮೈಗೂಡಿದ್ದು ಜ್ಞಾನವು ತಡೆದು ನಿಂತಿರುವದೋ ಅವರಿಗೆ ಮೋಕ್ಷವಿಲ್ಲ. ಆದರೆ ತಪೋಬಲದಿಂದ ಪುಣ್ಯಲೋಕ ದೊರೆಯುವದು.

—ಈಗ ಬೋಧವಿದ್ದು ವೈರಾಗ್ಯ ಮತ್ತು ಉಪರತಿಗಳಿಲ್ಲದಿದ್ದರೆ ?

**ಪೂರ್ಣೇ ಬೋಧೇ ತದನ್ಯೌ ದ್ವೌ ಪ್ರತಿಬದ್ಧೌ ಯದಾ ತದಾ ।**
**ಮೋಕ್ಷೋ ವಿನಿಶ್ಚಿತಃ ಕಿಂತು ದೃಷ್ಟದುಃಖಂ ನ ನಶ್ಯತಿ ॥೨೮೩॥**

ಪೂರ್ಣಜ್ಞಾನವಾಗಿದ್ದು ಆ ಮೂನದಿಂದ ವೈರಾಗ್ಯ ಮತ್ತು ಶಾಂತಿಗಳು ಕೊರತೆಯಾಗಿದ್ದರೆ ಆಗ ಮೋಕ್ಷ ದೊರೆಯುವದಂತೂ ನಿಶ್ಚಿತ. ಆದರೆ ಪ್ರಾಪಂಚಿಕ ದುಃಖಗಳು ನಾಶವಾಗಲಾರವು.

—ಇನ್ನು ವೈರಾಗ್ಯ-ಬೋಧ-ಶಾಂತಿ ಇವುಗಳ ಪರಮಾವಧಿಯನ್ನು ಹೇಳುತ್ತಾರೆ.

**ಬ್ರಹ್ಮಲೋಕ ತೃಣೀಕಾರೋ ವೈರಾಗ್ಯಸ್ಯಾವಧಿರ್ಮತಃ ।**
**ದೇಹಾತ್ಮವತ್ ಪರಾತ್ಮತ್ವದಾರ್ಢ್ಯೇ ಬೋಧಃ**
**ಸಮಾಪ್ಯತೇ ॥೨೮೪॥**
**ಸುಪ್ತಿವದ್ವಿಸ್ಮೃತಿಃ ಸೀಮಾ ಭವೇದುಪರಮಸ್ಯ ಹಿ ।**
**ದಿಶಾನಯಾ ವಿನಿಶ್ಚೇಯಂ ತಾರತಮ್ಯಮವಾಂತ-**
**ರಮ್ ॥೨೮೫॥**

ಬ್ರಹ್ಮಲೋಕದ ಸುಖವನ್ನು ಕೂಡ ಹುಲ್ಲಿಗಿಂತ ಹಗುರಾಗಿ ತಿಳಿಯುವದು ವೈರಾಗ್ಯದ ಸೀಮೆ ಎಂದು ತಿಳಿಯಬೇಕು. ಆದರಂತೆ ದೇಹವೇ ನಾನೆಂಬ ಭಾವವಿರುವಂತೆ ಪರಮಾತ್ಮನೇ ನಾನೆಂಬ ಭಾವವು ದೃಢವಾದರೆ ಜ್ಞಾನದ ಸೀಮೆ ತೀರಿತು.

ಗಾಢನಿದ್ರೆಯಲ್ಲಿ ವ್ಯವಹಾರವನ್ನೆಲ್ಲ ಮರೆತಿರುವಂತೆ, ಎಲ್ಲವನ್ನೂ ಮರೆಯುವವಾದರೆ ಅದೆ ಶಾಂತಿಯ ಸೀಮೆ ಎನಿಸುವದು. ಈ ಮಾರ್ಗವಾಗಿ ಮೇಲಿನ ಮೂರು ಭಾಗಗಳೊಳಗಿನ ಹೆಚ್ಚುಕಡಿಮೆಗಳನ್ನು ನಿಶ್ಚಯಮಾಡಿಕೊಳ್ಳಬೇಕು.

—ಇರಲಿ. ಜ್ಞಾನಿಗಳಲ್ಲಿಯೂ ಪ್ರೀತಿ (ರಾಗ) ದ್ವೇಷಗಳು ಕಂಡು ವೈಷಮ್ಯವು ತೋರುತ್ತದೆ. ಅಂದಮೇಲೆ ಜ್ಞಾನವು ಮುಕ್ತಿಗೆ ಕಾರಣವೆಂದು ಹೇಳಲು ಬರಲಾರದು.

**ಆರಬ್ಧಕರ್ಮ ನಾನಾತ್ವಾದ್‌ಬುದ್ಧಾನಾಮನ್ಯಥಾಽನ್ಯಥಾ ।**
**ವರ್ತನಂ ತೇನ ಶಾಸ್ತ್ರಾರ್ಥೇ ಭ್ರಮಿತವ್ಯಂ ನ ಪಂಡಿತೈಃ॥೨೮೬॥**

ಪ್ರತಿಯೊಬ್ಬರ ಪ್ರಾರಬ್ಧಕರ್ಮವು ಅನೇಕ ಬಗೆಯಾಗಿರುವದರಿಂದ ಜ್ಞಾನಿಗಳ ವರ್ತನದಲ್ಲಿಯೂ ಭಿನ್ನತೆ ತೋರುವದು. ಆದರಿಂದ ಬುದ್ಧಿವಂತರಾದವರು ಶಾಸ್ತ್ರವಿಷಯದಲ್ಲಿ ಅಪನಂಬಿಕೆ ತಳೆಯಬಾರದು.

(ಜ್ಞಾನವು ಸಂಚಿತ ಕ್ರಿಯಮಾಣ ಕರ್ಮಗಳನ್ನು ನಾಶಮಾಡುವದಾದರೂ ಪ್ರಾರಬ್ಧವನ್ನು ನಾಶಗೊಳಿಸಲಾರದು. ಯಾಕಂದರೆ ಜ್ಞಾನವಾಗುವದಕ್ಕಿಂತ ಮೊದಲೇ ಪ್ರಾರಬ್ಧವು ಫಲಕೊಡಲಾರಂಭಿಸುತ್ತದೆ. ಅಲ್ಲದೇ ಜ್ಞಾನವಾಗುವದು ಕೂಡ ಪ್ರಾರಬ್ಧಕರ್ಮದ ಫಲವೇ ಆಗಿದೆ.)

**ಸ್ವಸ್ವಕರ್ಮಾನುಸಾರೇಣ ವರ್ತಂತಾಂ ತೇ ಯಥಾ ತಥಾ ।**
**ಅವಶಿಷ್ಟಃ ಸರ್ವಬೋಧಃ ಸಮಾ ಮುಕ್ತಿರಿತಿ ಸ್ಥಿತಿಃ ॥೨೮೭॥**

ಅವರು ತಮ್ಮ ಪ್ರಾರಬ್ಧಕರ್ಮದಂತೆ ಹೇಗೆ ಬೇಕೋ ಹಾಗೆ ನಡೆಯಲಿ. "ಸರ್ವಾಂತರ್ಯಾಮಿ ಬ್ರಹ್ಮನು ನಾನಿದ್ದೇನೆ" ಎಂಬ ಅರಿವು ಒಂದೇ ಸಮನಾಗಿರುವದು. ಆದುದರಿಂದ ಅವರೆಲ್ಲರ ಮುಕ್ತಿಯು ಒಂದೇ ಎಂದು ಸಿದ್ಧಾಂತವು.

—ಈಗ ಸಂಕ್ಷಿಪ್ತವಾಗಿ ಈ ಪ್ರಕರಣದ ತಾತ್ಪರ್ಯ.

**ಜಗಚ್ಚಿತ್ರಂ ಸ್ವಚೈತನ್ಯೇ ಪಟೇ ಚಿತ್ರಮಿವಾರ್ಪಿತಮ್ ।**
**ಮಾಯಯಾ ತದುಪೇಕ್ಷ್ಯೈವ ಚೈತನ್ಯಂ**
**ಪರಿಶೇಷ್ಯತಾಮ್ ॥೨೮೮॥**

ಬಟ್ಟೆಯ ಮೇಲಿನ ಚಿತ್ರದಂತೆ ಆತ್ಮಚೈತನ್ಯದ ಮೇಲೆ ಮಾಯೆಯಿಂದ ಜಗದ್ರೂಪೀ ಚಿತ್ರವನ್ನು ಬರೆದಂತಿದೆ. ಆದುದರಿಂದ ಅವುಗಳನ್ನೆಲ್ಲ ಸುಳ್ಳೆಂದು ಭಾವಿಸಿ ತಿರಸ್ಕಾರಮಾಡಿ ಚೈತನ್ಯವೊಂದನ್ನು ಉಳಿಸಿಕೊಳ್ಳಬೇಕು.

—ಪ್ರಸ್ತುತ ಪ್ರಕರಣವನ್ನು ಅಭ್ಯಾಸಮಾಡುವವರಿಗೆ ಫಲಶ್ರುತಿ.

**ಚಿತ್ರದೀಪಮಿಮಂ ನಿತ್ಯಂ ಯೇಽನುಸಂದಧತೇ ಬುಧಾಃ ।**
**ಪಶ್ಯಂತೋಽಪಿ ಜಗಚ್ಚಿತ್ರಂ ತೇ ಮುಹ್ಯಂತಿ ನ**
**ಪೂರ್ವವತ್ ॥೨೮೯॥**

ಯಾವ ಪಂಡಿತರು ಈ ಚಿತ್ರದೀಪ ಪ್ರಕರಣವನ್ನು ಪ್ರತಿನಿತ್ಯ ಮನಸ್ಸುಗೊಟ್ಟು ಓದುವರೋ, ಅವರು ಈ ಜಗಚ್ಚಿತ್ರವನ್ನು ನೋಡುತ್ತಿದ್ದರೂ ತಿಳಿವಳಿಕೆ ಇಲ್ಲದಾಗ ಮೋಹಗೊಂಡಂತೆ ಈಗ ಮೋಹಗೊಳ್ಳುವದಿಲ್ಲ.

ಚಿತ್ರವನ್ನು ಬರೆದಂಥ ಬಟ್ಟೆ ಬಿಚ್ಚಿದಾಗ ಚಿತ್ರಗಳನ್ನು ತೋರುವದು. ಮಡಿಚಿದಾಗ ಚಿತ್ರಗಳನ್ನು ತೋರದಂತೆ ಮಾಡುವದು. ಇದು ನಿಜವಾಗಿ ಮಾಯೆಯ ಕಾರ್ಯವು. ಮಾಯೆಗೆ ಈಶ್ವರನೇ ಆಶ್ರಯ- ಮಾಯೆ ಬರಿ ತೋರಿಕೆ. ಅದನ್ನು ವಿಚಾರಿಸಿ ಸುಳ್ಳೆಂದು ತಿಳಿದುಕೊಂಡು ಚೈತನ್ಯವನ್ನು ಕಾಣಬೇಕು.

....○....

## ೭. ತೃಪ್ತಿದೀಪ

ಈ ಪ್ರಕರಣದಲ್ಲಿ ಮುಖ್ಯವಾಗಿ ಶ್ರುತಿಯ ವ್ಯಾಖ್ಯಾನವನ್ನು ಮಾಡುತ್ತಾರೆ.

**ಆತ್ಮಾನಂ ಚೇದ್ವಿಜಾನೀಯಾದಹಮಸ್ಮೀತಿ ಪೂರುಷಃ ।**
**ಕಿಮಿಚ್ಛನ್ ಕಸ್ಯಕಾಮಾಯ ಶರೀರಮನುಸಂಜ್ವರೇತ್ ॥೧॥**

"ನಾನು ಕೂಟಸ್ಥನು"ಎಂದು ತನ್ನನ್ನು ತಿಳಿದ ಪುರುಷನು ಯಾವದರ ಇಚ್ಛೆಯಿಂದ, ಯಾವ ಸುಖಕ್ಕಾಗಿ (ಈ ಲೋಕ-ಪರಲೋಕಗಳ ಸುಖ) ಶರೀರದೊಡನೆ ಬೆಂದಾನು ? ಈ ಶ್ರುತಿ ವಿಚಾರದ ಫಲ.

**ಅಸ್ಯಾಃಶ್ರುತೇರಭಿಪ್ರಾಯಃ ಸಮ್ಯಗತ್ರ ವಿಚಾರ್ಯತೇ ।**
**ಜೀವನ್ಮುಕ್ತಸ್ಯ ಯಾ ತೃಪ್ತಿಃ ಸಾ ತೇನ ವಿಶದಾಯತೇ ॥೨॥**

ಇಲ್ಲಿ ಮೇಲಿನ ಶ್ರುತಿಯ ಅಭಿಪ್ರಾಯವೇನೆಂಬುದನ್ನು ಚನ್ನಾಗಿ ವಿಚಾರ ಮಾಡಲಾಗುತ್ತದೆ. ಆದರಿಂದ ಜೀವನ್ಮುಕ್ತ ಪುರುಷರ ತೃಪ್ತಿಯು ವಿವರವಾಗಿ ತಿಳಿಯುವದು.

—ಪದಚ್ಛೇದ, ಪದಗಳ ಅರ್ಥ ಹೇಳುವಿಕೆ, ಸಮಸ್ತಪದಗಳ ವಿಗ್ರಹ, ವಾಕ್ಯಗಳನ್ನು ಅನ್ವಯಗೊಳಿಸುವದು, ಆಕ್ಷೇಪಗಳನ್ನು ಸಮಾಧಾನಮಾಡುವದು, ಎಂದು ವ್ಯಾಖ್ಯಾನಕ್ಕೆ ಐದು ಲಕ್ಷಣಗಳುಂಟು. ಈಗ ಪುರುಷ ಶಬ್ದದ ಅರ್ಥವನ್ನು ಹೇಳುವದಕ್ಕಾಗಿ ಮೊದಲು ಸಂಕ್ಷೇಪವಾಗಿ ಸೃಷ್ಟಿಯನ್ನು ವರ್ಣಿಸುತ್ತಾರೆ.

**ಮಾಯಾಭಾಸೇನ ಜೀವೇಶೌ ಕರೋತೀತಿ ಶ್ರುತತ್ವತಃ ।**
**ಕಲ್ಪಿತಾವೇವ ಜೀವೇಶೌ ತಾಭ್ಯಾಂ ಸರ್ವಂ ಪ್ರಕಲ್ಪಿತಮ್ ॥೩॥**

ಮಾಯೆಯ ಶುದ್ಧ ಸತ್ವಗುಣದಲ್ಲಿ ಪ್ರತಿಬಿಂಬಿಸಿದ ಬ್ರಹ್ಮಚೈತನ್ಯವೇ ಈಶ್ವರನು. ಮಿಶ್ರ (ಅಶುದ್ಧ) ಸತ್ವಗುಣದಲ್ಲಿ ಪ್ರತಿಬಿಂಬಿಸಿದ ಬ್ರಹ್ಮಚೈತನ್ಯವೇ ಜೀವನು ಎಂದು ಶ್ರುತಿಯಲ್ಲಿ ಹೇಳಿರುವದರಿಂದ ಜೀವ ಮತ್ತು ಈಶ್ವರರು ಕಲ್ಪಿತರು. ಅವರಿಂದ ಎಲ್ಲ ಜಗತ್ತು ಹುಟ್ಟಿತು.

—ಇವರಿಬ್ಬರಲ್ಲಿ ಯಾರಿಂದಾದ ಜಗತ್ತು ಎಷ್ಟು ಮಾತ್ರ ?

**ಈಕ್ಷಣಾದಿ ಪ್ರವೇಶಾಂತಾ ಸೃಷ್ಟಿರೀಶೇನ ಕಲ್ಪಿತಾ ।**
**ಜಾಗ್ರದಾದಿ ವಿಮೋಕ್ಷಾಂತಾ ಸಂಸಾರೋ ಜೀವಕಲ್ಪಿತಃ ॥೪॥**

"ನಾನು ಬಹುಬಗೆಯಾಗುವೆನು" ಎಂದು ಮನಸ್ಸುಮಾಡಿ ಜೀವನಾಗಿ ಜಗತ್ತಿನಲ್ಲಿ ಪ್ರವೇಶಮಾಡಿದ ವರೆಗಿನ ಸೃಷ್ಟಿಯು ಈಶ್ವರನದು. ಎಚ್ಚರ ಮೊದಲುಮಾಡಿ ಮೋಕ್ಷದ ವರೆಗಿನ ಸಂಸಾರವೆಲ್ಲ ಅದರಲ್ಲಿ ಅಭಿಮಾನ ತಾಳಿದ ಜೀವನದು.

—ಹೀಗೆ ಜೀವೇಶ್ವರ ಸೃಷ್ಟಿಯನ್ನು ಹೇಳಿ ಪುರುಷ ಶಬ್ದದ ಅರ್ಥ ಹೇಳುತ್ತಾರೆ.

**ಭ್ರಮಾಧಿಷ್ಠಾನಭೂತಾತ್ಮಾ ಕೂಟಸ್ಥಾಸಂಗಚಿದ್ವಪುಃ ।**
**ಅನ್ಯೋಽನ್ಯಾಧ್ಯಾಸತೋಽಸಂಗಧೀಸ್ಥ ಜೀವೋಽತ್ರ ಪೂರುಷಃ ॥೫॥**

ಯಾವ ಒಡಲಾವಣೆಯನ್ನೂ ಹೊಂದದೇ, ಯಾವದನ್ನೂ ಹಚ್ಚಿ ಕೊಳ್ಳದೇ ಇರುವ ಜ್ಞಾನರೂಪನಾಗಿ ದೇಹ-ಇಂದ್ರಿಯ ಮೊದಲಾದವುಗಳ ತೋರಿಕೆಗೆಲ್ಲ ಆಧಾರವಾಗಿರುವ ಪರಮಾತ್ಮನು ತನ್ನಲ್ಲಿ ಕಲ್ಪಿತವಾಗಿರುವ ಬುದ್ಧಿಯಲ್ಲಿ ಪ್ರತಿಬಿಂಬಿಸಿ ಚಿದಾಭಾಸನಾದವನೆನಿಸಿರುವವನಿಗೇ ಈ ಶ್ರುತಿಯಲ್ಲಿ ಜೀವನೆಂದಿರುವರು.

—ಇಲ್ಲಿ 'ಪುರುಷ' ಶಬ್ದದಿಂದ ಚಿದಾಭಾಸರೂಪ ಜೀವನೊಬ್ಬನನ್ನೇ ಹೇಳಬೇಕು. ಅಧಿಷ್ಠಾನನೆನಿಸಿದ ಕೂಟಸ್ಥ ಚೈತನ್ಯವನ್ನು ಬೆರೆಸಿ ಹೇಳುವದೇಕೆ?

**ಸಾಧಿಷ್ಠಾನೋ ವಿಮೋಕ್ಷಾದೌ ಜೀವೋಽಧಿಕ್ರಿಯತೇ ನ ತು ।**
**ಕೇವಲೋ ನಿರಧಿಷ್ಠಾನ ವಿಭ್ರಾಂತೇಃ ಕ್ವಾಪ್ಯಸಿದ್ಧಿತಃ ॥೬॥**

ತನ್ನ ಆಧಾರ ಭೂತ ಕೂಟಸ್ಥ ಚೈತನ್ಯನಿಂದ ಒಡಗೂಡಿದ ಜೀವನೇ ಸ್ವರ್ಗ ಮೋಕ್ಷಾದಿ ಸಾಧನೆ ಮಾಡಲು ಅಧಿಕಾರಿಯಾಗುತ್ತಾನೆ. ತಾನೊಬ್ಬನೇ ಏನೂ ಮಾಡಲಾರನು. ಆಧಾರವಿಲ್ಲದಲ್ಲಿ ಭ್ರಮೆಯು ಕಂಡುಬರುವದಿಲ್ಲ.

—ಈಗ ಆಧಾರವಸ್ತುವಿನೊಡನೆ ಕೂಡಿಕೊಂಡಿರುವ ಜೀವನೇ ಸಂಸಾರಿ. ಹಾಗೂ ಕಾರ್ಯಮಾಡುವವ ಭೋಗಿಸುವವನಾಗುತ್ತಾನೆ ಎಂಬುದನ್ನು ಹೇಳುತ್ತಾರೆ.

**ಅಧಿಷ್ಠಾನಾಂಶಸಂಯುಕ್ತಂ ಭ್ರಮಾಂಶಮವಲಂಬತೇ ।**
**ಯದಾ ತದಾಽಹಂ ಸಂಸಾರೀತ್ಯೇವಂ ಜೀವೋಽಭಿಮನ್ಯತೇ॥೭॥**

ಯಾವಾಗ ಜೀವನು ಕೂಟಸ್ಥನನ್ನು ಅವನ ಆಧಾರದ ಮೇಲೆ ತೋರುವ ಚಿದಾಭಾಸನಿಂದ ಕೂಡಿದ ಸ್ಥೂಲ-ಸೂಕ್ಷ್ಮ ಶರೀರಗಳನ್ನು ಕೂಡಿಸಿ

ಕೊಂಡು, ಅದೇ ತನ್ನ ಸ್ವರೂಪವೆಂದು ಭ್ರಮೆಗೊಳ್ಳುವನೋ ಆಗ ನಾನು ಸಂಸಾರಿ, ಎಂದು ಅಭಿಮಾನ ತಾಳುತ್ತಾನೆ.

**ಭ್ರಮಾಂಶಸ್ಯ ತಿರಸ್ಕಾರಾದಧಿಷ್ಠಾನ ಪ್ರಧಾನತಾ ।**
**ಯದಾ ತದಾ ಚಿದಾತ್ಮಾಹಮಸಂಗೋಽಸ್ಮೀತಿ ಬುಧ್ಯತೇ ॥೮॥**

ಮತ್ತೆ ಯಾವಾಗ ಭ್ರಮೆಯಿಂದಾದ ಚಿದಾಭಾಸನಿಂದ ಕೂಡಿದ ಸ್ಥೂಲ-ಸೂಕ್ಷ್ಮ ದೇಹಗಳನ್ನು ಇವು ಸುಳ್ಳೆಂದು ತಿರಸ್ಕರಿಸಿ ಅವುಗಳ ಆಧಾರ ಭೂತ ಕೂಟಸ್ಥನು ಮುಖ್ಯವೆಂದು ಭಾವಿಸುವನೋ ಆಗ ನಾನು ಅಸಂಗನಾದ ಜ್ಞಾನರೂಪನೆಂದು ತಿಳಿಯುತ್ತಾನೆ.

—ಇರಲಿ. ಅಧಿಷ್ಠಾನ (ಆಧಾರ) ವೆನಿಸಿದ ಕೂಟಸ್ಥ ಸ್ವರೂಪವೇ ಜೀವನೆಂದು ತಿಳಿಯುವದಾದರೆ 'ನಾನು ಜ್ಞಾನರೂಪನು' 'ಯಾವುದನ್ನೂ ಹಚ್ಚಿಕೊಳ್ಳದವನು' ಎನ್ನುವದು ಸರಿಯಾಗುವದಿಲ್ಲ. ಯಾಕೆಂದರೆ ಕೂಟಸ್ಥನು 'ನಾನು' ಎಂಬ ಸ್ಫೂರ್ತಿಗೆ ಸಿಲುಕುವವನಲ್ಲ.

**ನಾಸಂಗೇಽಹಂಕೃತಿರ್ಯುಕ್ತಾ ಕಥಮಸ್ಮೀತಿ ಚೇಚ್ಛೃಣು ।**
**ಏಕೋ ಮುಖ್ಯೋ ದ್ವಾವಮುಖ್ಯಾ ವಿತ್ಯರ್ಥಸ್ತ್ರಿ**
**ವಿಧೋಽಹಮಃ ॥೯॥**

ಅಸಂಗನಾದ ಕೂಟಸ್ಥನಲ್ಲಿ ಅಹಂಕಾರವಿರುವದೆನ್ನುವದು ಯೋಗ್ಯವಲ್ಲ. ಎಂದಮೇಲೆ ನಾನು ಅಸಂಗಚಿದ್ರೂಪನೆಂದು ಹೇಗೆ ತಿಳಿಯುವನು? ಎಂದರೆ 'ನಾನು' ಎಂಬ ಶಬ್ದಕ್ಕೆ ಮೂರು ಅರ್ಥಗಳು. ಅವುಗಳಲ್ಲಿ ಒಂದು ಮುಖ್ಯ. ಉಳಿದವೆರಡು ಅಮುಖ್ಯ.

—ಮೊದಲು 'ನಾನು' ಎಂಬುದರ ಮುಖ್ಯಾರ್ಥ.

**ಅನ್ಯೋನ್ಯಾಧ್ಯಾಸರೂಪೇಣ ಕೂಟಸ್ಥಾಭಾಸಯೋರ್ವಪುಃ ।**
**ಏಕೀಭೂಯ ಭವೇನ್ಮುಖ್ಯಸ್ತತ್ರ ಮೂಢೈಃ ಪ್ರಯುಜ್ಯತೇ॥೧೦॥**

ಕೂಟಸ್ಥನನ್ನೂ, ಚಿದಾಭಾಸನನ್ನೂ ಭ್ರಾಂತಿಯಿಂದ ಒಂದುಗೂಡಿಸಿಕೊಂಡು ಅದನ್ನು 'ಅಹಂ' (ನಾನು) ಎನ್ನುವದು ಮುಖ್ಯಾರ್ಥ. ವಿವೇಕವಿಲ್ಲದವರು ಬಹುಜನ ಹೀಗೆ ಉಪಯೋಗಿಸುವದರಿಂದ ಇದು ಮುಖ್ಯಾರ್ಥವೆನ್ನಬೇಕು.

—ಇನ್ನು ಉಳಿದ ಎರಡು ಅಮುಖ್ಯಾರ್ಥಗಳು.

**ಪೃಥಗಾಭಾಸ ಕೂಟಸ್ಥಾವಮುಖ್ಯೌ ತತ್ರ ತತ್ವವಿತ್ ।**
**ಪರ್ಯಾಯೇಣ ಪ್ರಯುಂಕ್ತೇಽಹಂ ಶಬ್ದಂ ಲೋಕೇ ಚ ವೈದಿಕೇ ॥೧೧॥**

ಕೂಟಸ್ಥನನ್ನಾಗಲೀ ಚಿದಾಭಾಸನನ್ನಾಗಲೀ ಬೇರೆಬೇರೆಯಾಗಿ 'ನಾನು' ಎಂದು ಹೇಳುವಾಗ ಅವೆರಡೂ ಅಮುಖ್ಯಾರ್ಥಗಳು. ತತ್ವವನ್ನು ತಿಳಿದವರು ಲೌಕಿಕ–ವೈದಿಕ ವ್ಯವಹಾರಗಳಲ್ಲಿ ಈ ಅರ್ಥಗಳನ್ನು ಬಳಸುವರು.

—ಲೌಕಿಕ ವೈದಿಕ ವ್ಯವಹಾರ ಪ್ರಸಂಗದಲ್ಲಿ ವಿದ್ವಾಂಸರು 'ಅಹಂ' ಶಬ್ದವನ್ನು ಪರ್ಯಾಯವಾಗಿ ಬಳಸುವರು ಎಂಬುದರ ಸ್ಪಷ್ಟೀಕರಣ ಮಾಡುತ್ತಾರೆ.

**ಲೌಕಿಕ ವ್ಯವಹಾರೇಽಹಂ ಗಚ್ಛಾಮೀತ್ಯಾದಿಕೇ ಬುಧಃ ।**
**ವಿವಿಚ್ಯೈವ ಚಿದಾಭಾಸಂ ಕೂಟಸ್ಥಾತ್ತಂ ವಿವಕ್ಷತಿ ॥೧೨॥**

"ನಾನು ಹೋಗುತ್ತೇನೆ. ಎಂದು ಮೊದಲಾಗಿ ಲೌಕಿಕವ್ಯವಹಾರದಲ್ಲಿ ಬ್ರಹ್ಮಜ್ಞಾನಿಯಾದ ಪಂಡಿತನು ತನ್ನ ಬುದ್ಧಿಯಿಂದ ಕೂಟಸ್ಥನಿಂದ ಬೇರೆ ಮಾಡಿಕೊಂಡ ಚಿದಾಭಾಸನನ್ನೇ "ನಾನು" ಎಂಬ ಶಬ್ದದಿಂದ ಹೇಳುತ್ತಾನೆ.

**ಅಸಂಗೋಽಹಂ ಚಿದಾತ್ಮಾಽಹಮಿತಿ ಶಾಸ್ತ್ರೀಯದೃಷ್ಟಿತಃ ।**
**ಅಹಂ ಶಬ್ದಂ ಪ್ರಯುಂಕ್ತೇಽಯಂ ಕೂಟಸ್ಥೇ ಕೇವಲೇ ಬುಧಃ ॥೧೩॥**

ಅದೇ ಪಂಡಿತನು ಶಾಸ್ತ್ರೀಯ ದೃಷ್ಟಿಯಿಂದ "ನಾನು ಅಸಂಗನು. ನಾನು ಜ್ಞಾನರೂಪನು" ಎಂದು ಬಳಸುವಾಗ ಅವನು ಕೂಟಸ್ಥನನ್ನು ಲಕ್ಷವಿಟ್ಟು "ನಾನು" ಎಂಬ ಶಬ್ದವನ್ನು ಪ್ರಯೋಗಿಸುವನು.

**ಜ್ಞಾನಿತಾಜ್ಞಾನಿತೇ ತ್ವಾತ್ಮಾಭಾಸಸ್ಯೈವ ನ ಚಾತ್ಮನಃ ।**
**ತಥಾ ಚ ಕಥಮಾಭಾಸಃ ಕೂಟಸ್ಥೋಽಸ್ಮೀತಿ ಬುಧ್ಯತಃ ॥೧೪॥**

ತಿಳಿವಳಿಕೆ, ತಿಳಿವಳಿಕೆ ಇಲ್ಲದಿರುವಿಕೆ ಎಂಬ ಧರ್ಮಗಳು ಚಿದಾಭಾಸನವು. ಆತ್ಮನವಲ್ಲ. ಹೀಗಿರುವಾಗ ಚಿದಾಭಾಸನು– "ನಾನು ಕೂಟಸ್ಥ" ನೆಂದು ಹೇಗೆ ತಿಳಿಯಬಲ್ಲನು ?

—ಈ ಮೇಲಿನ ಶಂಕೆಯ ಪರಿಹಾರ.

**ನಾಯಂ ದೋಷಶ್ಚಿದಾಭಾಸಃ ಕೂಟಸ್ಥೈಕ ಸ್ವಭಾವವಾನ್ ।**
**ಆಭಾಸತ್ವಸ್ಯ ಮಿಥ್ಯಾತ್ವಾತ್ ಕೂಟಸ್ಥತ್ವಾವಶೇಷಣಾತ್||೧೫||**

ಇದೇನೂ ದೋಷವಲ್ಲ. ಆಭಾಸತ್ವವು ಸುಳ್ಳಾದ ಕಾರಣ ಮತ್ತು ಕೂಟಸ್ಥತ್ವವು ಕೊನೆಗೆ ಉಳಿದುಕೊಳ್ಳುವ ಕಾರಣ ಚಿದಾಭಾಸನು ಕೂಟಸ್ಥನ ಸ್ವರೂಪನೇ ಆಗಿರುವನು.

(ಕನ್ನಡಿಯಲ್ಲಿ ತೋರುವ ಮುಖದ ಪ್ರತಿಬಿಂಬದ ತತ್ವವು ನಿಜವಾದ ಮುಖವೇ ಆಗಿರುವಂತೆ ಚಿದಾಭಾಸನ ನಿಜವಾದ ರೂಪ ಕೂಟಸ್ಥನೇ ಎನ್ನಬೇಕು.)

—ಚಿದಾಭಾಸನು ಸುಳ್ಳಾದ ಮೇಲೆ ತಾನು ಕೂಟಸ್ಥನಾದೆನೆಂಬ ಅವನ ಜ್ಞಾನವು ಕೂಡ ಸುಳ್ಳು ಯಾಕಾಗಬಾರದು ?

**ಕೂಟಸ್ಥೋಽಸ್ಮೀತಿ ಬೋಧೋಽಪಿ ಮಿಥ್ಯಾ ಚೇನ್ನೇತಿ ಕೋ ವದೇತ್ ।**
**ನ ಹಿ ಸತ್ಯತಯಾಽಭೀಷ್ಟಂ ರಜ್ಜು ಸರ್ಪವಿಸರ್ಪಣಮ್ ||೧೬||**

ನಾನು ಕೂಟಸ್ಥನು ಎಂಬ ಚಿದಾಭಾಸನ ಜ್ಞಾನವು ಕೂಡ ಸುಳ್ಳು ಎಂದರೆ ಅಲ್ಲವೆನ್ನುವವರಾರು ? ಹಗ್ಗದಲ್ಲಿ ಹಾವು ತೋರಿದಾಗ ಅದರ ಅಲುಗಾಟವು ಸತ್ಯವಾಗಿದೆ ಎಂಬುದು ಯಾರಿಗೂ ಒಪ್ಪಿಗೆಯಾಗದು.

—ಒಳ್ಳೇದು, ಹೀಗೆ ಚಿದಾಭಾಸನಿಗಾದ ಜ್ಞಾನವು ಸುಳ್ಳು ಎಂದಾದ ಮೇಲೆ ಅದರಿಂದ ಸಂಸಾರದ ಬಿಡುಗಡೆಯಾಗುವದೆಂತು ?

**ತಾದೃಶೇನಾಪಿ ಬೋಧೇನ ಸಂಸಾರೋ ಹಿ ನಿವರ್ತತೇ ।**
**ಯಕ್ಷಾನುರೂಪೋಹಿ ಬಲಿರಿತ್ಯಾಹುರ್ಲೌಕಿಕಾ ಜನಾಃ ||೧೭||**

ಅಂಥ ಬೋಧದಿಂದ ಕೂಡ ಸಂಸಾರದ ಬಿಡುಗಡೆಯಾಗುವದು. "ಯಕ್ಷನೆಂಥವನೋ, ಬಲಿಯೂ ಅಂಥದು." ಎಂದು ಜನಸಾಮಾನ್ಯರು ಹೇಳುವರು.

(ಸಂಸಾರವೂ ಸುಳ್ಳಾದುದರಿಂದ ಸುಳ್ಳುಜ್ಞಾನವಾದರೂ ಅದು ನಿವೃತ್ತಿಯಾಗುವದು.)

ಇನ್ನು ಈ ಪ್ರಕರಣದ ಉಪಸಂಹಾರ.

**ತಸ್ಮಾದಾಭಾಸ ಪುರುಷಃ ಸ ಕೂಟಸ್ಥೋ ವಿವಿಚ್ಯತಮ್ ।**
**ಕೂಟಸ್ಥೋಽಸ್ಮೀತಿ ವಿಜ್ಞಾತು ಮರ್ಹತೀತ್ಯಭ್ಯಧಾತ್**
**ಶ್ರುತಿಃ ॥೧೮॥**

ಆದುದರಿಂದ ಕೂಟಸ್ಥನೊಡನೆ ಕೂಡಿರುವ ಚಿದಾಭಾಸನು ಪುರುಷನೆನಿಸುವನು. (ಯಾಕೆಂದರೆ ಕೂಟಸ್ಥನೇ ನಿಜವಾಗಿ ಚಿದಾಭಾಸನ ಸ್ವರೂಪನು) ಆ ಕೂಟಸ್ಥನನ್ನು ಚಿದಾಭಾಸನಿಂದ ಬೇರೆ ಮಾಡಿ "ನಾನು ಕೂಟಸ್ಥನು, ಎಂದು ಅರಿವು ಪಡೆಯುವದು ಶಕ್ಯವಿದೆ. ಎಂದು ಶ್ರುತಿಯು ಹೇಳಿದೆ."

—ಹೀಗೆ ಆತ್ಮಾನಂ ಚೇತ್ ಇತ್ಯಾದಿ ಶ್ರುತಿಯಲ್ಲಿಯ "ಪುರುಷ ಮತ್ತು ಅಸ್ಮಿ, ಪದಗಳ ಅರ್ಥವನ್ನು ವಿವರಿಸಿ "ಅಯಂ" ಎಂಬ ಪದಪ್ರಯೋಗದ ಅಭಿಪ್ರಾಯವನ್ನು ತಿಳಿಸುತ್ತಾರೆ.

**ಅಸಂದಿಗ್ಧಾ ವಿಪರ್ಯಸ್ತಬೋಧೋ ದೇಹಾತ್ಮ ನೀಕ್ಷ್ಯತೇ ।**
**ತದ್ವದತ್ರೇತಿ ನಿರ್ಣೇತುಮಯಮಿತ್ಯಭಿಧೀಯತೇ ॥೧೯॥**

ಸ್ಥೂಲದೇಹವೇ ನಾನು ಎಂದು ಲೋಕದ ಜನರು ಸಂಶಯ–ಭ್ರಾಂತಿಗಳಿಲ್ಲದಂತೆ ತಿಳಿದಿರುವರು. ಅವರಂತೆಯೇ ಪ್ರತ್ಯಗಾತ್ಮನ ವಿಷಯದಲ್ಲಿಯೂ ಜ್ಞಾನವಾಗಬೇಕು ಎಂದು ನಿರ್ಣಯಮಾಡುವುದಕ್ಕೆ 'ಅಯಂ, 'ಎಂದರೆ' ಈ ಎಂಬ ಶಬ್ದವು ಬಂದಿರುವದು.

— ಇಂಥ ಬೋಧವೇ ಮುಕ್ತಿಗೆ ಸಾಧನ ಎಂಬ ವಿಷಯಕ್ಕೆ ಶ್ರೀ ಶಂಕರಾಚಾರ್ಯರ ಉಪದೇಶ ಸಾಹಸ್ರೀಯ ವಾಕ್ಯದ ಅನುಕೂಲವನ್ನು ತೋರಿಸುತ್ತಾರೆ.

**ದೇಹಾತ್ಮಜ್ಞಾನವದ್ ಜ್ಞಾನಂ ದೇಹಾತ್ಮಜ್ಞಾನಬಾಧಕಮ್ ।**
**ಆತ್ಮನ್ಯೇವ ಭವೇದ್ಯಸ್ಯ ಸ ನೇಚ್ಛನ್ನಪಿ ಮುಚ್ಯತೇ ॥೨೦॥**

ದೇಹವೇ ನಾನು ಎಂಬ ದೃಢವಾದ ಜ್ಞಾನವಿರುವಂತೆ ಆತ್ಮನ ವಿಷಯದಲ್ಲಿ ದೇಹಾತ್ಮ ಜ್ಞಾನಕ್ಕೆ ಬಾಧಕವಾದ ಜ್ಞಾನವು ಯಾರಿಗಾಗುವದೋ, ಅವನು ಇಚ್ಛೆಮಾಡದಿದ್ದರೂ ಮುಕ್ತನಾಗುವನು.

—ಶ್ರುತಿಯೊಳಗಿನ "ಅಯಂ" ಎಂಬ ಶಬ್ದದ ಮತ್ತೊಂದು ಅರ್ಥದ ವಿಷಯ ಪ್ರಸ್ತಾಪಿಸಿ ಅದಕ್ಕೆ ಅನುಮೋದನ ಕೊಡುತ್ತಾರೆ.

**ಅಯಮಿತ್ಯಪರೋಕ್ಷತ್ವ ಮುಚ್ಯತೇ ಚೇತ್ತದುಚ್ಯತಾಮ್ ।**
**ಸ್ವಯಂಪ್ರಕಾಶ ಚೈತನ್ಯಮಪರೋಕ್ಷಂ ಸದಾ ಯತಃ ॥೨೦॥**

"ಈ" ಎಂಬ ಶಬ್ದದಿಂದ ಆತ್ಮನು ಪ್ರತ್ಯಕ್ಷವಾದವನೆಂದು ಹೇಳಿದಂತಾಗುವದೆಂದರೆ ಹಾಗೇ ಆಗಲಿ. ಯಾಕಂದರ ತಾನೇ ಬೆಳಗುವಂಥ ಚೈತನ್ಯವು ಯಾವಾಗಲೂ ಪ್ರತ್ಯಕ್ಷವಾದುದು.

—ಆತ್ಮನು ತಾನೇ ತಾನಾಗಿ ಬೆಳಗುವವನು. ಮತ್ತು ಯಾವಾಗಲೂ ಪ್ರತ್ಯಕ್ಷನು ಎಂದು ನೀವು ಹೇಳುವಿರಿ. ಒಬ್ಬನೇ ಆತ್ಮನಲ್ಲಿ ಪ್ರತ್ಯಕ್ಷತ್ವ, ಅಪ್ರತ್ಯಕ್ಷತ್ವ ಅಥವಾ ಜ್ಞಾನಾಜ್ಞಾನಗಳು ಇರುವದು ಹೇಗೆ ?

**ಪರೋಕ್ಷ ಮಪರೋಕ್ಷಂ ಚ ಜ್ಞಾನಾಜ್ಞಾನಮಿತ್ಯದಃ ।**
**ನಿತ್ಯಾಪರೋಕ್ಷರೂಪೇऽಪಿ ದ್ವಯಂ ಸ್ಯಾದ್ದಶಮೇ ಯಥಾ॥೨೧॥**

ಅಪ್ರತ್ಯಕ್ಷತ್ವವು, ಪ್ರತ್ಯಕ್ಷತ್ವವು, ಜ್ಞಾನ–ಅಜ್ಞಾನವು ಎಂಬ ಈ ಎರಡರ ಜೋಡಿಯು ಹತ್ತನೆಯವನ ಎಣಿಸುವಿಕೆಯಂತೆ ಯಾವಾಗಲೂ ಪರೋಕ್ಷರೂಪನಾಗಿರುವ ಆತ್ಮನಲ್ಲಿ ಇರುವವು.

—ಹತ್ತನೆಯವ ದೃಷ್ಟಾಂತ ಕಥೆ.

**ನವಸಂಖ್ಯಾಹೃತಜ್ಞಾನೋ ದಶಮೋ ವಿಭ್ರಮಾತ್ತದಾ ।**
**ನವೇತ್ತಿ ದಶಮೋऽಸ್ಮೀತಿ ವಿಕ್ಷ್ಯಮಾಣೋऽಪಿ ತಾನ್ನವ ॥೨೩॥**

ಒಂಭತ್ತು ಎಂಬ ಎಣಿಕೆಯಿಂದ ಬುದ್ಧಿಮಂಕಾದ ಹತ್ತನೆಯವನು ಆ ಒಂಭತ್ತು ಜನರನ್ನು ಪ್ರತ್ಯಕ್ಷ ನೋಡುತ್ತಿದ್ದರೂ ನಾನು ಹತ್ತನೆಯವನಿದ್ದೇನೆ ಎಂದು ಭ್ರಾಂತಿಯಿಂದ ಆಗ ತಿಳಿಯಲಿಲ್ಲ.

(ಕಥೆ ಹೀಗಿದೆ:— ಒಮ್ಮೆ ಹತ್ತು ಜನ ಕೂಡಿಕೊಂಡು ಒಂದೂರಿಗೆ ಹೊರಟರು. ದಾರಿಯಲ್ಲೊಂದು ಹೊಳೆ ಬರಲು ಎಲ್ಲರೂ ಈಸುತ್ತ ಪಾರಾದರು. ಆಮೇಲೆ ಎಲ್ಲರೂ ಸುರಕ್ಷಿತವಾಗಿ ಬಂದೆವೋ ಇಲ್ಲವೋ? ನೋಡೋಣ ಎಂದು ಒಬ್ಬನು ಎಣಿಸತೊಡಗಿದನು. ಆದರೆ ಅಜ್ಞಾನದಿಂದ ತನ್ನ ಬಿಟ್ಟು ಇತರರನ್ನು ಎಣಿಸಿದನು. ಅದರಿಂದ ಅದುದೇನಂದರೆ ಒಂಭತ್ತು ಜನರ

ಲೆಕ್ಕವು ಮಾತ್ರ ಹತ್ತಿತು. ಹತ್ತನೆಯವನು ಮುಳುಗಿ ಸತ್ತನೆಂದು ಅವರೆಲ್ಲ ಕೂಡಿ ಅಳಲಾರಂಭಿಸಿದರು ಎಂಬ ಕಥೆಯನ್ನನುಸರಿಸಿ ಮೇಲಿನ ದೃಷ್ಟಾಂತ ಕೊಟ್ಟಿದ್ದಾರೆ.)

—ಹೀಗೆ ಉದಾಹರಣೆಯಲ್ಲಿ ಹೇಳಿದ ಹತ್ತನೆಯವನಿಗೆ ತಾನು ಪ್ರತ್ಯಕ್ಷವಾಗಿ ಇರುವದು ತಿಳಿದಿದ್ದರೂ ಇಲ್ಲವೆಂದು ತೋರಲಿಲ್ಲವೆಂದು ಅಂದನು. ಇದು ಅಜ್ಞಾನದ ಅನುಭವವೇ ಎಂದು ತಿಳಿಸಿ ಅಜ್ಞಾನದ ಕಾರ್ಯವಾದ ಆವರಣವನ್ನು ತೋರಿಸುತ್ತಾರೆ.

**ನ ಭಾತಿ ನಾಸ್ತಿ ದಶಮ ಇತಿ ಸ್ವಂ ದಶಮಂ ತದಾ ।**
**ಮತ್ವಾ ವಕ್ತಿ ತದಜ್ಞಾನಕೃತಮಾವರಣಂ ವಿದುಃ ॥೨೪॥**

ಎಲ್ಲರನ್ನು ಎಣಿಸುವಾಗ ಹತ್ತನೆಯವನು ತಾನು ಸ್ವತಃ ಹತ್ತನೆಯವನಿದ್ದರೂ ಹತ್ತನೆಯವನು ಕಾಣುವದಿಲ್ಲವಾದುದರಿಂದ ಅವನು ಇಲ್ಲ ಎಂದು ತಿಳಿದು ಹಾಗೆ ಹೇಳತೊಡಗುತ್ತಾನೆ. ಈ ಚಮತ್ಕಾರಿಕ ವ್ಯವಹಾರದ ಕಾರಣವೇ ಅಜ್ಞಾನದ ಆವರಣವೆಂಬ ಕಾರ್ಯವೆಂದು ಪಂಡಿತರು ತಿಳಿಯುತ್ತಾರೆ.

ಅಜ್ಞಾನದ ಒಂದು ಕಾರ್ಯವು ಆವರಣವಾದರೆ ಮತ್ತೊಂದು ಕಾರ್ಯವು ವಿಕ್ಷೇಪ. ದೃಷ್ಟಾಂತದೊಳಗಿನ ವಿಕ್ಷೇಪವನ್ನು ತೋರಿಸುತ್ತಾರೆ.

**ನದ್ಯಾಂ ಮಮಾರ ದಶಮ ಇತಿ ಶೋಚನ್ ಪ್ರರೋದತಿ ।**
**ಅಜ್ಞಾನಕೃತವಿಕ್ಷೇಪಂ ರೋದನಾದಿಂ ವಿದುರ್ಬುಧಾಃ ॥೨೫॥**

ಹತ್ತನೆಯವನು ನದಿಯಲ್ಲಿ ಮುಳುಗಿ ಸತ್ತನು ಎಂದು ದುಃಖಿಸುವ ಆ ಹತ್ತನೆಯವನು ಅಳಲಾರಂಭಿಸಿದನು. ಈ ರೋದನ ಮೊದಲಾದವುಗಳನ್ನು ಅಜ್ಞಾನದ ಕಾರ್ಯವಾದ ವಿಕ್ಷೇಪವೆಂದು ಪಂಡಿತರು ತಿಳಿಯುವರು.

(ಅಜ್ಞಾನ (ಅರ್ಥಾತ್ ಮಾಯೆ)ದ ಮೊದಲನೆ ಕಾರ್ಯ ಆವರಣವೆಂದರೆ ವಸ್ತುವನ್ನು ಮರೆಮಾಡುವದು. ಎರಡನೆಯ ಕಾರ್ಯವಿಕ್ಷೇಪವೆಂದರೆ ಒಂದು ಹೋಗಿ ಮತ್ತೊಂದು ವಿಧ ಕಾಣುವದು. ಮೇಲಿನ ದೃಷ್ಟಾಂತದಲ್ಲಿ "ನಾನೇ ಹತ್ತನೆಯವನು" ಎಂದು ತಿಳಿಯದಿರುವದೇ ಅಜ್ಞಾನ. ಹತ್ತನೆಯವನು ನದಿಯಲ್ಲಿ ಮುಳುಗಿದನು. ಅವನು ತೋರುವದಿಲ್ಲ. ಎಂದುಹೇಳುವದು ಆವರಣ. ಅವನಿಗೋಸ್ಕರ ಅಳುವದೇ ಮುಂತಾದವನ್ನು ಮಾಡುವದೇ ವಿಕ್ಷೇಪ.)

—ಹತ್ತನೆಯ ಮನುಷ್ಯನು ಇಲ್ಲವೆಂಬುವ ಮಾತನ್ನು ಅಲ್ಲಗಳೆಯುವ ಪರೋಕ್ಷಜ್ಞಾನವನ್ನು ಹೇಳುತ್ತಾರೆ.

**ನ ಮೃತೋ ದಶಮೋಽಸ್ತೀತಿ ಶ್ರುತ್ವಾಽಽಪ್ತವಚನಂತದಾ ।**
**ಪರೋಕ್ಷತ್ವೇನ ದಶಮಂ ವೇತ್ತಿ ಸ್ವರ್ಗಾದಿ ಲೋಕವತ್ ॥೨೬॥**

ಆಗ "ಹತ್ತನೆಯವನು ಸತ್ತಿಲ್ಲ. ಬದುಕಿದ್ದಾನೆ." ಎಂಬ ಆಪ್ತ ವಚನವನ್ನು ಕೇಳಿ ಅವನು ಕೇಳಿಕೆಯಿಂದ ಸ್ವರ್ಗಾದಿಗಳು ಇರುವವೆಂದು ತಿಳಿಯುವಂತೆ ಅವನು ಎಲ್ಲಿಯೋ ಇರುವನೆಂದು ಪರೋಕ್ಷವಾಗಿ ತಿಳಿಯುತ್ತಾನೆ.

(ಇದರಿಂದ ಹತ್ತನೆಯವನಿಲ್ಲವೆಂಬ ಆವರಣದ ಮೊದಲಿನ ಅಂಶವು ಹಿಂದಾಯಿತು.)

—ಇನ್ನು ಅವನ ಪ್ರತ್ಯಕ್ಷಜ್ಞಾನದ ಬಗೆ.

**ತ್ವಮೇವ ದಶಮೋಽಸೀತಿ ಗಣಯಿತ್ವಾ ಪ್ರದರ್ಶಿತಃ ।**
**ಅಪರೋಕ್ಷತಯಾ ಜ್ಞಾತ್ವಾ ಹೃಷ್ಯತ್ಯೇವ ನ ರೋದಿತಿ ॥೨೭॥**

"ನೀನೇ ಹತ್ತನೆಯವನು." ಎಂದು ಎಣಿಸಿ ತೋರಿಸಿದಮೇಲೆ ಅವನು ನಾನೇ ಹತ್ತನೆಯವನು ಎಂದು ಪ್ರತ್ಯಕ್ಷವಾಗಿ ತಿಳಿದು ಅಳುವದನ್ನು ಬಿಟ್ಟು ಸಂತೋಷಪಡುತ್ತಾನೆ.

—ಹೀಗೆ ದೃಷ್ಟಾಂತವಾಗಿ ಹೇಳಿದ ಹತ್ತನೆಯವನಿಗೆ ಬಂದ ಏಳು ಅವಸ್ಥೆಗಳನ್ನು ಹೇಳಿ ಅವುಗಳನ್ನು ದಾರ್ಷ್ಟಾಂತಿಕನಾದ ಆತ್ಮನಲ್ಲಿಯೂ ಹೊಂದಿಸಿಕೊಳ್ಳಬೇಕು ಎನ್ನುತ್ತಾರೆ.

**ಅಜ್ಞಾನಾವೃತಿ ವಿಕ್ಷೇಪ ದ್ವಿವಿಧ ಜ್ಞಾನ ತೃಪ್ತಯಃ ।**
**ಶೋಕಾಪಗಮ ಇತ್ಯೇತೇ ಯೋಜನೀಯಾ ಚಿದಾತ್ಮನಿ ॥೨೮॥**

ಅಜ್ಞಾನ, ಆವರಣ, ವಿಕ್ಷೇಪ, ಪರೋಕ್ಷಜ್ಞಾನ, ಅಪರೋಕ್ಷಜ್ಞಾನ ದುಃಖನಿವೃತ್ತಿ ಮತ್ತು ತೃಪ್ತಿ ಎಂದು ಆರೋಪಿತ ಏಳು ಅವಸ್ಥೆಗಳನ್ನು ಆತ್ಮನಲ್ಲಿಯೂ ಹೊಂದಿಸಿಕೊಳ್ಳಬೇಕು.

—ಅದು ಹೇಗೆಂಬುದನ್ನು ಮುಂದಿನ ನಾಲ್ಕು ಶ್ಲೋಕಗಳಿಂದ ತಿಳಿಸುತ್ತಾರೆ.

**ಸಂಸಾರಾಸಕ್ತಚಿತ್ತಃ ಸಂಶ್ಚಿದಾಭಾಸಃ ಕದಾಚನ ।**
**ಸ್ವಯಂಪ್ರಕಾಶಕೂಟಸ್ಥಂ ಸ್ವತತ್ವಂ ನೈವ ವೇತ್ತ್ಯಯಮ್॥೨೯॥**

ಚಿದಾಭಾಸನಾದ ಜೀವನು ವಿಷಯಗಳನ್ನು ದೊರಕಿಸುವ, ಅನುಭೋಗಿಸುವ ಸಂಭ್ರಮದಲ್ಲಿ ಮುಳುಗಿದವನಾಗಿ ತನ್ನ ಸ್ವರೂಪವು ಸ್ವಯಂಪ್ರಕಾಶ ಕೂಟಸ್ಥನೆಂಬುದನ್ನು ಎಂದಿಗೂ ತಿಳಿಯುವದಿಲ್ಲ.

(ಇದೇ ಅಜ್ಞಾನವೆಂಬ ಮೊದಲನೆಯ ಅವಸ್ಥೆ.)

—ಈಗ ಆತ್ಮನ ವಿಷಯದಲ್ಲಿ ಸಂಭವಿಸುವ ಎರಡು ಅವಿದ್ಯಾಕಾರ್ಯಗಳು.

**ನ ಭಾತಿನಾಸ್ತಿಕೂಟಸ್ಥ ಇತಿವಕ್ತಿಪ್ರಸಂಗತಃ ।**
**ಕರ್ತಾ ಭೋಕ್ತಾಽಹಮಸ್ಮೀತಿ ವಿಕ್ಷೇಪಂ ಪ್ರತಿಪದ್ಯತೇ ॥೩೦॥**

ಚಿದಾತ್ಮನ ವಿಷಯದಲ್ಲಿ ಮಾತು ಬಂದಾಗ ಕೂಟಸ್ಥನು ಅನುಭವಕ್ಕೆ ಬರುವದಿಲ್ಲ. ಅವನು ಇಲ್ಲ ಎಂದು ಹೇಳುತ್ತಾನೆ. ಮತ್ತು ನಾನು ಮಾಡುವವ, ಅನುಭವಿಸುವವ ಎಂದು ತಿಳಿದು ವಿಕ್ಷೇಪವನ್ನು ಹೊಂದುತ್ತಾನೆ.

(ಕೂಟಸ್ಥನು ಅನುಭವಕ್ಕೆ ಬರುವದಿಲ್ಲ. ಅವನು ಇಲ್ಲ ಎನ್ನುವದು ಆವರಣ. ಕರ್ತಾಭೋಕ್ತಾ. ಮುಂ. ಧರ್ಮಗಳನ್ನು ಕೂಟಸ್ಥನಲ್ಲಿ ಆರೋಪ ಮಾಡುತ್ತಾನೆ. ಇದು ವಿಕ್ಷೇಪ.)

—ಇನ್ನು ದ್ವಿವಿಧಜ್ಞಾನ.

**ಅಸ್ತಿಕೂಟಸ್ಥ ಇತ್ಯಾದೌ ಪರೋಕ್ಷಂ ವೇತ್ತಿವಾರ್ತಯಾ ।**
**ಪಶ್ಚಾತ್‌ಕೂಟಸ್ಥ ಏವಾಸ್ಮೀತ್ಯೇವಂ ವೇತ್ತಿ ವಿಚಾರತಃ ॥೩೧॥**

ಮೊದಲು ಎರಡನೆಯವರ ಹೇಳಿಕೆಯಿಂದ ಕೂಟಸ್ಥನೆಲ್ಲಿಯೋ ಇರುವನೆಂದು ಪರೋಕ್ಷ ಜ್ಞಾನವನ್ನು ಜೀವನು ಹೊಂದುವನು. ತರುವಾಯ ವಿಚಾರ ಮಾಡುತ್ತಿರಲು 'ನಾನೇ ಕೂಟಸ್ಥನು, ಎಂದು ಅಪರೋಕ್ಷ (ಪ್ರತ್ಯಕ್ಷ) ಜ್ಞಾನವನ್ನು ಹೊಂದುವನು.

ಗುರುಗಳು ಮುಂ. ಮುಖದಿಂದ ಶ್ರವಣಮಾಡಿ 'ಕೂಟಸ್ಥನಿರುವನು ಎಂಬ ಪರೋಕ್ಷ (ಶಾಬ್ದಿಕ) ಜ್ಞಾನ ಮಾಡಿಕೊಳ್ಳುವನು. ನಂತರ ಮನನ-ನಿದಿಧ್ಯಾಸ ಮುಂ. ಸಾಧನಗಳನ್ನು ಅಭ್ಯಾಸ ಮಾಡಿಕೊಂಡು ಅದರ ಪರಿಪಾಕ

ವಾಗಲು 'ನಾನೇ ಕೂಟಸ್ಥನು, ಎಂದು ತಿಳಿಯುವನು. ಇದೇ ಅಪರೋಕ್ಷ ಜ್ಞಾನವು.

—ಮುಂದಿನ ಎರಡು ಅವಸ್ಥೆಗಳು.

**ಕರ್ತಾ ಭೋಕ್ತೇತ್ಯೇವಮಾದಿ ಶೋಕಜಾತಂ ಪ್ರಮುಂಚತಿ |**
**ಕೃತಂ ಕೃತ್ಯಂ ಪ್ರಾಪಣೀಯಂ ಪ್ರಾಪ್ತಮಿತ್ಯೇವ**
**ತುಷ್ಯತಿ ||೩೨||**

ಆನಂತರ ನಾನು ಕರ್ತಾ ಭೋಕ್ತಾ ಮುಂತಾದ ದುಃಖಗಳನ್ನು ಬಿಟ್ಟು ಬಿಡುತ್ತಾನೆ. ಮತ್ತು ಮಾಡಬೇಕಾದುದನ್ನು ಮಾಡಿದೆನು. ಹೊಂದಬೇಕಾದುದನ್ನು ಹೊಂದಿದೆನು ಎಂದು ಸಂತೋಷಪಡುತ್ತಾನೆ.

(ಇಲ್ಲಿ ದುಃಖನಿವೃತ್ತಿ ಮತ್ತು ತೃಪ್ತಿ ಎಂಬ ಅವಸ್ಥೆಗಳನ್ನು ಹೇಳಲಾಗಿದೆ)

—ಇವೆಲ್ಲ ಅವಸ್ಥೆಗಳು ಕೂಟಸ್ಥನಿಗಿಲ್ಲ. ಅವನು ಅಸಂಗನು. ಆದುದರಿಂದ ಚಿದಾಭಾಸನಿಗೆ ಇವುಗಳ ಸಂಬಂಧವೆನ್ನುತ್ತಾರೆ.

**ಅಜ್ಞಾನಮಾವೃತಿಸ್ತದ್ವದ್ವಿಕ್ಷೇಪಶ್ಚ ಪರೋಕ್ಷಧೀಃ |**
**ಅಪರೋಕ್ಷಮತಿಃ ಶೋಕಮೋಕ್ಷಸ್ತೃಪ್ತಿರ್ನಿರಂಕುಶಾ ||೩೩||**
**ಸಪ್ತಾವಸ್ಥಾ ಇಮಾಃ ಸಂತಿ ಚಿದಾಭಾಸಸ್ಯ ತಾಸ್ವಿಮೌ |**
**ಬಂಧ-ಮೋಕ್ಷೌ ಸ್ಥಿತೌ ತತ್ರ ತಿಸ್ರೋ ಬಂಧಕೃತಃ-**
**ಸ್ಮೃತಾಃ ||೩೪||**

ಅಜ್ಞಾನ, ಆವರಣ, ವಿಕ್ಷೇಪ, ಪರೋಕ್ಷಜ್ಞಾನ, ಅಪರೋಕ್ಷಜ್ಞಾನ, ದುಃಖನಿವೃತ್ತಿ ಮತ್ತು ಅಖಂಡ ತೃಪ್ತಿ ಎಂಬ ಏಳು ಅವಸ್ಥೆಗಳು ಚಿದಾಭಾಸನೆನಿಸುವ ಜೀವನವು.

(ಇವುಗಳನ್ನು ತಿಳಿಯುವದರಿಂದ ಪ್ರಯೋಜನವೇನಂದರೆ) ಇವುಗಳಲ್ಲಿಯೇ ಬಂಧ-ಮೋಕ್ಷಗಳಿವೆ. ಮೊದಲಿನ ಮೂರು ಬಂಧನ ಮಾಡುವಂಥವು. (ಉಳಿದ ನಾಲ್ಕು ಮೋಕ್ಷ ಕೊಡುವಂಥವು) ಎಂದು ಶಾಸ್ತ್ರಗಳಲ್ಲಿ ಹೇಳಿದೆ.

—ಹೇಗೆಂಬುದನ್ನು ವಿವರಿಸಲು ಅಜ್ಞಾನದ ಸ್ವರೂಪವನ್ನು ತಿಳಿಸುತ್ತಾರೆ.

**ನಜಾನಾಮೀತ್ಯುದಾಸೀನವ್ಯವಹಾರಸ್ಯ ಕಾರಣಮ್ ।**
**ವಿಚಾರಪ್ರಾಗಭಾವೇನ ಯುಕ್ತಮಜ್ಞಾನಮೀರಿತಮ್ ॥೩೫॥**

ಆತ್ಮ ವಿಚಾರವನ್ನು ಮಾಡುವುದಕ್ಕೆ ಮೊದಲು ಏನು ಮಾಡಬೇಕೆಂಬುದು ತಿಳಿಯದೇ 'ನಾನರಿಯೆ' ಎಂದು ತೋರುವ ಉದಾಸೀನ ಭಾವವೇ ಅಜ್ಞಾನವು

—ಆವರಣದ ಸ್ವರೂಪ ಮತ್ತು ಕಾರ್ಯವನ್ನು ಹೇಳುತ್ತಾರೆ.

**ಅಮಾರ್ಗೇಣ ವಿಚಾರ್ಯಾಥ ನಾಸ್ತಿ ನೋಭಾತಿಚೇತ್ಯಸೌ ।**
**ವಿಪರೀತವ್ಯವಹೃತಿರಾವೃತೇಃ ಕಾರ್ಯಮಿಷ್ಯತೇ ॥೩೬॥**

ತರ್ಕಮೊದಲಾದವುಗಳ ಬೆನ್ನುಹತ್ತಿ ಕೂಟಸ್ಥನಿಲ್ಲ. ತೋರುವದಿಲ್ಲ., ಎಂದು ಮೊದಲಾದ ವಿಪರೀತ ವ್ಯವಹಾರವು ಆವರಣದ ಕಾರ್ಯವೆನ್ನುತ್ತಾರೆ.

—ವಿಕ್ಷೇಪದ ಸ್ವರೂಪ ಮತ್ತು ಕಾರ್ಯ.

**ದೇಹದ್ವಯಚಿದಾಭಾಸರೂಪೋ ವಿಕ್ಷೇಪಈರಿತಃ ।**
**ಕರ್ತೃತ್ವಾದ್ಯಖಿಲಃ ಶೋಕಃ ಸಂಸಾರಾಖ್ಯೋಽಸ್ಯ ಬಂಧಕಃ ॥೩೭॥**

ಸ್ಥೂಲ-ಸೂಕ್ಷ್ಮವೆಂಬ ಎರಡು ದೇಹಗಳೊಡನೆ ಕೂಡಿಕೊಂಡಿರುವ ಚಿದಾಭಾಸನೇ ವಿಕ್ಷೇಪನೆನಿಸುವನು. ನಾನು ಮಾಡುವವ, ಭೋಗಿಸುವವ ಮುಂತಾದ ಕರ್ತೃತ್ವದಿಂದ ಕೂಡಿದ ದುಃಖಮಯ ಸಂಸಾರವೆಂಬುದೇ ಈ ವಿಕ್ಷೇಪರೂಪನ ಕಾರ್ಯವು.

—ವಿಕ್ಷೇಪನಿಗಿಂತ ಮೊದಲಿನ ಅಜ್ಞಾನ-ಮತ್ತು ಆವರಣಗಳು ಅವನಿಗಿಂತ ಮೊದಲಿನವಾದುದರಿಂದ ಅವನಿಗೆ ಅವುಗಳ ಸಂಬಂಧ ಮಾಡುವದು ಯೋಗ್ಯವಲ್ಲ.

**ಅಜ್ಞಾನಮಾವೃತಿಶ್ಚೈತೇ ವಿಕ್ಷೇಪಾತ್ಪ್ರಾಕ್ಪ್ರಸಿಧ್ಯತಃ ।**
**ಯದ್ಯಪ್ಯಥಾಪ್ಯವಸ್ಥೇ ತೇ ವಿಕ್ಷೇಪಸ್ಯ ನಾತ್ಮನಃ ॥೩೮॥**

ಅಜ್ಞಾನ ಮತ್ತು ಆವರಣಗಳೆಂಬವು ವಿಕ್ಷೇಪನಿಗಿಂತ ಮೊದಲೇ ಸಿದ್ಧವಿರುತ್ತವೆ. ಆದರೂ ಕೂಡ ಅವು ವಿಕ್ಷೇಪನ ಅವಸ್ಥೆಗಳೇ. ಆತ್ಮನವಲ್ಲ.

(ಯಾಕಂದರೆ ಆತ್ಮನು ಅಸಂಗನಾಗಿದ್ದಾನೆ.)

—ಅದು ಹೇಗೆ?

**ವಿಕ್ಷೇಪೋತ್ಪತ್ತಿತಃ ಪೂರ್ವಮಪಿ ವಿಕ್ಷೇಪಸಂಸ್ಕೃತಿಃ ।**
**ಅಸ್ತ್ಯೇವ ತದವಸ್ಥಾತ್ವಮವಿರುದ್ಧಂ ತತಸ್ತಯೋಃ ॥೩೯॥**

ವಿಕ್ಷೇಪನು ಹುಟ್ಟುವದಕ್ಕಿಂತ ಮೊದಲುಕೂಡ ವಿಕ್ಷೇಪದ ಸಂಸ್ಕಾರ ವಿದ್ದಿತು. ಆದುದರಿಂದ ಆ ಎರಡು ಅವಸ್ಥೆಗಳು ಅವನವೆನ್ನುವದು ತಪ್ಪಲ್ಲ.

—ಅಪ್ರಸಿದ್ಧ ವಿಕ್ಷೇಪವಿದ್ದನೆಂದು ತಿಳಿದು ಅವನಿಗೆ ಆ ಅವಸ್ಥೆಗಳನ್ನು ಅನ್ವಯಿಸುವದಕ್ಕಿಂತ ಅಧಿಷ್ಠಾನ ರೂಪಕೂಟಸ್ಥನ ಅವಸ್ಥೆಗಳವು-ಎನ್ನುವದು ಸಯುಕ್ತಿಕವಲ್ಲವೇ?

**ಬ್ರಹ್ಮಣ್ಯಾರೋಪಿತತ್ವೇನ ಬ್ರಹ್ಮಾವಸ್ಥೇ ಇಮೇ ಇತಿ ।**
**ನ ಶಂಕನೀಯಂ ಸರ್ವಾಸಾಂ ಬ್ರಹ್ಮಣ್ಯೇವಾಧಿ-**
**ರೋಪಣಾತ್ ॥೪೦॥**

ಬ್ರಹ್ಮನ ಮೇಲೆಯೇ ನಿಜವಾಗಿ ಎಲ್ಲ ಅವಸ್ಥೆಗಳು ಕಲ್ಪಿತವಾದವುಗಳೆಂಬುದು ನಿಜ. ಅಷ್ಟರಿಂದ ಅವು ಬ್ರಹ್ಮನ ಅವಸ್ಥೆಗಳೇ ಎಂದು ಸಂದೇಹವನ್ನು ತಾಳಬಾರದು. ಯಾಕಂದರೆ ಎಲ್ಲ ಅವಸ್ಥೆಗಳನ್ನು ಬ್ರಹ್ಮನಮೇಲೆ ಆರೋಪಿಸಲು ಬಂದೇಬರುತ್ತದೆ.

—ಎಲ್ಲ ಅವಸ್ಥೆಗಳೂ ಬ್ರಹ್ಮನಮೇಲೆ ಆರೋಪಿತವಾದವುಗಳು. ಆದರೂ ವಿಕ್ಷೇಪದ ಉತ್ಪತ್ತಿಯಾದಮೇಲೆ ತೋರುವ ಸಂಸಾರಿತ್ವ ಮುಂತಾದವು ಜೀವನ ಅವಸ್ಥೆಗಳೆಂದು ತೋರುತ್ತದೆ. ಆದುದರಿಂದ ಅವು ಬ್ರಹ್ಮನ ಅವಸ್ಥೆಗಳಲ್ಲ ಎನ್ನುವದಾದರೆ ಅದೇ ನ್ಯಾಯದಿಂದ ಅಜ್ಞಾನ-ಮತ್ತು ಆವರಣಗಳು ಜೀವನ ಆಶ್ರಯದಿಂದಲೇ ತೋರುವವು ಎಂದಮೇಲೆ ಅವು ಬ್ರಹ್ಮನ ಅವಸ್ಥೆಗಳಲ್ಲ ಎನ್ನುತ್ತಾರೆ.

**ಸಂಸಾರ್ಯಹಂ ವಿಬುದ್ಧೋಽಹಂ ನಿಃಶೋಕಸ್ತುಷ್ಟ ಇತ್ಯಪಿ ।**
**ಜೀವಗಾ ಉತ್ತರಾವಸ್ಥಾ ಭಾಂತಿ ನ ಬ್ರಹ್ಮಗಾ ಯದಿ ॥೪೧॥**
**ತರ್ಹ್ಯಜ್ಞೋಽಹಂ ಬ್ರಹ್ಮಸತ್ತ್ವಭಾನೇ ಮದ್‍ದೃಷ್ಟಿತೋ ನ ಹಿ ।**
**ಇತಿ ಪೂರ್ವೇ ಅವಸ್ಥೇ ಚ ಭಾಸೇತೇ ಜೀವಗೇ ಖಲು ॥೪೨॥**

ನಾನು ಕರ್ತೃ–ಭೋಕ್ತೃನೆನಿಸಿದ ಸಂಸಾರಿಯು, ನನಗೆ ಪರೋಕ್ಷ ಮತ್ತು ಪ್ರತ್ಯಕ್ಷ ಜ್ಞಾನವಾಯಿತು. ನನ್ನ ದುಃಖವು ಹೋಯಿತು. ನಾನು ತೃಪ್ತನಾದೆನು ಎಂದು ತೋರುವ ಅವಸ್ಥೆಗಳು ಜೀವವನ್ನಾಶ್ರಯಿಸಿದಂತೆ ತೋರುವದಿಲ್ಲ. ಆದರೂ ನಾನು ಅರಿಯದವನು. ನನ್ನ ದೃಷ್ಟಿಯಿಂದ ಬ್ರಹ್ಮನಿರುವನೆಂದು ತೋರುವದಿಲ್ಲ ಎಂಬ ರೂಪದಲ್ಲಿ ಮೊದಲಿನ ಎರಡವಸ್ಥೆಗಳೂ ಜೀವನ ಅನುಭವದಲ್ಲಿವೆ.

—ಹಾಗಾದರೆ ಸರ್ವಜ್ಞಾತ್ಮ ಮುನಿಗಳು ಸಂಕ್ಷೇಪ ಶಾರೀರಿಕದಲ್ಲಿ ಬ್ರಹ್ಮವು ಅಜ್ಞಾನದ ಆಶ್ರಯಸ್ಥಾನವಾಗಿದೆ ಎಂದು ಹೇಗೆ ಹೇಳಿದರು ?

**ಅಜ್ಞಾನಸ್ಯಾಶ್ರಯೋ ಬ್ರಹ್ಮೇತ್ಯಧಿಷ್ಠಾನತಯಾ ಜಗುಃ ।**
**ಜೀವಾವಸ್ಥಾತ್ವಮಜ್ಞಾನಾಭಿಮಾನಿತ್ವಾದವಾದಿ–**
**ಷಮ್ ॥೪೩॥**

ಪೂರ್ವದ ಆಚಾರ್ಯರು 'ಅಜ್ಞಾನಕ್ಕೆ ಆಶ್ರಯವಾಗಿ ಬ್ರಹ್ಮವಿದೆ' ಎಂದು ಹೇಳಿರುವದು, ಬ್ರಹ್ಮ ಅದರ ಅಧಿಷ್ಠಾನವಾದುದರಿಂದ. ಆದರೆ ನಾವು ಇಲ್ಲಿ ಜೀವನು ಅಜ್ಞಾನದಲ್ಲಿ ಅಭಿಮಾನವನ್ನು ತಾಳುವದರಿಂದ ಅಜ್ಞಾನವೂ ಅವನ ಅವಸ್ಥೆ ಎಂದು ಹೇಳಿದ್ದೇವೆ.

—ಹೀಗೆ ಅಜ್ಞಾನ–ಆವರಣ–ವಿಕ್ಷೇಪಗಳೆಂಬ ಬಂಧಕಾರಕ ಮೂರು ಅವಸ್ಥೆಗಳನ್ನು ಹೇಳಿ ಆ ಅಜ್ಞಾನ ಆವರಣಗಳು ಕಳಚಲು ಮುಕ್ತಿಯ ಹೇತುಗಳೆಂದೆನಿಸುವ ಪರೋಕ್ಷ–ಅಪರೋಕ್ಷ ಜ್ಞಾನಾವಸ್ಥೆಗಳನ್ನು ತಿಳಿಸುತ್ತಾರೆ.

**ಜ್ಞಾನದ್ವಯೇನ ನಷ್ಟೇಽಸ್ಮಿನ್ನಜ್ಞಾನೇ ತತ್ಕೃತಾವೃತಿಃ ।**
**ನಭಾತಿ ನಾಸ್ತಿ ಚೇತ್ಯೇಷಾ ದ್ವಿವಿಧಾಽಪಿ ವಿನಶ್ಯತಿ ॥೪೪॥**

ಪರೋಕ್ಷ-ಅಪರೋಕ್ಷ ಜ್ಞಾನಗಳಿಂದ ಈ ಅಜ್ಞಾನವು ನಾಶವಾಗುತ್ತಿರಲು 'ಬ್ರಹ್ಮನು ತೋರುವದಿಲ್ಲ; ಅವನು ಇಲ್ಲ.' ಎಂಬ ಎರಡು ಆವರಣಗಳೂ ಇಲ್ಲದಂತಾಗುವವು.

—ಇನ್ನು ಯಾವ ಜ್ಞಾನದಿಂದ ಯಾವ ಆವರಣವು ನಾಶವಾಗುವದು?

**ಪರೋಕ್ಷಜ್ಞಾನತೋ ನಶ್ಯೇದಸತ್ತ್ವಾವೃತಿಹೇತುತಾ ।**
**ಅಪರೋಕ್ಷಜ್ಞಾನನಾಶ್ಯಾ ಹ್ಯಭಾನಾವೃತಿಹೇತುತಾ ॥೪೫॥**

ಪರೋಕ್ಷ ಜ್ಞಾನದಿಂದ 'ಕೂಟಸ್ಥನಿಲ್ಲ' ಎಂಬ ವ್ಯವಹಾರಕ್ಕೆ ಕಾರಣ ವೆನಿಸಿದ ಆವರಣವು ನಾಶವಾಗುವದು. ಅಪರೋಕ್ಷ (ಪ್ರತ್ಯಕ್ಷ) ಜ್ಞಾನದಿಂದ 'ನಾನು ಕೂಟಸ್ಥನು' ಎಂಬ ಅರಿವಾಗಿ ಅವನು ತೋರುವದಿಲ್ಲ ಎಂಬ ವ್ಯವ ಹಾರದ ಕಾರಣವೆನಿಸಿದ ಆವರಣವು ನಾಶವಾಗುವದು.

—ಈಗ ಜ್ಞಾನದ ಫಲರೂಪವೆನಿಸಿದ ಎರಡು ಅವಸ್ಥೆಗಳಲ್ಲಿ ಮೊದಲಿನದು.

**ಅಭಾನಾವರಣೇ ನಷ್ಟೇ ಜೀವತ್ವಾರೋಪಸಂಕ್ಷಯಾತ್ ।**
**ಕರ್ತೃತ್ವಾದ್ಯಖಿಲಃ ಶೋಕಃ ಸಂಸಾರಾಖ್ಯೋನಿವರ್ತತೇ॥೪೭॥**

ಇವೆರಡರಲ್ಲಿ ಕೂಟಸ್ಥನು ತೋರಲಿಲ್ಲ ಎಂಬ ಆವರಣ ನಾಶವಾದರೆ ಜೀವಭಾವವೇ ಇಲ್ಲದಂತಾಗುವದು. ನಾನು ಮಾಡುವವ ಎಂದು ಮೊದಲಾದ ಎಲ್ಲಾ ಬಗೆಯ ಸಂಸಾರ ದುಃಖಗಳು ಅಡಗಿಹೋಗುವವು.

—ಎರಡನೆಯದಾದ ನಿರಂಕುಶ ತೃಪ್ತಿ.

**ನಿವೃತ್ತೇ ಸರ್ವಸಂಸಾರೇ ನಿತ್ಯಮುಕ್ತತ್ವಭಾಸನಾತ್ ।**
**ನಿರಂಕುಶಾ ಭವೇತ್ತೃಪ್ತಿಃ ಪುನಃಶೋಕಾಸಮುದ್ಭವಾತ್॥೪೭॥**

ಸಂಸಾರದ ಸಕಲ ದುಃಖಗಳು ಹೋಗಲು 'ನಾನು ಯಾವಾಗಲೂ ಮುಕ್ತನು' ಎಂಬ ಅನುಭವವು ಬಂದು ಪುನಃ ಶೋಕವು ತಲೆ ಎತ್ತಲು ಅವ ಕಾಶವೇ ಇಲ್ಲದ್ದರಿಂದ ಅಖಂಡ ತೃಪ್ತಿಯು ಉಂಟಾಗುವದು.

—"ಆತ್ಮನಂ ಚೇತ್ ವಿಜಾನೀಯಾತ್" ಎಂಬ ಶ್ರುತಿಯ ವಿವರಣೆ ಹೇಳುವಾಗ ಈ ಏಳು ಅವಸ್ಥೆಗಳನ್ನೇಕೆ ಹೇಳಿದಿರಿ ಎಂದರೆ ಅದರ ತಾತ್ಪರ್ಯ ನಿರೂಪಣೆಯ ಅಂಗವಾಗಿ ಹೇಳಬೇಕಾಯಿತು. ಅದೇನೂ ದೋಷವಲ್ಲ.

**ಅಪರೋಕ್ಷಜ್ಞಾನಶೋಕನಿವೃತ್ಯಾಖ್ಯೇ ಉಭೇ ಇಮೇ ।**
**ಅವಸ್ಥೇ ಜೀವಗೇಬ್ರೂತ ಆತ್ಮಾನಾಂ ಚೇದಿತಿ ಶ್ರುತಿಃ ॥೪೮॥**

'ಆತ್ಮಾನಂ ಚೇತ್' ಎಂಬ ಶ್ರುತಿಯು ಅಪರೋಕ್ಷ ಜ್ಞಾನ ಮತ್ತು ದುಃಖನಿವೃತ್ತಿ ಎಂಬ ಎರಡು ಅವಸ್ಥೆಗಳನ್ನು ಜೀವನಿಗೆ ಹೇಳಿದೆ.

(ಹೀಗಿರಲು ಅದಕ್ಕೆ ಸಂಬಂಧಪಟ್ಟ ಉಳಿದ ಐದು ಅವಸ್ಥೆಗಳನ್ನು ತಿಳಿಸಿದ್ದು ದೋಷವಲ್ಲ.)

—"ಅಯಮಿತವ್ಯ ಪರೋಕ್ಷತ್ವಂ' ೨೧ ನೆಯ ಶ್ಲೋಕದಲ್ಲಿ 'ಅಯಂ' ಎಂಬ ಶಬ್ದಕ್ಕೆ 'ಈ' ಎಂದು ಅರ್ಥ ತಿಳಿಸಿ ಅದರಿಂದ ಆತ್ಮನ ಪ್ರತ್ಯಕ್ಷತ್ವವನ್ನು ಹೇಳಿದಿರಿ. ಎಂದಮೇಲೆ ಆತ್ಮನು ಅಪರೋಕ್ಷ ಜ್ಞಾನಕ್ಕೆ ಮಾತ್ರ ವಿಷಯ, ಪರೋಕ್ಷ ಜ್ಞಾನಕ್ಕಲ್ಲ ಎಂದರೆ ಅಪರೋಕ್ಷ ಜ್ಞಾನವನ್ನು ವಿಭಜಿಸಿ ತೋರಿಸುತ್ತಾರೆ.

**ಅಯಮಿತ್ಯಪರೋಕ್ಷತ್ವಮುಕ್ತಂ ತದ್ದ್ವಿವಿಧಂ ಭವೇತ್ ।**
**ವಿಷಯಸ್ವಪ್ರಕಾಶತ್ವಾದ್ಧಿಯಾಽಪ್ಯೇವಂ ತದೀಕ್ಷಣಾತ್ ॥೪೯॥**

'ಈ' ಎಂಬ ಶಬ್ದಕ್ಕೆ ಆತ್ಮನ ಪ್ರತ್ಯಕ್ಷತ್ವವನ್ನು ಹೇಳಿದೆವು. ವಿಷಯವಾದ ಆತ್ಮನು ತನ್ನ ಬೆಳಕಿನಿಂದ ಬೆಳಗುತ್ತಿರುವದರಿಂದ ಪ್ರತ್ಯಕ್ಷವೆಂದುದು ಒಂದು. ಹೀಗೆ ಎಂದರೆ ಆತ್ಮನು ತನ್ನ ಬೆಳಕಿನಿಂದ ಬೆಳಗುತ್ತಿರುವನೆಂದು ಬುದ್ಧಿಗೆ ತಿಳಿದುಬರುವದು ಇನ್ನೊಂದು. ಹೀಗೆ ಅಪರೋಕ್ಷತ್ವವು ಎರಡು ಬಗೆಯಾಗಿರುವದು.

—ಅದಿರಲಿ. ಪರೋಕ್ಷ ಜ್ಞಾನಕ್ಕೂ ಆತ್ಮನಿಗೂ ಏನು ಸಂಬಂಧ ?

**ಪರೋಕ್ಷಜ್ಞಾನಕಾಲೇಽಪಿ ವಿಷಯಸ್ವಪ್ರಕಾಶತಾ ।**
**ಸಮಾ ಬ್ರಹ್ಮ ಸ್ವಪ್ರಕಾಶಮಸ್ತೀತ್ಯೇವಂ ವಿಬೋಧನಾತ್॥೫೦॥**

ಅಪರೋಕ್ಷ ಜ್ಞಾನಕಾಲದಲ್ಲಿ ಹೇಗೋ ಹಾಗೆ ಪರೋಕ್ಷ ಜ್ಞಾನಕಾಲದಲ್ಲಿಯೂ ಬ್ರಹ್ಮನ ಬೆಳಗುವಿಕೆಯು ಒಂದೇ ಸಮನಿರುವದು. ತನ್ನ ಬೆಳಕಿನಿಂದ ಬೆಳಗುವ ಬ್ರಹ್ಮವು ಉಂಟೆಂದು ಪರೋಕ್ಷ ಜ್ಞಾನಿ ತನ್ನ ಬುದ್ಧಿಯಿಂದ ತಿಳಿಯುವನು.

—ತನ್ನಲ್ಲಿರುವವನಿಗಿಂತ ಬೇರೆಯಲ್ಲದ ಬ್ರಹ್ಮನ ಅರಿವು ಪರೋಕ್ಷವೆಂತಾಯಿತು ?

**ಅಹಂ ಬ್ರಹ್ಮೇತ್ಯನುಲ್ಲಿಖ್ಯ ಬ್ರಹ್ಮಾಸ್ತೀತ್ಯೇವಮುಲ್ಲಿಖೇತ್ ।**
**ಪರೋಕ್ಷಜ್ಞಾನಮೇತನ್ನ ಭ್ರಾಂತಂ ಬಾಧಾನಿರೂಪಣಾತ್ ॥೫೧॥**

'ನಾನು ಬ್ರಹ್ಮ' ಎಂದು ಪತ್ಯಕ್ಷಾನುಭವ ಪಡೆಯದೇ ಬ್ರಹ್ಮವಿದೆ ಎಂದು ಸಾಮಾನ್ಯವಾಗಿ ತಿಳಿಯುವದು ಪರೋಕ್ಷ ಜ್ಞಾನವೆನಿಸುವದು. ಇದು

ಭ್ರಾಂತಿ ಮೂಲಕವಾದ ಜ್ಞಾನವಲ್ಲ. ಯಾಕಂದರೆ ಅದು ಸುಳ್ಳಾದಂತೆ ಕಂಡುಬರುವದಿಲ್ಲ.

**ಬ್ರಹ್ಮನಾಸ್ತೀತಿಮಾನಂ ಚೇತ್ ಸ್ಯಾದ್ ಬಾಧ್ಯೇತ ತದಾ ಧ್ರುವಮ್ ।**
**ನ ಚೈವಂ ಪ್ರಬಲಂ ಮಾನಂ ಪಶ್ಯಾಮೋಽತೋ ನ ಬಾಧ್ಯತೇ ॥೫೨॥**

ಬ್ರಹ್ಮವೆಂಬ ಪ್ರಮಾಣವು ಯಾವದಾದರೂ ಇದ್ದರೆ ಆಗ ಪರೋಕ್ಷ-ಜ್ಞಾನವು ಸುಳ್ಳಾದೀತು. ನಾವು ಅಂಥ ಯಾವ ಪ್ರಮಾಣವನ್ನೂ ಕಂಡಿಲ್ಲ. ಆದುದರಿಂದ ಪರೋಕ್ಷಜ್ಞಾನ ಸುಳ್ಳಲ್ಲ.

—ಆದರೆ ಪರೋಕ್ಷ ಜ್ಞಾನದಲ್ಲಿ ಅದರ ವಿಷಯವು ಪ್ರತ್ಯಕ್ಷ ಅನುಭವಕ್ಕೆ ಬರುವದಿಲ್ಲ. ಆದುದರಿಂದ ಅದು ಭ್ರಮವೆಂದು ಅನ್ನಬಾರದೇಕೆ ?

**ವ್ಯಕ್ತ್ಯಾನುಲ್ಲೇಖ ಮಾತ್ರೇಣ ಭ್ರಮತ್ವೇ ಸ್ವರ್ಗಧೀರಪಿ ।**
**ಭ್ರಾಂತಿಃ ಸ್ಯಾದ್ ವ್ಯಕ್ತ್ಯನುಲ್ಲೇಖಾತ್ ಸಾಮಾನ್ಯೋಲ್ಲೇಖ ದರ್ಶನಾತ್ ॥೫೩॥**

ಪದಾರ್ಥದ ಪ್ರತ್ಯಕ್ಷ ಜ್ಞಾನವಾಗುವದಿಲ್ಲ. ಆದುದರಿಂದ ಪರೋಕ್ಷ ಜ್ಞಾನವು ಭ್ರಮವೆನ್ನುವದಾದರೆ, ಸ್ವರ್ಗವೆಂದಮಾತ್ರಕ್ಕೆ ಸ್ವರ್ಗವನ್ನು ಕಾಣಲಿಲ್ಲ. ಅಲ್ಲಿ ಸ್ವರ್ಗದ ಉಲ್ಲೇಖವು ಸಾಮಾನ್ಯವಾಗಿ ಆದಂತಾಯಿತು. ಆದುದರಿಂದ ಅದೂ ಭ್ರಮವೆನಿಸಬಹುದು.

—ಅಪರೋಕ್ಷ ಜ್ಞಾನಕ್ಕೆ ಯೋಗ್ಯವಾದ ಪದಾರ್ಥದ ವಿಷಯಕ್ಕೆ ಪರೋಕ್ಷ ಜ್ಞಾನವೆಂದರೆ ಭ್ರಮೆಯೇ ಸರಿ. ಎಂದರೆ—

**ಅಪರೋಕ್ಷತ್ವಯೋಗ್ಯಸ್ಯ ನ ಪರೋಕ್ಷಮತಿ ಭ್ರಮಃ ।**
**ಪರೋಕ್ಷಮಿತ್ಯನುಲ್ಲೇಖಾದರ್ಥಾತ್ಪಾರೋಕ್ಷ್ಯಸಂಭವಾತ್ ॥೫೪॥**

ಅಪರೋಕ್ಷ (ಪ್ರತ್ಯಕ್ಷ) ಜ್ಞಾನಕ್ಕೆ ಯೋಗ್ಯವೆನಿಸಿದ ಪದಾರ್ಥದ ಪರೋಕ್ಷ ಜ್ಞಾನವಾಗುವದು ಭ್ರಮವಲ್ಲ. ಬ್ರಹ್ಮವು ಶಾಬ್ದಿಕ (ಪರೋಕ್ಷ) ವೆಂದು ಎಂದಿಗೂ ಕಂಡುಬರುವದಿಲ್ಲ. ಇದು ಬ್ರಹ್ಮ ಎಂದು ಅದು ಪ್ರತ್ಯಕ್ಷವಾಗಿ ತೋರಿಬರುವದಿಲ್ಲ. ಆದುದರಿಂದ ಅದಕ್ಕೆ ಪರೋಕ್ಷತ್ವವಿದೆ.

(ಇದು ಬ್ರಹ್ಮ ಎಂಬ ಅನುಭವ ಬಂದಕೂಡಲೇ ಅದು ಅಪರೋಕ್ಷ ವೆನಿಸುವದು.)

—ಬ್ರಹ್ಮವಿದೆ ಎಂಬಲ್ಲಿ ಬ್ರಹ್ಮಾಂಶದ ಗ್ರಹಣವಾಗುವದು. ಆದರೆ ಆತ್ಮಾಂಶ ಗ್ರಹಣವಿಲ್ಲದ್ದರಿಂದ ಅದು ಭ್ರಮೆ ಎನ್ನಬಹುದು. ಎಂದರೆ—

**ಅಶಾಂಗ್ರಹೀತೇಭ್ರಾಂತಿಶ್ಚೇದ್ ಘಟಜ್ಞಾನಂ ಭ್ರಮೋ ಭ್ರವೇತ್ ।**
**ನಿರಂಶಸ್ಯಾಪಿ ಸಾಂಶತ್ವಂ ವ್ಯಾವರ್ತ್ಯಾಂಶ ವಿಭೇದತಃ ॥೫೫॥**

ಆತ್ಮಾಂಶಗ್ರಹಣವಿಲ್ಲದ್ದರಿಂದ ಪರೋಕ್ಷ ಜ್ಞಾನವು ಭ್ರಮೆ ಎಂದು ಅಂದರೆ ಘಟಜ್ಞಾನವು ಕೂಡ ಭ್ರಮವಾಗುವದು. ಉಪಾಧಿಗಳ ಅಂಶಗಳಿಂದ ಬ್ರಹ್ಮ ಸ್ವರೂಪದಲ್ಲಿ ಭೇದವುಂಟಾಗುವದರಿಂದ ವಸ್ತುತಃ ನಿರಂಶ ಬ್ರಹ್ಮದಲ್ಲಿ ಅಂಶಗಳು ಕೂಡಿಕೊಳ್ಳುವವು.

(ನಾವು ಒಂದು ಘಟವನ್ನು ನೋಡುತ್ತೇವೆ. ಆಗ ಅದರ ಮೇಲ್ಮೈ ಜ್ಞಾನ ಮಾತ್ರ ನಮಗಾಗುತ್ತದೆ. ಒಳಮೈ ಜ್ಞಾನವು ಆಗುವದಿಲ್ಲ. ಅರ್ಥಾತ್ ಅದರ ಕೆಲ ಅಂಶಗಳ ಜ್ಞಾನವಾಗಲಿಲ್ಲ ಎಂಬ ಕಾರಣವು ಇಂಥ ಜ್ಞಾನಗಳಲ್ಲಿ ಇರುವದೆಂದಹಾಗಾಯಿತು. ಆದಮಾತ್ರಕ್ಕೆ ಇದು ಭ್ರಮವೆಂದು ಹೇಳಬೇಕಾದೀತು. ಆದುದರಿಂದ ಕೆಲ ಅಂಶಗಳ ಗ್ರಹಣವಾಗುವದಿಲ್ಲವೆಂದು ಆ ಜ್ಞಾನವು ಭ್ರಮವೆಂದು ಹೇಳುವದು ಯೋಗ್ಯವಲ್ಲ. ಆದರೆ ಘಟವೇ ಮುಂ. ಪದಾರ್ಥಗಳು ಸಾವಯವವೆನಿಸುವದರಿಂದ ಅದರ ಕೆಲವು ಅಂಶಗಳ ಗ್ರಹಣವಾಗುವದು. ಕೆಲವು ಅಂಶಗಳ ಗ್ರಹಣವಾಗದಿರುವದು ಸಹಜ. ಆದರೆ ಬ್ರಹ್ಮವು ನಿರವಯವ. ಎಂದಮೇಲೆ ಇಲ್ಲಿ ಅದರ ಕೆಲವು ಅಂಶಗಳ ಗ್ರಹಣವಾಗುವದಿಲ್ಲ ಎನ್ನುವದು ಹೇಗೆ ? ಎಂದರೆ— ಪರಮಾರ್ಥವಾಗಿ ಬ್ರಹ್ಮವು ನಿರಂಶವೆಂಬುದು ಸರಿಯೇ. ಆದರೆ ಕಳೆಯಬೇಕಾದ ಎರಡು ಅಂಶಗಳು ಅದರಲ್ಲಿ ಕಲ್ಪಿತವಾಗಿದುವವು. ಆ ಉಪಾಧಿಗಳ ಅಂಶಗಳಿಂದ ಬ್ರಹ್ಮದಲ್ಲಿ ಪ್ರಾತಿಭಾಸಿಕಸಾಂಶತ್ವವು ಉಂಟಾಗಿರುವದು.)

**ಅಸತ್ವಾಂಶೋ ನಿವರ್ತೇತ ಪರೋಕ್ಷಜ್ಞಾನತಸ್ತಥಾ ।**
**ಅಭಾನಾಂಶ ನಿವೃತ್ತಿಃ ಸ್ಯಾದಪರೋಕ್ಷಧಿಯಾ ಕೃತಾ ॥೫೬॥**

—ಇರಲಿ ಕಳೆಯಬೇಕಾದ ಆ ಎರಡು ಅಂಶಗಳು ಯಾವವು ?

ಪರೋಕ್ಷ ಜ್ಞಾನದಿಂದ ಬ್ರಹ್ಮನಿಲ್ಲವೆಂಬ ಅಂಶವು ಹೋಗುತ್ತದೆ. ಅದ ರಂತೆ ಬ್ರಹ್ಮವು ತೋರುವದಿಲ್ಲವೆಂಬ ಅಂಶವು ಅಪರೋಕ್ಷ ಜ್ಞಾನದಿಂದ ಹೋಗುತ್ತದೆ.

—ಅಪರೋಕ್ಷ ಜ್ಞಾನಕ್ಕೆ ಯೋಗ್ಯವಾದ ಪದಾರ್ಥದ ಪರೋಕ್ಷ ಜ್ಞಾನವು ಭ್ರಮವಲ್ಲವೆಂದು ದೃಷ್ಟಾಂತ ಮುಖದಿಂದ ದೃಢಗೊಳಿಸುತ್ತಾರೆ.

**ದಶಮೋಽಸ್ತೀತಿ ವಿಭ್ರಾಂತಂ ಪರೋಕ್ಷ ಜ್ಞಾನಮೀಕ್ಷತೇ ।**
**ಬ್ರಹ್ಮಾಸ್ತೀತ್ಯಪಿ ತದ್ವತ್ ಸ್ಯಾದಜ್ಞಾನಾವರಣಂ ಸಮಮ್ ॥೫೭॥**

'ಹತ್ತನೆಯವನು ಇದ್ದಾನೆ' ಎಂಬ ಪರೋಕ್ಷ ಜ್ಞಾನವು ಭ್ರಾಂತಿ ಎನಿ ಸದೇ ಹೇಗೆ ನಿಜವಾಗುವದೋ ಹಾಗೆ ಬ್ರಹ್ಮವಿರುತ್ತದೆ, ಎಂಬ ಶ್ರುತಿ ವಾಕ್ಯ ದಿಂದ ಹುಟ್ಟಿದ ಜ್ಞಾನವೂ ಭ್ರಾಂತಿರಹಿತವಾಗಿದೆ. ಇವೆರಡು ಪ್ರಸಂಗಗಳಲ್ಲಿ ಅಜ್ಞಾನದ ಆವರಣವು ಸಮವಾಗಿದೆ.

(ಪರೋಕ್ಷ ಜ್ಞಾನದಿಂದ ಅಜ್ಞಾನದ ಆವರಣಾಂಶವು ನಿವಾರಣೆಯಾ ಗುತ್ತದೆ.)

—ಒಂದುವೇಳೆ ಶ್ರುತಿವಾಕ್ಯದಿಂದ ಪರೋಕ್ಷ ಜ್ಞಾನವಾದಮೇಲೆ ಅಪ ರೋಕ್ಷ ಜ್ಞಾನಕ್ಕೆ ಸಾಧನವೇನು ? ಎಂದರೆ ವಿಚಾರಪೂರ್ವಕವಾಗಿ ಮಹಾ ವಾಕ್ಯದ ಅರ್ಥವನ್ನು ನೋಡಬೇಕು ಎಂದು ದೃಷ್ಟಾಂತವನ್ನು ಕೊಟ್ಟು ಹೇಳುತ್ತಾರೆ.

**ಆತ್ಮಾ ಬ್ರಹ್ಮೇತಿ ವಾಕ್ಯಾರ್ಥೇ ನಿಃಶೇಷೇಣ ವಿಚಾರಿತೇ ।**
**ವ್ಯಕ್ತಿರುಲ್ಲಿಖ್ಯತೇ ಯದ್ವತ್ ದಶಮಸ್ತ್ವಮಸೀತ್ಯತಃ ॥೫೮॥**

'ನೀನೇ ಹತ್ತನೆಯವನು, ಎಂಬ ವಾಕ್ಯದಿಂದ ಹೇಗೆ ಹತ್ತನೆಯ ಪುರು ಷನ ಸಾಕ್ಷಾತ್ಕಾರವಾಗುವದೋ ಹಾಗೆ 'ಆತ್ಮನು-ಬ್ರಹ್ಮನು' ಎಂಬ ವಾಕ್ಯದ ಅರ್ಥವನ್ನು ಚನ್ನಾಗಿ ವಿಚಾರಮಾಡುತ್ತಿರಲು ಬ್ರಹ್ಮ ಸಾಕ್ಷಾತ್ಕಾರವಾ ಗುವದು. —ಅದು ಹೇಗೆ ?

**ದಶಮಃ ಕ ಇತಿ ಪ್ರಶ್ನೇ ತ್ವಮೇವೇತಿ ನಿರಾಕೃತೇ ।**
**ಗಣಯಿತ್ವಾ ಸ್ವೇನ ಸಹ ಸ್ವಮೇವ ದಶಮಂ ಸ್ಮರೇತ್ ॥೫೯॥**

ಹತ್ತನೆಯವನು ಯಾರು ? ಎಂದು ಪ್ರಶ್ನೆ ಮಾಡಿದಾಗ 'ನೀನೇ' ಎಂದು ಉತ್ತರ ದೊರೆಯಲು ತನ್ನನ್ನೂ ಹಿಡಿದುಕೊಂಡು ಎಣಿಸಲು ನಾನೇ ಹತ್ತನೆಯವನು ಎಂದು ಅವನಿಗೆ ಅರಿವಾಗುವದು.

—ಇದು ವಿಚಾರಪೂರ್ವಕವಾಗಿ ದೊರೆತ ಜ್ಞಾನವಾದುದರಿಂದ ವಿಪರೀತ ಜ್ಞಾನವಲ್ಲವೆನ್ನುತ್ತಾರೆ.

**ದಶಮೋಽಸ್ಮೀತಿ ವಾಕ್ಯೋತ್ಥಾ ನಧೀರಸ್ಯ ವಿಹನ್ಯತೇ ।**
**ಆದಿ ಮಧ್ಯಾವಸಾನೇಷು ನ ನವತ್ವಸ್ಯ ಸಂಶಯಃ ॥೬೦॥**

'ನೀನೇ ಹತ್ತನೆಯವನಿರುವೆ' ಎಂಬ ವಾಕ್ಯದಿಂದ ಹುಟ್ಟಿದ 'ನಾನು ಹತ್ತನೆಯವನು' ಎಂಬ ಬುದ್ಧಿಯು ಎಂದಿಗೂ ಬಂಧಿತವಾಗುವದಿಲ್ಲ. ಎಣಿಕೆಯಲ್ಲಿ ಬೇಕಾದ ಮೊದಲಿನಿಂದ, ನಡುವಿನಿಂದ ಅಥವಾ ಕೊನೆಯಿಂದ ಆ ಒಂಭತ್ತು ಜನಗಳನ್ನೆಣಿಸಿದರೂ ನಾನು ಹತ್ತನೆಯವನಹುದೋ ಅಲ್ಲವೋ ಎಂಬ ಸಂಶಯವು ಬರುವದಿಲ್ಲ.

**ಸದೇವೇತ್ಯಾದಿವಾಕ್ಯೇನ ಬ್ರಹ್ಮಸತ್ವಂ ಪರೋಕ್ಷತಃ ।**
**ಗೃಹಿತ್ವಾ ತತ್ವಮಸ್ಯಾದಿವಾಕ್ಯಾದ್ವ್ಯಕ್ತಿಂ ಸಮುಲ್ಲಿಖೇತ್॥೬೧॥**

ಸೃಷ್ಟಿಗೆ ಪೂರ್ವದಲ್ಲಿ 'ಸದ್ರೂಪ ಬ್ರಹ್ಮವೊಂದೇ ಇತ್ತು' ಇತ್ಯಾದಿ ವಾಕ್ಯಗಳಿಂದ ಪರೋಕ್ಷ ರೀತಿಯಾಗಿ ಬ್ರಹ್ಮನ ಇರುವಿಕೆಯನ್ನು ಅರಿತು 'ತತ್ವಮಸಿ' ಎಂದರೆ 'ಅದು ನೀನು ಇರುವೆ' ಎಂಬ ವಾಕ್ಯದಿಂದ 'ಅದೇ ಸದ್ರೂಪ ಬ್ರಹ್ಮನು ನಾನಾಗಿದ್ದೇನೆ' ಎಂಬ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕು.

**ಆದಿಮಧ್ಯಾವಸಾನೇಷು ಸ್ವಸ್ಯಬ್ರಹ್ಮತ್ವಧೀರಿಯಮ್ ।**
**ನೈವ ವ್ಯಭಿಚರೇತ್ತಸ್ಮಾದಾಪರೋಕ್ಷ್ಯಂ ಪ್ರತಿಷ್ಠಿತಮ್ ॥೬೨॥**

ನಾನು ಬ್ರಹ್ಮವೆಂಬ ಸಾಕ್ಷಾತ್ಕಾರವಾದ ಮೇಲೆ ಪಂಚಕೋಶಗಳ ಮೊದಲನೆಯ ಮಧ್ಯದ ಮತ್ತು ಕೊನೆಯ ಯಾವ ಕೋಶಗಳ ವ್ಯವಹಾರದಲ್ಲಿಯೂ ಬ್ರಹ್ಮತ್ವಬುದ್ಧಿಯು ಹುಟ್ಟುವದಿಲ್ಲ. ಆದುದರಿಂದ ಈ ಬುದ್ಧಿಗೆ ಅಪರೋಕ್ಷಜ್ಞಾನವು ದೃಢವಾಯಿತು.

—ಹೀಗೆಲ್ಲ ಯಾತರಮೇಲಿಂದ ತಿಳಿದುಬರುವದು ?

**ಜನ್ಮಾದಿಕಾರಣತ್ವಾಖ್ಯಲಕ್ಷಣೇನ ಭೃಗುಃ ಪುರಾ ।**
**ಪಾರೋಕ್ಷ್ಯೇಣ ಗೃಹೀತ್ವಾಽಥ ವಿಚಾರಾದ್ವ್ಯಕ್ತಿಮೈಕ್ಷತ ॥೬೩॥**

ಪೂರ್ವದಲ್ಲಿ ಭೃಗುವೆಂಬ ಋಷಿಯು 'ಜಗತ್ತಿನ-ಪ್ರಾಣಿಗಳ ಜನ್ಮಾದಿ ಕಾರಣವೆಂಬ ಲಕ್ಷಣದಮೇಲಿಂದ ಬ್ರಹ್ಮದ ಪರೋಕ್ಷಜ್ಞಾನವನ್ನು ಮಾಡಿ ಕೊಂಡು ತರುವಾಯ ಪ್ರತ್ಯಕ್ಷವಾಗಿ ಅರಿತುಕೊಂಡನು.

—ಮೇಲಿನ ಭೃಗುಋಷಿಯ ಪ್ರಕರಣದಲ್ಲಿ ಅವನ ತಂದೆಯಾದ ವರುಣನು "ನೀನು ಬ್ರಹ್ಮನಿರುವೆ" ಎಂದು ಅಪರೋಕ್ಷಜ್ಞಾನ ಮಾಡಿಕೊಡುವ ವಾಕ್ಯವನ್ನು ಮಗನಿಗೆ ಹೇಳಲಿಲ್ಲ. ಎಂದಮೇಲೆ ವಾಕ್ಯಶ್ರವಣವಿಲ್ಲದೇ ಆತ್ಮಸಾಕ್ಷಾತ್ಕಾರವು ಹೇಗೆ ಆಯಿತು ?

**ಯದ್ಯಪಿ ತ್ವಮಸೀತ್ಯತ್ರ ವಾಕ್ಯಂ ನೋಚೇ ಭೃಗೋಃ ಪಿತಾ।**
**ತಥಾಪ್ಯನ್ನಂ ಪ್ರಾಣಮಿತಿ ವಿಚಾರ್ಯಸ್ಥಲಮುಕ್ತವಾನ್ ॥೬೪॥**

ಇಲ್ಲಿ ಒಂದುವೇಳೆ ಭೃಗುವಿನ ತಂದೆಯು "ನೀನು ಬ್ರಹ್ಮನಿರುವೆ, ಎಂಬ ಮಾತನ್ನು ಹೇಳದಿದ್ದರೂ 'ಅನ್ನ-ಪ್ರಾಣ' ಎಂದು ಮೊದಲಾಗಿ ವಿಚಾರಕ್ಕೆ ಯೋಗ್ಯಸ್ಥಲಗಳನ್ನು ಹೇಳಿರುವನು.

–ಒಳ್ಳೇದು. ಅನ್ನಮಯವೇ ಮುಂ. ಕೋಶಗಳ ವಿಚಾರದಿಂದ ಬೇಕಾದರೆ ಆತ್ಮಸಾಕ್ಷಾತ್ಕಾರವಾಗಲಿ. ಆದರಿಂದ ಬ್ರಹ್ಮಸಾಕ್ಷಾತ್ಕಾರವು ಹೇಗಾದೀತು?

**ಅನ್ನಪ್ರಾಣಾದಿಕೋಶೇಷು ಸುವಿಚಾರ್ಯ ಪುನಃ ಪುನಃ ।**
**ಆನಂದವ್ಯಕ್ತಿಮೀಕ್ಷಿತ್ವಾ ಬ್ರಹ್ಮಲಕ್ಷ್ಮಾಪ್ಯಯೂ-**
**ಯುಜತ್ ॥೬೫॥**

ಅನ್ನಮಯ-ಪ್ರಾಣಮಯವೇ ಮುಂ. ಕೋಶಗಳ ಬಗೆಗೆ ಮತ್ತೆ ಮತ್ತೆ ಚನ್ನಾಗಿ ವಿಚಾರ ಮಾಡಿ ಆನಂದರೂಪನಾದ ಆತ್ಮನನ್ನು ಕಂಡು ಆ ಪ್ರತ್ಯಗಾತ್ಮನಲ್ಲಿ ಬ್ರಹ್ಮ ಲಕ್ಷಣಗಳನ್ನು ಹೊಂದಿಸಿಕೊಂಡನು.

(ಆನಂದಾದೇವಖಲ್ವಿಮಾನಿಭೂತಾನಿಜಾಯಂತೆ. ಆನಂದೇನ ಜಾತಾನಿಜೀವಂತಿ. ಆನಂದಂಪ್ರಯಂತ್ಯಭಿಸಂವಿಶಂತಿ । ಇವೇ ಮೊದಲಾದವು ಬ್ರಹ್ಮಲಕ್ಷಣಗಳು. ಇವುಗಳನ್ನು ಪ್ರತ್ಯಗಾತ್ಮನಲ್ಲಿ ಕಂಡುಕೊಂಡು ಎರಡನ್ನೂ ಹೊಂದಿಸಿದನೆಂದು ತಾತ್ಪರ್ಯ.)

—ಬ್ರಹ್ಮಲಕ್ಷಣಗಳನ್ನು ಎಂದರೆ ಆನಂದತ್ವವನ್ನು ಪ್ರತ್ಯಗಾತ್ಮನಲ್ಲಿ ಹೊಂದಿಸಿಕೊಳ್ಳುವದು ಯೋಗ್ಯವಲ್ಲ. ಯಾಕೆಂದರೆ ಬ್ರಹ್ಮವು ತಟಸ್ಥವಾಗಿದ್ದು ಸೃಷ್ಟಿಯ ಆಚೆಗೆ ಎಲ್ಲಿಯೋ ಇರುವದರಿಂದ ಆತ್ಮನಿಗಿಂತ ಬೇರೆ ಎನಿಸುತ್ತದೆ.

**ಸತ್ಯಜ್ಞಾನಮನಂತಂ ಚೇತ್ಯೇವಂ ಬ್ರಹ್ಮಸ್ವಲಕ್ಷಣಮ್ ।**
**ಉಕ್ತ್ವಾಗುಹಾಹಿತತ್ವೇನ ಕೋಶೇಷ್ವೇತತ್**
**ಪ್ರದರ್ಶಿತಮ್ ॥೬೬॥**

ಸತ್ಯಜ್ಞಾನಾನಂತರೂಪನು ಎಂದು ಬ್ರಹ್ಮನ ಸ್ವರೂಪಲಕ್ಷಣವನ್ನು ಹೇಳಿ ಅವನು ಪಂಚಕೋಶರೂಪಗುಹೆಯಲ್ಲಿರುವನು ಎಂದು ತೋರಿಸಿದ್ದಾಗಿದೆ.

(ಯೋವೇದ ನಿಹಿತಂ ಗುಹಾಯಾಮ್, ಎಂದು ಮುಂದಿನ ಶ್ರುತಿ ವಾಕ್ಯವಿದೆ.)

—ಇನ್ನು ಛಾಂದೋಗ್ಯ ಶ್ರುತಿಯನ್ನು ತೆಗೆದುಕೊಂಡು ವಿಚಾರಿಸಿದರೂ ಪರೋಕ್ಷಜ್ಞಾನದಿಂದ ಅಪರೋಕ್ಷಜ್ಞಾನವಾಗುವದೆಂದು ಸಿದ್ಧವಾಗುವದು.

**ಪಾರೋಕ್ಷ್ಯೇಣ ವಿಬುಧ್ಯೇಂದ್ರೋ ಯ ಆತ್ಮೇತ್ಯಾದಿ**
**ಲಕ್ಷಣಾತ್ ।**
**ಅಪರೋಕ್ಷೀಕರ್ತುಮಿಚ್ಛಂಶ್ಚತುರ್ವಾರಂ ಗುರುಂ**
**ಯಯೌ ॥೬೭॥**

"ಯಾವ ಆತ್ಮನು" ಎಂದು ಮೊದಲಾಗಿ ಶ್ರುತಿಯಲ್ಲಿ ಹೇಳಿದ ಲಕ್ಷಣಗಳಮೇಲಿಂದ ಪರೋಕ್ಷವಾಗಿ ಅವನನ್ನು ತಿಳಿದು ಪ್ರತ್ಯಕ್ಷವಾಗಿ ತಿಳಿಯುವ ಇಚ್ಛೆಯಿಂದ ಇಂದ್ರನು ನಾಲ್ಕುಸಾರೆ ಗುರುವಿನ ಕಡೆಗೆ ಹೋದನು.

(ಯ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುಃ ವಿಶೋಕಃ । ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಲಕ್ಷಣಗಳಿಂದ ಆತ್ಮನ ಪರೋಕ್ಷಜ್ಞಾನ ಪಡೆದ ಇಂದ್ರನು ಅವನ ಸಾಕ್ಷಾತ್ಕಾರಕ್ಕಾಗಿ ಚತುರ್ಮುಖನ ಕಡೆಗೆ ಹೋದನು ಎಂದು ಛಾಂದೊಗ್ಯೋಪನಿಷತ್ತಿನಲ್ಲಿ ಹೇಳಿದೆ.)

—ಇನ್ನು ಐತರೇಯ ಶ್ರುತಿ.

**ಆತ್ಮಾ ವಾ ಇದಮಿತ್ಯಾದೌ ಪರೋಕ್ಷಂ ಬ್ರಹ್ಮಲಕ್ಷಿತಮ್ ।**
**ಅಧ್ಯಾರೋಪಾಪವಾದಾಭ್ಯಾಂ ಪ್ರಜ್ಞಾನಂ ಬ್ರಹ್ಮದರ್ಶಿ-**
**ತಮ್ ॥೬೮॥**

'ಇದೆಲ್ಲ ಆತ್ಮ' ಎಂದು ಮೊದಲು ಬ್ರಹ್ಮನ ಪರೋಕ್ಷಲಕ್ಷಣಗಳನ್ನು ಹೇಳಿ ಕೊನೆಗೆ ಅಧ್ಯಾರೋಪ (ಜಗತ್ತು ಅವನಲ್ಲಿ ಹುಟ್ಟಿತೆಂಬ ಆರೋಪ) ಅಪವಾದ (ಹೀಗೆ ಹುಟ್ಟಿದ ಜಗತ್ತು ಬ್ರಹ್ಮನ ಹೊರತು ಬೇರೆಯಲ್ಲ. ಎಂಬ ಅಪವಾದ) ಗಳಿಂದ ಪ್ರತ್ಯಗಾತ್ಮರೂಪವಾದ ಪ್ರಜ್ಞಾನವೇ ಬ್ರಹ್ಮವೆಂದು ತೋರಿಸಿತು.

(ಎಂದರೆ ಪರೋಕ್ಷಜ್ಞಾನಮೂಲಕವಾಗಿಯೇ ಅಪರೋಕ್ಷಜ್ಞಾನವೆಂದು ಹೇಳಿದೆ.)

—ಇತರ ಶ್ರುತಿಗಳಿಗೂ ಇದೇನ್ಯಾಯವೆನ್ನುತ್ತಾರೆ.

**ಅವಾಂತರೇಣ ವಾಕ್ಯೇನ ಪರೋಕ್ಷಾ ಬ್ರಹ್ಮಧೀರ್ಭವೇತ್ ।**
**ಸರ್ವತ್ರೈವ ಮಹಾವಾಕ್ಯವಿಚಾರಾದಪರೋಕ್ಷಧೀಃ ॥೬೯॥**

ಎಲ್ಲ ಶ್ರುತಿಗಳಲ್ಲಿ ಸ್ವರೂಪಬೋಧಕ ಸ್ಪಷ್ಟಶಬ್ದಗಳಿಂದ ಕೂಡಿರದ ಎಂದರೆ ಅವಾಂತರ ವಾಕ್ಯಗಳಿಂದ ಪರೋಕ್ಷಬ್ರಹ್ಮಜ್ಞಾನವು. ಮಹಾವಾಕ್ಯ ವಿಚಾರದಿಂದ ಅಪರೋಕ್ಷಜ್ಞಾನವು ಆಗುತ್ತದೆ.

—ಇದನ್ನು ನೀವೇ ಕಲ್ಪಿಸಿ ಹೇಳಿರಬೇಕು. ಯಾಕಂದರೆ–

**ಬ್ರಹ್ಮಾಪರೋಕ್ಷ್ಯಸಿದ್ಧ್ಯರ್ಥಂ ಮಹಾವಾಕ್ಯಮಿತೀರಿತಮ್ ।**
**ವಾಕ್ಯವೃತ್ತಾವತೋ ಬ್ರಹ್ಮಾಪಾರೋಕ್ಷ್ಯೇ ವಿಮತಿರ್ನ ಹಿ॥೭೦॥**

ವಾಕ್ಯವೃತ್ತಿ ಎಂಬ ಗ್ರಂಥದಲ್ಲಿ "ಬ್ರಹ್ಮನ ಅಪರೋಕ್ಷಜ್ಞಾನವು ಸಿದ್ಧಿಸುವದಕ್ಕೆ ಮಹಾವಾಕ್ಯವಿದೆ" ಎಂದು ಹೇಳಿದೆ. ಆದುದರಿಂದ ಬ್ರಹ್ಮನ ಅಪರೋಕ್ಷಜ್ಞಾನದ ವಿಷಯದಲ್ಲಿ ಮತಭೇದವಿಲ್ಲ.

—ವಾಕ್ಯವೃತ್ತಿಯಲ್ಲಿ ಶ್ರೀಮತ್ ಶಂಕರಾಚಾರ್ಯರು ಹೇಳಿರುವ ಎಂಟು ಶ್ಲೋಕಗಳ ಅನುವಾದವನ್ನು ಇಲ್ಲಿ ಉದ್ಧರಿಸುತ್ತಾರೆ.

**ಆಲಂಬನತಯಾ ಭಾತಿ ಯೋಽಸ್ಮತ್ಪ್ರತ್ಯಯ ಶಬ್ದಯೋಃ ।**
**ಅಂತಃಕರಣ ಸಂಭಿನ್ನಬೋಧಃ ಸ ತ್ವಂಪದಾಭಿಧಃ ॥೭೧॥**

ಅಂತಃಕರಣದ ಉಪಾಧಿಯನ್ನು ಹೊಂದಿದ ಎಂದರೆ ಅಂತಃಕರಣದೊಡನೆ ಕೂಡಿಕೊಂಡಿರುವ ಚಿದಾತ್ಮನು (ಅರಿವು) ನಾನು ಎಂಬ ಅರಿವಿಗೂ ನಾನು ಎಂಬ ಶಬ್ದಕ್ಕೂ ಆಶ್ರಯರೂಪವಾಗಿ ತೋರುವನು. ಅವನೇ ತ್ವಂಪದದ (ತತ್ವಮಸಿಯಲ್ಲಿರುವ ತ್ವಂಪದವ)ಎಂದರೆ ನೀನು ಎಂಬ ಶಬ್ದದ ಅರ್ಥ.

—ಇನ್ನು ತತ್ಪದದ ಅರ್ಥ.

**ಮಾಯೋಪಾಧಿರ್ಜಗದ್ಯೋನಿಃ ಸರ್ವಜ್ಞತ್ವಾದಿ ಲಕ್ಷಣಃ ।**
**ಪಾರೋಕ್ಷ್ಯಶಬಲಃ ಸತ್ಯಾದ್ಯಾತ್ಮಕಸ್ತತ್ಪದಾಭಿದಃ ॥೭೨॥**

ಮಾಯೋಪಾಧಿಕನು (ಎಂದರೆ ಮಾಯೆಯಿಂದ ಕೂಡಿಕೊಂಡವನು.) ಜಗತ್ತಿನ ಕಾರಣರೂಪನು. ಸರ್ವಜ್ಞತ್ವವೇ ಮೊದಲಾದ ಲಕ್ಷಣಯುಕ್ತನು. ಪರೋಕ್ಷತ್ವಧರ್ಮವಿಶಿಷ್ಟನು. ಸತ್ಯ–ಜ್ಞಾನ–ಅನಂತ–ಆನಂದ ಇತ್ಯಾದಿ ರೂಪನು ಆದ ಪರಮಾತ್ಮನು ಮಹಾವಾಕ್ಯದಲ್ಲಿರುವ "ತತ್" (ಅದು) ಪದದ ಅರ್ಥ.

—ಇನ್ನು ವಾಕ್ಯಾರ್ಥ ಜ್ಞಾನಕ್ಕಾಗಿ ಲಕ್ಷಣಾವೃತ್ತಿಯನ್ನು ಸ್ವೀಕರಿಸಬೇಕು. ಎನ್ನುತ್ತಾರೆ.

**ಪ್ರತ್ಯಕ್ಪರೋಕ್ಷತೈಕಸ್ಯ ಸದ್ವಿತೀಯತ್ವಪೂರ್ಣತಾ ।**
**ವಿರುಧ್ಯೇತೇ ಯತಸ್ತಸ್ಮಾಲ್ಲಕ್ಷಣಾ ಸಂಪ್ರವರ್ತತೇ ॥೭೩॥**

ಒಂದೇ ವಸ್ತುವಿನಲ್ಲಿ ಪ್ರತ್ಯಕ್ಷವಾಗಿರುವಿಕೆ, ಪರೋಕ್ಷವಾಗಿರುವಿಕೆ, ಎರಡನೆಯ ವಸ್ತುಗಳೊಡನೆ ಕೂಡಿಕೊಂಡಿರುವಿಕೆಯು, ಮತ್ತು ಪೂರ್ಣತೆಯು ವಿರುದ್ಧವಾದವುಗಳೆನಿಸುವವು. ಆದುದರಿಂದ ಲಕ್ಷಣಾವೃತ್ತಿಯನ್ನವಲಂಬಿಸುವ ಪ್ರಸಂಗವಿದೆ.

—ಲಕ್ಷಣಾವೃತ್ತಿ ಮೂರು ಬಗೆಯಾಗಿದೆ. ಅದರಲ್ಲಿ ಯಾವುದನ್ನಾಶ್ರಯಿಸಬೇಕು?

**ತತ್ವಮಸ್ಯಾದಿವಾಕ್ಯೇಷು ಲಕ್ಷಣಾಭಾಗಲಕ್ಷಣಾ ।**
**ಸೋಽಯಮಿತ್ಯಾದಿವಾಕ್ಯಸ್ಥಪದಯೋರಿವ ನಾಪರಾ ॥೭೪॥**

ಆ ದೇವನೇ ಇವನು. ಎಂಬ ವಾಕ್ಯದಲ್ಲಿ ವಿರುದ್ಧಾಂಶಗಳನ್ನು ಬಿಟ್ಟು ಏಕತ್ವವನ್ನು ಗ್ರಹಿಸುವಂತೆ, 'ತತ್ವಮಸಿ, ಮುಂತಾದ ಮಹಾವಾಕ್ಯಗಳಲ್ಲಿ

ವಿರುದ್ಧಾಂಶವನ್ನು ಬಿಟ್ಟು ಏಕತ್ವವನ್ನು ಗ್ರಹಿಸುವ ಭಾಗತ್ಯಾಗ ಲಕ್ಷಣಾ ವೃತ್ತಿಯನ್ನು ಸ್ವೀಕರಿಸಬೇಕು. ಮತ್ತೊಂದು ಅಲ್ಲ.

—ಆಕಳವನ್ನು ತೆಗೆದುಕೊಂಡುಬಾ. ಎಂಬ ವಾಕ್ಯದಲ್ಲಿ ಲಕ್ಷಣಾ ವೃತ್ತಿಯ ಪ್ರಸಂಗವಿಲ್ಲದೇ ವಾಕ್ಯಾರ್ಥವು ತಿಳಿಯುವುದು. ಅದರಂತೆ ಇಲ್ಲಿ ಯಾದರೂ ಯಾಕಾಗಬಾರದು?

**ಸಂಸರ್ಗೋವಾ ವಿಶಿಷ್ಟೋ ವಾ ವಾಕ್ಯಾರ್ಥೋ ನಾತ್ರಸಮ್ಮತಃ।**
**ಅಖಂಡೈಕರಸತ್ವೇನ ವಾಕ್ಯಾರ್ಥೋ ವಿದುಷಾಂ-**
**ಮತಃ ||೭೫||**

ಇಲ್ಲಿ ಸಂಸರ್ಗವಾಗಲೀ (ಪದಗಳ ಅರ್ಥಕ್ಕೆ ತೋರುವ ಸಂಬಂಧ-ಸಂಸರ್ಗ) ವಿಶಿಷ್ಟ (ವಿಶೇಷ್ಯ-ವಿಶೇಷಣಗಳಿಂದ ಕೂಡಿದ) ವಾಗಲೀ ವಾಕ್ಯಾರ್ಥವು ಸಮ್ಮತವಿಲ್ಲ. ಆದರೆ ಅಖಂಡೈಕ ರಸಬೋಧಕವಾಗುವಂತೆ ವಾಕ್ಯಾರ್ಥವು ಒಪ್ಪಿಗೆಯಾಗಿದೆ.

(ಸಾಮಾನ್ಯವಾಗಿ ವಾಕ್ಯದ ಅರ್ಥಗಳು ಎರಡು ಬಗೆಯಿಂದಾಗುವವು. ಒಂದು ಸಂಸರ್ಗರೂಪ. ಇನ್ನೊಂದು ವಿಶಿಷ್ಟರೂಪ. ತತ್ವಮಸಿ ಎಂಬ ಮಹಾ ವಾಕ್ಯದಲ್ಲಿ ಇವೆರಡೂ ಅರ್ಥಗಳು ಉಪಯುಕ್ತವಲ್ಲ.)

—ಅಖಂಡ-ಏಕರಸ ವಾಕ್ಯಾರ್ಥವು ಹೇಗೆ ?

**ಪ್ರತ್ಯಗ್ಬೋಧೋ ಯ ಆಭಾತಿ ಸೋಽದ್ವಯಾನಂದಲಕ್ಷಣಃ ।**
**ಅದ್ವಯಾನಂದರೂಪಶ್ಚ ಪ್ರತ್ಯಗ್ಬೋಧೈಕಲಕ್ಷಣಃ ||೭೬||**

ಎಲ್ಲರ ಒಳಗೂ ಜ್ಞಾನ ಸ್ವರೂಪನಾಗಿ, ಬುದ್ಧಿ ಮೊದಲಾದವುಗಳಿಗೆ ಸಾಕ್ಷಿ ರೂಪನಾಗಿ ಯಾವನು ತೋರಿಕೊಳ್ಳುವನೋ ಅವನು ಅದ್ವಿತೀಯ ಆನಂದ ಲಕ್ಷಣನು. ಪರಮಾತ್ಮನಾದರೂ ಅದ್ವಿತೀಯ ಆನಂದ ರೂಪನು. ಆದುದರಿಂದ ಇವನು ಅಂತರ್ಯಾಮಿಯಾದ ಆತ್ಮನು.

(ಇದೇ ಅಖಂಡ-ಏಕರಸ ವಾಕ್ಯಾರ್ಥವು).

—ಇದರಿಂದಾಗತಕ್ಕ ಫಲವೇನು? ಎಂದರೆ-

**ಇತ್ಥಮನ್ಯೋನ್ಯತಾದಾತ್ಮ್ಯಪ್ರತಿಪತ್ತಿರ್ಯದಾ ಭವೇತ್ ।**
**ಅಬ್ರಹ್ಮತ್ವಂ ತ್ವಮರ್ಥಸ್ಯ ವ್ಯಾವರ್ತೇತ ತದೈವ ಹಿ ||೭೭||**

**ತದರ್ಥಸ್ಯ ಚ ಪಾರೋಕ್ಷ್ಯಂ ಯದ್ಯೇವಂ ಕಿಂ ತತಃಶೃಣು ।**
**ಪೂರ್ಣಾನಂದೈಕರೂಪೇಣ ಪ್ರತ್ಯಗ್ಬೋಧೋಽವತಿಷ್ಠತೇ॥೭೮॥**

ಹೀಗೆ ಆತ್ಮ-ಪರಮಾತ್ಮರ ಐಕ್ಯವಿರುವದೆಂಬ ಜ್ಞಾನವು ಯಾವಾಗ ಆಗುವದೋ ಆಗಲೇ 'ನೀನು' ಎಂಬ ಶಬ್ದಾರ್ಥವಾದ ಆತ್ಮನಿಗೆ ಭ್ರಾಂತಿಯಿಂದ ಬಂದ ಜೀವಭಾವವಳಿದು ಬ್ರಹ್ಮಭಾವ ಉಂಟಾಗುವದು. ಅದರಂತೆ 'ಅದು' ಎಂಬ ಶಬ್ದಾರ್ಥವಾದ ಬ್ರಹ್ಮದ ಪರೋಕ್ಷತ್ವವೂ ನಾಶವಾಗುವದು. ಹೀಗಾಗುವದರಿಂದ ಲಾಭವೇನು? ಬುದ್ಧಿ ಮೊದಲಾವುಗಳಿಗೆ ಸಾಕ್ಷಿಯಾಗಿರುವ ಆತ್ಮನು ಪೂರ್ಣಾನಂದೈಕ ರೂಪನಾಗಿ ಉಳಿಯುವನು.

—ವೇದವು ಪರೋಕ್ಷ ಜ್ಞಾನಾನುಭವಕ್ಕೆ ಸಾಧನ ಎಂದು ವೇದಲಕ್ಷಣವಿರಲು ಇಲ್ಲಿ ಮಹಾ ವಾಕ್ಯವು ಅಪರೋಕ್ಷ ಜ್ಞಾನವನ್ನು ಹುಟ್ಟಿಸುವುದೆಂಬುದು ಹೇಗೆ ? ಎಂದರೆ ಈ ಸಂಶಯವನ್ನು ಹೊಂದಿದವರಿಗೆ ತಿಳಿವಳಿಕೆಯೇ ಇಲ್ಲವೆಂದು ಅವರು ಉಪಹಾಸ ಮಾಡುತ್ತಾರೆ.

**ಏವಂ ಸತಿ ಮಹಾವಾಕ್ಯಾತ್ಪರೋಕ್ಷಜ್ಞಾನಮೀರ್ಯತೇ ।**
**ಯೈಸ್ತೇಷಾಂ ಶಾಸ್ತ್ರಸಿದ್ಧಾಂತವಿಜ್ಞಾನಂ ಶೋಭತೇ-**
**ತರಾಮ್ ॥೭೯॥**

ಹೀಗಿರುವಾಗ ಮಹಾವಾಕ್ಯದಿಂದ ಪರೋಕ್ಷಜ್ಞಾನವಾಗುವದೆಂದು ಅನ್ನುತ್ತಾರೆ. ಅಹಾ, ಅವರ ಶಾಸ್ತ್ರ ಸಿದ್ಧಾಂತಜ್ಞಾನವು ಬಹಳ ಶೋಭಿಸುತ್ತದೆ.

—ನಿಮ್ಮ ಸಿದ್ಧಾಂತಜ್ಞಾನದ ಮಾತಿರಲಿ. ವಾಕ್ಯದಿಂದ ಪರೋಕ್ಷ ಜ್ಞಾನವಾಗುತ್ತದೆ ಎಂಬುದು ಅನುಮಾನದಿಂದ ಸಿದ್ಧವಾಗುವದು.

**ಆಸ್ತಾಂ ಶಾಸ್ತ್ರಸ್ಯ ಸಿದ್ಧಾಂತೋ ಯುಕ್ತ್ಯಾವಾಕ್ಯಾತ್ಪ-**
**ರೋಕ್ಷಧೀಃ ।**
**ಸ್ವರ್ಗಾದಿವಾಕ್ಯವನ್ನೈವಂ ದಶಮೇ ವ್ಯಭಿಚಾರತಃ ॥೮೦॥**

ಶಾಸ್ತ್ರಸಿದ್ಧಾಂತವಿರಲಿ, ಸ್ವರ್ಗಾದಿ ವಾಕ್ಯಗಳನ್ನು ಹೇಳುವ ವಾಕ್ಯದಂತೆ ಮಹಾವಾಕ್ಯದಿಂದಾದರೂ ಪರೋಕ್ಷಜ್ಞಾನವಾಗುವದು ಎಂದು ಅನುಮಾನದಿಂದ ಸಿದ್ಧವಾಗುವದು. ಹೀಗೆ ಹೇಳುವಧಾದರೆ ಅದು ಸರಿಯಲ್ಲ.

(ಯಾಕಂದರೆ ಎಲ್ಲ ವಾಕ್ಯಗಳಿಗೂ ಈ ನಿಯಮವು ಹತ್ತುವದಿಲ್ಲ.) 'ನೀನೇ ಹತ್ತನೆಯವನಿರುವೆ.' ಎಂಬ ವಾಕ್ಯದಲ್ಲಿ ನಿನ್ನ ಅನುಮಾನವು ಸಡಿಲಾಗುವದು.

(ಯಾಕಂದರೆ- ನೀನೇ ಹತ್ತನೆಯವನು ಎಂದು ಕೇಳಿದಾಗ ಮೊದಲು ಹೇಳಿದ ಆ ಭ್ರಾಂತ ಮನುಷ್ಯನಿಗೆ ತಾನು ಹತ್ತನೆಯವನೆಂಬ ಸಾಕ್ಷಾತ್ಕಾರವಾಗುವದೆಂದು ಹಿಂದೆ ಸಿದ್ಧಮಾಡಿದೆ. ಅಂದರೆ ಪ್ರತ್ಯಕ್ಷಜ್ಞಾನವಾಗುವದೆಂದು ಹೇಳಿದೆ.)

**ಸ್ವತೋಽಪರೋಕ್ಷಜೀವಸ್ಯ ಬ್ರಹ್ಮತ್ವಮಭಿವಾಂಛತಃ ।**
**ನಶ್ಯೇತ್ ಸಿದ್ಧಾಪರೋಕ್ಷತ್ವಮಿತಿ ಯುಕ್ತಿರ್ಮಹತ್ಯಹೋ॥೪೧॥**

ಬ್ರಹ್ಮತ್ವವನ್ನು ಇಚ್ಛಿಸುವವನೂ, ಸ್ವತಃ ಪ್ರತ್ಯಕ್ಷನೂ ಆದ ಜೀವನಿಗೆ ಮೊದಲಿದ್ದ ಪ್ರತ್ಯಕ್ಷವು ಪರೋಕ್ಷಬ್ರಹ್ಮವನ್ನು ಬಯಸಿದ್ದರಿಂದ ನಾಶವಾಯಿತೆಂದು ಹೇಳುವ ಯುಕ್ತಿಯು ಬಹಳ ದೊಡ್ಡದು.

—ಸ್ವತಃ ಪ್ರತ್ಯಕ್ಷನಾದ ಜೀವನು ಪರೋಕ್ಷನಾದುದು ಒಳ್ಳೆಯದೇ ಸರಿ ಎಂದರೆ—

**ವೃದ್ಧಿಮಿಷ್ಟವತೋ ಮೂಲಮಪಿ ನಷ್ಟಮಿತೀದೃಶಮ್ ।**
**ಲೌಕಿಕಮ್ ವಚನಂ ಸಾರ್ಥಂ ಸಂಪನ್ನಂ ತ್ವತ್ಪ್ರಸಾದತಃ ॥೪೨॥**

"ಬಡ್ಡಿಯನ್ನು ಬಯಸುವವನಿಗೆ ಅಸಲಿಗೇ ಮೋಸ ಬಂತು" ಎಂಬ ಗಾದೆಯಮಾತು ನಿನ್ನ ಕೃಪೆಯಿಂದ ಸಾರ್ಥಕವಾದಂತಾಯಿತು.

—ಸೋಪಾಧಿಕನಾದ ಎಂದರೆ ಅಂತಃಕರಣಾದಿಗಳ ಸಂಬಂಧವಿರುವ ಜೀವನು ಪ್ರತ್ಯಕ್ಷವಾಗಿರುವದು ಸರಿ. ನಿರುಪಾಧಿಕ ಎಂದರೆ ಯಾವುದರ ಸಂಬಂಧವೂ ಇಲ್ಲದ ಬ್ರಹ್ಮವು ಅಪರೋಕ್ಷ (ಪ್ರತ್ಯಕ್ಷ)ವಾಗುವದೆಂದರೆ ಹೇಗೆ?

**ಅಂತಃಕರಣಸಂಭಿನ್ನಬೋಧೋ ಜೀವೋಽಪರೋಕ್ಷತಾಮ್ ।**
**ಅರ್ಹತ್ಯುಪಾಧಿಸದ್ಭಾವಾನ್ನ ತು ಬ್ರಹ್ಮಾನುಪಾಧಿತಃ ॥೪೩॥**

ಅಂತಃಕರಣಾದಿ ಉಪಾಧಿಗಳಿರುವದರಿಂದ ಪರಿಚ್ಛಿನ್ನತ್ವವನ್ನು ಹೊಂದಿದ ಜೀವನು ಅಪರೋಕ್ಷನಾಗುವದು ಯೋಗ್ಯ. ಆದರೆ ಬ್ರಹ್ಮವು ಉಪಾಧಿರಹಿತವಾದುದರಿಂದ ಅಪರೋಕ್ಷವಾಗಲು ಯೋಗ್ಯವಲ್ಲ.

—ಬ್ರಹ್ಮವು ನಿರುಪಾಧಿಕವೆಂದು ಸಿದ್ಧವಾಗುವದಿಲ್ಲ.

**ನೈವಂ ಬ್ರಹ್ಮತ್ವಬೋಧಸ್ಯ ಸೋಪಾಧಿವಿಷಯತ್ವತಃ ।**
**ಯಾವದ್ವಿದೇಹಕೈವಲ್ಯಮುಪಾಧೇರನಿವಾರಣಾತ್ ॥೮೪॥**

ಜೀವನಿಗಾಗುವ ಬ್ರಹ್ಮಜ್ಞಾನವು ಸೋಪಾಧಿಕವಿರುವದರಿಂದ, ಮತ್ತು ವಿದೇಹ ಮುಕ್ತಿ ದೊರೆಯುವವರೆಗೆ ಅಂತಃಕರಣವೆಂಬ ಉಪಾಧಿಯು ಹೋಗುವದಿಲ್ಲವಾದುದರಿಂದ ಬ್ರಹ್ಮವು ನಿರುಪಾಧಿಕವೆಂದು ಹೇಳಲಾಗದು.

—ಎಂದರೆ ಜೀವನು ಮತ್ತು ಬ್ರಹ್ಮನು ಇವರಿಬ್ಬರಿಗೆ ಎರಡು ಬೇರೆ ಬೇರೆ ಉಪಾಧಿಗಳೆಂದು ಹೇಳಬೇಕಷ್ಟೇ ?

**ಅಂತಃಕರಣಸಾಹಿತ್ಯರಾಹಿತ್ಯಾಭ್ಯಾಂ ವಿಶಿಷ್ಯತೇ ।**
**ಉಪಾಧಿರ್ಜೀವಭಾವಸ್ಯಬ್ರಹ್ಮತಾಯಾಶ್ಚ ನಾನ್ಯಥಾ ॥೮೫॥**

ಜೀವಭಾವ-ಬ್ರಹ್ಮಭಾವ ಇವುಗಳ ಉಪಾಧಿಯು ಅಂತಃಕರಣದೊಡನೆ ಕೂಡಿಕೊಂಡಿರುವದು, ಅದನ್ನು ಬಿಟ್ಟಿರುವದು ಎಂಬ ಎರಡು ಕಾರಣಗಳಿಂದ ಬೇರೆ ಎನಿಸುತ್ತವೆ. ಮತ್ತೆ ಯಾವದರಿಂದಲೂ ಅಲ್ಲ.

ಅಂತಃಕರಣ ಸಂಬಂಧವು ಭಾವರೂಪವಾದುದರಿಂದ ಅದು ಜೀವನಿಗೆ ಉಪಾಧಿ ಎನಿಸಲಿ. ಆದರೆ ಅಭಾವರೂಪ ಅಂತಃಕರಣವು ಬ್ರಹ್ಮನಿಗೆ ಹೇಗೆ ಉಪಾಧಿಯಾಗುವದು ?

**ಯಥಾವಿಧಿರುಪಾಧಿಃ ಸ್ಯಾತ್ ಪ್ರತಿಷೇಧಸ್ತಥಾ ನ ಕಿಮ್ ।**
**ಸುವರ್ಣಲೋಹಭೇದೇನ ಶೃಂಖಲಾತ್ವಂ ನ ಭಿದ್ಯತೇ ॥೮೬॥**

ಭಾವರೂಪವಾದ ಅಂತಃಕರಣವು ಹೇಗೆ ಉಪಾಧಿ ಎನಿಸುವದೋ, ಆದರಂತೆ ಅಭಾವರೂಪ ಅಂತಃಕರಣ ಉಪಾಧಿಯಾಗಲಾರದೇ ? ಭಂಗಾರದ್ದಾಗಲೀ, ಕಬ್ಬಿಣದ್ದಾಗಲೀ ಬೇಡಿ ಎಂಬುದು ಸುಳ್ಳಾಗಲಾರದಷ್ಟೇ ?

ವಿಧಿ (ಅನ್ವಯ) ನಿಷೇಧ (ವ್ಯತಿರೇಕ) ಗಳೆರಡೂ ಬ್ರಹ್ಮಬೋಧಕ ಉಪಾಯಗಳೆಂದು ಶ್ರೀಮತ್ ಶಂಕರಾಚಾರ್ಯರು ಹೇಳಿದ್ದಾರೆ.

**ಅತದ್ವ್ಯಾವೃತ್ತಿರೂಪೇಣ ಸಾಕ್ಷಾದ್ವಿಧಿಮುಖೇನಚ ।**
**ವೇದಾಂತಾನಾಂ ಪ್ರವೃತ್ತಿಃ ಸ್ಯಾದ್ ದ್ವಿಧೇತ್ಯಾಚಾರ್ಯ-**
**ಭಾಷಿತಮ್ ॥೮೭॥**

ಬ್ರಹ್ಮಕ್ಕಿಂತ ಬೇರೆ ಎನಿಸುವ ದೇಹ ಮೊದಲಾಗಿ ಎಲ್ಲ ಜಗತ್ತನ್ನು ಇದಲ್ಲ ಇದಲ್ಲವೆಂದು ಬೇರ್ಪಡಿಸುವದರಿಂದ, ಬ್ರಹ್ಮವು ಸತ್ಯ ಜ್ಞಾನಾನಂತ ರೂಪವೆಂದು ಇರುವದನ್ನು ಹೇಳುವ ದಾರಿಯಿಂದ— ಹೀಗೆ ವೇದಾಂತವು ಎರಡು ದಾರಿಗಳಿಂದ ಸಾಗುತ್ತದೆ ಎಂದು ಆಚಾರ್ಯರು ಹೇಳುತ್ತಾರೆ.

ವೇದಾಂತ–ಉಪನಿಷತ್ತುಗಳು ಅಲ್ಲಗಳೆಯುವಿಕೆ (ಅತದ್ವ್ಯಾವೃತ್ತಿ ರೂಪ) ಯಿಂದ ಬ್ರಹ್ಮವನ್ನು ಬೋಧಿಸುತ್ತವೆಂದರೆ "ಅಹಂ" ಶಬ್ದದ ಅರ್ಥ ವಾದ ಕೂಟಸ್ಥನನ್ನು ಕೂಡ ಅಲ್ಲಗಳೆಯಬೇಕಾಗುತ್ತದೆ. ಯಾಕಂದರೆ ಅವನು ಬ್ರಹ್ಮನಿಂದ ಭಿನ್ನ ಪದಾರ್ಥ. ಹೀಗೆ ಅಲ್ಲಗಳೆದಮೇಲೆ 'ಅಹಂ ಬ್ರಹ್ಮಾಸ್ಮಿ' ಎಂದು ಸಾಮಾನಾಧಿಕರಣದಿಂದ ಜ್ಞಾನವಾಗುವದು ಶಕ್ಯವಿಲ್ಲ.

**ಅಹಮರ್ಥಪರಿತ್ಯಾಗಾದಹಂ ಬ್ರಹ್ಮೇತಿ ಧೀಃ ಕುತಃ ।**
**ನೈವಮಂಶಸ್ಯ ಹಿ ತ್ಯಾಗೋ ಭಾಗಲಕ್ಷಣಯೋದಿತಃ ॥೮೮॥**

'ಅಹಂ' ಎಂಬ ಶಬ್ದದ ಅರ್ಥವಾದ ಕೂಟಸ್ಥನನ್ನು ತ್ಯಾಗಮಾಡಿದ ಮೇಲೆ 'ಅಹಂ ಬ್ರಹ್ಮ' ಎಂಬ ಜ್ಞಾನವು ಹೇಗೆ ? ಎಂದರೆ ನೀನೆಂದುದು ಸರಿಯಲ್ಲ. ಆದುದರಿಂದ ಭಾಗಲಕ್ಷಣಾವೃತ್ತಿಯನ್ನು ಸ್ವೀಕರಿಸಿ ಜಡಾಂಶ ಗಳನ್ನು ತ್ಯಾಗಮಾಡಬೇಕು. (ಕೂಟಸ್ಥನಲ್ಲ) ಎಂದು ಮೊದಲೇ ಹೇಳಿದೆ.

—'ಅಹಂ' ಶಬ್ದದಲ್ಲಿಯ ಜಡಾಂಶಗಳನ್ನು ಬಿಡಲು ಬೋಧವು ಹೇಗಾ ಗುವದೆಂದು ಇಲ್ಲಿ ತೋರಿಸುತ್ತಾರೆ.

**ಅಂತಃಕರಣಸಂತ್ಯಾಗಾದವಶಿಷ್ಟೇ ಚಿದಾತ್ಮನಿ ।**
**ಅಹಂ ಬ್ರಹ್ಮೇತಿ ವಾಕ್ಯೇನ ಬ್ರಹ್ಮತ್ವಂ ಸಾಕ್ಷಿಣೀಕ್ಷ್ಯತೇ ॥೮೯॥**

ಅಂತಃಕರಣವನ್ನು ಸಂಪೂರ್ಣವಾಗಿ ಬೇರ್ಪಡಿಸಿದಮೇಲೆ ಉಳಿದಿರುವ ಸಾಕ್ಷಿಯಾದ ಚಿದಾತ್ಮನಲ್ಲಿ "ನಾನು ಬ್ರಹ್ಮ"ವೆಂಬ ಮಹಾವಾಕ್ಯದಿಂದ ಬ್ರಹ್ಮತ್ವವನ್ನು ಅನುಭವದಿಂದ ಕಾಣಬಹುದು.

—ಪ್ರತ್ಯಗಾತ್ಮನು ತನ್ನ ಬೆಳಕಿನಿಂದ ಬೆಳಗುವವನಾದುದರಿಂದ ಅವ ನನ್ನು ತಿಳಿಯುವದು ಬುದ್ಧಿವೃತ್ತಿಯಿಂದ ಸಾಧ್ಯವಿಲ್ಲ ಎಂದರೆ—

**ಸ್ವಪ್ರಕಾಶೋಽಪಿ ಸಾಕ್ಷ್ಯೇವ ಧೀವೃತ್ತ್ಯಾ ವ್ಯಾಪ್ಯತೇಽನ್ಯವತ್ ।**
**ಫಲವ್ಯಾಪ್ಯತ್ವಮೇವಾಸ್ಯ ಶಾಸ್ತ್ರಕೃದ್ಭಿರ್ನಿವಾರಿತಮ್ ॥೯೦॥**

ಸಾಕ್ಷಿಯು ತನ್ನ ಬೆಳಕಿನಿಂದ ಬೆಳಗುವವನಾದರೂ ಘಟಾದಿ ಬೇರೆ ಪದಾರ್ಥಗಳಂತೆ ಬುದ್ಧಿವೃತ್ತಿಗೆ ಒಳಪಡುವನು. ಶಾಸ್ತ್ರಕಾರರು ಅವನು ಮತ್ತೊಂದು ಪ್ರಕಾಶದಿಂದ ತಿಳಿಯುವಂಥವನಲ್ಲವೆಂದು (ಎಂದರೆ ಬುದ್ಧಿವೃತ್ತಿಯಲ್ಲಿ ಪ್ರತಿಬಿಂಬಿಸಿದ ಚಿದಾಭಾಸನಿಂದ) ಮಾತ್ರ ಹೇಳಿರುವರಲ್ಲದೇ ಬುದ್ಧಿವೃತ್ತಿಯಿಂದ ತಿಳಿಯುವಂಥವನಲ್ಲವೆಂದು ಹೇಳಿಲ್ಲ.

ಆತ್ಮನಲ್ಲಿ ಫಲವ್ಯಾಪ್ತಿ ಇಲ್ಲ. (ಎಂದರೆ ಚಿದಾಭಾಸನು ಅವನನ್ನು ವ್ಯಾಪಿಸುವಂತಿಲ್ಲ.) ಎಂಬುದನ್ನು ತೋರಿಸಲು ಅನಾತ್ಮ ಪದಾರ್ಥದಲ್ಲಿ ಬುದ್ಧಿವೃತ್ತಿ ವ್ಯಾಪ್ಯತ್ವವೂ, ಫಲ (=ಚಿದಾಭಾಸ) ವ್ಯಾಪ್ಯತ್ವವೂ ಇರುವವು ಎಂದು ಹೇಳುತ್ತಾರೆ.

**ಬುದ್ಧಿತತ್‌ಸ್ಥಚಿದಾಭಾಸೌ ದ್ವಾವಪಿ ವ್ಯಾಪ್ನುತೋ ಘಟಮ್ ।**
**ತತ್ರಾಜ್ಞಾನಂ ಧಿಯಾ ನಶ್ಯೇದಾಭಾಸೇನ ಘಟಃಸ್ಫುರೇತ್ ॥೯೧॥**

ಬುದ್ಧಿವೃತ್ತಿಯೂ ಅದರೊಳಗೆ ಪ್ರತಿಬಿಂಬಿಸಿದ ಚಿದಾಭಾಸನೂ ಘಟವನ್ನು ವ್ಯಾಪಿಸುವವು. ಪ್ರಮಾಣಭೂತವಾದ ಬುದ್ಧಿವೃತ್ತಿಯು "ಘಟವನ್ನರಿಯೆ"ನೆಂಬ ಆವರಣವನ್ನು ಭಂಗಗೊಳಿಸುವದು. ಘಟವು ತನ್ನ ಬೆಳಕಿನಿಂದ ಬೆಳಗಲಾರದ ಜಡವಾದುದರಿಂದ "ಇದು ಘಟ"ವೆಂದು ಚಿದಾಭಾಸನು ಬೆಳಗುವನು.

(ಆದುದರಿಂದ ಯಾವದೇ ಒಂದು ಜಡಪದಾರ್ಥದ ಜ್ಞಾನವಾಗಬೇಕಾದರೆ ಬುದ್ಧಿವೃತ್ತಿಯ ಹಾಗು ಚಿದಾಭಾಸರ ಅವಶ್ಯಕತೆ ಇರುವದೆಂದಂತಾಯಿತು.)

—ಆದರೆ ಆತ್ಮನ ವಿಷಯದಲ್ಲಿ ಇದಕ್ಕಿಂತ ಬೇರೆ ಸ್ಥಿತಿಯುಂಟೆನ್ನುತ್ತಾರೆ.

**ಬ್ರಹ್ಮಣ್ಯಜ್ಞಾನನಾಶಾಯ ವೃತ್ತಿವ್ಯಾಪ್ತಿರಪೇಕ್ಷಿತಾ ।**
**ಸ್ವಯಂಸ್ಫುರಣರೂಪತ್ವಾನ್ನಾಭಾಸಉಪಯುಜ್ಯತೇ ॥೯೨॥**

ಬ್ರಹ್ಮ ಮತ್ತು ಪ್ರತ್ಯಗಾತ್ಮರ ಐಕ್ಯರೂಪದ ಅಜ್ಞಾನನಾಶಕ್ಕಾಗಿ ಬುದ್ಧಿವೃತ್ತಿಯು ಬ್ರಹ್ಮವನ್ನು ವ್ಯಾಪಿಸಲೇಬೇಕು ಎಂದರೆ ಅದರ ಅವಶ್ಯಕತೆಯುಂಟು ಎಂದು ಅರ್ಥ. ಆದರೆ ಬ್ರಹ್ಮವು ತನ್ನ ಬೆಳಕಿನಿಂದ ಬೆಳಗುವದಾದುದರಿಂದ ಅಲ್ಲಿ ಚಿದಾಭಾಸನ ಉಪಯೋಗವಿಲ್ಲ.

— ಇದನ್ನೇ ದೃಷ್ಟಾಂತದಿಂದ ಬಿಚ್ಚಿ ಹೇಳುತ್ತಾರೆ.

**ಚಕ್ಷುರ್ದೀಪಾವಪೇಕ್ಷ್ಯೇತೇ ಘಟಾದೇರ್ದರ್ಶನೇ ಯಥಾ ।**
**ನ ದೀಪದರ್ಶನೇ ಕಿಂ ತು ಚಕ್ಷುರೇಕಮಪೇಕ್ಷ್ಯತೇ ॥೯೩॥**

ಘಟ ಮೊದಲಾದವನ್ನು ನೋಡಬೇಕಾದರೆ ಕಣ್ಣು ಮತ್ತು ದೀಪ ಇವೆರಡೂ ಪದಾರ್ಥಗಳು ಬೇಕು. ಬೆಳಗುತ್ತಿರುವ ದೀಪವನ್ನು ನೋಡಬೇಕಾದರೆ ಹಾಗಲ್ಲ. ಕಣ್ಣೊಂದು ಸಾಕು.

–ಬುದ್ಧಿ ಮತ್ತು ಅದರ ವೃತ್ತಿಗಳಲ್ಲಿ ಚಿದಾಭಾಸನು ಸ್ವಾಭಾವಿಕವಾಗಿ ಇದ್ದೇಇರುತ್ತಾನೆ. ಆದುದರಿಂದ ಘಟಾದಿ ಪದಾರ್ಥಗಳಂತೆ ಬ್ರಹ್ಮದಲ್ಲಿಯೂ ಫಲವ್ಯಾಪ್ತಿಯು ಅವಶ್ಯವಾಗುವದು. ಅದನ್ನು ತೆಗೆದುಹಾಕುವದುಸಾಧ್ಯವಿಲ್ಲ.

**ಸ್ಥಿತೋಽಪ್ಯಸೌ ಚಿದಾಭಾಸೋ ಬ್ರಹ್ಮಣ್ಯೇಕೀಭವೇತ್ಪರಮ್ ।**
**ನತು ಬ್ರಹ್ಮಣ್ಯತಿಶಯಂ ಫಲಂಕುರ್ಯಾದ್ಘಟಾದಿವತ್ ॥೯೪॥**

ಬುದ್ಧಿವೃತ್ತಿಯಲ್ಲಿ ಚಿದಾಭಾಸನು ವ್ಯಾಪಿಸಿದ್ದರೂ ಅವನು ಬ್ರಹ್ಮನಲ್ಲಿ ಕೂಡಿ ಬೆರೆತು ಹೋಗುವನು. "ಅವನು ಘಟವೇ ಮೊದಲಾದ ಪದಾರ್ಥಗಳನ್ನು ಬೆಳಗಿದಂತೆ ಬ್ರಹ್ಮನಲ್ಲಿ ಅತಿಶಯವೆಂಬ ಫಲವನ್ನು ಎಂದರೆ ಬ್ರಹ್ಮವನ್ನು ಬೆಳಗುವ ಕಾರ್ಯವನ್ನು ಮಾಡಲಾರನು.

(ನಡುಹಗಲಿನ ಬಿರುಬಿಸಲಿನಲ್ಲಿರುವ ದೀಪವು ತನ್ನ ಬೆಳಕನ್ನು ಬೇರೆ ಮಾಡಿ ತೋರಿಸಲಾರದು. ಆ ಬಿಸಿಲ ಬೆಳಕಿನಲ್ಲಿ ಅದು ಒಂದಾಗಿ ತೋರುವದು. ಹಾಗೆಯೇ ಚಿದಾಭಾಸನ ಗತಿ ಎಂದು ತಿಳಿಯಬೇಕು.)

—ಬ್ರಹ್ಮನಲ್ಲಿ ಫಲ ವ್ಯಾಪ್ತಿ ಇಲ್ಲ. ವೃತ್ತಿ ವ್ಯಾಪ್ತಿ ಮಾತ್ರವಿದೆ. ಎಂಬುದಕ್ಕೆ ಪ್ರಮಾಣ ?

**ಅಪ್ರಮೇಯಮನಾದಿಂ ಚೇತ್ಯತ್ರ ಶ್ರುತ್ಯೇದಮೀರಿತಮ್ ।**
**ಮನಸೈವೇದಮಾಪ್ತವ್ಯಮಿತಿ ಧೀವ್ಯಾಪ್ಯತಾ ಶ್ರುತಾ ॥೯೫॥**

"ಅವನು ಅಪ್ರಮೇಯನೂ, ಅನಾದಿಯೂ ಆಗಿದ್ದಾನೆ." ಎಂಬಲ್ಲಿ ಶ್ರುತಿಯು ಅವನಲ್ಲಿ ಫಲವ್ಯಾಪ್ತಿ ಇಲ್ಲವೆಂದು ಹೇಳಿದೆ. ಮತ್ತು ಮನಸ್ಸಿನಿಂದ ಅವನನ್ನು ಅರಿಯಲು ಸಾಧ್ಯವಿದೆ ಎಂದೂ ಶ್ರುತಿಯಲ್ಲಿದೆ.

(ಮೊದಲ ವಾಕ್ಯ ಅಮೃತಬಿಂದೂಪನಿಷತ್ತಿನಲ್ಲಿದೆ. ಎರಡನೆಯ ವಾಕ್ಯ ಕಠೋಪನಿಷತ್ತಿನಲ್ಲಿದೆ.)

—'ಆತ್ಮಾನಂಚೇತ್', ಎಂಬ ಮಂತ್ರದಿಂದ ಅಪರೋಕ್ಷಜ್ಞಾನ ಮತ್ತು ಶೋಕ ನಿವೃತ್ತಿಗಳೆಂಬ ಎರಡು ಜೀವನ ಅವಸ್ಥೆಗಳನ್ನು ಹೇಳಿತು. ಎಂದು ಹಿಂದೆ ೪೮ನೇ ಶ್ಲೋಕದಲ್ಲಿ ಹೇಳಿದೆ. ಆದರೆ ಈಗ ಆ ಮಂತ್ರದ ಎಷ್ಟುಭಾಗ ದಿಂದ ಅಪರೋಕ್ಷಜ್ಞಾನವನ್ನು ಹೇಳಿದೆ ಎಂದು ತಿಳಿಸುತ್ತಾರೆ.

**ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ವಾಕ್ಯತಃ ।**
**ಬ್ರಹ್ಮಾತ್ಮವ್ಯಕ್ತಿಮುಲ್ಲಿಖ್ಯ ಯೋ ಬೋಧಃ ಸೋಽಭಿ ಧೀಯತೇ ॥೯೬॥**

ಆತ್ಮಾನಂ... ... ಅಸ್ಮಿ. ಎಂಬ ವಾಕ್ಯದಿಂದ ಸತ್ಯಜ್ಞಾನಾದಿ ಲಕ್ಷಣ ಗಳುಳ್ಳ ಬ್ರಹ್ಮವೇ ಆತ್ಮನು ಎಂದು ಆತ್ಮಸ್ವರೂಪವು ತಿಳಿದು ಯಾವ ಬೋಧವು ಹುಟ್ಟುವದೋ ಅದೇ ಈ ವಾಕ್ಯದಲ್ಲಿ ಹೇಳಿದೆ.

—ನೀವಂದಂತೆ ಒಮ್ಮೆ ಮಹಾವಾಕ್ಯದ ವಿಚಾರ ಮಾಡಿಬಿಟ್ಟರೆ ಆಯಿತು. ಅಪರೋಕ್ಷಜ್ಞಾನವಾಗುವದು. ಎಂದರೆ ಬಾದರಾಯಣರು ಹೇಳಿದ "ಆವೃತ್ತಿರಸಕೃದುಪದೇಶಾತ್", ಬ್ರಹ್ಮಸೂ. ಈ ಉಪದೇಶದಂತೆ ನಡೆಯುವ ಕಾರಣವಿಲ್ಲವೆಂದಹಾಗಾಯಿತು.

**ಅಸ್ತು ಬೋಧೋಽಪರೋಕ್ಷೋಽತ್ರ ಮಹಾವಾಕ್ಯಾತ್ತಥಾಽಪ್ಯಸೌ ।**
**ನ ದೃಢಃ ಶ್ರವಣಾದೀನಾಮಾಚಾರ್ಯೈಃ ಪುನರೀರಣಾತ್॥೯೭॥**

ಈ ಬ್ರಹ್ಮ ಮತ್ತು ಆತ್ಮ ವಿಷಯದಲ್ಲಿ ಮಹಾವಾಕ್ಯದಿಂದ ಅಪರೋಕ್ಷ ಜ್ಞಾನವಾಗಬಹುದು. ಆದರೂ ಅದು ದೃಢವಾಗಲಾರದು. ಆದುದರಿಂದ ಆಚಾರ್ಯರು ವಾಕ್ಯಶ್ರವಣಾದಿಗಳನ್ನು ಮತ್ತೆ ಮತ್ತೆ ಮಾಡುತ್ತಿರಬೇಕೆಂದು ವಿಧಿಸಿರುವರು.

ಶ್ರೀಮತ್ ಶಂಕರಾಚಾರ್ಯರು ಹೀಗೆ ಎಲ್ಲಿ ವಿಧಾನ ಮಾಡಿರುವರೆಂದು ತೋರಿಸಲು ಬೃಹದ್ವಾಕ್ಯವೃತ್ತಿಯಲ್ಲಿ ಒಂದು ವಚನವನ್ನು ಇಲ್ಲಿ ಕೊಡುತ್ತಾರೆ.

**ಅಹಂಬ್ರಹ್ಮೇತಿ ವಾಕ್ಯಾರ್ಥಬೋಧೋ ಯಾವದ್ದೃಢೀ ಭವೇತ್ ।**
**ಶಮಾದಿಸಹಿತಸ್ತಾವದಭ್ಯಸೇತ್ ಶ್ರವಣಾದಿಕಮ್ ॥೯೮॥**

'ನಾನು ಬ್ರಹ್ಮನಿದ್ದೇನೆ' ಎಂದು ವಾಕ್ಯಾರ್ಥವು ದೃಢವಾಗುವವರೆಗೆ ಸಾಧಕನು ಶಮ-ದಮಾದಿಗಳಿಂದ ಯುಕ್ತನಾಗಿ ಶ್ರವಣಾದಿಗಳ ಅಭ್ಯಾಸವನ್ನು ಮಾಡುತ್ತಿರಬೇಕು.

—ಶ್ರುತಿವಾಕ್ಯರೂಪವಾದ ಪ್ರಮಾಣದಿಂದ ಹುಟ್ಟಿದ ಜ್ಞಾನವು ಅದೇಕೆ ದೃಢವಾಗುವದಿಲ್ಲ ?

**ಬಾಧಂ ಸಂತಿ ಹ್ಯದಾರ್ಢ್ಯಸ್ಯ ಹೇತವಃ ಶ್ರುತ್ಯನೇಕತಾ ।**
**ಅಸಂಭಾವ್ಯತ್ವಮರ್ಥಸ್ಯ ವಿಪರೀತಾ ಚ ಭಾವನಾ ॥೯೯॥**

ಶ್ರುತಿಗಳ ಅನೇಕತ್ವ, ಅದರ ಅರ್ಥದ ಅಸಂಭಾವನೆ ಮತ್ತು ವಿಪರೀತ ಭಾವನೆ ಇವೆಲ್ಲ ಜ್ಞಾನವು ದೃಢವಾಗದಿರುವದಕ್ಕೆ ನಿಸ್ಸಂಶಯ ಕಾರಣಗಳು.

(ಬೇರೆ ಬೇರೆ ಅರ್ಥ ಹೇಳುವ ಅನೇಕ ಶ್ರುತಿಗಳಿರುವದರಿಂದ ಜೀವ-ಬ್ರಹ್ಮೈಕ್ಯ ವಿಷಯದಲ್ಲಿ ಶ್ರುತಿಗಳು ಪ್ರಮಾಣವಾಗಲಾರವೆಂಬ ಪ್ರಮಾಣದ ಅಸಂಭಾವನೆ ಒಂದು. ಅಖಂಡೈಕ ರಸವಾದ ಬ್ರಹ್ಮಸ್ವರೂಪವು ಲೋಕದ ಎಲ್ಲ ವಸ್ತುಗಳಿಗಿಂತ ತೀರ ಬೇರೆ ಬಗೆಯದಾಗಿರುವದು ಎಂಬ ಭಾವನೆ ಇಲ್ಲದಿರುವದು ಪ್ರಮೇಯ ವಿಷಯದಲ್ಲಿ ಅಸಂಭಾವನೆ ಎರಡು. ನಾನು ಕರ್ತೃ-ಭೋಕ್ತೃವೆಂಬ ಅಭಿಮಾನವು ಮತ್ತೆ ಮತ್ತೆ ತಲೆ ಎತ್ತುತ್ತಿರುವದು ವಿಪರೀತ ಭಾವನೆ ಮೂರು. ಹೀಗೆಲ್ಲ ಅನೇಕ ಕಾರಣಗಳು ಜ್ಞಾನವು ದೃಢವಾಗದಿರುವದಕ್ಕೆ ಕಂಡು ಬರುವವು. ಇವುಗಳಲ್ಲಿ ಮೊದಲನೆಯ ಅಡ್ಡಿಯನ್ನು ನಿವಾರಿಸುವದಕ್ಕೆ ಶ್ರವಣಾದಿಗಳ ಆವೃತ್ತಿಯನ್ನು ಮಾಡಬೇಕು.)

**ಶಾಖಾಭೇದಾತ್ ಕಾಮಭೇದಾತ್ ಶ್ರುತಂ ಕರ್ಮಾನ್ಯಥಾನ್ಯಥಾ ।**
**ಏವಮತ್ರಾಪಿ ಮಾ ಶಂಕೀತ್ಯತಃ ಶ್ರವಣಮಾಚರೇತ್ ॥೧೦೦॥**

ವೇದದ ಬೇರೆ ಬೇರೆ ಶಾಖೆಗಳಿಂದ ನೋಡಿದರೆ ಹಾಗೂ ಕಾಮನಾ ಭೇದಗಳಿಂದ ನೋಡಿದರೆ ಒಂದೊಂದಕ್ಕೂ ಬೇರೆ ಬೇರೆ ಕರ್ಮಗಳಿರುವವೆಂದು ಹೇಳಿದೆ. ಅದರಂತೆ ಇಲ್ಲಿಯೂ ಇರುವದೆಂದು ಸಂದೇಹ ತಾಳುವದು ಬೇಡ. ಆದುದರಿಂದ ಶ್ರವಣದ ಆವೃತ್ತಿಯನ್ನು ಮಾಡಬೇಕು.

(ಋಕ್ ಶಾಖೆಯಿಂದ ಯಜ್ಞದಲ್ಲಿ ಹೋತೃವಿನಿಂದಾಗುವ ಕರ್ಮವು ಹೌತ್ರವೆನಿಸುವದು. ಯಜುಃಶಾಖೆಯಿಂದ ಆಗುವ ಅಧ್ವರ್ಯುವಿನ ಕರ್ಮವು

ಆಧ್ವರ್ಯವೆನಿಸುವದು. ಸಾಮವೇದದಿಂದಾಗುವ ಉದ್ಗಾತೃವಿನ ಕರ್ಮವು ಔದ್ಗಾತ್ರವೆನಿಸುವದು. ಇನ್ನು ಕಾಮನಾಭೇದದಿಂದ ಮಳೆಯನ್ನು ಬಯಸಿ ಮಾಡುವದು 'ಕಾರೀರಿ' ಎಂಬ ಯಜ್ಞ. ಅನೇಕ ಪಶುಗಳ ಬಯಕೆಯಿಂದ ಮಾಡಬೇಕಾದುದು. "ಚಿತ್ರೇಷ್ಟಿ". ಆಯುಷ್ಯಾಭಿವೃದ್ಧಿಗೆ ಮಾಡಬೇಕಾದುದು "ಶತಕೃಷ್ಣಲ" ವೆಂಬ ಯಜ್ಞ. ಇದರಂತೆಯೇ ಉಪನಿಷತ್ತಿನಲ್ಲಿಯೂ ಪ್ರತಿಪಾದಿಸಿದ ತತ್ವವು ಬೇರೆ ಬೇರೆ ಎನ್ನುವ ಸಂದೇಹ ನಿವಾರಣೆಗೆ ಮತ್ತೆ ಮತ್ತೆ ಶ್ರವಣ ಮಾಡಬೇಕು.)

—ಒಳ್ಳೇದು, ಶ್ರವಣವೆಂದರೇನು ?

**ವೇದಾಂತಾನಾಮಶೇಷಾಣಾಮಾದಿಮಧ್ಯಾವಸಾನತಃ ।**
**ಬ್ರಹ್ಮಾತ್ಮನ್ಯೇವ ತಾತ್ಪರ್ಯಮಿತಿ ಧೀಃ ಶ್ರವಣಂ-**
**ಭವೇತ್ ॥೧೦೧॥**

ಎಲ್ಲ ಉಪನಿಷತ್ತುಗಳ ಮೊದಲು-ಮಧ್ಯ-ಕೊನೆ (ಉಪಕ್ರಮೋಪಸಂಹಾರ) ಗಳನ್ನು ವಿಚಾರಮಾಡಿ ನೋಡಿದರೆ ಎಲ್ಲ ಉಪನಿಷತ್ತುಗಳು ಬ್ರಹ್ಮರೂಪನಾದ ಆತ್ಮನನ್ನು ಹೇಳುವದಕ್ಕೇ ಯತ್ನ ಮಾಡಿವೆ ಎಂಬ ಬುದ್ಧಿಯುಂಟಾಗುವದೇ ಶ್ರವಣವೆನಿಸುವದು.

—ಇಂಥ ಶ್ರವಣವನ್ನು ಎಲ್ಲಿ ಹೇಳಿದೆ ?

**ಸಮನ್ವಯಾಧ್ಯಾಯ ಏತತ್ಸೂಕ್ತಂ ಧೀಸ್ವಾಸ್ಥ್ಯಕಾರಿಭಿಃ ।**
**ತರ್ಕೈಃ ಸಂಭಾವನಾಽರ್ಥಸ್ಯ ದ್ವಿತೀಯಾಧ್ಯಾಯ ಈರಿತಾ ॥೧೦೨॥**

ಇದು ಉತ್ತರಮೀಮಾಂಸೆಯ (ಎಂದರೆ ಬ್ರಹ್ಮಸೂತ್ರದ) "ಸಮನ್ವಯ" ವೆಂಬ ಮೊದಲನೆಯ ಅಧ್ಯಾಯದಲ್ಲಿ ಚೆನ್ನಾಗಿ ವರ್ಣಿತವಾಗಿದೆ. ಎರಡನೆಯ ಅಧ್ಯಾಯದಲ್ಲಿ ಬುದ್ಧಿಯನ್ನು ಸಮಾಧಾನಗೊಳಿಸುವ ತರ್ಕಗಳಿಂದ ಬ್ರಹ್ಮವನ್ನು ಸಿದ್ಧಮಾಡಲಾಗಿದೆ.

—ಮುಂದಿನ ಎರಡು ಶ್ಲೋಕಗಳಿಂದ ವಿಪರೀತ ಭಾವನೆಗಳನ್ನು ಹೇಳಿ ನಿವಾರಿಸುವ ಉಪಾಯ ಹೇಳುತ್ತಾರೆ.

**ಬಹುಜನ್ಮದೃಢಾಭ್ಯಾಸಾದ್ದೇಹಾದಿಷ್ವಾತ್ಮಧೀಃ ಕ್ಷಣಾತ್ ।**
**ಪುನಃ ಪುನರುದೇತ್ಯೇವಂ ಜಗತ್ಸತ್ಯತ್ವಧೀರಪಿ ॥೧೦೩॥**

ಅನೇಕ ಜನ್ಮಗಳಲ್ಲಿಯ ಬಲವಾದ ಅಭ್ಯಾಸದ ಮೂಲಕ ದೇಹ ಮೊದಲಾದವುಗಳಲ್ಲಿ ತಟ್ಟನೆ ಆತ್ಮಬುದ್ಧಿಯು ಹುಟ್ಟುವದು. ಅದರಂತೆ ಜಗತ್ತು ಸತ್ಯವಾಗಿದೆ ಎಂಬ ಬುದ್ಧಿಯು ಮತ್ತೆ ಮತ್ತೆ ಕಾಣಿಸಿಕೊಳ್ಳುವದು.

**ವಿಪರೀತಾ ಭಾವನೇಯಮೈಕಾಗ್ರ್ಯಾತ್ ಸಾ ನಿವರ್ತತೇ ।**
**ತತ್ತ್ವೋಪದೇಶಾತ್ ಪ್ರಾಗೇವ ಭವತ್ಯೇತದುಪಾಸನಾತ್ ॥೧೦೪॥**

ಇದೇ ವಿಪರೀತ ಭಾವನೆಯು. ಇದು ಬ್ರಹ್ಮದ ಕಡೆಗೆ ಮನಸ್ಸು ಒಮ್ಮುಖ (ಏಕಾಗ್ರ್ಯ)ವಾಗುವದರಿಂದ ಹಿಮ್ಮೆಟ್ಟುವದು. ತತ್ತ್ವೋಪದೇಶದ ಪೂರ್ವದಲ್ಲಿಯೂ ಈ ಏಕಾಗ್ರತೆಯು ಸಗುಣೋಪಾಸನೆಯಿಂದ ಹುಟ್ಟಬಲ್ಲದು.

—ಇದೆಲ್ಲ ನಿಮಗೆ ತಿಳಿದ ಬಗೆ ?

**ಉಪಾಸ್ತಯೋಽತ ಏವಾತ್ರ ಬ್ರಹ್ಮಶಾಸ್ತ್ರೇಽಪಿ ಚಿಂತಿತಾಃ ।**
**ಪ್ರಾಗನಭ್ಯಾಸಿನಃ ಪಶ್ಚಾದ್ ಬ್ರಹ್ಮಾಭ್ಯಾಸೇನ ತದ್ಭವೇತ್ ॥೧೦೫॥**

ಈ ಕಾರಣಕ್ಕಾಗಿಯೇ ನಿರ್ಗುಣ ಬ್ರಹ್ಮ ಶಾಸ್ತ್ರದಲ್ಲಿ ಕೂಡ ಉಪಾಸನೆಯ ವಿಚಾರಗಳು ಬಂದಿರುವವು. ಮೊದಲೇ ಏಕಾಗ್ರತೆಯ ಅಭ್ಯಾಸ ಮಾಡಿಕೊಳ್ಳದವರಿಗೆ, ಹಿಂದಿನಿಂದ ಬ್ರಹ್ಮಾಭ್ಯಾಸಕಾಲದಲ್ಲಿ ಇದು ಸಾಧಿಸುವದು.

—ಬ್ರಹ್ಮಾಭ್ಯಾಸದ ಸ್ವರೂಪ.

**ತಚ್ಚಿಂತನಂ ತತ್ಕಥನಮನ್ಯೋನ್ಯಂ ತತ್ಪ್ರಬೋಧನಮ್ ।**
**ಏತದೇಕಪರತ್ವಂ ಚ ಬ್ರಹ್ಮಾಭ್ಯಾಸಂ ವಿದುರ್ಬುಧಾಃ ॥೧೦೬॥**

ಬ್ರಹ್ಮವೇ ನಾನೆಂದು ಚಿಂತಿಸುವದು, ಸಜ್ಜನರಿಗೆ ಅದನ್ನು ಹೇಳುವದು, ಅದರ ವಿಷಯವನ್ನೇ ಒಬ್ಬರಿಂದೊಬ್ಬರು ತಿಳಿಯುವದು ಮತ್ತು ಅಂತರಾತ್ಮನಲ್ಲಿಯೇ ಬೆರೆತುಕೊಂಡಿರುವದು. ಇದಕ್ಕೆ ಬ್ರಹ್ಮಾಭ್ಯಾಸವೆಂದು ಪಂಡಿತರು ಹೇಳುವರು.

—ಬ್ರಹ್ಮನಲ್ಲಿಯೇ ಬೆರೆತಿರುವದು ಹೇಗೆ ? ಎಂದರೆ ಶ್ರುತಿಯನ್ನು ಅನುವಾದಿಸುತ್ತಾರೆ.

**ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ ।**
**ನಾನುಧ್ಯಾಯಾದ್ಬಹೂನ್ ಶಬ್ದಾನ್ ವಾಚೋ ವಿಗ್ಲಾಪನಂ ಹಿ ತತ್ ॥೧೦೭॥**

ಬುದ್ಧಿವಂತನಾದ ಬ್ರಾಹ್ಮಣನು ತನ್ನೊಳಗಿನ ಆತ್ಮನನ್ನು ತಿಳಿದುಕೊಂಡು ಅವನಲ್ಲಿ ಏಕಾಗ್ರತೆಯನ್ನು ಸಾಧಿಸಿಕೊಳ್ಳಬೇಕು. ಬಹಳಶಬ್ದಗಳನ್ನು ಪಠಿಸಬಾರದು. ಅದು ವಾಣಿಗೆ ಬರೀ ಆಯಾಸ ಮಾತ್ರ.

(ಧೀರಃ- ಬ್ರಹ್ಮಚರ್ಯಾದಿ ಸಾಧನ ಸಂಪನ್ನ ಬ್ರಾಹ್ಮಣಃ–ಬ್ರಹ್ಮವಾಗಬೇಕೆಂದು ಬಯಸುವ ಮುಮುಕ್ಷು.)

—ಹೀಗೆ ಏಕಾಗ್ರತೆಯನ್ನು ಪ್ರತಿಪಾದಿಸುವ ಶ್ರುತಿಯನ್ನು ಹೇಳಿ ಸ್ಮೃತಿಯನ್ನು ಹೇಳುತ್ತಾರೆ.

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾ**
**ಮ್ಯಹಮ್ ॥೧೦೮॥**

ಮತ್ತೊಂದನ್ನು ಅಪೇಕ್ಷಿಸದೆ ಯಾರು ನನ್ನ ಉಪಾಸನೆಯನ್ನು ಮಾಡುತ್ತಿರುವರೋ ಅವರಿಗೆ ಇಲ್ಲದುದನ್ನು ದೊರಕಿಸುವ, ಇದ್ದುದನ್ನು ಕಾಪಾಡುವ ಭಾರವನ್ನು ನಾನು ಹೊರುತ್ತೇನೆ.

('ಅನನ್ಯಾಃ' ಎಂದರೆ ನಾನು ಬ್ರಹ್ಮವಾಗಿದ್ದೇನೆ ಎಂಬ ತಿಳಿವಳಿಕೆಯನ್ನು ಹೊಂದಿ, ನನ್ನ ರೂಪರೇ ಆಗಿ ಯಾರು ನನ್ನರೂಪರೇ ಆಗಿ ನನ್ನ ಚಿಂತನದಲ್ಲಿದ್ದು ಉಪಾಸನೆಮಾಡುತ್ತಿರುವರೋ ಅಂಥವರ ಯೋಗ–ಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ.)

—ಈ ಶ್ರುತಿ ಸ್ಮೃತಿ ವಚನಗಳ ತಾತ್ಪರ್ಯ

**ಇತಿ ಶ್ರುತಿಸ್ಮೃತೀ ನಿತ್ಯಮಾತ್ಮನ್ಯೇಕಾಗ್ರತಾಂ ಧಿಯಃ ।**
**ವಿಧತ್ತೋ ವಿಪರೀತಾಯಾ ಭಾವನಾಯಾಃ–**
**ಕ್ಷಯಾಯ ಹಿ ॥೧೦೯॥**

ಹೀಗೆ ಶ್ರುತಿ-ಸ್ಮೃತಿಗಳು ವಿಪರೀತ ಭಾವನೆಗಳನ್ನು ನಾಶಗೊಳಿಸುವದಕ್ಕೆ ಆತ್ಮನಲ್ಲಿ ಮನಸ್ಸನ್ನು ಏಕಾಗ್ರಗೊಳಿಸಬೇಕೆಂದು ನಿತ್ಯವಿಧಾನವನ್ನು ಮಾಡುವವು.

—ದೇಹವೇ ನಾನೆಂಬ ಬುದ್ಧಿಗೂ, ಜಗತ್ತು ಸತ್ಯವೆಂಬ ಬುದ್ಧಿಗೂ ವಿಪರೀತ ಭಾವನೆಗಳೆಂದು ಹೇಳಲು ಕಾರಣವೇನು?

**ಯದ್ಯಥಾ ವರ್ತತೇ ಸತ್ಯ ತತ್ವಂ ಹಿತ್ವಾಽನ್ಯಥಾತ್ವಧೀಃ ।**
**ವಿಪರೀತಾ ಭಾವನಾ ಸ್ಯಾತ್ ಪಿತ್ರಾದಾವರಿಧೀ-**
**ರ್ಯಥಾ ॥೧೧೦॥**

ಯಾವುದು ಹೇಗಿರುವದೋ ಆ ತತ್ವವನ್ನು ಬಿಟ್ಟು ಆದರ ವಿಷಯದಲ್ಲಿ ತಪ್ಪು ತಿಳಿವಳಿಕೆ ಕೂಡಿರುವದು ವಿಪರೀತಭಾವನೆ ಹೇಗಂದರೆ ತಂಡೆ-ತಾಯಿ ಮೊದಲಾದವರ ವಿಷಯದಲ್ಲಿ ವೈರತ್ವ ಬುದ್ಧಿಯನ್ನು ತಿಳಿವಂತೆ.

(ಸಿಂಪು-ಹಗ್ಗ ಮೊದಲಾದವುಗಳ ವಿಷಯದಲ್ಲಿ ಬೆಳ್ಳಿ—ಹಾವು ಮುಂ. ಬುದ್ಧಿಯನ್ನು ತಾಳುವದು ವಿಪರೀತಭಾವನೆ. ತಂದೆ-ತಾಯಿ ಶತ್ರುಗಳಲ್ಲವೆಂದು ಲೋಕಪ್ರಸಿದ್ಧಿ. ಅಂಧವರಲ್ಲಿ ತಪ್ಪು ತಿಳಿವಳಿಕೆಯಿಂದ ಶತ್ರುತ್ವಭಾವನೆಯನ್ನು ಮಾಡುವದಕೂಡ ವಿಪರೀತಭಾವನೆಯೇ)

ಇದನ್ನು ಆತ್ಮನಿಗೆ ಹೊಂದಿಸುವುದೇ?

**ಆತ್ಮಾದೇಹಾದಿಭಿನ್ನೋಽಯಂ ಮಿಥ್ಯಾ ಚೇದಂ ಜಗತ್ತಯೋಃ।**
**ದೇಹಾದ್ಯಾತ್ಮತ್ವಸತ್ಯತ್ವಧೀರ್ವಿಪರ್ಯಯಭಾವನಾ ॥೧೧೧॥**

ಈ ಆತ್ಮನು ದೇಹ—ಇಂದ್ರಿಯ ಮುಂ-ಗಳಿಂದ ಬೇರೆ ಮತ್ತು ಈ ಜಗತ್ತು ಸುಳ್ಳಾದದು. ಆದರೆ ಇವುಗಳ ವಿಷಯದಲ್ಲಿ ದೇಹವೇ ನಾನೆಂಬ ಬುದ್ಧಿ, ಜಗತ್ತು ಸತ್ಯವೆಂಬ ಬುದ್ಧಿ ಇರುವುದೇ ವಿಪರೀತ ಭಾವನೆಯು.

—ಹಿಂದೆ ಇವುಗಳ ನಿವಾರಣೋಪಾಯ ಏಕಾಗ್ರತೆ ಎಂದು ಹೇಳಿದ್ದಾರೆ. ಆದನ್ನೇ ಈಗ ಸ್ಪಷ್ಟಗೊಳಿಸುತ್ತಾರೆ.

**ತತ್ವಭಾವನಯಾ ನಶ್ಯೇತ್ ಸಾಽತೋದೇಹಾತಿರಿಕ್ತತಾಮ್ ।**
**ಆತ್ಮನೋಭಾವಯೇತ್ತದ್ವನ್ ಮಿಥ್ಯಾತ್ವಂ ಜಗತೋಽ-**
**ನಿಶಮ್ ॥೧೧೨॥**

ಈ ವಿಪರೀತ ಭಾವನೆಯು ತತ್ವ ಚಿಂತನೆಯಿಂದ ನಾಶವಾಗುವದು. ಆದುದರಿಂದ ಆತ್ಮನು ದೇಹಾದಿಗಳಿಗಿಂತ ಭಿನ್ನನೆಂದೂ, ಜಗತ್ತೆಲ್ಲ ಸುಳ್ಳಾದುದೆಂದೂ ಯಾವಾಗಲೂ ಭಾವಿಸಬೇಕು.

—ಒಳ್ಳೇದು. ಜಪ ಮುಂತಾದವುಗಳಂತೆ ಆ ಭಾವನೆಗೆ ಕೆಲವು ವಿಶೇಷ ನಿಯಮಾದಿಗಳೇನಾದರೂ ಬೇಕೇನು?

**ಕಿಂ ಮಂತ್ರಜಪವನ್ಮೂರ್ತಿಧ್ಯಾನವದ್ವಾಽಽತ್ಮಭೇದಧೀಃ ।**
**ಜಗನ್ಮಿಥ್ಯಾತ್ವಧೀಶ್ಚಾತ್ರ ವ್ಯಾವರ್ತ್ಯಾ ಸ್ಯಾದುತಾನ್ಯಥಾ॥೧೧೩॥**

ದೇಹ ಮೊದಲಾದವುಗಳಿಗಿಂತ ಆತ್ಮನು ಬೇರೆ ಎಂದೂ, ಜಗತ್ತು ಸುಳ್ಳಾಗಿರುವದೆಂದೂ, ಮಂತ್ರದ ಜಪದಂತೆ ಅಥವಾ ಮೂರ್ತಿಧ್ಯಾನದಂತೆ ನಿತ್ಯವೂ ಅಭ್ಯಾಸ ಮಾಡಬೇಕೋ ಅಥವಾ ಬೇರೆ ರೀತಿಯಾಗಿಯೋ?

ಫಲವು ಇಲ್ಲಿ ಪ್ರತ್ಯಕ್ಷವಾಗಿರುವದರಿಂದ ಇಲ್ಲಿ ನಿಯಮ ನಿರ್ಬಂಧಗಳಿಲ್ಲ.

**ಅನ್ಯಥೇತಿ ವಿಜಾನೀಹಿ ದೃಷ್ಟಾರ್ಥತ್ವೇನ ಭುಕ್ತಿವತ್ ।**
**ಬುಭುಕ್ಷುರ್ಜಪವದ್ಭುಂಕ್ತೇ ನಕಶ್ಚಿನ್ನಿಯತಃ–**
**ಕ್ವಚಿತ್ ॥೧೧೪॥**

ಊಟಮಾಡಿದಂತೆ ಇಲ್ಲಿ ಫಲವು ಪ್ರತ್ಯಕ್ಷವಾಗಿರುವದರಿಂದ ‹ಬೇರೆರೀತಿ› ಎಂದು ತಿಳಿ. ನಿಯಮಗಳನ್ನು ಮಾಡಿಕೊಂಡು ಜಪಾದಿಗಳನ್ನು ಮಾಡುವಂತೆ ಅತಿಶಯ ಹಸಿದವನು ಎಂದಿಗೂ ಊಟ ಮಾಡುವುದಿಲ್ಲ.

(ಶ್ರುತಿ-ಸ್ಮೃತಿಗಳಲ್ಲಿ ಊಟದ ಬಗೆಗೂ ಕೆಲವು ನಿಯಮಗಳಿವೆ. ಇದ್ದರೂ ಹೊಟ್ಟೆತುಂಬುವದಕ್ಕೆ ಹೇಗೆ ಉಣ್ಣಬೇಕೋ ಹಾಗೆ ಉಣ್ಣುವುದು ಸರಿ. ಇಲ್ಲಿ ನಿಯಮಾದಿಗಳೇನೂ ಇಲ್ಲ.)

—ಇದನ್ನೇ ವಿಸ್ತರಿಸಿ ಹೇಳುತ್ತಾರೆ.

**ಅಶ್ನಾತಿ ವಾ ನ ವಾಽಶ್ನಾತಿ ಭುಂಕ್ತೇ ವಾ ಸ್ವೇಚ್ಛಯಾಽನ್ಯಥಾ।**
**ಯೇನ ಕೇನ ಪ್ರಕಾರೇಣ ಕ್ಷುಧಾಮುಪನಿನೀಷತಿ ॥೧೧೫॥**

ಅನ್ನವಿದ್ದರೆ ಉಣ್ಣುವನು, ಇಲ್ಲದಿದ್ದರೆ ಇಲ್ಲ. ಅಥವಾ ಅನ್ಯ ರೀತಿಯಿಂದ ತನ್ನ ಇಚ್ಛೆಗೆ ಬಂದಂತೆ ಊಟಮಾಡುವನು. ಒಟ್ಟಿನಲ್ಲಿ ಯಾವದಾದರೊಂದು ಉಪಾಯದಿಂದ ತನ್ನ ಹಸಿವೆಯನ್ನಡಗಿಸಿಕೊಳ್ಳಲು ಅವನು ಯತ್ನಿಸುವನು.

(ಊಟದ ವಿಷಯವು ಜಪಾದಿಗಳಿಗಿಂತ ಬೇರೆ. ಹಸಿವೆಯಡಗಬೇಕು ಎಂಬ ಪ್ರತ್ಯಕ್ಷ ಫಲಕ್ಕೆ ಊಟಮಾಡಬೇಕೆಂಬುದೇ ಕರ್ತವ್ಯ. ಇನ್ನು ಊಟದ ವಿಷಯದಲ್ಲಿರುವ ಶಾಸ್ತ್ರೋಕ್ತ ನಿಯಮಗಳು ಪರಲೋಕದ ಗತಿಗೆ ಕಾರಣವಾಗುತ್ತವೆ.)

—ಆದರೆ ಜಪ ಮೊದಲಾದವುಗಳಲ್ಲಿ ಬೇರೆ ರೀತಿ.

**ನಿಯಮೇನ ಜಪಂ ಕುರ್ಯಾದಕೃತೌ ಪ್ರತ್ಯವಾಯತಃ ।**
**ಅನ್ಯಥಾಕರಣೇಽನರ್ಥಃ ಸ್ವರವರ್ಣವಿಪರ್ಯಯಾತ್ ॥೧೧೭॥**

ನಿಯಮಬದ್ಧರಾಗಿ ಜಪಾದಿಗಳನ್ನು ಮಾಡಬೇಕು. ಹಾಗೆ ಮಾಡದೇ ಹೋದಲ್ಲಿ ಫಲಕ್ಕೆ ಅಡ್ಡಿಯುಂಟಾಗುವದು. ಯೋಗ್ಯವಲ್ಲದ ರೀತಿಯಿಂದ ಮಾಡಿದರೆ ಸ್ವರ–ವರ್ಣಗಳ ಉಚ್ಚಾರದಲ್ಲಿ ಲೋಪವುಂಟಾಗಿ ಅನರ್ಥಕ್ಕೆ ದಾರಿಯಾಗುವದು.

("ಮಂತ್ರೋ ಹೀನಃ ಸ್ವರತೋ ವರ್ಣತೋವಾ" ಇತ್ಯಾದಿ ಶಿಕ್ಷಾ ವಚನದಲ್ಲಿ ಹೇಳಿದಂತೆ ಅದು ವಾಗ್ವಜ್ರವಾಗಿ ಯಜಮಾನನನ್ನು ಕೊಲ್ಲ ಬಹುದು.)

—ಹಸಿವೆಯು ಪ್ರತ್ಯಕ್ಷವಾಗಿ ಬಾಧಿಸುತ್ತಿರುವದರಿಂದ ಅದನ್ನು ನಿವಾರಿಸಲು ಸ್ವೇಚ್ಛೆಯಾಗಿ ಉಣ್ಣಬಹುದು ಎನ್ನುವದು ಸರಿ. ಆದರೆ ಕಣ್ಣಿಗೆ ಕಾಣದ ತೊಂದರೆಯನ್ನು ಕೊಡುವ ವಿಪರೀತ ಭಾವನೆಯನ್ನು ಹೋಗಲಾಡಿಸಲು ಬ್ರಹ್ಮಾಭ್ಯಾಸವನ್ನು ನಿಯಮದಿಂದ ಮಾಡುವದು ಉಚಿತವಲ್ಲವೇ ?

**ಕ್ಷುಧೇವ ದೃಷ್ಟಬಾಧಾಕೃದ್ವಿಪರೀತಾ ಚ ಭಾವನಾ ।**
**ಜೇಯಾ ಕೇನಾಪ್ಯುಪಾಯೇನ ನಾಸ್ತ್ಯತ್ರಾನುಷ್ಠಿತೇಃ**
**ಕ್ರಮಃ ॥೧೧೮॥**

ವಿಪರೀತಭಾವನೆಯು ಕೂಡ ಹಸಿವೆಯಂತೆ ಪ್ರತ್ಯಕ್ಷವಾಗಿ ಬಾಧೆಯುಂಟುಮಾಡುವಂಥದೇ ಆಗಿದೆ. ಆದುದರಿಂದ ಯಾವದಾದರೂ ಒಂದು ಉಪಾಯದಿಂದ ಅದನ್ನುಗೆಲ್ಲಬೇಕು. ಇಲ್ಲಿ ಅನುಷ್ಠಾನದ ಕ್ರಮವೇನೂ ಇಲ್ಲ.

—ಹಾಗಾದರೆ ಅದನ್ನು ಗೆಲ್ಲಲ್ಲು ಉಪಾಯವೇನು ?

**ಉಪಾಯಃ ಪೂರ್ವಮೇವೋಕ್ತಸ್ತಚ್ಚಿಂತಾ ಕಥನಾದಿಕಃ ।**
**ಏತದೇಕಪರತ್ವೇಽಪಿ ನಿರ್ಬಂಧೋ ಧ್ಯಾನವನ್ನಹಿ ॥೧೧೯॥**

ಅದರದೇ (ಬ್ರಹ್ಮದ್ದೇ) ಚಿಂತನೆ, ಅದರದೇ ಕಥನ ಇತ್ಯಾದಿ ಉಪಾಯಗಳನ್ನು ಮೊದಲೇ (೧೦೬ನೇ ಶ್ಲೋ.) ಹೇಳಿದೆ. ಅದರಲ್ಲಿ ಏಕಾಗ್ರತೆಯನ್ನು ಹೊಳಿದ್ದರೂ ಧ್ಯಾನದಲ್ಲಿಯಂತೆ ಬಲವಾದ ನಿರ್ಬಂಧವಿಲ್ಲ.

—ಧ್ಯೇಯವನ್ನು ಚಿಂತಿಸುವದೇ ಧ್ಯಾನದ ಸ್ವರೂಪವಾಗಿದೆ. ಹೀಗಿರಲು ಆದರಲ್ಲಿ ಬೇರೆ ನಿಯಮಾದಿಗಳೇನು ?

**ಮೂರ್ತಿಪ್ರತ್ಯಯಸಾಂತತ್ಯಮನ್ಯೇನಾಂತರಿತಂ ಧಿಯಃ ।**
**ಧ್ಯಾನಂ ತತ್ರಾತಿ ನಿರ್ಬಂಧೋ ಮನಸಶ್ಚಂಚಲಾತ್ಮನಃ ॥೧೧೯॥**

ಮತ್ತೊಂದು ಬುದ್ಧಿವೃತ್ತಿಯನ್ನು ಬರಗೊಡದಂತೆ ಧ್ಯೇಯಮೂರ್ತಿಯ ಕಡೆಗೆ ಬುದ್ಧಿವೃತ್ತಿಯನ್ನು ಸಂತತಧಾರೆಯಾಗಿ ಹರಿಸುವದೇ ಧ್ಯಾನವು. ಅಲ್ಲಿ ಬಹಳ ಚಂಚಲವಾದ ಮನಸ್ಸಿಗೆ ಕಟ್ಟಿಹಾಕಿದಂತೆ ಬಹಳ ನಿರ್ಬಂಧ ವಾಗುವದು.

—ಮನಸ್ಸು ಬಹಳ ಚಂಚಲವೆಂಬುದಕ್ಕೆ ಭ. ಗೀತೆಯ ಪ್ರಮಾಣ.

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕ-**
**ರಮ್ ॥೧೨೦॥**

ಕೃಷ್ಣ ! ಮನಸ್ಸು ಬಹಳ ಚಂಚಲ, ವ್ಯಾಕುಲಗೊಳಿಸುವಂಥದು. ಬಹಳ ಬಲಶಾಲಿ ಮತ್ತು ಹಟಮಾರಿ. ಅದನ್ನು ಬಿಗಿ ಹಿಡಿಯುವದೆಂದರೆ ಗಾಳಿಯ ಮೊಟ್ಟೆಕಟ್ಟಿದಂತೆ ಬಹಳ ಕಠಿಣವೆಂದು ನಾನು ತಿಳಿಯುತ್ತೇನೆ.

—ಇಂಥದೇ ಯೋಗವಾಸಿಷ್ಠ ವಚನ.

**ಅಪ್ಯಬ್ಧಿಪಾನಾನ್ಮಹತಃ ಸುಮೇರೂನ್ಮೂಲನಾದಪಿ ।**
**ಅಪಿ ವಹ್ನ್ಯಶನಾತ್ಸಾಧೋ ವಿಷಮಶ್ಚಿತ್ತನಿಗ್ರಹಃ ॥೧೨೧॥**

ಎಲೆ ಸಾಧುವೇ: ಮಹಾಸಾಗರವನ್ನು ಕುಡಿಯುವದಕ್ಕಿಂತ, ಸುಮೇರು ಪರ್ವತವನ್ನು ಕಿತ್ತುವದಕ್ಕಿಂತ, ಅಗ್ನಿಭಕ್ಷಣ ಮಾಡುವದಕ್ಕಿಂತ, ಮನ ಸ್ಸನ್ನು ಬಿಗಿ ಹಿಡಿಯುವದು ಕಠಿಣ.

(ಯೋಗ ವಾ. ವೈರಾಗ್ಯ ಪ್ರಕರಣದಲ್ಲಿ ಈ ಶ್ಲೋಕವಿದೆ.)

—ಬ್ರಹ್ಮಾಭ್ಯಾಸವು ಧ್ಯಾನಕ್ಕಿಂತ ಬೇರೆ ಎಂದು ತೋರಿಸುತ್ತಾರೆ.

**ಕಥನಾದೌ ನ ನಿರ್ಬಂಧಃ ಶೃಂಖಲಾಬದ್ಧದೇಹವತ್ ।**
**ಕಿಂತ್ವನಂತೇತಿಹಾಸಾದ್ಯೈರ್ವಿನೋದೋ ನಾಟ್ಯ-**
**ವದ್ಧಿಯಃ ॥೧೨೨॥**

ದೇಹಕ್ಕೆ ಬೇಡಿಹಾಕಿದರೆ ಹೇಗೆ ನಿರ್ಬಂಧವಾಗುವದೋ ಹಾಗೆ ಬ್ರಹ್ಮ ಸ್ವರೂಪವನ್ನು ಚಿಂತಿಸುವ ಮತ್ತು ಹೇಳುವ ಬ್ರಹ್ಮಾಭ್ಯಾಸದಲ್ಲಿ ನಿರ್ಬಂಧ ವಿಲ್ಲ, ತಿರುಗಿ ನಾಟಕದಂತೆ ಪುರಾಣೇತಿಹಾಸಗಳಲ್ಲಿಯ ಸತ್ಪುರುಷರ ಕಥೆ ಗಳಿಂದ ಬುದ್ಧಿಗೆ ವಿನೋದವೆನಿಸುವದು.

(ಬ್ರಹ್ಮಾಭ್ಯಾಸವು ಕ್ರೀಡೆಯ ವಿಷಯವಾಗುವದೆಂದು ತಾತ್ಪರ್ಯ.)

—ಕಥಾಶ್ರವಣಾದಿಗಳಿಂದ ಬ್ರಹ್ಮದಲ್ಲಿ ಮನಸ್ಸು ಇರಬೇಕೆಂಬ ನಿಯ ಮವು ತಪ್ಪಲಿಕ್ಕಿಲ್ಲವೇ ?

**ಚಿದೇವಾತ್ಮಾ ಜಗನ್ಮಿಥ್ಯೇತ್ಯತ್ರ ಪರ್ಯವಸಾನತಃ ।**
**ನಿದಿಧ್ಯಾಸನವಿಕ್ಷೇಪೋ ನೇತಿಹಾಸಾದಿಭಿರ್ಭವೇತ್ ॥೧೨೩॥**

ಆ ಇತಿಹಾಸ ಮೊದಲಾದವುಗಳಲ್ಲಿಯ ಕಥೆಗಳ ಮುಗಿತಾಯವು 'ಚೈತನ್ಯ'ವೇ ಆತ್ಮ, ಜಗತ್ತು ಸುಳ್ಳು ಎಂಬ ಸಿದ್ಧಾಂತದಲ್ಲಾಗುವದರಿಂದ, ಇತಿಹಾಸಗಳಿಂದ ತದೇಕ ಪರತ್ವಕ್ಕೆ ಬಾಧೆ ಬರುವದಿಲ್ಲ.

—ಹೀಗೆಂದುಬಿಟ್ಟರೆ ಕೃಷಿ-ವಾಣಿಜ್ಯಾದಿಗಳನ್ನು ಸ್ವೀಕರಿಸಬೇಕಾ ದೀತಲ್ಲ.

**ಕೃಷಿ-ವಾಣಿಜ್ಯ-ಸೇವಾದೌ ಕಾವ್ಯ-ತರ್ಕಾದಿಕೇಷು ಚ ।**
**ವಿಕ್ಷಿಪ್ಯತೇ ಪ್ರವೃತ್ತ್ಯಾಧೀಸ್ತೈಸ್ತತ್ವಸ್ಮೃತ್ಯ-**
**ಸಂಭವಾತ್ ॥೧೨೪॥**

ಒಕ್ಕಲುತನ, ವ್ಯಾಪಾರ, ನೌಕರಿ ಮೊದಲಾದವುಗಳಲ್ಲಿ ಮತ್ತು ಕಾವ್ಯ-ತರ್ಕ ಮುಂತಾದವುಗಳ ಅಭ್ಯಾಸದಲ್ಲಿ ಮನಸ್ಸುಹಾಕಿದರೆ ಬುದ್ಧಿ ಕೆಡುವದು ಎಂದರೆ "ನಾನು ಬ್ರಹ್ಮ"ವೆಂಬ ನೆನಪನ್ನು ಬಿಟ್ಟುಬಿಡುವದು. ಆದುದರಿಂದ ಆ ಕಾರ್ಯಗಳ ಯೋಗದಿಂದ ತತ್ವದ ನೆನಪು ಬರುವದು ಅಸಂಭವನೀಯ.

—ಹಾಗಿದ್ದರೆ ಅವುಗಳನ್ನು ಬಿಡಬಹುದು. ಊಟ ಮೊದಲಾದವನ್ನು ಮಾಡುವಾಗ ಕೂಡ ತತ್ವದ ನೆನಪು ಇರುವದಿಲ್ಲ. ಎಂದಮೇಲೆ ಇವುಗಳನ್ನೂ ಬಿಡಬೇಕಾಯಿತೇ ?

**ಅನುಸಂದಧತ್ಯೈವಾತ್ರ ಭೋಜನಾದೌ ಪ್ರವರ್ತಿತುಮ್ ।**
**ಶಕ್ಯತೇಽತ್ಯಂತವಿಕ್ಷೇಪಾಭಾವಾದಾಶು ಪುನಃ ಸ್ಮೃತೇಃ ॥೧೨೫॥**

ಬ್ರಹ್ಮಾನುಸಂಧಾನ ಮಾಡುವವರಿಗೆ ಹಾಗೆ ಮಾಡುತ್ತಲೇ ಊಟ ಮೊದಲಾದವನ್ನು ನೆರವೇರಿಸಿಕೊಳ್ಳುವದು ಶಕ್ಯ. ಯಾಕಂದರೆ ಅಲ್ಲಿ ಬುದ್ಧಿಗೆ ಅತ್ಯಂತ ವಿಕ್ಷೇಪವಾಗುವದಿಲ್ಲ. ಆದುದರಿಂದ ಮರಳಿ ಅನುಸಂಧಾನವನ್ನು ನೆನಪುಮಾಡಿಕೊಳ್ಳಬಹುದು.

—ವಿಕ್ಷೇಪವು ಆ ವೇಳೆಯಲ್ಲಿ ಇಲ್ಲವೆಂದು ಒಪ್ಪೋಣ. ಆದರೆ ತತ್ವದ ವಿಸ್ಮೃತಿಯಾಗಿರುವದರಿಂದ ಪುರುಷಾರ್ಥ ಹಾನಿಯಾಗಲಾರದೇ ?

**ತತ್ವವಿಸ್ಮೃತಿಮಾತ್ರಾನ್ನಾನರ್ಥಃ ಕಿಂ ತು ವಿಪರ್ಯಯಾತ್ ।**
**ವಿಪರ್ಯೇತುಂ ನ ಕಾಲೋಽಸ್ತಿರ್ಝಟಿತಿಸ್ಮರತಃ ಕ್ವಚಿತ್ ॥೧೨೬॥**

ತತ್ವವನ್ನು ಮರೆತಮಾತ್ರದಿಂದ ಅಂಥ ದೊಡ್ಡ ಅನರ್ಥವೇನೂ ಇಲ್ಲ. ವಿಪರೀತ ಭಾವನೆ ಎಂದರೆ ದೇಹವೇ ನಾನು ಎಂಬ ಬುದ್ಧಿಯಿಂದ ಮಾತ್ರ ಅನರ್ಥವಿದೆ. ಕೂಡಲೇ ತತ್ವವನ್ನು ನೆನೆದುಕೊಳ್ಳುವವನಿಗೆ ವಿಪರೀತ ಭಾವನೆ ಮಾಡಿಕೊಳ್ಳಲು ಕಾಲಾವಕಾಶವೆಲ್ಲಿ ?

—ಇದೇ ನ್ಯಾಯವನ್ನು ಕಾವ್ಯ-ತರ್ಕಾದಿಗಳ ಅಭ್ಯಾಸದಲ್ಲಿ ಯಾಕೆ ಉಪಯೋಗಿಸಬಾರದು ?

**ತತ್ವಸ್ಮೃತೇರವಸರೋ ನಾಸ್ತ್ಯನ್ಯಾಭ್ಯಾಸಶಾಲಿನಃ ।**
**ಪ್ರತ್ಯುತಾಭ್ಯಾಸಘಾತಿತ್ವಾದ್ಬಲಾತ್ತತ್ವಮುಪೇಕ್ಷ್ಯತೇ ॥೧೨೭॥**

ಕಾವ್ಯ-ತರ್ಕ ಮೊದಲಾದ ಅನ್ಯ ವಿಷಯಗಳ ಅಭ್ಯಾಸವನ್ನು ಮಾಡುವವರಿಗೆ ಬ್ರಹ್ಮಸ್ವರೂಪವನ್ನು ನೆನೆದುಕೊಳ್ಳಲಿಕ್ಕೆ ಅವಕಾಶವೇ ದೊರೆಯುವದಿಲ್ಲ. ತಿರುಗಿ ಕೇಳಿದರೆ ಬ್ರಹ್ಮವಿಚಾರವು ಆ ಅಭ್ಯಾಸಕ್ಕೆ ಅಡ್ಡಿಯುಂಟು ಮಾಡುವದರಿಂದ ಬಲಾತ್ಕಾರವಾಗಿ ತತ್ವವನ್ನು ಹಿಂದೂಡಬೇಕಾಗುವದು.

—ಬ್ರಹ್ಮಾನುಸಂಧಾನಕ್ಕೆ ವಿರೋಧವಾದ ಎಲ್ಲ ವಾಗ್ವ್ಯಾಪಾರಗಳೂ ತ್ಯಾಜ್ಯವಾಗಿವೆ ಎಂಬುದಕ್ಕೆ ಶ್ರುತಿ ಪ್ರಮಾಣವೂ ಇದೆ.

**ತಮೇವೈಕಂ ವಿಜಾನೀಥ ಹ್ಯನ್ಯಾ ವಾಚೋ ವಿಮುಂಚಥಾ ।**
**ಇತಿಶ್ರುತಂ ತಥಾನ್ಯತ್ರ ವಾಚೋಽವಿಗ್ಲಾಪನಂ ತ್ವಿತಿ ॥೧೨೮॥**

ಎರಡನೆಯದಿಲ್ಲವೆಂಬ ಆ ಒಬ್ಬ ಪರಮಾತ್ಮನನ್ನೇ ತಿಳಿಯಿರಿ. ಬೇರೆ ಮಾತು ಹಾಗೂ ಮಾತುಗಳ ವಿಷಯಗಳನ್ನು ಬಿಟ್ಟುಬಿಡಿರಿ ಎಂದೂ ಶ್ರುತಿ.

ಆದರಂತೆ ಮತ್ತೊಂದುಕಡೆಗೆ "ಬಹಳಮಾತು ವಾಣಿಗೆ ವ್ಯರ್ಥಶ್ರಮ"ವೆಂದು ಹೇಳಿದೆ.

(ಈ ಶ್ಲೋಕದಲ್ಲಿ ಬಂದ ಪ್ರಮಾಣಗಳು ಯಜುರ್ವೇದ-ಅಥರ್ವಣ ವೇದದಲ್ಲಿವೆ.)

—ತತ್ತ್ವಾನುಸಂಧಾನವಿಲ್ಲದ ಊಟ ಮೊದಲಾದವನ್ನು ಬಿಡದಂತೆ ಇತರ ಶಾಸ್ತ್ರಗಳ ಅಭ್ಯಾಸವನ್ನೂ ಮಾಡಬಹುದಲ್ಲ.

**ಆಹಾರಾದಿತ್ಯಜನ್ನೈವ ಜೀವೇಚ್ಛಾಸ್ತ್ರಾಂತರಂ ತ್ಯಜನ್ ।**
**ಕಿಂ ನ ಜೀವಸಿ ಯೇನೈವಂ ಕರೋಷ್ಯತ್ರದುರಾಗ್ರ-**
**ಹಮ್ ॥೧೩೯॥**

ಊಟ ಮೊದಲಾದವನ್ನು ಬಿಟ್ಟರೆ ಬದುಕುವದೇ ಸಾಧ್ಯವಿಲ್ಲ. ಕಾವ್ಯ-ತರ್ಕಾದಿಗಳನ್ನು ಬಿಟ್ಟರೆ ಬದುಕಲಾರೆಯಾ ? ಯಾವ ಕಾರಣದಿಂದ ಹೀಗೆ ಅನಾತ್ಮವಿದ್ಯೆಯಲ್ಲಿ ದುರಾಗ್ರಹ ಮಾಡುತ್ತಿರುವೆ ?

—ಹಾಗಾದರೆ ತತ್ತ್ವಜ್ಞಾನಿ ಜನಕ ರಾಜನು ರಾಜ್ಯದಾಡಳಿತವನ್ನು ಸಾಗಿಸಿದನಲ್ಲ.

**ಜನಕಾದೇಃ ಕಥಂ ರಾಜ್ಯಮಿತಿ ಚೇದ್ದೃಢಬೋಧತಃ ।**
**ತಥಾ ತವಾಪಿ ಚೇತ್ತರ್ಕಂ ಪಠಯದ್ವಾಕೃಷಿಂಕುರು ॥೧೩೦॥**

ಜನಕಾದಿಗಳು ರಾಜ್ಯವನ್ನು ಹೇಗೆ ತಿಳಿದರೆಂದರೆ ಬಲವಾದ ಜ್ಞಾನದಿಂದ. ಅವರಂತೆ ನಿನಗೆ ಕೂಡ ಬಲವಿದ್ದರೆ ತರ್ಕವನ್ನಾದರೂ ಓದು. ಕೃಷಿಯನ್ನಾದರೂ ಮಾಡು.

—ಜಗತ್ತು ಸುಳ್ಳೆಂದು ತಿಳಿದಿರುವ ಜ್ಞಾನಿಗಳಿಗೆ ಸಂಸಾರದಲ್ಲಿ ಪ್ರವೃತ್ತಿ ಹೇಗೆ ?

**ಮಿಥ್ಯಾತ್ವವಾಸನಾದಾರ್ಢ್ಯೇಪ್ರಾರಬ್ಧಕ್ಷಯಕಾಂಕ್ಷಯಾ ।**
**ಅಕ್ಲಿಶ್ಯಂತಃ ಪ್ರವರ್ತಂತೇ ಸ್ವಸ್ವಕರ್ಮಾನುಸಾರತಃ ॥೧೩೧॥**

ಜಗತ್ತು ಸುಳ್ಳೆಂಬ ಭಾವನೆಯು ಬಲಿತಮೇಲೆ ಪ್ರಾರಬ್ಧ ಕರ್ಮವನ್ನು ಕಳೆದುಕೊಳ್ಳುವದಕ್ಕಾಗಿ ನೊಂದುಕೊಳ್ಳದೇ ಜ್ಞಾನಿಗಳು ತಮ್ಮ ತಮ್ಮ ಪ್ರಾರಬ್ಧಕರ್ಮವಿರುವಂತೆ ವ್ಯವಹಾರಕ್ಕಿಳಿಯುವರು.

—ಹೀಗಿದ್ದರೆ ಆ ಜ್ಞಾನಿಗಳ ಪ್ರವೃತ್ತಿಯು ಅನಾಚಾರದಲ್ಲಿ ಯಾಕಾಗ ಬಾರದು ?

**ಅತಿಪ್ರಸಂಗೋ ಮಾ ಶಂಕ್ಯಃ ಸ್ವಕರ್ಮವಶವರ್ತಿನಾಮ್ ।**
**ಅಸ್ತು ವಾ ಕೇನ ಶಕ್ಯೇತ ಕರ್ಮ ವಾರಯಿತುಂ ವದ ॥೧೪೩॥**

ತಮ್ಮ ಪ್ರಾರಬ್ಧಕರ್ಮಕ್ಕೆ ಅಧೀನರಾಗಿ ನಡೆಯುವ ಜ್ಞಾನಿಗಳು ದುರಾಚರಣೆ ಮಾಡಬಹುದೆಂದು ಸಂದೇಹ ತಾಳುವದು ಯೋಗ್ಯವಲ್ಲ. ಅಥವಾ ಹಾಗೂ ಆಗಬಾರದೇಕೆ ? ಕರ್ಮಗತಿಯನ್ನು ತಪ್ಪಿಸುವದು ಯಾರಿಗೆ ಸಾಧ್ಯ ? ಹೇಳು.

—ಒಳ್ಳೇದು. ಪ್ರಾರಬ್ಧಕರ್ಮವನ್ನು ಮೀರುವದು ಯಾರಿಗೂ ಸಾಧ್ಯವಿಲ್ಲವೆಂದಮೇಲೆ ಜ್ಞಾನಿಗಳಲ್ಲಿ ಅಜ್ಞಾನಿಗಳಲ್ಲಿ ಭೇದವೇನು ?

**ಜ್ಞಾನಿನೋಽಜ್ಞಾನಿನಶ್ಚಾತ್ರ ಸಮೇ ಪ್ರಾರಬ್ಧಕರ್ಮಣಿ ।**
**ನಕ್ಲೇಶೋಜ್ಞಾನಿನೋಧೈರ್ಯಾನ್ಮೂಢಃ ಕ್ಲಿಶ್ಯತ್ಯ-**
**ಧೈರ್ಯತಃ ॥೧೪೪॥**

ಪ್ರಾರಬ್ಧಕರ್ಮವನ್ನು ಅನುಭವಿಸುವ ವಿಷಯದಲ್ಲಿ ಜ್ಞಾನಿಗಳು-ಅಜ್ಞಾನಿಗಳು ಸಮವಾದರೂ ಜ್ಞಾನಿಯು ಧೈರ್ಯದಿಂದ ಅದರ ಫಲವನ್ನು ಭೋಗಿಸುವಾಗ ದುಃಖಿಸುವದಿಲ್ಲ. ಅಜ್ಞಾನಿಯು ಅಧೈರ್ಯದಿಂದ ದುಃಖಕ್ಕೆ ಗುರಿಯಾಗುತ್ತಾನೆ.

—ಇದಕ್ಕೊಂದು ದೃಷ್ಟಾಂತ.

**ಮಾರ್ಗೇ ಗಂತ್ರೋರ್ದ್ವಯೋಃಶ್ರಾಂತೌ ಸಮಾಯಾಮಪ್ಯ-**
**ದೂರತಾಮ್ ।**
**ಜಾನನ್ ಧೈರ್ಯಾದ್ದ್ರುತಂ ಗಚ್ಛೇದನ್ಯಸ್ತಿಷ್ಠತಿ-**
**ದೀನಧೀಃ ॥೧೪೫॥**

ದಾರಿನಡೆಯುತ್ತಿರುವ ಇಬ್ಬರಿಗೆ ಆಯಾಸವು ಅಷ್ಟೇ ಆದರೂ, ತಾನು ಹೋಗಬೇಕಾದ ಊರು ಸಮೀಪದಲ್ಲಿದೆ ಎಂದು ತಿಳಿದವನು ಧೈರ್ಯದಿಂದ ಬೇಗ ಬೇಗ ನಡೆಯುತ್ತಾನೆ. ಆ ತಿಳಿವಳಿಕೆ ಇಲ್ಲದ ಇನ್ನೊಬ್ಬನು ದಣಿದು ಅಲ್ಲಿಯೇ ಕೂಡುತ್ತಾನೆ.

—ಹೀಗೆ ಪ್ರಕರಣಾರಂಭದಲ್ಲಿ ಹೇಳಿದ "ಆತ್ಮಾನಂಚೇತ್" ಇತ್ಯಾದಿ ಮಂತ್ರದ ಪೂರ್ವಾರ್ಧವನ್ನು ಹೇಳಿ ಇನ್ನು ಉತ್ತರಾರ್ಧದ ವ್ಯಾಖ್ಯಾನ ಆರಂಭಿಸುತ್ತಾರೆ.

**ಸಾಕ್ಷಾತ್ಕೃತಾತ್ಮಧೀಃ ಸಮ್ಯಗವಿಪರ್ಯಯಬಾಧಿತಃ ।**
**ಕಿಮಿಚ್ಛನ್ ಕಸ್ಯಕಾಮಾಯ ಶರೀರಮನುಸಂಜ್ವರೇತ್ ||೧೩೫||**

ಆತ್ಮಸಾಕ್ಷಾತ್ಕಾರವನ್ನು ಹೊಂದಿ ತೃಪ್ತನಾದವನೂ, ವಿಪರೀತ ಭಾವನೆ (ದೇಹಾತ್ಮಬುದ್ಧಿ) ಗಳಿಂದ ಬಾಧೆಗೊಳಗಾದವನೂ ಆದ ಜ್ಞಾನಿಯು ಯಾವ ಸುಖವನ್ನು ಬಯಸಿ, ಯಾರಿಗಾಗಿ ದುಡಿದು ದೇಹವನ್ನು ಬಳಲಿಸಬೇಕು ?

—ಈ ಶ್ರುತಿಯ ಉತ್ತರಾರ್ಧದ ತಾತ್ಪರ್ಯ.

**ಜಗನ್ಮಿಥ್ಯಾತ್ವಧೀಭಾವಾದಕ್ಷಿಪ್ತೌ ಕಾಮ್ಯಕಾಮುಕೌ ।**
**ತಯೋರಭಾವೇ ಸಂತಾಪಃಶಾಮ್ಯೇನ್ನಿಸ್ನೇಹದೀಪವತ್ ||೧೩೬||**

ಜಗತ್ತು ಸುಳ್ಳೆಂದು ತಿಳಿದಿರುವದರಿಂದ ಬಯಸತಕ್ಕ ಪದಾರ್ಥಗಳು ಮತ್ತು ಬಯಸತಕ್ಕವನು ಇಬ್ಬರನ್ನೂ ಶ್ರುತಿಯು ಅಲ್ಲಗಳೆಯುತ್ತದೆ. ಹೀಗೆ ಭೋಕ್ತೃ-ಭೋಗ್ಯ ಇವೆರಡೂ ಸುಳ್ಳಾದ ಮೇಲೆ ಎಣ್ಣೆ ತೀರಿದ ದೀಪದಂತೆ ದುಃಖವು ತಾನಾಗಿಯೇ ಶಾಂತವಾಗುವದು.

—ಕಾಮ್ಯ ಪದಾರ್ಥಗಳ ಅಭಾವದಿಂದ ಕಾಮನೆಗಳೂ ಅಡಗುವವೆಂದು ಅನುಭವವೆಲ್ಲಿದೆ ?

**ಗಂಧರ್ವಪತ್ತನೇ ಕಿಂಚಿನ್ನೈಂದ್ರಜಾಲಿಕ ನಿರ್ಮಿತಮ್ ।**
**ಜಾನನ್ ಕಾಮಯತೇ ಕಿಂತು ಜಿಹಾಸತಿ ಹಸನ್ನಿದಮ್ ||೧೩೭||**

ಗಂಧರ್ವ ಪಟ್ಟಣದಲ್ಲಿ ಇವೆಲ್ಲ ವಸ್ತುಗಳು ಗಾರುಡೀ ವಿದ್ಯೆಯಿಂದ ನಿರ್ಮಾಣವಾಗಿವೆ ಎಂದು ಅರಿತವನು ಅವುಗಳ ಇಚ್ಛೆ ಮಾಡುವದಿಲ್ಲ. ಅಲ್ಲದೇ ಆ ವಸ್ತುಗಳನ್ನು ಕಂಡು ನಗುತ್ತ ಎಲ್ಲವನ್ನು ತ್ಯಾಗಮಾಡುತ್ತಾನೆ.

—ಇದೇ ದೃಷ್ಟಾಂತವನ್ನು ದಾರ್ಷ್ಟಾಂತಿಕದಲ್ಲಿ ಯೋಚಿಸುತ್ತಾರೆ.

**ಆಪಾತರಮಣೀಯೇಷು ಭೋಗೇಷ್ವೇವಂ ವಿಚಾರವಾನ್ ।**
**ನಾನುರಜ್ಜತಿ ಕಿಂತ್ವೇತಾನ್ ದೋಷದೃಷ್ಟ್ಯಾ-**
**ಜಿಹಾಸತಿ ||೧೩೮||**

ಹೀಗೆ ತೋರಿಕೆಗೆ ಮಾತ್ರ ಮನೋಹರವೆನಿಸುವ ಭೋಗ ಪದಾರ್ಥಗಳಲ್ಲಿ ವಿಚಾರಶೀಲನು ಆಸಕ್ತನಾಗುವದಿಲ್ಲ. ಇಷ್ಟೇ ಅಲ್ಲ ಅವುಗಳನ್ನು ಬಿಡಲು ಇಚ್ಛೈಸುತ್ತಾನೆ.

—ವಿಷಯ ಪದಾರ್ಥಗಳಲ್ಲಿ ದೋಷಗಳನ್ನು ಕಾಣುವದು ಹೇಗೆ ?

**ಅರ್ಥಾನಾಮರ್ಜನೇ ಕ್ಲೇಶಸ್ತಥೈವ ಪರಿಪಾಲನೇ ।**
**ನಾಶೇದುಃಖಂ ವ್ಯಯೇದುಃಖಂ ಧಿಗರ್ಥಾನ್‌ಕ್ಲೇಶ-**
**ಕಾರಿಣಃ ॥೧೩೯॥**

ವಿಷಯ ಪದಾರ್ಥಗಳನ್ನು ಘಟಿಸುವಾಗ ದುಃಖ. ಅದರಂತೆ ಅವುಗಳನ್ನು ಕಾಪಾಡಿಕೊಳ್ಳುವಾಗ ದುಃಖ. ಅವು ಕಳೆದು ಹೋದರೆ ದುಃಖ. ಆದುದರಿಂದ ದುಃಖವನ್ನೇ ಕೊಡುವ ಇಂಥ ವಿಷಯಗಳಿಗೆ ಧಿಕ್ಕಾರವಿರಲಿ.

—ಈಗ ಕೆಲವಿಷಯಗಳ ಅಶುಭತ್ವವನ್ನು ಹೇಳುತ್ತಾರೆ.

**ಮಾಂಸಪಾಂಚಾಲಿಕಾಯಾಸ್ತು ಯಂತ್ರಲೋಲೇಽಂಗಪಂಜರೇ।**
**ಸ್ನಾಯ್ವಸ್ಥಿಗ್ರಂಥಿಶಾಲಿನ್ಯಾಃ ಸ್ತ್ರಿಯಾಃ ಕಿಮಿವ**
**ಶೋಭನಮ್ ॥೧೪೦॥**

ಸ್ನಾಯುಗಳು, ಅಸ್ಥಿಗಳು, ಮಾಂಸದ ಗಂಟುಗಳು ಇವುಗಳಿಂದ ಕೂಡಿದ ಮಾಂಸದ ಗೊಂಬೆಯಾದ ಸ್ತ್ರೀಯ ಯಂತ್ರಗಳಿಂದ ಚಲಿಸುವ ದೇಹದ ಗೂಡಿನಲ್ಲಿ ಚಂದವಾದುದು ಏನಿದೆ ?

(ವಸ್ತುತಃ ಸ್ತ್ರೀ–ಪುರುಷರ ದೇಹಗಳು ಸಮಾನವಾಗಿದ್ದು ನಿಂದೆಗೆ ಪಾತ್ರವಾಗಿವೆ.)

**ಏವಮಾದಿಷು ಶಾಸ್ತ್ರೇಷು ದೋಷಾಃ ಸಮ್ಯಕ್ ಪ್ರಪಂಚಿತಾಃ।**
**ವಿಮೃಶನ್ನನಿಶಂ ತಾನಿ ಕಥಂ ದುಃಖೇಷು ಮಜ್ಜತಿ ॥೧೪೧॥**

ಹೀಗೆಲ್ಲ ವಿಷಯಗಳಲ್ಲಿ ದೋಷಗಳಿರುವವೆಂದು ಶಾಸ್ತ್ರಗಳಲ್ಲಿ ಚನ್ನಾಗಿಯೇ ತೋರಿಸಿದ್ದಾರೆ. ಆ ಶಾಸ್ತ್ರಗಳನ್ನು ಯಾವಾಗಲೂ ಅಭ್ಯಾಸ ಮಾಡುವವನು ದುಃಖದಲ್ಲಿ ಹೇಗೆ ಸಿಕ್ಕುಬಿದ್ದಾನು ?

ಈ ವಿಷಯಗಳು ದೋಷಗಳಿಂದಕೂಡಿವೆ ಎಂಬು ತಿಳಿದಮೇಲೆ ಅವುಗಳನ್ನು ಭೋಗಿಸಬೇಕೆಂಬ ಇಚ್ಛೆಯಾಗುವದಿಲ್ಲ ಎಂಬುದಕ್ಕೆ ಸಯುಕ್ತಿಕದೃಷ್ಟಾಂತ.

**ಕ್ಷುಧ್ಯಯಾ ಪೀಡ್ಯಮಾನೋಽಪಿ ನ ವಿಷಂ ಹ್ಯತ್ತುಮಿಚ್ಛತಿ |**
**ಮಿಷ್ಟಾನ್ನಧ್ವಸ್ತತೃಡ್ ಜಾನನ್ನಾಮೂಢಸ್ತಜ್ಜಿಘಸ್ಸತಿ ||೧೪೩||**

ಹಸಿವೆಯಿಂದ ಎಷ್ಟೇ ಸಂಕಟವಾಗುತ್ತಿದ್ದರೂ ಆ ಮನುಷ್ಯನು ವಿಷವನ್ನು ತಿನ್ನಲು ಇಚ್ಛಿಸುವದಿಲ್ಲ. ಅದರಂತೆ ಸುಗ್ರಾಸ ಭೋಜನದಿಂದ ತೃಪ್ತನಾದ ವಿವೇಕಿಯು ತಿಳಿದೂ ತಿಳಿದೂ ವಿಷವನ್ನು ತಿನ್ನಲು ಎಂದೂ ಬಯಸುವದಿಲ್ಲ.

—ಪ್ರಾರಬ್ಧಕರ್ಮದ ಪ್ರಾಬಲ್ಯದಿಂದ, ಜ್ಞಾನಿಯಾದವನಿಗೂ ಭೋಗೇಚ್ಛೆಯಾಗಬಹುದಲ್ಲವೇ ?

**ಪ್ರಾರಬ್ಧಕರ್ಮಪ್ರಾಬಲ್ಯಾದ್ಭೋಗೇಷ್ವಿಚ್ಛಾ ಭವೇದ್ಯದಿ |**
**ಕ್ಲಿಶ್ಯನ್ನೇವ ತದಾಪ್ಯೇಷ ಭುಂಕ್ತೇ ವಿಷ್ಟಿಗೃಹೀತವತ್ ||೧೪೪||**

ಒಂದು ವೇಳೆ ಬಲವತ್ತರವಾದ ಪ್ರಾರಬ್ಧಕರ್ಮದಿಂದ ಭೋಗಗಳಲ್ಲಿ ಇಚ್ಛೆಯುಂಟಾಗಲು ಆಗ ಜ್ಞಾನಿಯು ನರಕವನ್ನು ಭೋಗಿಸುವಂತೆ ಅದನ್ನು ಭೋಗಿಸಿ ಮುಗಿಸುವನು.

—ಇದು ನಿಮಗೆ ತಿಳಿದ ಬಗೆ ?

**ಭುಂಜಾನಾ ವಾ ಅಪಿ ಬುಧಾಃ ಶ್ರದ್ಧಾವಂತಃ ಕುಟುಂಬಿನಃ |**
**ನಾದ್ಯಪಿ ಕರ್ಮ ನಚ್ಛಿನ್ನಮಿತಿ ಕ್ಲಿಶ್ಯಂತಿ ಸಂತತಮ್ ||೧೪೫||**

ಶ್ರದ್ಧಾವಂತರೂ, ಕುಟುಂಬಿಕರೂ, ಜ್ಞಾನಿಗಳೂ ಆದ ಗೃಹಸ್ಥರು ಪ್ರಾರಬ್ಧಕರ್ಮವಶದಿಂದ ದೊರೆತ ಭೋಗಗಳನ್ನು ಅನುಭವಿಸುತ್ತ "ನಮ್ಮ ಕರ್ಮವು ಇನ್ನೂ ಸವೆದಿಲ್ಲ" ಎಂದು ಕಳವಳಗೊಳ್ಳುತ್ತಿರುವರು.

—ಇರಲಿ, ಆದರೆ ಜ್ಞಾನಿಗೆ ಇಂಥ ದುಃಖಗಳಿರಬಾರದು. ಆದರಿಂದ ಜ್ಞಾನವು ವ್ಯರ್ಥವಾಗುವ ಪ್ರಸಂಗವು ಬರಬಹುದಲ್ಲ.

**ನಾಯಂ ಕ್ಲೇಶೋಽತ್ರ ಸಂಸಾರತಾಪಃ ಕಿಂ ತು ವಿರಕ್ತತಾ |**
**ಭ್ರಾಂತಿ ಜ್ಞಾನನಿದಾನೋ ಹಿ ತಾಪಃ ಸಾಂಸಾರಿಕಃ**
**ಸ್ಮೃತಃ ||೧೪೬||**

ಈ ದುಃಖವು ಸಂಸಾರಾಸಕ್ತಿಯಿಂದ ಉಂಟಾದುದಲ್ಲ. ಯಾಕೆಂದರೆ ಸಂಸಾರ ವಿಷಯದಲ್ಲಿ ವೈರಾಗ್ಯವಿರುತ್ತದೆ. ಸಂಸಾರತಾಪವೆಲ್ಲ ಭ್ರಾಂತಿ ಜ್ಞಾನದಿಂದ ಎಂದು ಹೇಳಿದುದಾಗಿದೆ.

—ಒಟ್ಟು ಈ ದುಃಖವು ವಿವೇಕಮೂಲವೋ, ಅವಿವೇಕ ಮೂಲವೋ? ಎಂಬುದು ಹೇಗೆ ತಿಳಿಯಬೇಕು ?

**ವಿವೇಕೇನ ಪರಿಕ್ಲಿಶ್ಯನ್ನಲ್ಪಭೋಗೇನ ತೃಪ್ಯತಿ ।**
**ಅನ್ಯಥಾಽನಂತಭೋಗೇಽಪಿ ನೈವ ತೃಪ್ಯತಿ ಕರ್ಹಿಚಿತ್ ॥೧೪೬॥**

ವಿವೇಕವಿರುವದರಿಂದ ಬಹಳ ಖಿನ್ನನಾದ ಪುರುಷನು ಸ್ವಲ್ಪ ಭೋಗದಿಂದಲೇ ತೃಪ್ತನಾಗುವನು. ಅದಿಲ್ಲದೇ ಹೋದರೆ ಎಷ್ಟು ಭೋಗಗಳನ್ನು ಭೋಗಿಸಿದರೂ ಅವನಿಗೆ ಎಂದಿಗೂ ತೃಪ್ತಿಯಾಗುತ್ತಿರಲಿಲ್ಲ.

—ವಿವೇಕಿಯಂತೆ ಅವಿವೇಕಿಗೂ ಭೋಗದಿಂದಲೇ ತೃಪ್ತಿಯಾಗುತ್ತದೆ. ಎಂದಮೇಲೆ ವಿವೇಕವು ತೃಪ್ತಿಯ ಕಾರಣವೆಂದಂತಾಗಲಿಲ್ಲ.

**ನ ಜಾತುಕಾಮಃ ಕಾಮಾನಾಮುಪಭೋಗೇನಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿ-**
**ವರ್ಧತೇ ॥೧೪೭॥**

ವಿಷಯೇಚ್ಛೆಯು ಬೇಕೆನಿಸಿದ ವಿಷಯಗಳ ಉಪಭೋಗದಿಂದ ಎಂದಿಗೂ ಶಾಂತವಾಗುವದಿಲ್ಲ. ತುಪ್ಪವನ್ನು ಹಾಕುತ್ತ ಬಂದ ಬೆಂಕಿಯು ಭುಗಿಲೆನ್ನುವಂತೆ ಇಚ್ಛೆಯು ಹೆಚ್ಚಾಗಿ ಬೆಳೆಯುವದು.

(ಇದು ಮನುಸ್ಮೃತಿಯಲ್ಲಿ ಹಾಗೂ ಮಹಾಭಾರತದ ಯಯಾತಿರಾಜನ ಕಥೆಯಲ್ಲಿ ಬಂದಿದೆ.)

—ವಿಷಯಗಳ ಸ್ವರೂಪವನ್ನು ತಿಳಿದು ವಿವೇಕದಿಂದ ಅವುಗಳನ್ನು ಭೋಗಿಸಿದರೆ ಸ್ವಲ್ಪದರಲ್ಲಿಯೇ ತೃಪ್ತಿಯಾಗುವದು ಎಂದು ದೃಷ್ಟಾಂತ ಕೊಟ್ಟು ಹೇಳುತ್ತಾರೆ.

**ಪರಿಜ್ಞಾಯೋಪಭುಕ್ತೋಹಿ ಭೋಗೋಭವತಿ ತುಷ್ಟಯೇ ।**
**ವಿಜ್ಞಾಯ ಸೇವಿತಶ್ಚೋರೋ ಮೈತ್ರೀಮೇತಿ ನಚೋರ-**
**ತಾಮ್ ॥೧೪೮॥**

ಕಳ್ಳನೆಂದರಿತು ಕಳ್ಳನೊಡನೆ ನಡೆದುಕೊಂಡರೆ ಅವನು ಗೆಳೆಯನಾಗುವನಲ್ಲದೇ ಕಳ್ಳನಾಗಲಾರನು. ಅದರಂತೆ ಸ್ವರೂಪವನ್ನು ತಿಳಿದು ಮಾಡಿದ ವಿಷಯೋಪಭೋಗವು ತೃಪ್ತಿಗೆ ಕಾರಣವಾಗುವದು.

—ಬಯಕೆಯು ಮನಸ್ಸಿನ ಹುಟ್ಟುಗುಣವೇ ಆಗಿದೆ ಎಂದಮೇಲೆ ಸ್ವಲ್ಪ ಭೋಗದಿಂದ ತೃಪ್ತಿ ಹೇಗಾಗಬಲ್ಲದು ?

**ಮನಸೋಽನಿಗ್ರಹೀತಸ್ಯ ಲೀಲಾಭೋಗೋಽಲ್ಪಕೋಽಪಿಯಃ ।**
**ತಮೇವಾಲಬ್ಧವಿಸ್ತಾರಂ ಕ್ಲಿಷ್ಟತ್ವಾದ್ಬಹುಮನ್ಯತೇ ॥೧೪೯॥**

ವಿಷಯಗಳಿಂದ ಹಿಂತಿರುಗಿಸಿ ಬ್ರಹ್ಮದಲ್ಲಿಯೇ ಮನಸ್ಸಿಟ್ಟವರಿಗೆ ಸಹ ಸಿದ್ಧವಾದ ಆ ಅಲ್ಪಭೋಗವೂ ನೋವನ್ನುಂಟುಮಾಡಿರುವದರಿಂದ ಮನಸ್ಸು ಇಚ್ಛೆಗಳನ್ನು ಹರಿಬಿಡದೇ ಆ ಅಲ್ಪವನ್ನೇ ಹೆಚ್ಚೆಂದು ತಿಳಿಯುವದು.

—ಇದಕ್ಕೆ ದೃಷ್ಟಾಂತ.

**ಬದ್ಧಮುಕ್ತೋ ಮಹೀಪಾಲೋಗ್ರಾಮಮಾತ್ರೇಣತುಷ್ಯತಿ ।**
**ಪರೈರ್ನ ಬದ್ಧೋ ನಾಕ್ರಾಂತೋ ನರಾಷ್ಟ್ರಂ ಬಹು–**
**ಮನ್ಯತೇ ॥೧೫೦॥**

ಮೊದಲು ಬಂಧಿತನಾಗಿ ಬಿಡುಗಡೆಹೊಂದಿದ ರಾಜನು ಬರಿ ಒಂದೂರು ಕೊಟ್ಟರೆ ತೃಪ್ತಿ ಪಡೆಯುವನು. ಆದರೆ ಬಂಧಿತನಾಗದಂಥ, ಆಕ್ರಮಣಕ್ಕೆ ಗುರಿಯಾಗದಂಥ ರಾಜನು ದೊಡ್ಡ ರಾಷ್ಟ್ರವಿದ್ದರೂ ಸಾಕೆನ್ನುವದಿಲ್ಲ.

—ಜ್ಞಾನಿಗಳಿಗೂ ಪ್ರಾರಬ್ಧಕರ್ಮದಿಂದ ಇಚ್ಛೆಯಾಗುವದೆಂದು ನೀವು ಹೇಳಿದಿರಿ. ಹಾಗಾಗಬಾರದು. ಯಾಕಂದರೆ ಬಯಕೆಗಳನ್ನೆಲ್ಲ ನಾಶಗೊಳಿಸುವ ವಿವೇಕ ಜ್ಞಾನವಿದ್ದಲ್ಲಿ ಇಚ್ಛೆಗಳು ಹುಟ್ಟಲಾರವು.

**ವಿವೇಕೇಜಾಗ್ರತಿ ಸತಿದೋಷದರ್ಶನಲಕ್ಷಣೇ ।**
**ಕಥಮಾರಬ್ಧಕರ್ಮಾಪಿ ಭೋಗೇಚ್ಛಾಂಜನಯಿಷ್ಯತಿ ॥೧೫೧॥**

ವಿಷಯಗಳಲ್ಲಿ ದೋಷಗಳನ್ನು ಕಾಣುವಂಥ ವಿವೇಕವು ಜಾಗ್ರತವಿರುವಾಗ, ಪ್ರಾರಬ್ಧಕರ್ಮವಾದರೂ ಭೋಗಗಳಇಚ್ಛೆಯನ್ನು ಹೇಗೆಹುಟ್ಟಿಸುವದು?

—ಪ್ರಾರಬ್ಧವು ಅನೇಕ ಬಗೆಯಾಗಿರುವದರಿಂದ ಹಾಗೆ ಸಾಧ್ಯವಿದೆ.

**ನೈಷ ದೋಷೋ ಯತೋಽನೇಕವಿಧಂ ಪ್ರಾರಬ್ಧಮಿಷ್ಯತೇ ।**
**ಇಚ್ಛಾಽನಿಚ್ಛಾ ಪರೇಚ್ಛಾ ಚ ಪ್ರಾರಬ್ಧಂ ತ್ರಿವಿಧಂ–**
**ಸ್ಮೃತಮ್ ॥೧೫೨॥**

ಪ್ರಾರಬ್ಧವು ಅನೇಕಬಗೆಯಾಗಿರುವದನ್ನು ಕಾಣುತ್ತೇವೆ. ಆದುದರಿಂದ ಇಲ್ಲಿ ತಪ್ಪೇನೂ ಇಲ್ಲ. ತಾನು ಬಯಸಿ ಭೋಗಿಸುವದು, ಬಯಸದೇ ಭೋಗಿಸುವದು, ಮತ್ತೊಬ್ಬರ ಬಯಕೆಯಂತೆ ಭೋಗಿಸುವದು, ಹೀಗೆ ಪ್ರಾರಬ್ಧವು ಮೂರು ಬಗೆ ಎಂದು ಹೇಳಿದೆ.

—ತಾನು ಬಯಸಿ ಭೋಗಿಸುವದು ಹೇಗೆ ?

**ಅಪಥ್ಯಸೇವಿನಶ್ಚೋರಾ ರಾಜದಾರರತಾ ಅಪಿ ।**
**ಜಾನಂತಏವ ಸ್ವಾನರ್ಥಮಿಚ್ಛಂತ್ಯಾರಬ್ಧಕರ್ಮತಃ ॥೧೫೩॥**

ರೋಗವನ್ನು ಹೆಚ್ಚಿಸುವ ಪದಾರ್ಥಗಳನ್ನು ತಿನ್ನುವವರು, ಕಳ್ಳರು ಮತ್ತು ರಾಜನ ಹೆಂಡತಿಯಲ್ಲಿ ಮನಸ್ಸಿಟ್ಟವರು ಮುಂದಿನ ಪರಿಣಾಮವನ್ನು ತಿಳಿದಿದ್ದರೂ ಪ್ರಾರಬ್ಧಕರ್ಮವಶರಾಗಿ ತಮ್ಮ ಅನರ್ಥಗಳನ್ನು ಇಚ್ಛಿಸುತ್ತಾರೆ.

—ಅಪಥ್ಯ ಸೇವನೆಯ ಇಚ್ಛೆಯು ಪ್ರಾರಬ್ಧಫಲವೆಂಬುದು ಹೇಗೆ ?

**ನ ಚಾತ್ರೈತದ್ವಾರಯಿತುಮೀಶ್ವರೇಣಾಪಿ ಶಕ್ಯತೇ ।**
**ಯತ ಈಶ್ವರ ಏವಾಹ ಗೀತಾಯಾಮರ್ಜುನಂ ಪ್ರತಿ ॥೧೫೪॥**

ಈ ಲೋಕದಲ್ಲಿ ಈಶ್ವರನಿಂದ ಕೂಡ ಇದನ್ನು ತಪ್ಪಿಸುವದು ಸಾಧ್ಯವಿಲ್ಲ. ಯಾಕಂದರೆ ಗೀತೆಯಲ್ಲಿ ಅರ್ಜುನನಿಗೆ ಈಶ್ವರನೇ ಹಾಗೆ ಹೇಳಿದ್ದಾನೆ.

—ಆ ಈಶ್ವರನ ವಾಕ್ಯವಿದು.

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥೧೫೫॥**

ವಿವೇಕಉಳ್ಳವನಾದರೂ ತನ್ನಸ್ವಭಾವದಂತೆ ನಡೆಯುವನು. ಎಲ್ಲಪ್ರಾಣಿಗಳೂ ತಮ್ಮಸ್ವಭಾವವನ್ನು ಅನುಸರಿಸುವವು. ಇಲ್ಲಿನಿಗ್ರಹವು ಏನುಮಾಡೀತು?

—ತೀವ್ರ ಪ್ರಾರಬ್ಧವನ್ನು ತಪ್ಪಿಸಲು ಸಾಧ್ಯವಿಲ್ಲ ಎಂಬುದಕ್ಕೆ ದೃಷ್ಟಾಂತ.

**ಅವಶ್ಯಂಭಾವಿಭಾವಾನಾಂ ಪ್ರತೀಕಾರೋ ಭವೇದ್ಯದಿ ।**
**ತದಾ ದುಃಖೈರ್ನ ಲಿಪ್ಯೇರನ್ನಲರಾಮಯುಧಿಷ್ಠಿರಾಃ ॥೧೫೬॥**

ಒಂದು ವೇಳೆ ಮುಂದೆ ನಡೆದೇತೀರಬೇಕಾದ ಪ್ರಾರಬ್ಧವಿಷಯದಲ್ಲಿ ಪ್ರತೀಕಾರವನ್ನು ಮಾಡಲು ಬರುವಂತಿದ್ದರೆ, ನಳ–ರಾಮ–ಧರ್ಮರಾಜಾದಿಗಳು ದುಃಖವನ್ನು ಹೊಂದುತ್ತಲೇ ಇರಲಿಲ್ಲ.

—ಪ್ರಾರಬ್ಧವು ಹೀಗೆ ಅಪರಿಹಾರ್ಯವೆಂದರೆ ಅದನ್ನು ಪರಿಹರಿಸಲಾರದ ಈಶ್ವರನಿಗೆ ಆಳುವ ಶಕ್ತಿ ಇಲ್ಲವೆಂದಹಾಗಾಯಿತು ಎಂದರೆ—

**ನ ಚೇಶ್ವರತ್ವಮೀಶಸ್ಯ ಹೀಯತೇ ತಾವತಾಯತಃ ।**
**ಅವಶ್ಯಂಭಾವಿತಾಽಪ್ಯೇಷಾಮೀಶ್ವರೇಣೈವ ನಿರ್ಮಿತಾ ॥೧೫೭॥**

ಪ್ರಾರಬ್ಧವು ಫಲಿಸಿಯೇತೀರಬೇಕೆಂಬುದುಕೂಡ ಈಶ್ವರನೇ ಮಾಡಿದ ನಿಯಮ. ಆದುದರಿಂದ ಅಷ್ಟುಮಾತ್ರಕ್ಕೆ ಈಶ್ವರನ ಆಳುವ ಶಕ್ತಿಗೇನೂ ಕುಂದಿಲ್ಲ.

—ಈಗ ಬಯಸದೇ ಭೋಗಿಸುವದರ ವಿಷಯ.

**ಪ್ರಶ್ನೋತ್ತರಾಭ್ಯಾಮೇವೈತದ್ಗಮ್ಯತೇಽರ್ಜುನಕೃಷ್ಣಯೋಃ ।**
**ಅನಿಚ್ಛಾಪೂರ್ವಕಂ ಚಾಸ್ತಿ ಪ್ರಾರಬ್ಧಮಿತಿ ತಚ್ಛೃಣು ॥೧೫೮॥**

ಅರ್ಜುನನ ಪ್ರಶ್ನೆ ಹಾಗೂ ಶ್ರೀಕೃಷ್ಣನ ಉತ್ತರಗಳಿಂದ ಬಯಸದೇ ಭೋಗಿಸುವ ಪ್ರಾರಬ್ಧವು ಉಂಟೆಂಬುದು ಗೊತ್ತಾಗುತ್ತದೆ.

—ಭಗವದ್ಗೀತೆಯ ಮೂರನೇ ಅಧ್ಯಾಯದಲ್ಲಿ ಅರ್ಜುನನು ಶ್ರೀಕೃಷ್ಣನಿಗೆ ಕೇಳುತ್ತಾನೆ.

**ಅಥ ಕೇನ ಪ್ರಯುಕ್ತೋಽಯಂ ಪಾಪಂಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವನಿಯೋಜಿತಃ ॥೧೫೯॥**

ವೃಷ್ಣಿಕುಲೋತ್ಪನ್ನನೇ, ಈ ಪುರುಷನು ಇಚ್ಛೆ ಇಲ್ಲದಿದ್ದರೂ ಬಲಾತ್ಕಾರಕ್ಕೆ ಒಳಗಾದವನಂತೆ ಯಾರ ಪ್ರೇರಣೆಯಿಂದ ಪಾಪವನ್ನು ಆಚರಿಸುತ್ತಾನೆ?

—ಇದಕ್ಕೆ ಭಗವಂತನ ಉತ್ತರ.

**ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ-**
**ವೈರಿಣಮ್ ॥೧೬೦॥**

ರಜೋಗುಣದಿಂದ ಹುಟ್ಟಿದ ಕಾಮವೇ ಕ್ರೋಧರೂಪವನ್ನು ತಾಳುವದು. ಇದಕ್ಕೆ ತೃಪ್ತಿ ಎಂಬುದಿಲ್ಲ. ಇದು ಅತಿಶಯ ಪಾತಕಿ. ಇದು ನಿನಗೆ ವೈರಿ ಎಂದು ತಿಳಿ.

ಈ ಕಾಮ ಕ್ರೋಧಗಳೇ ಪ್ರೇರಕಶಕ್ತಿಗಳಾದರೆ ಅನಿಚ್ಛಾಪ್ರಾರಬ್ಧವೆಲ್ಲಿ ಹೋಯಿತು ?

**ಸ್ವಭಾವಜೇನ ಕೌಂತೇಯ ನಿಬದ್ಧಃಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್‌ಕರಿಷ್ಯಸ್ಯವಶೋಽಪಿ-**
**ತತ್ ॥೧೬೧॥**

ಕುಂತೀಪುತ್ರನೇ ! ಸ್ವಭಾವದಿಂದ ಹುಟ್ಟಿದ ನಿನ್ನ ಕರ್ಮಗಳಿಂದ ನೀನು ಬಂಧಿತನಾಗಿರುವೆ. ಮೋಹದಿಂದ ನೀನು ಅವುಗಳನ್ನು ಮಾಡಲು ಇಚ್ಛೆಪಡದಿದ್ದರೂ ಸ್ವಭಾವಕ್ಕೆ ಅಧೀನನಾಗಿ ಅವುಗಳನ್ನು ಮಾಡುವೆ.

—ಈಗ ಪರೇಚ್ಛಾ ಪ್ರಾರಬ್ಧ.

**ನಾನಿಚ್ಛಂತೋ ನ ಚೇಚ್ಛಂತಃ ಪರದಾಕ್ಷಿಣ್ಯಸಂಯುತಾಃ ।**
**ಸುಖದುಃಖೇ ಭಜಂತ್ಯೇತತ್ಪರೇಚ್ಛಾಪೂರ್ವಕರ್ಮಹಿ ॥೧೬೨॥**

ಬಯಸಿಲ್ಲವೆಂಬ ಚಿಂತೆಯೂ ಇಲ್ಲ. ಬಯಸುತ್ತಾರೆ ಎಂಬಂತೆಯೂ ಇಲ್ಲ. ಮತ್ತೊಬ್ಬರ ದಾಕ್ಷಿಣ್ಯಕ್ಕೊಳಗಾಗಿ ಸುಖ–ದುಃಖಗಳನ್ನು ಭೋಗಿಸುತ್ತಾರೆ. ಇದೇ ಪರೇಚ್ಛಾ ಪ್ರಾರಬ್ಧ ಕರ್ಮವು.

—ಇರಲಿ, ಜ್ಞಾನಿಗಳಿಗೆ ಕೂಡ ಬಯಕೆಗಳಾಗುತ್ತವೆ ಎಂದರೆ "ಕಿಂ ಇಚ್ಛನ್" ಇತ್ಯಾದಿ ಶ್ರುತಿಗೆ ವಿರೋಧವಲ್ಲವೇ ?

**ಕಥಂ ತರ್ಹಿ ಕಿಮಿಚ್ಛನ್ನಿತ್ಯೇವಮಿಚ್ಛಾ ನಿಷಿಧ್ಯತೇ ।**
**ನೇಚ್ಛಾನಿಷೇಧಃ ಕಿಂ ತ್ವಿಚ್ಛಾಬಾಧೋ ಭರ್ಜಿತಬೀಜವತ್ ॥೧೬೩॥**

ಎಂದಮೇಲೆ ಶ್ರುತಿಯಲ್ಲಿ "ಯಾವುದನ್ನು ಇಚ್ಛಿಸಿ" ಎಂಬಿವೇ ಮೊದಲಾದವುಗಳಿಂದ ಇಚ್ಛೆಗಳ ನಿಷೇಧವನ್ನು ಹೇಗೆ ಮಾಡಿದರು ? (ಉತ್ತರ) ಇದು ಇಚ್ಛೆಯ ನಿಷೇಧವಲ್ಲ. ಎಂದರೆ ಇಚ್ಛೆಯೇ ಇರಬಾರದೆಂದು ಅರ್ಥವಲ್ಲ. ಬಯಕೆಗಳಿದ್ದರೂ ಅವು ಹುರಿದ ಬೀಜಗಳಂತೆಯೇ ಇರುವವು. ಎಂದರೆ ಅವು ಪುಣ್ಯ–ಪಾಪಗಳನ್ನು ಅಂಟಿಸಲಾರವು.

—ಇದೇ ಅರ್ಥವನ್ನು ವಿಸ್ತರಿಸುತ್ತಾರೆ.

**ಭರ್ಜಿತಾನಿ ತು ಬೀಜಾನಿ ಸಂತ್ಯಕಾರ್ಯಕರಾಣಿಚ ।**
**ವಿದ್ವದಿಚ್ಛಾ ತಥೇಷ್ಟವ್ಯಾಽಸತ್ವಬೋಧಾನ್ನ ಕಾರ್ಯಕೃತ್॥೧೬೪॥**

ಹುರಿದ ಬೀಜಗಳು ಹೇಗೆ ಮೊಳಕೆಯೊಡೆಯಲಾರವೋ, ಹಾಗೆ ಅದ ರಂತೆಯೇ ಜ್ಞಾನಿಯ ಇಚ್ಛೆಗಳನ್ನೂ ತಿಳಿಯಬೇಕು. ಯಾಕಂದರೆ ಬಯ ಸುವ ಪದಾರ್ಥಗಳೆಲ್ಲ ಸುಳ್ಳೆಂದು ತಿಳಿವಳಿಕೆ ಇರುವದರಿಂದ ಅವು ಕರ್ಮಗ ಳಲ್ಲಿ ಪ್ರವೃತ್ತಿಯನ್ನು ಹುಟ್ಟಿಸಲು ಅಸಮರ್ಥವಾಗಿರುತ್ತವೆ.

(ಎಲ್ಲವೂ ಮಿಥ್ಯೆ ಎಂಬ ತಿಳಿವಳಿಕೆ ಜ್ಞಾನಿಗಿರುವದರಿಂದ ಅವನ ಇಚ್ಛೆ ಗಳು ಬಾಧಿತವಾಗಿರುತ್ತವೆ.)

—ಇಂಥ ನಿಷ್ಫಲ ಬಯಕೆಗಳಿಂದ ಜ್ಞಾನಿಗೇನು ?

**ದಗ್ಧಬೀಜಮರೋಹೇಽಪಿ ಭಕ್ಷಣಾಯೋಪಯುಜ್ಯತೇ ।**
**ವಿದ್ವದಿಚ್ಛಾಽಪ್ಯಲ್ಪಭೋಗಂ ಕುರ್ಯಾನ್ನ ವ್ಯಸನಂಬಹು ॥೧೬೫॥**

ಹುರಿದ ಬೀಜವು ಹುಟ್ಟದಿದ್ದರೂ ತಿನ್ನಲು ಉಪಯೋಗಬೀಳುತ್ತದೆ. ಅದರಂತೆ ಜ್ಞಾನಿಯ ಇಚ್ಛೆಗಳೂ ಕೂಡ ಅಲ್ಪಭೋಗವನ್ನು ಕೊಡಬಲ್ಲವು. ಆದರೆ ಬಹಳ ದುಃಖವನ್ನು ಮಾತ್ರ ಕೊಡಲಾರವು.

—ಕರ್ಮವೇ ಭೋಗದ್ವಾರದಿಂದ ದುಃಖವನ್ನೂ ಹುಟ್ಟಿಸುವದು.

**ಭೋಗೇನ ಚರಿತಾರ್ಥತ್ವಾತ್ಪ್ರಾರಬ್ಧಂ ಕರ್ಮಹೀಯತೇ ।**
**ಭೋಕ್ತವ್ಯಸತ್ಯತಾಭ್ರಾಂತ್ಯಾ ವ್ಯಸನಂ ತತ್ರಜಾಯತೇ॥೧೬೬॥**

ಪ್ರಾರಬ್ಧಕರ್ಮವು ಭೋಗಕ್ಕೆ ಕಾರಣವಾಗುವದರಿಂದ ಭೋಗದ ನಂತರ ಅದು ಮುಗಿದು ಹೋಗುವದು. ಆದರೆ ಆ ಭೋಗ ಮತ್ತು ಭೋಗಿ ಸುವ ಪದಾರ್ಥಗಳು ಸತ್ಯವಾದವುಗಳೆಂದು ಭ್ರಾಂತಿ ಹುಟ್ಟಿದಾಗ ಮಾತ್ರ ದುಃಖವಾಗುವದು.

— ಈಗ ವ್ಯಸನಕ್ಕೆ ಕಾರಣವಾಗುವ ಭ್ರಾಂತಿಯ ಬಗೆಗೆ ಹೇಳುತ್ತಾರೆ.

**ಮಾ ವಿನಶ್ಯತ್ವಯಂ ಭೋಗೋ ವರ್ಧತಾಮುತ್ತರೋತ್ತ-ರಮ್ ।**
**ಮಾ ವಿಘ್ನಾಃಪ್ರತಿಬಧ್ನಂತು ಧನ್ಯೋಽಸ್ಮ್ಯಸ್ಮಾದಿತಿಭ್ರಮಃ॥೧೬೭॥**

ಈ ಸುಖವು ಕಳೆದುಹೋಗದಿರಲಿ. ಇದು ಮುಂದೆ ಮುಂದೆ ಹೆಚ್ಚುತ್ತ ಹೋಗಲಿ. ಇದಕ್ಕೆ ಯಾವ ವಿಘ್ನಗಳೂ ಅಡ್ಡಬರದಿರಲಿ. ಈ ಭೋಗ ದಿಂದ ನಾನು ಧನ್ಯ; ಹೀಗೆ ಭ್ರಾಂತಿ ಹಬ್ಬುತ್ತದೆ. ಇದರಿಂದಲೇ ದುಃಖ.

—ಈ ಭ್ರಾಂತಿಗೆ ಪರಿಹಾರ.

**ಯದಭಾವಿ ನ ತದ್ಭಾವಿ ಭಾವಿ ಚೇನ್ನ ತದನ್ಯಥಾ ।**
**ಇತಿ ಚಿಂತಾವಿಷಘ್ನೋಽಯಂ ಬೋಧೋಭ್ರಮ-**
**ನಿವರ್ತಕಃ ॥೧೬೮॥**

ಬಾರದೇ ಇದ್ದುದು ಬರುವದಿಲ್ಲ. ಬರಬೇಕಾದುದು ತಪ್ಪುವದಿಲ್ಲ. ಹೀಗೆ ಚಿಂತೆ ಎಂಬ ವಿಷವನ್ನು ಪರಿಹಾರ ಮಾಡಬಲ್ಲ ಬೋಧವು ಈ ಭ್ರಾಂತಿಯನ್ನು ಕಳೆಯಬಲ್ಲದು.

—ಜ್ಞಾನಿ-ಮತ್ತು ಅಜ್ಞಾನಿಗಳಿಬ್ಬರೂ ಅದೇಕೆ ಸಮವಿಲ್ಲ ?

**ಸಮೇಽಪಿ ಭೋಗೆ ವ್ಯಸನಂ ಭ್ರಾಂತೋ ಗಚ್ಛೇನ್ನ ಬುದ್ಧವಾನ್ ।**
**ಅಶಕ್ಯಾರ್ಥಸ್ಯ ಸಂಕಲ್ಪಾದ್ ಭ್ರಾಂತಸ್ಯ ವ್ಯಸನಂ ಬಹು ॥೧೬೯॥**

ಭೋಗವು ಇಬ್ಬರಿಗೆ ಸಮವಾಗಿದ್ದರೂ ಭ್ರಾಂತಿಗೊಂಡವನು ದುಃಖಕ್ಕೆ ಗುರಿಯಾಗುತ್ತಾನೆ. ಜ್ಞಾನಿಯು ಆಗುವದಿಲ್ಲ. ಯಾಕಂದರೆ ಅಶಕ್ಯವಾದ ಸಂಗತಿಗಳು ಜರುಗಲೆಂದು ಎಂದರೆ ದೊರೆತ ಭೋಗಾದಿಗಳು ನಾಶವಾಗದಿರಲಿ ಎಂದು ಮೊದಲಾಗಿ ಅಜ್ಞಾನಿಯು ಇಚ್ಛಿಸುತ್ತಿರುವದರಿಂದ ಬಹಳ ದುಃಖಕ್ಕೆ ಗುರಿಯಾಗುವನು. —ವಿವೇಕಿಗೆ ಮಾತ್ರ ದುಃಖಾಭಾವ.

**ಮಾಯಾಮಯತ್ವಂ ಭೋಗಸ್ಯ ಬುದ್ಧ್ವಾಽಽಸ್ಥಾಮುಪ-**
**ಸಂಹರನ್ ।**
**ಭುಂಜಾನೋಽಪಿ ನ ಸಂಕಲ್ಪಂ ಕುರುತೇ ವ್ಯಸನಂ ಕುತಃ ॥೧೭೦॥**

ಭೋಗಗಳೆಲ್ಲ ಇಂದ್ರಜಾಲ (ಮಾಯೆ) ದಂತಿರುವವೆಂದು ತಿಳಿದು ಅವುಗಳಲ್ಲಿಯ ಪ್ರೀತಿಯನ್ನು ಹಿಂತಿರುಗಿಸಿಕೊಂಡ ಜ್ಞಾನಿಯು ಭೋಗಗಳನ್ನು ಭೋಗಿಸುತ್ತಿದ್ದರೂ ಅವುಗಳ ಬಗೆಗೆ ಅಲ್ಲಸಲ್ಲದ ಸಂಕಲ್ಪಗಳನ್ನು ಮಾಡುವದಿಲ್ಲ. ಎಂದಮೇಲೆ ಅವನಿಗೆ ದುಃಖವೆಲ್ಲಿ ?

—ಹೇಗೇ ತಿಳಿಯಲಿ, ಭೋಗಗಳಿಂದ ತಾತ್ಕಾಲಿಕವಾದರೂ ಸುಖವಾಗಿಯೇ ತೀರುವದು. ಎಂದಮೇಲೆ ಪ್ರೀತಿಯು ಹುಟ್ಟದೇ ಹೇಗಿದ್ದೀತು ?

**ಸ್ವಪ್ನೇಂದ್ರಜಾಲಸದೃಶಮಚಿಂತ್ಯರಚನಾತ್ಮಕಮ್ ।**
**ದೃಷ್ಟನಷ್ಟಂ ಜಗತ್ಪಶ್ಯನ್ ಕಥಂ ತತ್ರಾನುರಜ್ಯತಿ ॥೧೭೧॥**

ಕನಸಿನಂತೆ ಮತ್ತು ಇಂದ್ರಜಾಲದಂತೆ ಊಹಿಸುವದಕ್ಕೆ ಕೂಡ ಆಗದಿರುವ ತೋರಿ ತೋರಿ ಅಡಗುತ್ತಿರುವ ಜಗತ್ತನ್ನು ಕಾಣುವ ಜ್ಞಾನಿಯು ಅದರಲ್ಲಿ ಹೇಗೆ ಆಸಕ್ತಿ ತೋರಿಸಬಹುದು ?

—ಈ ಜಗತ್ತು ಕನಸು-ಇಂದ್ರಜಾಲ ಎಂಬ ತಿಳಿವಳಿಕೆ ಹುಟ್ಟುವದು ಹೇಗೆ ?

**ಸ್ವಸ್ವಪ್ನಮಾಪರೋಕ್ಷ್ಯೇಣ ದೃಷ್ಟ್ವಾ ಪಶ್ಯನ್ ಸ್ವಜಾಗರಮ್ ।**
**ಚಿಂತಯೇದಪ್ರಮತ್ತಃ ಸನ್ನುಭಾವನುದಿನಂ ಮುಹುಃ ॥೧೭೩॥**

ತನ್ನ ಕನಸನ್ನು ಪ್ರತ್ಯಕ್ಷವಾಗಿ ನೋಡಿ, ಅದರೊಡನೆ ಎಚ್ಚರವನ್ನು ಅನುಭವಿಸುತ್ತ ಜಾಗ್ರತೆಯಿಂದ ಅವೆರಡನ್ನೂ ಪ್ರತಿದಿನ ಮೇಲಿಂದ ಮೇಲೆ ತುಲನೆ ಮಾಡುತ್ತಿರಬೇಕು. ಎಂದರೆ ಎಚ್ಚರವೂ ಕನಸಿನಂತಿರುವದೆಂದು ಅನುಸಂಧಾನ ಮಾಡಬೇಕು.

**ಚಿರಂ ತಯೋಃ ಸರ್ವಸಾಮ್ಯಮನುಸಂಧಾಯ ಜಾಗರೇ ।**
**ಸತ್ಯತ್ವಬುದ್ಧಿಂ ಸಂತ್ಯಜ್ಯ ನಾನುರಜ್ಯತಿ ಪೂರ್ವವತ್ ॥೧೭೪॥**

ಅವೆರಡಕ್ಕೂ ಎಲ್ಲ ರೀತಿಯಿಂದಲೂ ಸಾಮ್ಯವಿದೆ ಎಂದು ಬಹುಕಾಲದ ವರೆಗೆ ಮನನಮಾಡಿಕೊಳ್ಳುತ್ತ, ಎಚ್ಚರದ ವಿಷಯಕ್ಕಿರುವ ಸತ್ಯತ್ವ ಬುದ್ಧಿಯನ್ನು ಸಂಪೂರ್ಣವಾಗಿ ಬಿಟ್ಟು ಅವನು ತಿಳಿವಳಿಕೆಯ ಪೂರ್ವದಲ್ಲಿಯಂತೆ ಎಚ್ಚರದಲ್ಲಿ ಆಸಕ್ತನಾಗುವದಿಲ್ಲ.

(ಕ್ಷಣಿಕವಾದ ಸುಖ. ಸುಖೋಪಭೋಗದ ನಂತರ ಬೇಸರ. ವಿನಾಶಿತ್ವ. ತಾತ್ಕಾಲಿಕ ಭೋಗದ ಹೇತು; ಇತ್ಯಾದಿ ಧರ್ಮಗಳು ಎರಡೂ ಅವಸ್ಥೆಗಳಲ್ಲಿಯ ವಿಷಯಗಳಲ್ಲಿ ಸಮಾನವಾಗಿವೆ. ಎಂದರೆ ಈ ವಿಚಾರದಲ್ಲಿ ಎರಡೂ ಅವಸ್ಥೆಗಳು ಒಂದೇಬಗೆಯಾಗಿವೆ ಎಂದು ಚಿಂತನೆ ಮಾಡುತ್ತ ಎಚ್ಚರದ ವಿಷಯಕ್ಕಿರುವ ಸತ್ಯತ್ವದ ಅಭಿಮಾನವನ್ನು ಬಿಡಬೇಕು.)

—ಪ್ರಪಂಚವು ಸುಳ್ಳು ಎಂಬ ಜ್ಞಾನವು, ವಿಷಯಗಳು ಸತ್ಯವಾಗಿವೆ ಎಂಬ ದೃಷ್ಟಿಯಿಂದ ಘಟಿಸುವ ಭೋಗವು ಇವುಗಳಲ್ಲಿ ಪರಸ್ಪರ ವಿರೋಧವಿದೆ. ಎಂದಮೇಲೆ ಪ್ರಪಂಚವು ಸುಳ್ಳು ಎಂಬ ಜ್ಞಾನವಾದಮೇಲೆ ವಿಷಯಭೋಗವು ಹೇಗೆ ಘಟಿಸುವದು ?

**ಇಂದ್ರಜಾಲಮಿದಂ ದ್ವೈತಮಚಿಂತ್ಯರಚಾತ್ವತಃ ।**
**ಇತ್ಯವಿಸ್ಮರತೋ ಹಾನಿಃ ಕಾವಾ ಪ್ರಾರಬ್ಧಭೋಗತಃ ॥೧೭೪॥**

ಈ ಪ್ರಪಂಚವು ಊಹಿಸಲಿಕ್ಕೆ ಬಾರದಂಥ ಇಂದ್ರಜಾಲವಾಗಿದೆ ಎಂದು ತಿಳಿದು ಮರೆಯದಿರುವ ಜ್ಞಾನಿಗೆ ಪ್ರಾರಬ್ಧಭೋಗದಿಂದ ಯಾವ ಹಾನಿ ಯಾದೀತು ?

**ನಿರ್ಬಂಧಸ್ತತ್ವವಿದ್ಯಾಯಾ ಇಂದ್ರಜಾಲತ್ವಸಂಸ್ಮೃತೌ ।**
**ಪ್ರಾರಬ್ಧಸ್ಯಾಗ್ರಹೋಭೋಗೇ ಜೀವಸ್ಯ ಸುಖ–**
**ದುಃಖಯೋಃ ॥೧೭೫॥**

ತತ್ವಜ್ಞಾನವು ಜಗತ್ತು ಇಂದ್ರಜಾಲದಂತಿರುವದೆಂದು ನೆನೆದುಕೊಳ್ಳು ತ್ತಿರಬೇಕೆಂದು ಆಗ್ರಹಪಡಿಸುತ್ತದೆ. ಪ್ರಾರಬ್ಧವು ಜೀವನಿಗೆ ಸುಖ–ದುಃಖಾದಿ ಭೋಗಗಳನ್ನು ಒದಗಿಸುವ ವಿಷಯದಲ್ಲಿ ಆಗ್ರಹ ತೋರುತ್ತದೆ.

(ಭೋಗಗಳು ಸತ್ಯವಾಗಿವೆ ಎಂದು ಸಿದ್ಧಮಾಡುವದರ ವಿಷಯದಲ್ಲಿ ಪ್ರಾರಬ್ಧವು ಆಗ್ರಹಪಡಿಸುವದಿಲ್ಲ.)

**ವಿದ್ಯಾರಬ್ಧೇ ವಿರುಧ್ಯೇತೇ ನ ಭಿನ್ನವಿಷಯತ್ವತಃ ।**
**ಜಾನದ್ಭಿರಪ್ಯೈಂದ್ರಜಾಲವಿನೋದೋದೃಶ್ಯತೇ ಖಲು ॥೧೭೬॥**

ವಿಷಯಗಳು ಬೇರೆ ಬೇರೆ ಆಗಿರುವದರಿಂದ ಆತ್ಮಜ್ಞಾನ ಮತ್ತು ಪ್ರಾರಬ್ಧ ಕರ್ಮಗಳು ಒಂದಕ್ಕೊಂದು ವಿರೋಧವಲ್ಲ. ಇದು ಇಂದ್ರಜಾಲ ಎಂದರೆ ಸುಳ್ಳು ಪದಾರ್ಥಗಳಿಂದ ನಡೆದ ಆಟವೆಂದು ತಿಳಿವಳಿಕೆಯುಳ್ಳವರು ಕೂಡ ಅದರ ಚಮತ್ಕಾರವನ್ನು ನೋಡುತ್ತಿರುವರು.

ಒಂದು ವೇಳೆ ಆತ್ಮಜ್ಞಾನ–ಪ್ರಾರಬ್ಧಕರ್ಮಗಳು ವಿರೋಧಿಯಾಗಬಹು ದಿತ್ತು. ಅದು ಹೇಗಂದರೆ ?

**ಜಗತ್‌ಸತ್ಯತ್ವಮಾಪಾದ್ಯ ಪ್ರಾರಬ್ಧಂ ಭೋಜಯೇದ್ಯದಿ ।**
**ತದಾ ವಿರೋಧೀ ವಿದ್ಯಾಯಾ ಭೋಗಮಾತ್ರಾನ್ನ-**
**ಸತ್ಯತಾ ॥೧೭೭॥**

ಪ್ರಾರಬ್ಧಕರ್ಮವು ಜಗತ್ತು ಸತ್ಯವೆಂದು ಹೇಳಿ ಒಂದುವೇಳೆ ಭೋಗಿಸು ವಂತೆ ಮಾಡಿದ್ದ ಪಕ್ಷದಲ್ಲಿ ಆಗ ಆತ್ಮಜ್ಞಾನಕ್ಕೆ ವಿರೋಧಿಯಾಗಬಹುದಾಗಿತ್ತು.

ಆದರೆ ಆದರಿಂದ ಸುಖ-ದುಃಖಗಳ ಅನುಭವ ಬರುವದೆಂದಮಾತ್ರಕ್ಕೆ ಜಗತ್ತಿನ ಸತ್ಯತ್ವವು ಸಿದ್ಧವಾಗುವದಿಲ್ಲ.

—ಸುಳ್ಳಾದ ಪದಾರ್ಥಗಳಿಂದ ಸುಖ - ದುಃಖಾನುಭವವಾಗುತ್ತದೆ ಎಂಬುದಕ್ಕೆ ದೃಷ್ಟಾಂತವಿಲ್ಲ ಎಂದರೆ—

**ಅನೂನೋ ಜಾಯತೇಭೋಗಃ ಕಲ್ಪಿತೈಃ ಸ್ವಪ್ನವಸ್ತುಭಿಃ |**
**ಜಾಗ್ರದ್‌ವಸ್ತುಭಿರಪ್ಯೇವಮಸತ್ಯೈರ್ಭೋಗ ಇಷ್ಯತಾಮ್||೧೭೮||**

ಕನಸಿನಲ್ಲಿ ಕಲ್ಪಿತವಾದ ವಸ್ತುಗಳಿಂದ ಕೂಡ ಕೊರತೆ ಎನಿಸದ ಭೋಗವು ದೊರೆಯುತ್ತದೆ. ಆದರಂತೆ ಎಚ್ಚರದಲ್ಲಿಯ ಅಸತ್ಯ ಪದಾರ್ಥಗಳಿಂದಲೂ ಕೂಡ ಭೋಗ ದೊರೆಯುತ್ತದೆ ಎಂದು ತಿಳಿಯಬೇಕು.

—ಪ್ರಾರಬ್ಧಕರ್ಮವು ಜ್ಞಾನಕ್ಕೆ ವಿರೋಧಿಯಾಗಿಲ್ಲ. ಅದರಂತೆ ಜ್ಞಾನವು ಪ್ರಾರಬ್ಧಕರ್ಮಕ್ಕೆ ವಿರೋಧಿಯಾಗಿಲ್ಲ ಎನ್ನುತ್ತಾರೆ.

**ಯದಿವಿದ್ಯಾಽಪಹ್ನುವೀತಜಗತ್‌ಪ್ರಾರಬ್ಧಘಾತಿನೀ |**
**ತದಾ ಸ್ಯಾನ್ನ ತು ಮಾಯಾತ್ವಬೋಧೇನ ತದಪಹ್ನವಃ||೧೭೯||**

ಒಂದುವೇಳೆ ಜ್ಞಾನವು ಭೋಗ್ಯ ವಸ್ತುಗಳನ್ನೆಲ್ಲ ಇಲ್ಲದಂತೆ ಮಾಡಿದ್ದ ಪಕ್ಷದಲ್ಲಿ ಅದು ಪ್ರಾರಬ್ಧಕ್ಕೆ ವಿರೋಧಿಯಾಗುತ್ತಿತ್ತು. ಆದರೆ ಅದು ಜಗತ್ತು ಮಾಯಾಮಯವೆಂದು ಮಾತ್ರ ಹೇಳುವದು. ಅದರಿಂದೇನೂ ಜಗತ್ತು ಇಲ್ಲದಂತಾಗುವದಿಲ್ಲ.

—ಇದನ್ನೇ ವಿಸ್ತಾರಮಾಡುತ್ತಾರೆ.

**ಅನಪಹ್ನುತ್ಯ ಲೋಕಾಸ್ತದಿಂದ್ರಜಾಲಮಿದಂ ತ್ವಿತಿ |**
**ಜಾನಂತ್ಯೇವಾನಪಹ್ನುತ್ಯ ಭೋಗಂ ಮಾಯಾತ್ವ-**
**ಧೀಸ್ತಥಾ ||೧೮೦||**

ಜನರು ಇಂದ್ರಜಾಲದ ಸ್ವರೂಪವನ್ನು ನಾಶಗೊಳಿಸದೇ 'ಇದು ಇಂದ್ರಜಾಲ'ವೆಂದು ಹೇಗೆ ತಿಳಿಯುವರೋ, ಹಾಗೆ ಭೋಗ್ಯವಸ್ತು ಮತ್ತು ಭೋಗವನ್ನು ಇಲ್ಲದಂತೆ ಮಾಡದೇ ಜಗತ್ತು ಮಾಯಾಮಯವೆಂದು ತಿಳಿಯಬಹುದು.

—ಬೃಹದಾರಣ್ಯಕ ಶ್ರುತಿಯು ದೃಷ್ಟಾ-ದರ್ಶನ-ದೃಶ್ಯಗಳ ಅಭಾವವನ್ನು ಹೇಳುತ್ತದೆ. ಎಂದಮೇಲೆ ಅದರಿಂದ ಹುಟ್ಟಿದ ಜ್ಞಾನ (ವಿದ್ಯೆ)ವು

ಜಗತ್ತನ್ನು ಸುಳ್ಳುಗೊಳಿಸುವದು. ಹೀಗಿರುವಾಗ ಜ್ಞಾನಿಗೆ ಭೋಗವು ಹೇಗೆ ಲಭಿಸುವದು ?

**ಯತ್ರ ತ್ವಸ್ಯ ಜಗತ್ ಸ್ವಾತ್ಮಾ ಪಶ್ಯೇತ್ ಕಸ್ತತ್ರ ಕೇನ ಕಿಮ್ ।**
**ಕಿಂ ಜಿಘ್ರೇತ್ ಕಿಂ ವದೇದ್ವೇತಿ ಶ್ರುತೌ ತು ಬಹು ಘೋಷಿತಮ್ ॥೧೮೧॥**

ಯಾವಾಗ ಜಗತ್ತೆಲ್ಲ ತನ್ನಸ್ವರೂಪ (ಆತ್ಮ)ವೇ ಆಗುವದೋ, ಆಗ ಯಾರು ಯಾತರಿಂದ ಏನನ್ನು ನೋಡುವನು ? ಏನನ್ನು ಮೂಡುವನು ? ಏನನ್ನು ಹೇಳುವನು ? ಎಂದು ಶ್ರುತಿಯಲ್ಲಿ ಬಹಳವಾಗಿ ಸಾರಿಹೇಳಿದೆ.

**ತೇನ ದ್ವೈತಮಪಹ್ನುತ್ಯ ವಿದ್ಯೋದೇತಿ ನ ಚಾನ್ಯಥಾ ।**
**ತಥಾ ಚ ವಿದುಷೋ ಬೋಗಃ ಕಥಂ ಸ್ಯಾದಿತಿ ಚೇತ್ ಶೃಣು ॥೧೮೨॥**

ಆದುದರಿಂದ ಭೋಗ್ಯರೂಪವಾದ ಜಗತ್ತನ್ನು ಇಲ್ಲದಂತೆ ಮಾಡಿಯೇ ಜ್ಞಾನವು ಹುಟ್ಟುವದೆಂದಹಾಗಾಯಿತು. ಅದರ ಹೊರತೂ ಇಲ್ಲ ಎಂದು ಸಿದ್ಧವಾದಂತಾಯಿತು. ಎಂದಮೇಲೆ ವಿದ್ವಾಂಸರಿಗೆ ಭೋಗಾನುಭವ ಘಟಿಸುವದು ಹೇಗೆ ? ಎಂದರೆ ಕೇಳು.

**ಸುಷುಪ್ತಿವಿಷಯಾ ಮುಕ್ತಿವಿಷಯಾ ವಾ ಶ್ರುತಿಸ್ತ್ವಿತಿ ।**
**ಉಕ್ತಂ ಸ್ವಾಪ್ಯಯಸಂಪತ್ತ್ಯೋರಿತಿಸೂತ್ರೇ ಹ್ಯತಿ ಸ್ಫುಟಮ್ ॥೧೮೩॥**

'ಸ್ವಾಪ್ಯಯ ಸಂಪತ್ತ್ಯೋಃ' ಬ್ರ. ಸೂ. ಎಂಬ ಬ್ರಹ್ಮಸೂತ್ರದಲ್ಲಿ ಆ ಶ್ರುತಿಯು ಗಾಢನಿದ್ರೆಯ ವಿಷಯಕ್ಕಾಗಲೀ, ಅಥವಾ ವಿದೇಹಮುಕ್ತಿ ವಿಷಯಕ್ಕಾಗಲೀ ಇರುವದೆಂದು ಅತಿ ಸ್ಪಷ್ಟವಾಗಿ ಹೇಳಿದೆ.

—ಸೂತ್ರಕಾರರ ಆ ಅಭಿಪ್ರಾಯವನ್ನು ಒಪ್ಪದೇಹೋದರೆ ಯಾವ ದೋಷವುಂಟಾಗುವದೆಂದು ಹೇಳುತ್ತಾರೆ.

**ಅನ್ಯಥಾ ಯಾಜ್ಞವಲ್ಕ್ಯಾದೇರಾಚಾರ್ಯತ್ವಂ ನ ಸಂಭವೇತ್ ।**
**ದ್ವೈತದೃಷ್ಟಾವವಿದ್ವತ್ತಾ ದ್ವೈತಾದೃಷ್ಟೌ ನ ವಾಗ್ವದೇತ್ ॥೧೮೪॥**

ಹಾಗೆ ತಿಳಿಯದೇ ಹೋದ ಪಕ್ಷದಲ್ಲಿ ಯಾಜ್ಞವಲ್ಕ್ಯರೇ ಮೊದಲಾದ ವರ ಆಚಾರ್ಯತ್ವವೇ ಸಂಭವಿಸುವದಿಲ್ಲ. ಯಾಕಂದರೆ ಅವರು ತಮ್ಮ ಹೊರತೂ ಮತ್ತೊಂದನ್ನು ಕಾಣುತ್ತಿದ್ದರು ಎಂದರೆ ಅವರು ಜ್ಞಾನಿಗಳಲ್ಲ ವೆನ್ನಬೇಕಾಗುವದು. ಮತ್ತೊಂದನ್ನು ಕಾಣುತ್ತಿದ್ದಿಲ್ಲ ಎಂದರೆ ಉಪದೇಶಾದಿ ಗಳೇ ಹುಟ್ಟುತ್ತಿರಲಿಲ್ಲ.

—ನಿರ್ವಿಕಲ್ಪಸಮಾಧಿಯಲ್ಲಿ ದ್ವೈತವು ತೋರುವದಿಲ್ಲ. ಆದುದರಿಂದ ಅದೇ ಅಪರೋಕ್ಷ ವಿದ್ಯೆ. ಇಂಥ ವಿದ್ಯೆಯು ಯಾಜ್ಞವಲ್ಕ್ಯಾದಿಗಳಿಗೆ ಇಲ್ಲದ್ದರಿಂದ ಅವರಿಗೆ ದ್ವೈತವು ತೋರಿತು. ಎಂದರೆ—

**ನಿರ್ವಿಕಲ್ಪಸಮಾಧೌತು ದ್ವೈತಾದರ್ಶನಹೇತುತಃ ।**
**ಸೈವಾಪರೋಕ್ಷವಿದ್ಯೇತಿಚೇತ್ಸುಷುಪ್ತಿಸ್ತಥಾ ನ ಕಿಮ್ ॥೧೪೫॥**

ನಿರ್ವಿಕಲ್ಪಸಮಾಧಿಯಲ್ಲಿ ದ್ವೈತವುತೋರುವದಿಲ್ಲ. ಆದುದರಿಂದ ಅದೇ ಅಪರೋಕ್ಷವಿದ್ಯೆ. ಎಂದರೆ–ಗಾಢ ನಿದ್ರೆಯಲ್ಲಿಯೂ ಹಾಗಿರುವದಿಲ್ಲವೇನು?

(ನಿರ್ವಿಕಲ್ಪ ಸಮಾಧಿಯಲ್ಲಿರುವದೇ ಪ್ರತ್ಯಕ್ಷಜ್ಞಾನವೆನ್ನುವದಾದರೆ ಗಾಢನಿದ್ರೆಯಲ್ಲಿರುವುದೂ ಪ್ರತ್ಯಕ್ಷ ಜ್ಞಾನವೆನ್ನಬೇಕಾದೀತು. ಇದರಿಂದ ಅತಿ ಪ್ರಸಂಗವುಂಟಾಗುವದು)

**ಆತ್ಮತತ್ತ್ವಂ ನ ಜಾನಾತಿ ಸುಪ್ತೌ ಯದಿ ತದಾತ್ವಯಾ ।**
**ಆತ್ಮಧೀರೇವ ವಿದ್ಯೇತಿ ವಾಚ್ಯಂ ನ ದ್ವೈತವಿಸ್ಮೃತಿಃ ॥೧೪೬॥**

ಗಾಢನಿದ್ರೆಯಲ್ಲಿ ಆತ್ಮತತ್ತ್ವದ ಅರಿವಿರುವದಿಲ್ಲ ಎಂದರೆ ಆತ್ಮಸಾಕ್ಷಾ ತ್ಕಾರವೇ ವಿದ್ಯೆಎಂದು ನೀನು ಹೇಳಬೇಕಾಯಿತು. ದ್ವೈತದ ವಿಸ್ಮರಣವೆಂದರೆ ಆತ್ಮಜ್ಞಾನವೆಂದು ಹೇಳುವದು ಯೋಗ್ಯವಾಗದು.

ದ್ವೈತದರ್ಶನದ ಅಭಾವವೂ, ಆತ್ಮಸ್ವರೂಪದ ಜ್ಞಾನವೂ ಕೂಡಿ ಕೊಂಡು ಒಂದು ವಿದ್ಯೆಯಾಗುವದು. ಅವುಗಳಲ್ಲಿ ಒಂದೊಂದಕ್ಕೇ ವಿದ್ಯೆ ಎನ್ನಲು ಬರುವದಿಲ್ಲ. ಎಂದರೆ—

**ಉಭಯಂ ಮಿಲಿತಂ ವಿದ್ಯಾ ಯದಿ ತರ್ಹಿ ಘಟಾದಯಃ ।**
**ಅರ್ಧವಿದ್ಯಾಭಾಜಿನಃ ಸ್ಯುಃ ಸಕಲದ್ವೈತವಿಸ್ಮೃತೇಃ ॥೧೪೭॥**

ಒಂದುವೇಳೆ ಎರಡೂ ಕೂಡಿ ವಿದ್ಯೆ ಎನಿಸುವದು ಎಂದರೆ ಘಟ ಮೊದಲಾದ ಎಲ್ಲ ಜಡ ಪದಾರ್ಥಗಳು ದ್ವೈತವನ್ನು ಮರೆತಿರುವದರಿಂದ ಅವು ಅರ್ಥ ಜ್ಞಾನವುಳ್ಳವುಗಳೆಂದು ಹೇಳುವ ಪ್ರಸಂಗವು ಬರುವದು.

(ದ್ವೈತದ ವಿಸ್ಮರಣವು ವಿದ್ಯೆ ಎಂದರೆ ಜ್ಞಾನದ ಒಂದು ಭಾಗವೆಂದು ಹೇಳುವದಾದರೆ ಜಡಪದಾರ್ಥಗಳೆಲ್ಲ ದ್ವೈತವನ್ನು ಅರಿಯದವುಗಳಾದುದರಿಂದ ಅವು ಅರ್ಥ ಜ್ಞಾನಕ್ಕೆ ಪಾತ್ರವೆನ್ನಬೇಕಾಗುವದು.)

**ಮಶಕಧ್ವನಿ ಮುಖ್ಯಾನಾಂ ವಿಕ್ಷೇಪಾಣಾಂ ಬಹುತ್ವತಃ ।**
**ತವಾವಿದ್ಯಾ ತಥಾ ನ ಸ್ಯಾದ್ಘಟಾದೀನಾಂ ಯಥಾ ದೃಢಾ ॥೧೮೮॥**

ಸಮಾಧಿಕಾಲದಲ್ಲಿ ನೊಣ ಮುಂತಾದವುಗಳ ಗೊಂಗಾಟವು ವಿಶೇಷವಾಗಿರುವದರಿಂದ, ಘಟ ಮೊದಲಾದವುಗಳಿಗೆ ಜ್ಞಾನವು ದೃಢವಾಗಿರುವಂತೆ ನಿನಗೆ ಜ್ಞಾನವು ದೃಢವಾಗಿರುವದಿಲ್ಲವೆನ್ನಬೇಕಾಗುವದು.

ಯಾಕಂದರೆ ನೊಣಗಳ ಗೊಂಗಾಟಮುಂತಾದವು ಜ್ಞಾನಸ್ಥಿತಿಯಿಂದ ಮನಸ್ಸನ್ನು ದ್ವೈತಕ್ಕೆ ತಂದು ನಿಲ್ಲಿಸುವವು. ಆದುದರಿಂದ ನಿನಗೆ ಘಟಾದಿಗಳಂತೆ ಅರ್ಥ ಜ್ಞಾನವೂ ಆಗುವದು ಸಾಧ್ಯವಿಲ್ಲ ಎನ್ನಬೇಕಾಗುವದು.

—ಎಂದಮೇಲೆ ಆತ್ಮ ಜ್ಞಾನವು ಮಾತ್ರ ವಿದ್ಯೆ. ಪ್ರಪಂಚವನ್ನು ಮರೆಯುವದು (ದ್ವೈತವಿಸ್ಮೃತಿ) ವಿದ್ಯೆಯಲ್ಲ ಎಂದು ಪೂರ್ವ ಪಕ್ಷಿಯು ಒಪ್ಪಲು ಸಿದ್ಧಾಂತಿಯು ಆಶೀರ್ವದಿಸುತ್ತಾನೆ.

**ಆತ್ಮಧೀರೇವ ವಿದ್ಯೇತಿ ಯದಿ ತರ್ಹಿ ಸುಖೀಭವ ।**
**ದುಷ್ಟಚಿತ್ತಂ ನಿರುಂಧ್ಯಾಚ್ಚೇನ್ನಿರುಂಧಿ ತ್ವಂ ಯಥಾ ಸುಖಮ್ ॥೧೮೯॥**

ಈಗ ಒಂದುವೇಳೆ ಆತ್ಮಸಾಕ್ಷಾತ್ಕಾರವೇ ಜ್ಞಾನವೆಂದು ಅನ್ನುವದಾದರೆ ನಾವು 'ಸುಖಿಯಾಗು' ಎಂದು ಆಶೀರ್ವದಿಸುತ್ತೇವೆ. ಇನ್ನು ದುಷ್ಟಚಿತ್ತವನ್ನು ನಿಗ್ರಹಿಸಬೇಕು ಎನ್ನುವದಾದರೆ ನೀನು ಅದನ್ನು ಅವಶ್ಯವಾಗಿನಿಗ್ರಹಿಸು.

(ಯಾಕಂದರೆ ಚಿತ್ತದೋಷವಿರುವಲ್ಲಿ ಆತ್ಮಜ್ಞಾನವು ಆಗಲಾರದು)

**ತದಿಷ್ಟಮೇವಷ್ಟವ್ಯಮಾಯಾಮಯತ್ವಸ್ಯ ಸಮೀಕ್ಷಣಾತ್ ।**
**ಇಚ್ಛನ್ನಪ್ಯಜ್ಞವನ್ನೇಚ್ಛೇತ್ ಕಿಮಿಚ್ಛನ್ನಿತಿ ಹಿ ಶ್ರುತಮ್ ॥೧೯೦॥**

ಅದು ನಮಗೆ ಒಪ್ಪಿಗೆಯಾದುದೇ. ಅದ್ವಿತೀಯವಾದ ಆತ್ಮಜ್ಞಾನವಾಗಬೇಕಾದರೆ ಜಗತ್ತು ಮಾಯಾಮಯವೆಂದು ತಿಳಿವಳಿಕೆಯಾಗಬೇಕು. ಚಿತ್ತನಿಗ್ರಹಕಾಲದಲ್ಲಿ ಆ ತಿಳಿವಳಿಕೆ ಪ್ರತ್ಯಕ್ಷ ಅನುಭವಕ್ಕೆ ಬರುವದು. ಜ್ಞಾನಿಯು ಒಂದು ವೇಳೆ ಇಚ್ಛಿಸಿದರೂ ಅಜ್ಞನಂತೆ ಅವನು ಇಚ್ಛಿಸಲಾರನು. ಆದಕ್ಕಾಗಿ 'ಕಿಮಿಚ್ಛನ್‌ಂ' ಎಂದು ಮೊದಲಾಗಿ ಶ್ರುತಿ ಹೇಳಿದೆ.

**ರಾಗೋ ಲಿಂಗಮಬೋಧಸ್ಯ ಸಂತು ರಾಗಾದಯೋ ಬುಧೇ ।**
**ಇತಿ ಶಾಸ್ತ್ರದ್ವಯಂ ಸಾರ್ಥಮೇವಂ ಸತ್ಯವಿರೋಧತಃ ॥೯೧॥**

ಶ್ರುತಿಯ ಅಭಿಪ್ರಾಯವು ಹೀಗೆ ಎಂದು ತಿಳಿಯುವದಾದರೆ, ರಾಗ ಎಂದರೆ ಆಸಕ್ತಿಯು ಜ್ಞಾನವಿಲ್ಲದ ಗುರುತು ಎಂಬುದೂ, ಮತ್ತು ಜ್ಞಾನಿಯಲ್ಲಿ ಆಸಕ್ತಿ ಮೊದಲಾದವು ಬೇಕಾದಷ್ಟಿಗಲಿ, ಎಂಬುದೂ ಹೀಗೆ ಇವೆರಡು ಶಾಸ್ತ್ರ ವಚನಗಳು ಒಂದಕ್ಕೊಂದು ವಿರೋಧವಿಲ್ಲದವುಗಳಾಗುವವು.

(ಜ್ಞಾನಿಯಲ್ಲಿ ಆಸಕ್ತಿ ಮೊದಲಾದವುಗಳಿದ್ದರೂ ಅವು ಆಳವಾಗಿ ಬೇರೂರಿಕೊಂಡಿರುವದಿಲ್ಲ. ಆದುದರಿಂದ ಜ್ಞಾನಿಗೆ ಬಾಧೆ ಇಲ್ಲ.)

—ಹೀಗೆ 'ಕಿಮಿಚ್ಛನ್' ಎಂಬುದರ ಅಭಿಪ್ರಾಯವನ್ನು ಹೇಳಿ ಈಗ 'ಕಸ್ಯಕಾಮಾಯ' ಎಂಬುದರ ಅಭಿಪ್ರಾಯ ಹೇಳುತ್ತಾರೆ.

**ಜಗನ್ಮಿಥ್ಯಾತ್ವವತ್ ಸ್ವಾತ್ಮಾಸಂಗತ್ವಸ್ಯ ಸಮೀಕ್ಷಣಾತ್ ।**
**ಕಸ್ಯಕಾಮಾಯೇತಿ ವಚೋ ಭೋಕ್ತೃಭಾವ**
**ವಿವಕ್ಷಯಾ ॥೯೨॥**

ಜಗತ್ತೆಲ್ಲ ಸುಳ್ಳಾದುದರಿಂದ ಅವನಿಗೆ ಅನುಭವಿಸುವಿಕೆ ಇಲ್ಲ. ಆದುದರಿಂದ 'ಕಸ್ಯಕಾಮಾಯ' ಎಂಬ ಶಬ್ದವೂ ಬಂದಿರುವವು.

—ಆತ್ಮನು ಅಸಂಗನಾದುದರಿಂದ ಅವನಿಗೆ ಭೋಗಪ್ರಸಂಗವೇ ಇಲ್ಲ. ಎಂದಮೇಲೆ ಪ್ರಸಂಗವಿರುವಲ್ಲಿ ಭೋಗವನ್ನು ನಿಷೇಧಿಸಬಹುದಾಗಿತ್ತು. ಎಂದರೆ ನಮ್ಮ ಅನುಭವ ನೋಡಿದರೆ ಆತ್ಮನಿಗೆ ಭೋಗಸಂಗ ಉಂಟು ಎಂಬ ಅಭಿಪ್ರಾಯದ ಶ್ರುತಿಯ ಅರ್ಥವನ್ನು ಹೇಳುತ್ತಾರೆ.

**ಪತಿಜಾಯಾದಿಕಂ ಸರ್ವಂ ತತ್ತದ್ಭೋಗಾಯ ನೇಚ್ಛತಿ ।**
**ಕಿಂ ತ್ವಾತ್ಮಭೋಗಾರ್ಥಮಿತಿ ಶ್ರುತಾವುದ್ಘೋಷಿತಂಬಹು ॥೯೩॥**

ಪತಿ–ಪತ್ನಿ ಮೊದಲಾದ ವಸ್ತುಗಳು ಅವುಗಳ ಭೋಗಕ್ಕೋಸುಗ ಪ್ರಿಯವಾಗಿಲ್ಲ. ಆದರೆ ತನ್ನ ಭೋಗಕ್ಕೋಸುಗ ಅವುಗಳನ್ನು ಇಚ್ಛಿಸುತ್ತಾನೆ. ಎಂದು ಶ್ರುತಿಯಲ್ಲಿ ಬಹಳಕಡೆಗೆ ಹೇಳಿದೆ.

—ಹೀಗೆ ಆತ್ಮನಿಗೆ ಭೋಗವುಂಟೆಂದು ಹೇಳಿ ಅದು ಯಾರಿಗೆಂದು ವಿವರಿಸುತ್ತಾರೆ.

**ಕಿಂ ಕೂಟಸ್ಥಶ್ಚಿದಾಭಾಸೋಽಥ ವಾ ಕಿಂವೋಭಯಾತ್ಮಕಃ ।**
**ಭೋಕ್ತಾ ತತ್ರ ನ ಕೂಟಸ್ಥೋಽಸಂಗತ್ವಾದ್ಭೋಕ್ತೃತಾಂ-**
**ವ್ರಜೇತ್ ॥೧೯೪॥**

ಇಲ್ಲಿ ಭೋಗಿಸುವವನು ಕೂಟಸ್ಥನೋ ? ಅಥವಾ ಚಿದಾಭಾಸನೋ, ಅಥವಾ ಕೂಟಸ್ಥನಿಂದ ಕೂಡಿದ ಚಿದಾಭಾಸನೋ ? ಇವರಲ್ಲಿ ಕೂಟಸ್ಥನು ಯಾವುದನ್ನೂ ಹಚ್ಚಿಕೊಳ್ಳದವನಾದುದರಿಂದ ಅವನು ಭೋಗಿಸುವವನಾಗಲಾರ.

ಭೋಗಿಸುವಿಕೆ ಮತ್ತು ಹಚ್ಚಿಕೊಳ್ಳದಿರುವಿಕೆ ಇವುಗಳಲ್ಲಿ ವಿರೋಧವು ಹೇಗೆ ಉಂಟಾಗುವದು ?

**ಸುಖ-ದುಃಖಾಭಿಮಾನಾಖ್ಯೋ ವಿಕಾರೋ ಭೋಗ ಉಚ್ಯತೇ।**
**ಕೂಟಸ್ಥಶ್ಚ ವಿಕಾರೀ ಚೇತ್ಯೇತನ್ನ ವ್ಯಾಹತಂ–**
**ಕಥಮ್ ॥೧೯೫॥**

ಸುಖ–ದುಃಖಗಳಲ್ಲಿ ಅಭಿಮಾನ ತಾಳುವದರಿಂದ - ಉಂಟಾಗುವ ಬದಲಾವಣೆಯೇ ಭೋಗವೆನಿಸುವದು. ಹೀಗಿರುವಾಗ ಕೂಟಸ್ಥನು ವಿಕಾರಿಯಾಗಿದ್ದಾನೆ ಎನ್ನುವದು ಹೊಂದಿಕೆ ಇಲ್ಲದ ಮಾತು.

(ಕೂಟಸ್ಥ ಎಂಬ ಶಬ್ದದ ಅರ್ಥವು ನಿರ್ವಿಕಾರನಾದವನು ಎಂದಿರುವಾಗ ಆತ್ಮನು ಭೋಗಿಸುವವನು ಎಂದರೆ ವ್ಯಾಘಾತದೋಷವುಂಟಾಗುವದು.)

—ಆಗಲಿ. ವಿಕಾರಿ ಎನಿಸುವ ಚಿದಾಭಾಸನು ಭೋಗಿಸುವವನೆಂದರೆ ಅದೂ ಸರಿಯಲ್ಲ.

**ವಿಕಾರಿಬುದ್ಧ್ಯಧೀನತ್ವಾದಾಭಾಸೇ ವಿಕೃತಾವಪಿ ।**
**ನಿರಧಿಷ್ಠಾನವಿಭ್ರಾಂತಿಃ ಕೇವಲಾ ನ ಹಿ ತಿಷ್ಠತಿ ॥೧೯೬॥**

ಬದಲಾವಣೆ ಹೊಂದುತ್ತಿರುವ ಬುದ್ಧಿಯನ್ನು ಅವಲಂಬಿಸಿರುವದರಿಂದ ಚಿದಾಭಾಸನಲ್ಲಿ ಬದಲಾವಣೆಯಾಗುತ್ತಿದ್ದರೂ ಅಧಿಷ್ಠಾನರೂಪನಾದ ಕೂಟಸ್ಥನನ್ನು ಬಿಟ್ಟು ಕಲ್ಪಿತನಾದ ಚಿದಾಭಾಸನು ಇರಲಾರನು. ಅದುದರಿಂದ ಅವನಿಗೆ ಭೋಕ್ತೃತ್ವವು ಸಂಭವಿಸುವದಿಲ್ಲ.

—ಇನ್ನು ಮೂರನೆಯ ಪಕ್ಷ.

**ಉಭಯಾತ್ಮಕ ಏವಾತೋ ಲೋಕೇ ಭೋಕ್ತಾ ನಿಗದ್ಯತೇ ।**
**ತಾದೃಗಾತ್ಮಾನಮಾರಭ್ಯ ಕೂಟಸ್ಥಃ ಶೇಷಿತಃ ಶ್ರುತೌ ॥೯೭॥**

ಆದುದರಿಂದ ವ್ಯವಹಾರದಲ್ಲಿ ಕೂಟಸ್ಥನೊಡನೆ ಕೂಡಿದ ಚಿದಾಭಾಸನೇ ಭೋಗಿಸುವವನೆಂದು ಹೇಳುತ್ತಾರೆ. ಇವನೇ ಭೋಗಿಸುವವನೆಂದು ಸ್ವೀಕರಿಸಿ ಶ್ರುತಿಯು ಬುದ್ಧಿ ಮೊದಲಾದವನ್ನು ಕಳೆದು ಕೂಟಸ್ಥನನ್ನು ಮಾತ್ರ ಉಳಿಸಿರುವದು.

— ಆ ಶ್ರುತಿಯ ಅರ್ಥವನ್ನು ಸಂಕ್ಷೇಪವಾಗಿ ಹೇಳುತ್ತಾರೆ.

**ಆತ್ಮಾ ಕತಮ ಇತ್ಯುಕ್ತೇ ಯಾಜ್ಞವಲ್ಕ್ಯೋ ವಿಬೋಧಯನ್ ।**
**ವಿಜ್ಞಾನಮಯಮಾರಭ್ಯಾಸಂಗಂ ತಂ ಪರ್ಯಶೇಷಯತ್ ॥೯೮॥**

"ಆತ್ಮನೆಂದರೆ ಯಾರು ?" ಎಂದು ಜನಕರಾಜನು ವಿಚಾರಿಸಲು ಯಾಜ್ಞವಲ್ಕ್ಯರು ಬೋಧಿಸುವದಕ್ಕೆ ಮೊದಲುಮಾಡಿ ವಿಜ್ಞಾನಮಯನಿಂದ ಆರಂಭಿಸಿ ಎಲ್ಲವನ್ನು ಅಲ್ಲಗಳೆದು ಅಸಂಗನಾದ ಆತ್ಮನನ್ನು ಉಳಿಸಿರುವರು.

(ಕಾರ್ಯಕಾರಣ ಸಮೂಹರೂಪವಾದ ಶರೀರದಲ್ಲಿ ಅನೇಕ ಪದಾರ್ಥಗಳಿವೆ. ಅವುಗಳಲ್ಲಿ ಆತ್ಮನು ಯಾರು ? ಎಂಬುದು ಜನಕರಾಜನ ಪ್ರಶ್ನೆ. ವಿಜ್ಞಾನಮಯವೇ ಮೊದಲಾದವೆಲ್ಲ ಅನಾತ್ಮವೆಂದು ಹೇಳಿ 'ಅಸಂಗೋ ಹ್ಯಯಂ ಪುರುಷಃ' ಎಂಬ ವಾಕ್ಯದಿಂದ ಕೂಟಸ್ಥನೇ ಆತ್ಮನೆಂದು ಹೇಳಿರುವರು.)

—ಇನ್ನು ಐತರೇಯಾದಿ ಶ್ರುತಿಗಳಲ್ಲಿ.

**ಕೋಽಯಮಾತ್ಮೇತ್ಯೇವಮಾದೌ ಸರ್ವತ್ರಾತ್ಮವಿಚಾರತಃ ।**
**ಉಭಯಾತ್ಮಕಮಾರಭ್ಯ ಕೂಟಸ್ಥಃ ಶೇಷ್ಯತೇ ಶ್ರುತೌ ॥೯೯॥**

ಈ ಆತ್ಮನನ್ನು ಯಾರೆಂದು ಉಪಾಸನೆ ಮಾಡಬೇಕು ? ಎಂಬ ಮುಂತಾದಕಡೆಗಳಲ್ಲಿ ಕೂಟಸ್ಥ ಸಹಿತ ಚಿದಾಭಾಸನನ್ನೇ ಭೋಗಿಸುವವನೆಂದು

ಆರಂಬಿಸಿ ಪ್ರಜ್ಞಾನರೂಪನಾದ ಕೂಟಸ್ಥನನ್ನು ಕೊನೆಗೆ ಉಳಿಸಿ ತೋರಿಸ ಲಾಗಿದೆ.

—ಹೀಗಿದ್ದಮೇಲೆ ಜೀವನಿಗೆ ನಾನು ನಿಜವಾಗಿ ಭೋಗಿಸುವವನೆಂದು ಹೇಗೆ ಎನಿಸುತ್ತದೆ ?

**ಕೂಟಸ್ಥ ಸತ್ಯತಾಂ ಸ್ವಸ್ಮಿನ್ನಧ್ಯಸ್ಯಾತ್ಮಾವಿವೇಕತಃ ।**
**ತಾತ್ತ್ವಿಕೀಂ ಭೋಕ್ತೃತಾಂ ಮತ್ವಾ ನ ಕದಾಚಿಜ್ಜಿಹಾಸತಿ॥೨೦೦॥**

ಆತ್ಮನು ಎಂದರೆ ಭೋಗಿಸುವವನು ಕೂಟಸ್ಥನ ಇರುವಿಕೆಯನ್ನು ತನ್ನ ಮೇಲೆ ಹಾಕಿಕೊಂಡು ತನ್ನ ಭೋಗಿಸುವಿಕೆಯನ್ನು ಸತ್ಯವೆಂದು ತಿಳಿದು, ಭೋಗವನ್ನು ಬಿಡಲು ಎಷ್ಟುಮಾತ್ರವೂ ಇಚ್ಛೆಮಾಡುವದಿಲ್ಲ.

—ಹೀಗೆ ಭೋಗಿಸುವವನು ಸುಳ್ಳಾದಮೇಲೆ 'ಆತ್ಮನಸ್ತು ಕಾಮಾಯ' ಇತ್ಯಾದಿ ವಾಕ್ಯಗಳಿಗೇನು ಬೆಲೆ ? ಎಂದರೆ ಭೋಗಿಸುವವನು ಕೂಟಸ್ಥನಲ್ಲ. ಉಭಯಾತ್ಮಕ ಎಂದರೆ ಕೂಟಸ್ಥ ಸಹಿತ ಚಿದಾಭಾಸನೆಂದು ಪ್ರಸಿದ್ಧವಾದ ಮಾತನ್ನು ಶ್ರುತಿಯು ಹೇಳಿದೆ ಎನ್ನುತ್ತಾರೆ.

**ಭೋಕ್ತಾ ಸ್ವಸ್ಯೈವ ಭೋಗಾಯ ಪತಿಜಾಯಾದಿಮಿಚ್ಛತಿ ।**
**ಏಷ ಲೌಕಿಕವೃತ್ತಾಂತಃ ಶ್ರುತ್ಯಾ ಸಮ್ಯಗನೂದಿತಃ ॥೨೦೧॥**

ಭೋಗಿಸುವವನು ತನ್ನ ಭೋಗಕ್ಕಾಗಿ ಪತಿ-ಸ್ತ್ರೀ ಇತ್ಯಾದಿಗಳನ್ನು ಇಚ್ಛಿಸು ತ್ತಾನೆ. ಈ ಲೋಕ ವ್ಯವಹಾರವನ್ನು ಶ್ರುತಿಯು ಚನ್ನಾಗಿ ಹೇಳಿರುವದು.

ಶ್ರುತಿಯು ಸುಳ್ಳೆನಿಸಿದ ಲೋಕ ವ್ಯವಹಾರವನ್ನು ಹೇಳಿದುದೇಕೆ ? ಎಂದರೆ ಆ ಭೋಗಸಾಧನೆಗಳಲ್ಲಿಡುವ ಪ್ರೀತಿಯನ್ನು ಭೋಕ್ತೃವೆನಿಸಿದ ಆತ್ಮ ನಲ್ಲಿಡಬೇಕೆಂದು ತಿಳಿಸಲಿಕ್ಕೆ ಎನ್ನುತ್ತಾರೆ.

**ಭೋಗ್ಯಾನಾಂ ಭೋಕ್ತೃಶೇಷತ್ವಾನ್ಮಾ ಭೋಗ್ಯೇಷ್ವನು-**
**ರಜ್ಯತಾಮ್ ।**
**ಭೋಕ್ತರ್ಯೇವ ಪ್ರಧಾನೇಽತೋಽನುರಾಗಂ ತಂ**
**ವಿಧಿತ್ಸತಿ ॥೨೦೨॥**

ಭೋಗ್ಯವಸ್ತುಗಳೆಂಬವೆಲ್ಲ ಭೋಕ್ತೃವಿನ ಭೋಗಕ್ಕೆ ಸಾಧನಗಳಾ ದುದರಿಂದ ತನ್ನ ಪ್ರೀತಿಯನ್ನು ಅವುಗಳಲ್ಲಿಡಬಾರದು. ಅವುಗಳನ್ನು ಭೋಗಿ-

ಸುವ ಮುಖ್ಯನಾದ ಭೋಕ್ತೃವಿನಲ್ಲಿ ಪ್ರೀತಿಯನ್ನಿಡಬೇಕು ಎಂದು ವಿಧಿಸುವ ಇಚ್ಛೆಯನ್ನು ಶ್ರುತಿಯು ಮಾಡುತ್ತದೆ.

—ಇದನ್ನೇ ಪುರಾಣವಾಕ್ಯವೂ ಹೇಳುತ್ತದೆ.

**ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ ।**
**ತ್ವಾಮನುಸ್ಮರತಃ ಸಾ ಮೇ ಹೃದಯಾನ್ಮಾಪ ಸರ್ಪತು ॥೨೦೩॥**

ಎಲೈ ಲಕ್ಷ್ಮೀಪತಿಯೇ, ಜ್ಞಾನವಿಲ್ಲದವರಿಗೆ ವಿಷಯಗಳಲ್ಲಿ ಎಂಥ ಬಲವಾದ ಪ್ರೀತಿ ಇರುವದೋ ಅಂಥ ಪ್ರೀತಿಯು ನಿನ್ನನ್ನು ಚಿಂತಿಸುತ್ತಿರುವ ನನ್ನ ಹೃದಯದಿಂದ ಹೋಗಲಿ.

ಇನ್ನೂ ಒಂದುಬಗೆಯ ಅರ್ಥ.

ವಿವೇಕವಿಲ್ಲದವರಿಗೆ ವಿಷಯ ಪದಾರ್ಥಗಳಲ್ಲಿ ಎಂಥ ದೃಢವಾದ ಪ್ರೀತಿಯೋ ಅಂಥ ಪ್ರೀತಿಯು ನಿನ್ನನ್ನು ನೆನೆಯುವಾಗಕೂಡ ನನ್ನ ಹೃದಯದಿಂದ ಹೋಗದಿರಲಿ.

(ಪದಚ್ಛೇದ ಮಾಡುವ ರೀತಿಯಿಂದ ಅರ್ಥವು ಬೇರೆ ಬೇರೆ ಎನಿಸಿದಂತೆ ಕಂಡರೂ ಮುಖ್ಯ ಅರ್ಥವು ಒಂದೇ ಇದೆ.)

—ಆ ಪುರಾಣಕ್ಕೂ ಈ ಶ್ರುತಿಗೂ ಸಂಬಂಧವೇನು ?

**ಇತಿನ್ಯಾಯೇನ ಸರ್ವಸ್ಮಾದ್ ಭೋಗ್ಯಜಾತಾದ್ವಿರಕ್ತಧೀಃ ।**
**ಉಪಸಂಹೃತ್ಯ ತಾಂ ಪ್ರೀತಿಂ ಭೋಕ್ತರ್ಯೇನಂ ಜುಭುತ್ಸತೇ ॥೨೦೪॥**

ಈ ನ್ಯಾಯದಿಂದ ಎಲ್ಲ ಭೋಗ್ಯವಸ್ತುಗಳಲ್ಲಿ ವಿರಕ್ತಿತಾಳಿದವನು, ಅವುಗಳ ಮೇಲೆ ಇಟ್ಟಿದ್ದ ಪ್ರೀತಿಯನ್ನು ಭೋಕ್ತೃವಿನಲ್ಲಿ ಎಂದರೆ ಅನುಭವಿಸುವವನಲ್ಲಿ ಅರ್ಥಾತ್ ತನ್ನಲ್ಲಿ ಇಟ್ಟುಕೊಂಡು ಆತ್ಮನನ್ನು ತಿಳಿಯಲು ಇಚ್ಛಿಸುತ್ತಾನೆ.

—ಹೀಗೆ ಮಾಡುವದರಿಂದ ಫಲವೇನು ಸಿಕ್ಕಿತು ? ಎಂಬುದನ್ನು ಸದೃಷ್ಟಾಂತವಾಗಿ ಹೇಳುತ್ತಾರೆ.

**ಸ್ರಕ್ ಚಂದನವಧೂವಸ್ತ್ರಸುವರ್ಣಾದಿಷುಪಾಮರಃ ।**
**ಅಪ್ರಮತ್ತೋ ಯಥಾ ತದ್ವನ್ನ ಪ್ರಮಾದ್ಯತಿ ಭೋಕ್ತರಿ॥೨೦೫॥**

ಸಾಮಾನ್ಯನಾದ ಮನುಷ್ಯನು ಪುಷ್ಪಮಾಲೆ–ಗಂಧ–ಸ್ತ್ರೀ–ವಸ್ತ್ರ–ಭಂಗಾರ–ಮುಂತಾದವುಗಳಲ್ಲಿ ಬಹಳ ಎಚ್ಚರ ವಹಿಸುವಂತೆ, ಮುಮುಕ್ಷುವು ಅನುಭವಿಸುವವನ ವಿಷಯದಲ್ಲಿ ಎಚ್ಚರಿಕೆಯಿಂದ ಇರುತ್ತಾನೆ ಎಂದರೆ ಆತ್ಮನನ್ನು ಚಿಂತನೆ ಮಾಡುತ್ತಾನೆ.

**ಕಾವ್ಯನಾಟಕ ತರ್ಕಾದೀನಭ್ಯಸ್ಯತಿ ನಿರಂತರಮ್ ।**
**ವಿಜಿಗೀಷುರ್ಯಥಾ ತದ್ವನ್ಮುಮುಕ್ಷುಃ ಸ್ವಂ ವಿಚಾರ-**
**ಯೇತ್ ॥೨೦೬॥**

ಪ್ರತಿವಾದಿಗಳನ್ನು ಗೆಲ್ಲಬೇಕೆನ್ನುವವನು ಕಾವ್ಯ–ನಾಟಕ–ತರ್ಕಾದಿಗಳನ್ನು ಯಾವಾಗಲೂ ಅಭ್ಯಾಸ ಮಾಡುತ್ತಿರುವಂತೆ ಮುಮುಕ್ಷುವು ಆತ್ಮ ವಿಚಾರವನ್ನು ಮಾಡುತ್ತಿರಬೇಕು.

**ಜಪಯೋಗೋಪಾಸನಾದಿ ಕುರುತೇ ಶ್ರದ್ಧಯಾ ಯಥಾ ।**
**ಸ್ವರ್ಗಾದಿವಾಂಛಯಾ ತದ್ವತ್ಶ್ರದ್ಧಧ್ಯಾತ್ಸ್ವೇ ಮುಮು**
**ಕ್ಷಯಾ ॥೨೦೭॥**

ಸ್ವರ್ಗಲೋಕಾದಿಗಳು ದೊರೆಯಬೇಕೆಂಬ ಇಚ್ಛೆಯಿಂದ ಜಪ–ಯಜ್ಞ–ಉಪಾಸನೆಗಳನ್ನು ಮಾಡುತ್ತಿರುವಂತೆ, ಮುಕ್ತನಾಗಬೇಕೆಂಬ ಇಚ್ಛೆಯಿಂದ ಆತ್ಮನಲ್ಲಿ ಶ್ರದ್ಧೆಯನ್ನಿಡಬೇಕು.

**ಚಿತ್ತೈಕಾಗ್ರ್ಯಂ ಯಥಾಯೋಗೀ ಮಹಾಯಾಸೇನ**
**ಸಾಧಯೇತ್ ।**
**ಅಣಿಮಾದಿಪ್ರೇಪ್ಸಯೈವಂ ವಿವಿಚ್ಯಾತ್ ಸ್ವಂ**
**ಮುಮುಕ್ಷಯಾ ॥೨೦೮॥**

ಯೋಗಿಯು ಅಣಿಮಾದಿ ಸಿದ್ಧಿಗಳ ಇಚ್ಛೆಯಿಂದ ಬಹಳ ಕಷ್ಟಪಟ್ಟು ಚಿತ್ತೈಕಾಗ್ರ್ಯತೆಯನ್ನು ಸಾಧಿಸುವಂತೆ, ಮುಕ್ತನಾಗಬೇಕೆಂಬ ಇಚ್ಛೆಯಿಂದ ಆತ್ಮ ವಿಚಾರವನ್ನು ಮಾಡುತ್ತಿರಬೇಕು.

ಹೀಗೆ ಮಾಡುತ್ತಿದ್ದರೇನು ಫಲ ?

**ಕೌಶಲಾನಿ ವಿವರ್ಧಂತೇ ತೇಷಾಮಭ್ಯಾಸಪಾಟವಾತ್ ।**
**ಯಥಾ ತದ್ವದ್ವಿವೇಕೋಽಸ್ಯಾಪ್ಯಭ್ಯಾಸಾದ್ವಿಶದಾಯತೇ॥೨೦೯॥**

ಕಾವ್ಯಾದಿಗಳ ಅಭ್ಯಾಸ ಮಾಡುವವರಿಗೆ ಅಭ್ಯಾಸವು ಬೆಳೆದ ಹಾಗೆಲ್ಲ ಕೌಶಲ್ಯವು ಹೆಚ್ಚುವಂತೆ, ಬ್ರಹ್ಮಾಭ್ಯಾಸ ಮಾಡುವವರಿಗೂ ವಿವೇಕವು ಹೆಚ್ಚುವುದು.

(ಎಂದರೆ ಆತ್ಮನು ದೇಹಾದಿಗಳಿಗಿಂತ ಸಂಪೂರ್ಣವಾಗಿ ಬೇರೆಯಾಗಿರುವನು ಎಂಬ ಜ್ಞಾನವು ಅತ್ಯಂತ ಸಷ್ಟವಾಗುವದು.)

–ಹೀಗೆ ಬೆಳೆದ ವಿವೇಕದ ಫಲ.

**ವಿವಿಂಚತಾ ಭೋಕ್ತೃತತ್ವಂ ಜಾಗ್ರದಾದಿಷ್ವಸಂಗತಾ ।**
**ಅನ್ವಯ ವ್ಯತಿರೇಕಾಭ್ಯಾಂ ಸಾಕ್ಷಿಣ್ಯಧ್ಯವಸೀಯತೇ ॥೨೧೦॥**

ಅನ್ವಯ ವ್ಯತಿರೇಕಗಳಿಂದ ಭೋಕ್ತೃವಿನ ನಿಜಸ್ವರೂಪವನ್ನು ತಿಳಿದುಕೊಳ್ಳಲೆತ್ನಿಸುವವನಿಗೆ, ಎಚ್ಚರ ಮೊದಲಾದ ಅವಸ್ಥೆಗಳಲ್ಲಿ - ಸಾಕ್ಷಿಯು ಅಸಂಗನಾಗಿರುವದನ್ನು ನಿಶ್ಚಯ ಮಾಡಿಕೊಳ್ಳಲು ಅನುವಾಗುವದು.

— ಅನ್ವಯ–ವ್ಯತಿರೇಕಗಳನ್ನು ಹೇಳುವರು.

**ಯತ್ರ ಯದ್ ದೃಶ್ಯತೇ ದ್ರಷ್ಟ್ರಾ ಜಾಗ್ರತ್ ಸ್ವಪ್ನ ಸುಷುಪ್ತಿಷು।**
**ತತ್ರೈವ ತನ್ನೇತರತ್ರೇತ್ಯನುಭೂತಿರ್ಹಿ ಸಂಮತಾ ॥೨೧೧॥**

ಸಾಕ್ಷಿಯಾದವನಿಂದ ಎಚ್ಚರ–ಕನಸು-ಗಾಢನಿದ್ರೆಗಳಲ್ಲಿ ಯಾವ—ಯಾವದು ನೋಡಲಾಗುವದೋ, ಅದು ಆಯಾ ಅವಸ್ಥೆಯ ಮಟ್ಟಿಗೆ ಮಾತ್ರ. ಬೇರೆ ಅವಸ್ಥೆಯಲ್ಲಿ ಅದಿರುವದಿಲ್ಲ. ಈ ಅನುಭವವು ಎಲ್ಲರಿಗೂ ಒಪ್ಪಿಗೆಯಾಗಿದೆ.

(ಮೇಲಿನ ಮೂರು ಅವಸ್ಥೆಗಳು ಒಬ್ಬನಿಗೆ ಅನುಭವಕ್ಕೆ ಬರುತ್ತವೆ. ಆದುದರಿಂದ ಆಯಾ ಅವಸ್ಥೆಯಲ್ಲಿ ಕೂಟಸ್ಥನು ಸಾಕ್ಷಿಯಾಗಿ ಇರುವನೆನ್ನುವದು ಅನ್ವಯ.

ಎಚ್ಚರ-ಕನಸು-ಗಾಢನಿದ್ರೆಗಳಲ್ಲಿ ಅನುಭವಕ್ಕೆ ಬರುವ ಸ್ಥೂಲ-ಸೂಕ್ಷ್ಮ-ಆನಂದ ಭೋಗಗಳು-ದೃಶ್ಯಗಳು ಆಯಾಅವಸ್ಥೆಗಳ ಮಟ್ಟಿಗೆ ಮಾತ್ರ ಸೀಮಿತವಾದವುಗಳು. ಮತ್ತೊಂದವಸ್ಥೆಯಲ್ಲಿ ಅವುಗಳಿರುವದಿಲ್ಲ. ಅವು ಒಂದರೊಳಗೊಂದು ಇಲ್ಲ ಎನ್ನುವದು ವ್ಯತಿರೇಕ. )

— ಇದಕ್ಕೆ ಶ್ರುತಿ ಪ್ರಮಾಣ.

**ಸ ಯತ್ರತ್ರೇಕ್ಷತೇ ಕಿಂಚಿತ್ತೇನಾನನ್ವಾಗತೋ ಭವೇತ್ ।**
**ದೃಷ್ಟ್ವೈವ ಪುಣ್ಯಂ ಪಾಪಂ ಚೇತ್ಯೇವಂ ಶ್ರುತಿಷು-**
**ಡಿಂಡಿಮಃ ॥೨೧೨॥**

ಅವನು ಆಯಾ ಅವಸ್ಥೆಗಳಲ್ಲಿ ಏನನ್ನು ನೋಡುವನೋ, ಅದನ್ನು ತೆಗೆದುಕೊಳ್ಳದೇ ಬೇರೊಂದು ಅವಸ್ಥೆಗೆ ಹೋಗುವನು.

ಮತ್ತು ಪುಣ್ಯ-ಮತ್ತು ಪಾಪಗಳನ್ನೂ ಕೂಡ ಬರಿ ನೋಡಿಕೊಂಡು ಎಚ್ಚರಕ್ಕೆ ಬರುವನು ಇತ್ಯಾದಿಯಾಗಿ ಶ್ರುತಿಯಲ್ಲಿ ಸಾರಿ ಹೇಳಿದೆ.

( ಆತ್ಮನು ಯಾವುದನ್ನೂ ಹಚ್ಚಿಕೊಳ್ಳದವನು ಎಂದು ತಾತ್ಪರ್ಯ )

—ಮತ್ತೊಂದು ಶ್ರುತಿ.

**ಜಾಗ್ರತ್‍ಸ್ವಪ್ನ ಸುಷುಪ್ತ್ಯಾದಿಪ್ರಪಂಚಂ ಯತ್ ಪ್ರಕಾಶತೇ ।**
**ತದ್‍ಬ್ರಹ್ಮಾಹಮಿ ಜ್ಞಾತ್ವಾ ಸರ್ವಬಂಧೈಃ**
**ಪ್ರಮುಚ್ಯತೇ ॥೨೧೩॥**

ಯಾವದು ಎಚ್ಚರ-ಕನಸು-ಗಾಢನಿದ್ರೆ ಮೊದಲಾದ, ಎಲ್ಲ ಪ್ರಪಂಚವನ್ನು ಬೆಳಗುವದೋ, ಆ ಬ್ರಹ್ಮವೇ ನಾನು ಎಂದು ತಿಳಿದವನು ಎಲ್ಲ ಬಂಧನಗಳಿಂದಲೂ ಬಿಡುಗಡೆಯಾಗುತ್ತಾನೆ.

—ಅಮೃತಬಿಂದೂಪನಿಷತ್ತಿನಲ್ಲಿ.

**ಏಕ ಏವಾತ್ಮಾ ಮಂತವ್ಯೋ ಜಾಗ್ರತ್ ಸ್ವಪ್ನಸುಷುಪ್ತಿಷು ।**
**ಸ್ಥಾನತ್ರಯ ವ್ಯತೀತಸ್ಯ ಪುನರ್ಜನ್ಮ ನ ವಿದ್ಯತೇ ॥೨೧೪॥**

ಎಚ್ಚರ-ಕನಸು-ಗಾಢನಿದ್ರೆ ಎಂಬ ಮೂರವಸ್ಥೆಗಳ ಸಾಕ್ಷಿಯಾದ ಆತ್ಮನು ಒಬ್ಬನೇ ಎಂದು ತಿಳಿಯಬೇಕು. ಹೀಗೆ ಮೂರು ಅವಸ್ಥೆಗಳಿಂದಲೂ ಬೇರ್ಪಡಿಸಿದ ಆತ್ಮನಿಗೆ ಪುನರ್ಜನ್ಮವಿಲ್ಲ.

—ಕೈವಲ್ಯೋಪನಿಷತ್ತಿನಲ್ಲಿ.

**ತ್ರಿಷು ಧಾಮಸು ಯದ್ಭೋಗ್ಯಂ ಭೋಕ್ತಾ ಭೋಗಶ್ಚ**
**ಯದ್ಭವೇತ್ ।**
**ತೇಭ್ಯೋ ವಿಲಕ್ಷಣಃ ಸಾಕ್ಷೀ ಚಿನ್ಮಾತ್ರೋಽಹಂ**
**ಸದಾಶಿವಃ ॥೨೧೫॥**

ಮೂರು ಅವಸ್ಥೆಗಳಲ್ಲಿ ಯಾವ ಭೋಗ್ಯ-ಭೋಕ್ತಾ-ಭೋಗಗಳಿರುವವೋ, ಅವೆಲ್ಲವುಗಳಿಗಿಂತ ಬೇರೆಯಾದ ಸಾಕ್ಷಿರೂಪನಾನು ಜ್ಞಾನಸ್ವರೂಪನೆನಿಸಿದ ಸದಾಶಿವನೇ ಆಗಿದ್ದೇನೆ.

(ತ್ರಿಷುಧಾಮಸು=ಎಚ್ಚರ-ಕನಸು-ಗಾಢನಿದ್ರೆಗಳಲ್ಲಿ. ಭೋಗ್ಯಂ=ಸ್ಥೂಲ, ಸೂಕ್ಷ್ಮ ಮತ್ತು ಆನಂದರೂಪ. ಭೋಕ್ತಾ=ವಿಶ್ವ, ತೈಜಸ, ಪ್ರಾಜ್ಞ ಸದಾಶಿವಃ=ಯಾವಾಗಲೂ ಮಂಗಲಕರ.)

—ಹೀಗೆ ಆತ್ಮನು ಯಾವದನ್ನೂ ಹಚ್ಚಿಕೊಳ್ಳದ ಅಸಂಗನೆಂದು ಸಿದ್ಧವಾದ ಮೇಲೆ ಭೋಗವು ಯಾರಿಗೆ? ಎಂಬುದನ್ನು ತಿಳಿಸುತ್ತಾರೆ.

**ಏವಂ ವಿವೇಚಿತೇ ತತ್ವೇ ವಿಜ್ಞಾನಮಯಶಬ್ದಿತಃ ।**
**ಚಿದಾಭಾಸೋ ವಿಕಾರೀ ಯೋ ಭೋಕ್ತೃತ್ವಂ ತಸ್ಯ ಶಿಷ್ಯತೇ ॥೨೧೬॥**

ಹೀಗೆ ತತ್ವವನ್ನು ವಿವೇಚಿಸುತ್ತಿರಲು ಬದಲಾವಣೆಯನ್ನು ಹೊಂದುತ್ತಿರುವ ವಿಜ್ಞಾನಮಯನೆಂಬ ಹೆಸರಿನ ಚಿದಾಭಾಸನಿಗೆ ಭೋಗಿಸುವ ಕಾರ್ಯವು ಉಳಿಯಿತು.

—ಒಳ್ಳೇದು, ನಿಮ್ಮಂತೆ ಚಿದಾಭಾಸನು ಭೋಗಿಸುವವನೆಂದು ಒಪ್ಪಿಕೊಂಡರೆ, ಕಸ್ಯಕಾಮಾಯ, ಯಾರ ಬಯಕೆಗಾಗಿ ಎಂಬ ಶ್ರುತಿ ವಾಕ್ಯವು ಭೋಗಿಸುವವನು ಇಲ್ಲವೆಂದು ಹೇಳುವುದಲ್ಲ? ಅದಕ್ಕೆ ವಿರೋಧವಾಗದೇ?

**ಮಾಯಿಕೋಽಯಂ ಚಿದಾಭಾಸಃ ಶ್ರುತೇರನುಭವಾದಪಿ ।**
**ಇಂದ್ರಜಾಲಂ ಜಗತ್ ಪ್ರೋಕ್ತಂ ತದಂತಃ ಪಾತ್ಯಯಂ ಯತಃ ॥೨೧೭॥**

ಶ್ರುತಿ-ಮತ್ತು ಅನುಭವಗಳಮೇಲಿಂದ ಈ ಚಿದಾಭಾಸನು ಮಾಯಿಕನೆನಿಸುವನು, ಎಲ್ಲಜಗತ್ತು ಇಂದ್ರಜಾಲದಂತೆ ಸುಳ್ಳು ಎಂದು ಸ್ಪಷ್ಟವಾಗಿ ಹೇಳಿದೆ. ಎಂದಮೇಲೆ ಅದರೊಳಗಿನವನೇ ಆದ ಚಿದಾಭಾಸನು ಕೂಡ ಸುಳ್ಳು ಎನಿಸುವನು.

— ಹಾಗೆ ಅನುಭವಕ್ಕೆ ಬರುತ್ತದೆ.

**ವಿಲಯೋಽಪ್ಯಸ್ಯ ಸುಪ್ತ್ಯಾದೌ ಸಾಕ್ಷಿಣಾ ಹ್ಯನುಭೂಯತೇ ।**
**ಏತಾದೃಶಂ ಸ್ವಸ್ವಭಾವಂ ವಿವಿನಕ್ತಿ ಪುನಃ ಪುನಃ ॥೨೧೮॥**

ಗಾಢನಿದ್ರೆ-ಸಮಾಧಿ ಮುಂತಾದ ಅವಸ್ಥೆಗಳಲ್ಲಿ ಇವನ ಲಯವಾಗುವಿಕೆಯನ್ನು ಸಾಕ್ಷಿಯಾದ ಕೂಟಸ್ಥನು ಅನುಭವಿಸುತ್ತಾನೆ. ಆ ಮೇಲೆ ಕೂಟಸ್ಥನಿಂದ ಬೇರೆಯಾದ ತನ್ನ ಸ್ವರೂಪವನ್ನು ಮೇಲಿಂದಮೇಲೆ ಚಿದಾಭಾಸನು ಅರಿತುಕೊಳ್ಳುತ್ತಾನೆ.

**ವಿವಿಚ್ಯ ನಾಶಂ ನಿಶ್ಚಿತ್ಯ ಪುನರ್ಭೋಗಂ ನ ವಾಂಛತಿ ।**
**ಮುಮೂರ್ಷುಃ ಶಾಯಿತೋ ಭೂಮೌ ವಿವಾಹಂ**
**ಕೋಽಭಿವಾಂಛತಿ ॥೨೧೯॥**

ಹೀಗೆ ವಿಚಾರದಿಂದ ವಿವೇಕಹೊಂದಿದ ಚಿದಾಭಾಸನು ತನ್ನವಿನಾಶವನ್ನು ನಿಶ್ಚಯಮಾಡಿಕೊಂಡು ಪುನಃ ಭೋಗವನ್ನವೇಕ್ಷಿಸುವದಿಲ್ಲ. ಸಾಯುವ ಹಾದಿಯನ್ನು ಹಿಡಿದು ನೆಲಕ್ಕೆರಗಿದವನು ಲಗ್ನವನ್ನು ಬಯಸುವನೆ?

**ಜಿಹ್ರೇತಿ ವ್ಯವಹರ್ತುಂ ಚ ಭೋಕ್ತಾಽಹಮಿತಿ ಪೂರ್ವವತ್ ।**
**ಛಿನ್ನನಾಸ ಇವ ಹ್ರೀತಃ ಕ್ಲಿಶ್ಯನ್ನಾರಬ್ಧಮಶ್ನುತೇ ॥೨೨೦॥**

'ನಾನು ಭೋಗಿಸುವವನು' ಎಂದು ಮೊದಲಿನಂತೆ ಹೇಳುವುದಕ್ಕೆ ಕೂಡ ಅವನು ನಾಚುವನು. ಅಲ್ಲದೇ ಅವನು ಮೂಗು ಕೊಯಿಸಿ ಕೊಂಡವನಂತೆ, ನಾಚಿಕೆ-ದುಃಖಗಳಿಂದಕೂಡಿ ಪ್ರಾರಬ್ಧಭೋಗವನ್ನು ಉಣ್ಣುವನು.

—ಜ್ಞಾನವಾದಮೇಲೆ ಸಾಕ್ಷಿಗೆ ಭೋಗವಿಲ್ಲ-ಎನ್ನುತ್ತಾರೆ.

**ಯದಾ ಸ್ವಸ್ಯಾಪಿ ಭೋಕ್ತೃತ್ವೇ ಮಂತುಂ ಜಿಹ್ರೇತ್ಯಯಂ ತದಾ ।**
**ಸಾಕ್ಷಿಣ್ಯಾರೋಪಯೇದೇತದಿತಿ ಕೈವ ಕಥಾ ವೃಥಾ ॥೨೨೧॥**

ಹೀಗೆ ಅವನು ತಾನು ಭೋಗಿಸುವವನು ಎಂದುಕೊಳ್ಳುವದಕ್ಕೆ ನಾಚುವಾಗ ತನ್ನ ಭೋಗವನ್ನು ಸಾಕ್ಷಿಯಾದ ಕೂಟಸ್ಥನ ಮೇಲೆ ಹಾಕುವನೆಂಬ ವ್ಯರ್ಥ ಮಾತೆಲ್ಲಿಯದು?

ಇದೇ ಅರ್ಥವು ಶ್ರುತಿಯಲ್ಲಿ.

**ಇತ್ಯಭಿಪ್ರೇತ್ಯ ಭೋಕ್ತಾರಮಾಕ್ಷಿಪತ್ಯವಿಶಂಕಯಾ ।**
**ಕಸ್ಯಕಾಮಾಯೇತಿ ತತಃ ಶರೀರಾನುಜ್ವರೋನ ಹಿ ॥೨೨೨॥**

ಈ ಅಭಿಪ್ರಾಯವನ್ನಿಟ್ಟುಕೊಂಡು ಶ್ರುತಿಯು 'ಕಸ್ಯಕಾಮಾಯ ?' ಎಂದು ಭೋಗಿಸುವವನ ಬಗೆಗೆ ಆಕ್ಷೇಪವೆತ್ತಿದೆ. ಹೀಗೆ ಭೋಗಿಸುವವನದೇ

ಅಭಾವವಾದಮೇಲೆ ಭೋಗದ ಸಂಬಂಧವಾಗಿ ಶರೀರಕ್ಕಾಗುವ ಪೀಡೆ ಇಲ್ಲದಂತಾಗುವದು.

ತತ್ವಜ್ಞಾನಿಗೆ ಶರೀರಾನು ಜ್ವರ (ಪೀಡೆ-ತಾಪ) ವಿಲ್ಲ ಎಂದು ಹೇಳುವ ದಕ್ಕಾಗಿ ಶರೀರಭೇದಗಳು ಅವುಗಳಲ್ಲಿಯ ಜ್ವರಪ್ರಕಾರಗಳು ಇವುಗಳನ್ನು ಹೇಳುತ್ತಾನೆ.

**ಸ್ಥೂಲಂ ಸೂಕ್ಷ್ಮಂ ಕಾರಣಂಚ ಶರೀರಂ ತ್ರಿವಿಧಂ ಸ್ಮೃತಮ್।**
**ಅವಶ್ಯಂ ತ್ರಿವಿಧೋಽಸ್ತ್ಯೇವ ತತ್ರ ತತ್ರೋಚಿತೋ ಜ್ವರಃ॥೨೨೩॥**

ಸ್ಥೂಲ-ಸೂಕ್ಷ್ಮ-ಕಾರಣವೆಂದು ಶರೀರಗಳು ಮೂರುಬಗೆ. ಈ ಮೂರು ಶರೀರಗಳಲ್ಲಿ ಅವುಗಳಿಗೆ ತಕ್ಕ ಜ್ವರ (ಪೀಡೆ) ಗಳೂ ಮೂರು ವಿಧ ವಾಗಿವೆ.

—ಸ್ಥೂಲ ಶರೀರದ ಜ್ವರ.

**ವಾತ-ಪಿತ್ತ-ಶ್ಲೇಷ್ಮಜನ್ಯವ್ಯಾಧಯಃ ಕೋಟಿಶಸ್ತನೌ।**
**ದುರ್ಗಂಧಿತ್ವ ಕುರೂಪತ್ವದಾಹಭಂಗಾದಯಸ್ತಥಾ ॥೨೨೪॥**

ವಾತ-ಪಿತ್ತ-ಕಫಗಳೆಂಬ ಮೂರು ದೋಷಗಳಿಂದ ಹುಟ್ಟಿದ ರೋಗಗಳು ಅಸಂಖ್ಯವಾಗಿರುವವು ಹಾಗೂ ಹೊಲಸುನಾರುವಿಕೆ, ಕುರೂಪಿಲ್ಲಿನ, ಬಾಯಾರುವಿಕೆ ಮತ್ತು ದಣಿವು ಮೊದಲಾದ ಎಷ್ಟೋ ಪೀಡೆಗಳು ಸ್ಥೂಲದೇಹದ ಪೀಡೆಗಳು. —ಸೂಕ್ಷ್ಮ ಶರೀರದವು.

**ಕಾಮಕ್ರೋಧಾಯಃ ಶಾಂತಿದಾಂತ್ಯಾದ್ಯಾ ಲಿಂಗದೇಹಗಾಃ।**
**ಜ್ವರಾದ್ವಯೇಽಪಿ ಬಾಧಂತೇ ಪ್ರಾಪ್ತ್ಯಾಽಪ್ರಾಪ್ತ್ಯಾ ನರಂ**
**ಕ್ರಮಾತ್ ॥೨೨೫॥**

ಕಾಮ-ಕ್ರೋಧ ಮೊದಲಾದ ರಜೋಗುಣವೃತ್ತಿಗಳು, ಶಾಂತಿ-ಸಹನೆ ಮುಂತಾದ ಸತ್ವಗುಣವೃತ್ತಿಗಳು, ಸೂಕ್ಷ್ಮಶರೀರದ ಜ್ವರಗಳು. ಈ ಎರಡೂ ಪ್ರಕಾರದ ಜ್ವರಗಳು ಕ್ರಮವಾಗಿ ತಮ್ಮ ಬರುವಿಕೆಯಿಂದ ಎಂದರೆ ಕಾಮಾದಿಗಳ ಹುಟ್ಟುವಿಕೆಯಿಂದ, ಎರಡನೆ ಬಗೆಯ ಶಾಂತಿ ದಾಂತಿಗಳು ಎಷ್ಟು ಕಷ್ಟಪಟ್ಟರೂ ಮೈಗೂಡದ್ದರಿಂದ ಮನುಷ್ಯನಿಗೆ ಪೀಡೆಯನ್ನುಂಟು ಮಾಡುವವು

—ಕಾರಣ ಶರೀರದ ಜ್ವರ ಛಾಂದೋಗ್ಯಶ್ರುತಿಯಂತೆ.

**ಸ್ವಂ ಪರಂ ಚ ನ ವೇತ್ತ್ಯಾತ್ಮಾ ವಿನಷ್ಟ ಇವ ಕಾರಣೇ ।**
**ಆಗಾಮಿ ದುಃಖಬೀಜಂ ಚೇತ್ಯೇತದಿಂದ್ರೇಣ ದರ್ಶಿತಮ್ ॥೨೨೬॥**

ಕಾರಣ ದೇಹದಲ್ಲಿ ಇಲ್ಲದಂತಾಗಿರುವ ಆತ್ಮನು ತನ್ನನ್ನಾಗಲಿ, ಪರರನ್ನಾಗಲಿ ತಿಳಿಯುವದಿಲ್ಲ. ಮತ್ತು ಇದು ಮರುದಿನದ ದುಃಖಬೀಜವೆನಿಸುವ ವಾಸನೆಯೊಂದು ಉಳಿದಿರುವದೆಂದು ಇಂದ್ರನು ತನ್ನ ಗುರುವಾದ ಬ್ರಹ್ಮನಿಗೆ ತೋರಿಸಿಕೊಟ್ಟನು.

—ಹೀಗೆ ಮೂರು ಶರೀರಗಳಲ್ಲಿರುವ ಜ್ವರಗಳನ್ನು ಹೇಳಿ ಅವು ಅಪರಿಹಾರ್ಯವೆನ್ನುತ್ತಾರೆ.

**ಏತೇಜ್ವರಾಃ ಶರೀರೇಷು ತ್ರಿಷು ಸ್ವಾಭಾವಿಕಾ ಮತಾಃ ।**
**ವಿಯೋಗೇ ತು ಜ್ವರೈಸ್ತಾನಿ ಶರೀರಾಣ್ಯೇವ ನಾಸತೇ ॥೨೨೭॥**

ಮೂರೂ ಬಗೆಯ ಶರೀರಗಳಲ್ಲಿ ಈ ಜ್ವರಗಳು ಇರಬೇಕಾದವುಗಳೆಂದು ಹೇಳುವರು. ಒಂದುವೇಳೆ ಈ ಜ್ವರಗಳು ಹೋಗುವದಾದರೆ ಆಯಾ ಶರೀರಗಳೂ ಹೋಗುವವು.

(ಈ ಜ್ವರಗಳು ಶರೀರಗಳೊಡನೆಯೇ ಹುಟ್ಟಿಕೊಂಡಿರುವ ಕಾರಣ ಅವು ಸ್ವಾಭಾವಿಕ. ವ್ಯತಿರೇಕ ಮುಖದಿಂದಲೂ ಇದನ್ನೇ ಹೇಳುತ್ತಾರೆ. ಜ್ವರಗಳು ಇಲ್ಲದಂತಾದರೆ ಶರೀರಗಳೂ ಇಲ್ಲದಂತಾಗುವವು. ಆದುದರಿಂದ ಸ್ವಾಭಾವಿಕ ಇದೇ ವ್ಯತಿರೇಕ ಕ್ರಮ.) —ಒಂದು ದೃಷ್ಟಾಂತ.

**ತಂತೋರ್ವಿಯುಜ್ಯೇನ್ನ ಪಟೋ ಬಾಲೇಭ್ಯಃ ಕಂಬಲೋ ಯಥಾ ।**
**ಮೃದೋ ಘಟಸ್ತಥಾ ದೇಹೋ ಜ್ವರೇಭ್ಯೋಽಪೀತಿ ದೃಶ್ಯತಾಮ್ ॥೨೨೮॥**

ನೂಲನ್ನು ಬಿಟ್ಟು ಬಟ್ಟೆ, ಕೂದಲುಗಳನ್ನು (ಉಣ್ಣೆ) ಬಿಟ್ಟು ಕಂಬಳಿ, ಮಣ್ಣನ್ನು ಬಿಟ್ಟು ಘಟ ಇವುಗಳು ಹೇಗೆ ಇರಲಾರವೋ, ಹಾಗೆ ಜ್ವರಗಳನ್ನು ಬಿಟ್ಟು ದೇಹಗಳು ಇರಲಾರವೆಂದು ತಿಳಿಯಬೇಕು.

(ಉಪಾದಾನ ಕಾರಣದ ನಾಶವಾದರೆ ಕಾರ್ಯವು ಒಂದು ಕ್ಷಣ ಕೂಡ ಉಳಿಯಲಾರದು ಎಂಬನ್ಯಾಯವು ಜ್ವರ ಮತ್ತು ದೇಹಗಳಿಗೆಅನ್ವಯಿಸುವದು.)

—ಇನ್ನು ಕೂಟಸ್ಥನಲ್ಲಿ ಜ್ವರಗಳಿಲ್ಲವೆಂಬುದನ್ನು ಹೇಳಲು ಇಚ್ಛಿಪಟ್ಟು ಮೊದಲು ಚಿದಾಭಾಸನಲ್ಲಿಯೂ ಜ್ವರಗಳಿಲ್ಲವೆಂದು ಹೇಳುತ್ತಾರೆ.

**ಚಿದಾಭಾಸೇ ಸ್ವತಃ ಕೋಽಪಿ ಜ್ವರೋ ನಾಸ್ತಿ ಯತಶ್ಚಿತಃ ।**
**ಪ್ರಕಾಶೈಕಸ್ವಭಾವತ್ವಮೇವ ದೃಷ್ಟಂ ನ ಚೇತರತ್ ॥೨೨೯॥**

ಚಿದಾಭಾಸನಿಗೆ ತನ್ನದೆಂಬ ಯಾವಪ್ರಕಾರದ ಜ್ವರವೂ ಇಲ್ಲ. ಯಾಕಂದರೆ ಚೈತನ್ಯವು ತನ್ನ ಬೆಳಕಿನಿಂದ ಬೆಳಗುತ್ತಲಿರುವದೆಂದು ಮಾತ್ರ ಅನುಭವಕ್ಕೆ ಬರುತ್ತದೆ. ಮತ್ತೇನೂ ಅನುಭವಕ್ಕೆ ಬರುವದಿಲ್ಲ.

(ಚಿದಾಭಾಸನಿಗೆ ಆಧಾರವಾದ ಕೂಟಸ್ಥ ಚೈತನ್ಯವು ತನ್ನ ಬೆಳಕಿನಿಂದ ಬೆಳಗುತ್ತ ಕೇವಲ ಜ್ಞಾನರೂಪವಾದ ಕಾರಣ, ಅದರ ಪ್ರತಿಬಿಂಬವೆನಿಸಿದ ಚಿದಾಭಾಸನುಕೂಡ ಕೇವಲ ಜ್ಞಾನರೂಪನೇ ಆಗಿರಬೇಕು. ಅವನಿಗೆ ಮೂರು ಶರೀರಗಳಲ್ಲಿರುವ ಜ್ವರಗಳ ಸಂಬಂಧದ ಹೊರತಾಗಿ ತನ್ನ ಜ್ವರವೆಂಬುದು ಇಲ್ಲ ಎಂದು ತಿಳಿಯುವದು ಯೋಗ್ಯವಾಗಿದೆ.)

–ಚಿದಾಭಾಸನಿಗೇ ಜ್ವರಗಳ ಸಂಬಂಧವಿಲ್ಲವೆಂದಮೇಲೆ ಕೂಟಸ್ಥನಿಗೆಲ್ಲಿ?

**ಚಿದಾಭಾಸೇಽಪ್ಯಸಂಭಾವ್ಯಾ ಜ್ವರಾಃ ಸಾಕ್ಷಿಣಿ ಕಾ ಕಥಾ ।**
**ಏವಮಪ್ಯೇಕತಾಂ ಮೇನೇ ಚಿದಾಭಾಸೋಽಹ್ಯವಿದ್ಯಯಾ ॥೨೩೦॥**

ಹೀಗೆ ಚಿದಾಭಾಸನಲ್ಲಿಯೇ ಜ್ವರಗಳಿಲ್ಲವೆಂದಮೇಲೆ ಸಾಕ್ಷಿಯಾದ ಕೂಟಸ್ಥನಲ್ಲಿ ಇರುವದೆಂತು ? ಆದರೂ ಚಿದಾಭಾಸನು ಅನಾದಿಯಾದ ಅವಿದ್ಯೆಯಿಂದ ಶರೀರಗಳೊಡನೆ ತಾದಾತ್ಮ್ಯವನ್ನು ಹೊಂದುತ್ತಾನೆ.

(ಈ ಮೂಲಕವಾಗಿಯೇ ನನಗೆ ದುಃಖವಾಗುತ್ತದೆ, ಸಂತಾಪವಾಗುತ್ತದೆ ಇತ್ಯಾದಿ ಏಕತ್ವದರ್ಶಕ ವಾಕ್ಯಗಳು ರೂಢವಾಗಿದೆ.)

—ಇದೇ ಅರ್ಥವನ್ನು ವಿಸ್ತರಿಸುತ್ತಾರೆ.

**ಸಾಕ್ಷಿಸತ್ಯತ್ವಮಧ್ಯಸ್ಯ ಸ್ವೇನೋಪೇತೇ ವಪುಸ್ತ್ರಯೇ ।**
**ತತ್ಸರ್ವಂ ವಾಸ್ತವಂ ಸ್ವಸ್ಯ ಸ್ವರೂಪಮಿತಿ ಮನ್ಯತೇ ॥೨೩೧॥**

ಚಿದಾಭಾಸನು ಕೂಟಸ್ಥನಲ್ಲಿರುವ ನಿಜವಾದ ಇರುವಿಕೆ (ಸತ್ಯತ್ವ) ಎಂಬ ಧರ್ಮವನ್ನು ತನಗೆ ಗಂಟುಬಿದ್ದಿರುವ ಮೂರೂ ಶರೀರಗಳ ಮೇಲೆ ಆರೋಪಿಸಿ, ಆ ಮೂರು ಶರೀರಗಳು, ಅವುಗಳ ಜ್ವರಗಳು ಇವೆಲ್ಲ ತನ್ನ ನಿಜವಾದ ಸ್ವರೂಪವೆಂದು ತಿಳಿಯುತ್ತಾನೆ.

—ಈ ಭ್ರಾಂತಿ ಜ್ಞಾನದ ಪರಿಣಾಮ ?

**ಏತಸ್ಮಿನ್ ಭ್ರಾಂತಿಕಾಲೇಽಯಂ ಶರೀರೇಷು ಜ್ವರತ್ಸ್ವಥ ।**
**ಸ್ವಯಮೇವ ಜ್ವರಾಮೀತಿ ಮನ್ಯತೇ ಹಿ ಕುಟುಂಬಿವತ್ ॥೨೩೨॥**

ಈ ಚಿದಾಭಾಸನು ಇಂಥ ಭ್ರಾಂತಿ ಕಾಲದಲ್ಲಿ ಶರೀರಗಳು ತಾಪ ಹೊಂದುತ್ತಿರಲು, ನಾನೇ ತಾಪ ಹೊಂದುತ್ತಿದ್ದೇನೆ ಎಂದು ಒಬ್ಬ ಕುಟುಂಬಿಕ ಎಂದರೆ ಕುಟುಂಬದೊಡನೆ ಏಕಜೀವನಾದವನಂತೆ ತಿಳಿಯುತ್ತಾನೆ.

— ಈ ದೃಷ್ಟಾಂತವನ್ನು ವಿವರಿಸುತ್ತಾರೆ.

**ಪುತ್ರದಾರೇಷು ತಪ್ಯತ್ಸು ತಪಾಮೀತಿ ವೃಥಾ ಯಥಾ ।**
**ಮನ್ಯತೇ ಪುರುಷಸ್ತದ್ವದಾಭಾಸೋಽಪ್ಯಭಿಮನ್ಯತೇ ॥೨೩೩॥**

ಒಬ್ಬ ಕುಟುಂಬಿಕನು ಹೆಂಡಿರು-ಮಕ್ಕಳು ಕಷ್ಟಕ್ಕೊಳಗಾದರೆ, ನಾನೇ ಕಷ್ಟಕ್ಕೊಳಗಾಗಿದ್ದೇನೆ ಎಂದು ವ್ಯರ್ಥವಾಗಿ ತಿಳಿಯುವಂತೆ, ಚಿದಾಭಾಸನೂ ಶರೀರಗಳ ಜ್ವರವನ್ನು ತನ್ನವೆಂದು ತಿಳಿಯುತ್ತಾನೆ.

—ಭ್ರಾಂತಿಕಾಲದ ಚಿದಾಭಾಸನ ಮಾತಿರಲಿ, ವಿವೇಕದಶೆಯಲ್ಲಿ ?

**ವಿವಿಚ್ಯಭ್ರಾಂತಿಮುಜ್ಝಿತ್ವಾ ಸ್ವಮಪ್ಯಗಣಯನ್ ಸದಾ ।**
**ಚಿಂತಯನ್ ಸಾಕ್ಷಿಣಂ ಕಸ್ಮಾತ್ ಶರೀರಮನುಸಂಜ್ವರೇತ್ ॥೨೩೪॥**

ವಿವೇಕ ಮಾಡಿಕೊಂಡು, ಭ್ರಾಂತಿಯನ್ನು ಬಿಟ್ಟು ತನ್ನ ಸ್ವರೂಪವು ಸುಳ್ಳಾದುದೆಂದು ಅಲಕ್ಷಿಸಿ ತನ್ನ ನಿಜಸ್ವರೂಪನಾದ ಸಾಕ್ಷಿಯನ್ನು ಚಿಂತಿಸುತ್ತಿರುವ ಸಾಧಕನು ಶರೀರದ ಜೊತೆಗೆ ಅದೇಕೆ ದುಃಖಪಟ್ಟಾನು ?

—ಭ್ರಾಂತಿಜ್ಞಾನವು ಸಂತಾಪಕ್ಕೆ ಕಾರಣ. ತತ್ವಜ್ಞಾನವು ಸಂತಾಪನಾಶಕ್ಕೆ ಕಾರಣ ಎನ್ನುತ್ತಾರೆ.

**ಅಯಥಾವಸ್ತು ಸರ್ಪಾದಿಜ್ಞಾನಂ ಹೇತುಃ ಪಲಾಯನೇ ।**
**ರಜ್ಜುಜ್ಞಾನೇಽಹಿಧೀರ್ಧ್ವಸ್ತಾ ಕೃತಮಪ್ಯನುಶೋಚತಿ ॥೨೩೫॥**

ತಪ್ಪು ತಿಳಿವಳಿಕೆಯಿಂದ ಉಂಟಾದ ಹಾವು ಮೊದಲಾದವುಗಳ ಜ್ಞಾನವು ಓಡಿಹೋಗುವದಕ್ಕೆ ಕಾರಣವಾಗುವದು. ಆದರೆ ಆಧಾರಸ್ವರೂಪವಾದ ಹಗ್ಗದ ಜ್ಞಾನವಾಗಿ ಹಾವಿನ ಭ್ರಾಂತಿ ಕಳೆಯಲು ಓಡಿಹೋದುದಕ್ಕೇ ಅವನು ಮರುಗುವನು.

—ಸಾಕ್ಷಿಣಂ ಸದಾ ಚಿಂತಯನ್, ಎಂದು ಹಿಂದೆ ಹೇಳಿದುದನ್ನು ಸ್ಪಷ್ಟಗೊಳಿಸುತ್ತಾರೆ.

**ಮಿಥ್ಯಾಭಿಯೋಗದೋಷಸ್ಯ ಪ್ರಾಯಶ್ಚಿತ್ತ ಪ್ರಸಿದ್ಧಯೇ ।**
**ಕ್ಷಮಾಪಯನ್ನಿವಾತ್ಮಾನಂ ಸಾಕ್ಷಿಣಂ ಶರಣಂ ಗತಃ ॥೨೩೬॥**

ಅಸಂಗನಾದಮೇಲೆ ಭೋಕ್ತೃತ್ವ ಮೊದಲಾದ ದೋಷ ಹೊರೆಸಿದ್ದರ ಪ್ರಾಯಶ್ಚಿತ್ತ ಮಾಡಿಕೊಳ್ಳುವದಕ್ಕಾಗಿ ಸಾಕ್ಷಿಯಾದ ಆತ್ಮನಲ್ಲಿ ಕ್ಷಮೆ ಬೇಡುವವನಂತೆ ಚಿದಾಭಾಸನು ಅವನಿಗೆ ಶರಣಾಗತನಾಗುತ್ತಾನೆ.

—ಇನ್ನೂ ಒಂದು ದೃಷ್ಟಾಂತ ಕೊಡುತ್ತಾರೆ.

**ಆವೃತ್ತಪಾಪನುತ್ತ್ಯರ್ಥಂ ಸ್ನಾನಾದ್ಯಾವರ್ತ್ಯತೇ ಯಥಾ ।**
**ಆವರ್ತಯನ್ನಿವ ಧ್ಯಾನಂ ಸದಾಸಾಕ್ಷಿಪರಾಯಣಃ ॥೨೩೭॥**

ಅನೇಕಸಾರೆ ಜರುಗಿದ ಪಾಪವನ್ನು ಕಳೆದುಕೊಳ್ಳುವದಕ್ಕಾಗಿ ಅನೇಕ ಸಾರೆ ಸ್ನಾನ-ದಾನಾದಿಗಳನ್ನು ಮಾಡುವಂತೆ, ಚಿದಾಭಾಸನು ಮತ್ತೆ ಮತ್ತೆ ಧ್ಯಾನವನ್ನು ಮಾಡುತ್ತ ಯಾವಾಗಲೂ ಸಾಕ್ಷಿಯಾದ ಕೂಟಸ್ಥಾತ್ಮನನ್ನು ಚಿಂತಿಸುವನು.

(ಅಸಂಗನಾದ ಕೂಟಸ್ಥನಲ್ಲಿ ಚಿದಾಭಾಸನು ಸಂಸಾರತ್ವ ಮುಂತಾದವುಗಳನ್ನು ಆರೋಪಿಸಿರುತ್ತಾನೆ. ಈ ಪಾಪವು ಕಳೆದು ಹೋಗುವದಕ್ಕೆ ಮತ್ತೆ ಮತ್ತೆ ಅಸಂಗಾತ್ಮನನ್ನು ಧ್ಯಾನ ಮಾಡುತ್ತ ಯಾವಾಗಲೂ ಸಾಕ್ಷಿ ಪರಾಯಣನಾಗುತ್ತಾನೆ.)

—ಮತ್ತು ತನ್ನ ಗುಣಗಳನ್ನು ಪ್ರಸಿದ್ಧಪಡಿಸುವದಕ್ಕೆ ಚಿದಾಭಾಸನು ಹೇಗೆ ನಾಚುವನೆಂಬುದನ್ನು ದೃಷ್ಟಾಂತ ಮುಖದಿಂದ ಹೇಳುತ್ತಾರೆ.

**ಉಪಸ್ಥ ಕುಷ್ಠಿನೀ ವೇಶ್ಯಾ ವಿಲಾಸೇಷು ವಿಲಜ್ಜತೇ ।**
**ಜಾನತೋಽಗ್ರೇ ತಥಾಭಾಸಃ ಸ್ವಪ್ರಖ್ಯಾತೌ ವಿಲಜ್ಜತೇ॥೨೩೮॥**

ಗುಹ್ಯಸ್ಥಾನದಲ್ಲಿ ಕುಷ್ಠವಿದ್ದ ವೇಶ್ಯೆಯು ಪುರುಷನ ಮುಂದೆ ವಿಲಾಸವನ್ನು ತೋರಿಸಲು ನಾಚುವಂತೆ, ಚಿದಾಭಾಸನು ತನ್ನ ಗುಣಗಳನ್ನು ತೋರಿಸಲು ನಾಚುತ್ತಾನೆ.

—ಈಗ ಮೂರು ಶರೀರಗಳಿಂದ ನಾನು ಬೇರೆಯಾದವನು ಎಂಬ ಜ್ಞಾನವಾದ ಚಿದಾಭಾಸನಿಗೆ ಮತ್ತೆ ಆ ಶರೀರಗಳೇ ನಾನೆಂಬ ತಪ್ಪು ತಿಳಿವಳಿಕೆಯಿಂದ ಭ್ರಮವಾಗುವದಿಲ್ಲ.

**ಗೃಹೀತೋ ಬ್ರಾಹ್ಮಣೋ ಮ್ಲೇಂಚ್ಛೈಃ ಪ್ರಾಯಶ್ಚಿತ್ತಂಚರನ್ ಪುನಃ ।**
**ಮ್ಲೇಂಚ್ಛೈಃ ಸಂಕೀರ್ಯತೇ ನೈವ ತಥಾಭಾಸಃ ಶರೀರಕೈಃ ॥೨೩೯॥**

ತುರುಕರ ಸೆರೆಯಲ್ಲಿ ಸಿಲುಕಿದ ಬ್ರಾಹ್ಮಣನು, ಪ್ರಾಯಶ್ಚಿತ್ತ ಮಾಡಿಕೊಂಡು ಮತ್ತೆ ಮ್ಲೇಂಚ್ಛರ ಸಹವಾಸವನ್ನು ಮಾಡುವದಿಲ್ಲ. ಅದರಂತೆ ಚಿದಾಭಾಸನು ಕ್ಷುದ್ರವಾದ ಶರೀರಗಳೊಡನೆ ತಾದಾತ್ಮ್ಯಗೊಳ್ಳುವದಿಲ್ಲ.

ಹೀಗೆ ಚಿದಾಭಾಸನು ತನ್ನ ತಪ್ಪನ್ನು ತಿದ್ದಿಕೊಳ್ಳುವದಕ್ಕೆ ಮಾತ್ರ ಕೂಟಸ್ಥನಿಗೆ ಶರಣಾಗುತ್ತಾನೆ. ಎಂಬುದಷ್ಟೇ ಅಲ್ಲ, ಮಹತ್ತರವಾದ ಫಲವನ್ನು ಪಡೆಯುತ್ತಾನೆ.

**ಯೌವರಾಜ್ಯೇಸ್ಥಿತೋ ರಾಜಪುತ್ರಃ ಸಾಮ್ರಾಜ್ಯವಾಂಛಯಾ ।**
**ರಾಜಾನುಕಾರೀಭವಿತ ತಥಾ ಸಾಕ್ಷ್ಯನುಕಾರ್ಯಯಮ್ ॥೨೪೦॥**

ಯುವರಾಜ ಪದದಲ್ಲಿರುವ ರಾಜಸುಪುತ್ರನು ಮುಂದೆ ರಾಜ್ಯವನ್ನೆಲ್ಲ ಪಡೆಯುವ ಇಚ್ಛೆಯಿಂದ ರಾಜನ ಅನುಕರಣವನ್ನು ಮಾಡುವನೋ, ಅದರಂತೆ ಚಿದಾಭಾಸನು ಸಾಕ್ಷಿಯ ಧರ್ಮಗಳನ್ನು ಅನುಸರಿಸುತ್ತಾನೆ.

—ರಾಜನ ಅನುಕರಣ ಮಾಡುವದರಿಂದ ಯುವರಾಜನಿಗೆ ಸಾಮ್ರಾಜ್ಯ ಫಲ ದೊರೆಯುತ್ತದೆ. ಆದರೆ ಸಾಕ್ಷಿಯ ಅನುಕರಣ ಮಾಡುವದರಿಂದ ಚಿದಾಭಾಸನಿಗೆ ಅಂಥ ಫಲವೇನೂ ಸಿಗಲಾರದೆನಿಸುತ್ತದೆ. ಹೀಗಿರಲು ಅವನು ಸಾಕ್ಷಿಯನ್ನನುಸರಿಸುವದೇಕೆ ?

**ಯೋಬ್ರಹ್ಮವೇದ ಬ್ರಹ್ಮೈವ ಭವತ್ಯೇವ ಇತಿಶ್ರುತಿ ।**
**ಶ್ರುತ್ವಾ ತದೇಕಚಿತ್ತಃ ಸನ್‌ಬ್ರಹ್ಮ ವೇತ್ತಿ ನ ಚೇತರಮ್ ॥೨೪೧॥**

ಯಾವನು ಬ್ರಹ್ಮವನ್ನರಿಯುವನೋ ಅವನು ಬ್ರಹ್ಮನೇ ಆಗುವನು. ಈ ಶ್ರುತಿ ವಾಕ್ಯವನ್ನು ಕೇಳಿ ಅದರಲ್ಲಿಯೇ ಮನಸ್ಸುಳ್ಳವನಾಗಿ ಬ್ರಹ್ಮವನ್ನು ಮಾತ್ರ ಅರಿಯುತ್ತಾನೆ. ಮತ್ತೇನನ್ನೂ ಅರಿಯದಿರುವನು.

("ಸ ಯೋ ಹ ವೈ ತತ್ಪರಮಂ ಬ್ರಹ್ಮವೇದಂ" ಎಂಬ ಶ್ರುತಿಯು ಬ್ರಹ್ಮಭಾವದ ಪ್ರಾಪ್ತಿ, ಶೋಕ ನಿವೃತ್ತಿ, ಪಾಪ ಮುಕ್ತಿ, ಗುಹಾಗ್ರಂಥಿ ಯಿಂದ ಬಿಡುಗಡೆ ಅಮೃತತ್ವ ಮೊದಲಾದ ಫಲಗಳನ್ನು ಹೇಳುತ್ತದೆ. ಇಂಥ ಮಹಾ ಫಲಗಳ ಇಚ್ಛೆಯಿಂದ ಚಿದಾಭಾಸನು ಸಾಕ್ಷಿಯ ಅನುಕರಣವನ್ನು ಮಾಡುತ್ತಾನೆ.)

—ಬ್ರಹ್ಮಜ್ಞಾನದಿಂದ ಬ್ರಹ್ಮಪ್ರಾಪ್ತಿಯಾಗಲು ಚಿದಾಭಾಸನ ನಾಶವಾಗುವದು. ಎಂದಮೇಲೆ ಅವನು ತನ್ನ ನಾಶಕ್ಕೆ ಹೇಗೆ ಪ್ರಯತ್ನಿಸುವನು.

**ದೇವತ್ವಕಾಮಾ ಹ್ಯಗ್ನ್ಯಾದೌ ಪ್ರವಿಶಂತಿ ಯಥಾ ತಥಾ ।**
**ಸಾಕ್ಷಿತ್ವೇನಾವಶೇಷಾಯ ಸ್ವವಿನಾಶಂ ಸ ವಾಂಛತಿ ॥೨೪೨॥**

ಸುಖಿಗಳೆನಿಸುವ ದೇವತೆಗಳ ಜನ್ಮವನ್ನು ಪಡೆಯಬೇಕೆನ್ನುವವರು ಅಗ್ನಿ ಮೊದಲಾದವುಗಳಲ್ಲಿ ಬಿದ್ದು ಪ್ರಾಣ ನೀಗುವಂತೆ, ಚಿದಾಭಾಸನು ಸಾಕ್ಷಿರೂಪದಿಂದ ಉಳಿಯುವದಕ್ಕಾಗಿ ಸುಳ್ಳಾದ ತನ್ನ ಚಿದಾಭಾಸರೂಪವನ್ನು ಕಳೆದುಕೊಳ್ಳಲು ಬಯಸುವನು.

(ಮಹತ್ವದ ಲಾಭಕ್ಕಾಗಿ ಅಲ್ಪಹಾನಿಯನ್ನು ಸಹಿಸುವದು ಲೋಕದಲ್ಲಿ ಸಹಜವೇ ಆಗಿದೆ. ಪತಿಯೊಡನೆ ಸಹಗಮನ. ಗಂಗೆಯಲ್ಲಿ ದೇಹ ವಿಸರ್ಜನ. ಹಿಮಾಲಯ ಮೊದಲಾದ ಪರ್ವತ ಶಿಖರವೇರಿ ಭೃಗುಪಾತ ವಿಧಿಯಿಂದ ಪ್ರಾಣ ನೀಗುವಿಕೆ. ಇವೇ ಮೊದಲಾದ ಕೃತ್ಯಗಳನ್ನು ಸ್ವರ್ಗದ ಕಾಮನೆಯಿಂದ ಮನುಷ್ಯನು ಮಾಡುವಂತೆ ಚಿದಾಭಾಸನಾದರೂ ಸಾಕ್ಷಿಭಾವದ ಸಲುವಾಗಿ ತನ್ನ ನಾಶವನ್ನು ಬಯಸುತ್ತಾನೆ.)

—ಜ್ಞಾನದಿಂದ ಆಭಾಸತ್ವವು ನಾಶವಾಗುವದಾದರೆ ಜ್ಞಾನಿಗಳ ವ್ಯವಹಾರದ ಗತಿ ?

**ಯಾವತ್ಸ್ವದೇಹದಾಹಂ ಸ ನರತ್ವಂ ನೈವಮುಂಚತಿ |**
**ಯಾವದಾರಬ್ಧದೇಹಂ ಸ್ಯಾನ್ನಾಭಾಸತ್ವವಿಮೋಚ-**
**ನಮ್ ||೨೪೩||**

ಬೆಂಕಿಯಲ್ಲಿ ಹೊಕ್ಕ ಮನುಷ್ಯನಿಗೆ ಅವನ ದೇಹವೆಲ್ಲ ಸುಟ್ಟು ಬೂದಿಯಾಗುವವರೆಗೆ ಮನುಷ್ಯತ್ವದ ವ್ಯವಹಾರ ಬಿಡದೆ ಇರುವಂತೆ ಪ್ರಾರಬ್ಧಕರ್ಮದಿಂದ ಬಂದ ದೇಹವಿರುವವರೆಗೆ ಚಿದಾಭಾಸತ್ವದಿಂದ ಬಿಡುಗಡೆ ಇಲ್ಲ. ಎಂದರೆ ಚಿದಾಭಾಸನು ಇದ್ದೇ ಇರುವನು.

—ಅಜ್ಞಾನವು ಕಳೆದುಹೋದ ಮೇಲೆಯೂ ಅದಿರುವಾಗಿನಂತೆ ವ್ಯವಹಾರ ನಡೆಯುವದೆಂದರೆ ಹೇಗೆ ?

**ರಜ್ಜುಜ್ಞಾನೇಽಪಿ ಕಂಪಾದಿಃ ಶನೈರೇವೋಪಶಾಮ್ಯತಿ |**
**ಪುನರ್ಮಂದಾಂಧಕಾರೇ ಸಾ ರಜ್ಜುಃ ಕ್ಷಿಪ್ತೋರಗೀ-**
**ಭವೇತ್ ||೨೪೪||**

ಹಗ್ಗವನ್ನು ಹಾವೆಂದು ಭಾವಿಸಿ ನಡುಗುತ್ತಿದ್ದವನಿಗೆ ಇದು ಹಗ್ಗವೆಂಬ ತಿಳಿವಳಿಕೆಯಾದಮೇಲೆ ಆ ನಡುಕ-ಬೆವರು ಮುಂ. ಮೆಲ್ಲ ಮೆಲ್ಲಗೆ ಕಡಿಮೆಯಾಗುತ್ತವೆ. ಮತ್ತು ಮಬ್ಬುಗತ್ತಲೆಯಾಗಲು ಅದೇ ಹಗ್ಗವು ಮತ್ತೆ ಹಾವಿನಂತೆ ತೋರುತ್ತದೆ.

—ಈ ರೀತಿಯನ್ನು ದಾರ್ಷ್ಟಾಂತಿಕದಲ್ಲಿ ಯೋಜಿಸಿ ತೋರಿಸುತ್ತಾರೆ.

**ಏವಮಾರಬ್ಧಭೋಗೋಽಪಿ ಶನೈಃ ಶಾಮ್ಯತಿ ನೋಹಠಾತ್ |**
**ಭೋಗಕಾಲೇ ಕದಾಚಿತ್ತು ಮರ್ತ್ಯೋಽಹಮಿತಿ-**
**ಭಾಸತೇ ||೨೪೫||**

ಹೀಗೆ ಪ್ರಾರಬ್ಧಕರ್ಮದಿಂದ ಒದಗಿದ ಭೋಗವು ಮೆಲ್ಲನೆ ಸವೆಯುತ್ತದೆ. ಒಮ್ಮೆಲೆ ಅಲ್ಲ. ಇನ್ನು ಒಂದು ವೇಳೆ ಭೋಗಿಸುವಾಗ ನಾನು ಮನುಷ್ಯನೆಂದೂ ತೋರುವದು.

—ಹಾಗಾದಲ್ಲಿ ತತ್ತ್ವಜ್ಞಾನಕ್ಕೆ ಹಾನಿಯಲ್ಲವೇ ?

**ನೈತಾವತಾಽಪರಾಧೇನ ತತ್ತ್ವಜ್ಞಾನಂ ವಿನಶ್ಯತಿ |**
**ಜೀವನ್ಮುಕ್ತಿವ್ರತಂ ನೇದಂ ಕಿಂತು ವಸ್ತುಸ್ಥಿತಿಃಖಲು ||೨೪೬||**

ಅಷ್ಟು ಮಾತ್ರ ಅಪರಾಧದಿಂದ ಜ್ಞಾನವೇನೂ ನಾಶವಾಗುವದಿಲ್ಲ. ಯಾಕೆಂದರೆ ಇದು ಜೀವನ್ಮುಕ್ತಿ ಎಂಬ ವ್ರತವೇನೂ ಅಲ್ಲ. ನಿಜವಾಗಿಯೂ ಜ್ಞಾನವು ವಸ್ತುಸ್ಥಿತಿಯಾಗಿದೆ.

—ರಜ್ಜು ಸರ್ಪ ಮೊದಲಾದ ದೃಷ್ಟಾಂತದಲ್ಲಿ ವಿಪರೀತ ಜ್ಞಾನವು ಹೋದ ಮೇಲೆ ಕೂಡ ಅದರಿಂದುಂಟಾದ ಭಯ-ಕಂಪನ ಮುಂತಾದ ಕಾರ್ಯಗಳು ಮೆಲ್ಲನೆ ಹೋಗುವದು ನಿಜ. ಆದರೆ ನೀನು 'ಹತ್ತನೆಯವನಿರುವಿ' ಎಂಬ ದೃಷ್ಟಾಂತದಲ್ಲಿ ವಾಕ್ಯ ವಿಚಾರದಿಂದ ಹುಟ್ಟಿದ ಜ್ಞಾನದಿಂದ ಭ್ರಮೆಯು ಕಳೆದ ಮೇಲೆ ಅದರ ಕಾರ್ಯವಾದ ಶೋಕ ಮುಂ. ತೋರುವದಿಲ್ಲವಲ್ಲ. ಎಂದರೆ—

**ದಶಮೋಽಪಿ ಶಿರಸ್ತಾಡಂ ರುದನ್ ಬುದ್ಧ್ವಾ ನ ರೋದಿತಿ ।**
**ಶಿರೋವ್ರಣಸ್ತು ಮಾಸೇನ ಶನೈಃ ಶಾಮ್ಯತಿ ನೋ ತದಾ ॥೨೪೭॥**

ತಲೆ ಹೊಡೆದುಕೊಳ್ಳುತ್ತ ಅಳುವ ಆ ಹತ್ತನೆಯವನು 'ನಾನು ಹತ್ತನೆಯವನಿರುವೆ, ಎಂದು ತಿಳಿದ ಮೇಲೆ ಮಾತ್ರ ಅಳುವದಿಲ್ಲ. ಆದರೆ ಹೊಡೆದುಕೊಳ್ಳುವಿಕೆಯಿಂದಾದ ತಲೆಯ ಗಾಯವು ತಿಂಗಳಾನುಗಟ್ಲೆ ಮಾಯುತ್ತ ಹೋಗುವದು. ಆಗಲೇ ಮಾಯುವದಿಲ್ಲ.

—ಜ್ಞಾನವಾದ ಮೇಲೆಯೂ ಸಂಸಾರವು ಮರುಕಳಿಸುವದಾದರೆ ಜೀವನ್ಮುಕ್ತಿಯಿಂದ ಸಾಧಿಸಿದ್ದೇನು ?

**ದಶಮಾಮೃತಿ ಲಾಭೇನ ಜಾತೋ ಹರ್ಷೋ ವ್ರಣವ್ಯಥಾಮ್।**
**ತಿರೋಧತ್ತೇ ಮುಕ್ತಿಲಾಭಸ್ತಥಾ ಪ್ರಾರಬ್ಧ**
**ದುಃಖಿತಾಮ್ ॥೨೪೮॥**

'ಹತ್ತನೆಯವನು ಸತ್ತಿಲ್ಲ, ಎಂದು ತಿಳಿಯದರಿಂದುಂಟಾದ ಹರ್ಷವು ಗಾಯದಿಂದ ಉಂಟಾದ ದುಃಖವನ್ನು ಮರೆಮಾಡುವದು. ಅದರಂತೆ ಜೀವನ್ಮುಕ್ತಿಯಿಂದ ಉಂಟಾದ ಹರ್ಷವು ಪ್ರಾರಬ್ಧಕರ್ಮದಿಂದೊದಗುವ ದುಃಖವನ್ನು ಮರೆಸುವದು.

—ಜೀವನ್ಮುಕ್ತಿಯು ವ್ರತವಲ್ಲವೆಂದು ಹಿಂದೆ ಹೇಳಿದ್ದರ ಅಭಿಪ್ರಾಯ ವೇನು ?

**ವ್ರತಾಭಾವಾದ್ಯದಾಧ್ಯಾಸಸ್ತದಾ ಭೂಯೋ ವಿವಿಚ್ಯತಾಮ್ ।**
**ರಸಸೇವೀ ದಿನೇ ಭುಂಕ್ತೇ ಭೂಯೋ ಭೂಯೋ ಯಥಾ ತಥಾ ||೨೪೯||**

ರಸ-ಗುಟಿಕಾದಿಗಳನ್ನು ಸೇವಿಸುವವನು ಒಂದು ಹಗಲಿನಲ್ಲಿಯೇ ಅನೇಕ ಸಾರೆ ಊಟ ಮಾಡುವಂತೆ, ಇದು ವ್ರತವಲ್ಲವಾದುದರಿಂದ ತಪ್ಪು ತಿಳಿವಳಿಕೆ ತಲೆದೋರಿದಾಗೆಲ್ಲ ವಿವೇಕವನ್ನು ಮಾಡಿಕೊಳ್ಳಬೇಕು. ಎಂದರೆ ದೇಹವೇ ನಾನೆಂಬ ವಿಚಾರವನ್ನು ಹೊಡೆದೊಡಿಸಬೇಕು.

—ಜ್ಞಾನದಿಂದಂತೂ ಪಾರಬ್ಧ ಕರ್ಮ ಫಲವು ಹೋಗುವದಿಲ್ಲ. ಇನ್ನು ಅದರ ನಿವಾರಣೆಗೆ ಉಪಾಯ ?

**ಶಮಯತ್ಯೌಷಧೇನಾಯಂ ದಶಮಃ ಸ್ವಂ ವ್ರಣಂ ಯಥಾ ।**
**ಭೋಗೇನ ಶಮಯಿತ್ವೈತತ್ ಪ್ರಾರಬ್ಧಂ ಮುಚ್ಯತೇ ತಥಾ ||೨೫೦||**

ಹತ್ತನೆಯವನು ತನ್ನ ಗಾಯವನ್ನು ಔಷಧದಿಂದ ಕಳೆದುಕೊಳ್ಳುವಂತೆ, ಜ್ಞಾನಿಯು ಪ್ರಾರಬ್ಧ ಕರ್ಮ ಫಲವನ್ನುಂಡು ಆ ಮೇಲೆ ವಿದೇಹ ಮುಕ್ತಿ ಪಡೆಯುವನು.

( 'ಕಿಮಿಚ್ಛನ್', ಎಂಬ ವಾಕ್ಯದಲ್ಲಿ ಹೇಳಿದ ದುಃಖ ಮೋಕ್ಷವೆಂಬ ಈ ಅವಸ್ಥೆ ಆರನೆಯದು)

—ಜೀವನ ತೃಪ್ತಿಯೆಂಬ ಏಳನೆಯ ಅವಸ್ಥೆ.

**ಕಿಮಿಚ್ಛನ್ನಿತಿ ವಾಕ್ಯೋಕ್ತಃ ಶೋಕಮೋಕ್ಷ ಉದೀರಿತಃ ।**
**ಆಭಾಸಸ್ಯ ಹ್ಯವಸ್ಥೈಷಾಷಷ್ಠೀ ತೃಪ್ತಿಸ್ತು ಸಪ್ತಮೀ ||೨೫೧||**

'ಏನನ್ನು ಬಯಸಿ, ಎಂಬ ವಾಕ್ಯದಲ್ಲಿ ಹೇಳಿದ ಶೋಕ ಮೋಕ್ಷವೆಂಬ ಅವಸ್ಥೆಯನ್ನು ಇದುವರೆಗೆ ಹೇಳಿದೆವು. ಇದು ಚಿದಾಭಾಸನ ಆರನೆಯ ಅವಸ್ಥೆಯು. ತೃಪ್ತಿ ಎಂಬುದು ಏಳನೆಯದು.

—ಅಪರೋಕ್ಷ ಜ್ಞಾನದಿಂದ ದೊರೆಯುವ ತೃಪ್ತಿಯು ನಿರಂಕುಶ ವಿಷಯೋಪಭೋಗಗಳಿಂದ ದೊರೆಯುವ ತೃಪ್ತಿ ಸಾಂಕುಶ.

**ಸಾಂಕುಶಾ ವಿಷಯೈಸ್ತೃಪ್ತಿರಿಯಂ ತೃಪ್ತಿರ್ನಿರಂಕುಶಾ ।**
**ಕೃತಂ ಕೃತ್ಯಂ ಪ್ರಾಪಣೀಯಂ ಪ್ರಾಪ್ತಮಿತ್ಯೇವ ತೃಪ್ಯತಿ||೨೫೨||**

ವಿಷಯಗಳಿಂದ ಉಂಟಾಗುವ ತೃಪ್ತಿಯು ಎರಡನೆಯವುಗಳನ್ನವಲಂಬಿಸಿಕೊಂಡು ಆಗುವದರಿಂದ ಸಾಂಕುಶ. ಬ್ರಹ್ಮಸಾಕ್ಷಾತ್ಕಾರದಿಂದ ಉಂಟಾಗುವ ತೃಪ್ತಿಯು ನಿರಂಕುಶ. ಮಾಡಬೇಕಾದುದನ್ನೆಲ್ಲ ಮಾಡಿದುದಾಯಿತು. ಹೊಂದಬೇಕಾದುದನ್ನೆಲ್ಲ ಹೊಂದಿದುದಾಯಿತು ಎಂದುಕೊಂಡು ಜ್ಞಾನಿಯು ತೃಪ್ತನಾಗುವನು.

—ಕೃತ ಕೃತ್ಯತೆಯನ್ನು ಇನ್ನೂ ಹೇಳುತ್ತಾರೆ.

**ಐಹಿಕಾಮುಷ್ಮಿಕವ್ರಾತಸಿದ್ಧ್ಯೈ ಮುಕ್ತೇಶ್ಚ ಸಿದ್ಧಯೇ ।**
**ಬಹುಕೃತ್ಯಂ ಪುರಾಽಸ್ಯಾಭೂತ್ತತ್ಸರ್ವಮಧುನಾ ಕೃತಮ್॥೨೫೪॥**

ಈ ಲೋಕದ–ಮತ್ತು ಪರಲೋಕದ ಮತ್ತು ಮುಕ್ತಿಯ ಸಿದ್ಧಿಯಾಗಬೇಕೆಂದು ಇವುಗಳಿಗೋಸುಗ ಮೊದಲು ಬಹಳ ಕರ್ತವ್ಯಗಳಿದ್ದವು. ಈಗ ಅವುಗಳೆಲ್ಲವು ತೀರಿದವು.

( ಈ ಲೋಕದ ಕರ್ತವ್ಯ–ಕೃಷಿವಾಣಿಜ್ಯ ಮುಂ. ಪರಲೋಕದ–ಯಾಗ–ಉಪಾಸನೆ ಮುಂ. ಮೋಕ್ಷದಂ ಶ್ರವಣ ಮೊದಲಾದವು. )

—ಇದರ ಫಲವನ್ನು ಹೇಳುತ್ತಾರೆ.

**ತದೇತತ್ಕೃತಕೃತ್ಯತ್ವಂ ಪ್ರತಿಯೋಗಿ ಪುರಃಸರಮ್ ।**
**ಅನುಸಂದಧದೇವಾಯುಮೇವಂ ತೃಷ್ಯತಿ ನಿತ್ಯಶಃ ॥೨೫೫॥**

ತಾನು ಮಾಡಬೇಕಾದುದನ್ನೆಲ್ಲ ಮಾಡಿದ್ದಾಯಿತು ಎಂಬ ಸ್ಥಿತಿಯಿಂದ ಅವನು ಇದರ ವಿರುದ್ಧ ಸ್ಥಿತಿಯ ಎಂದರೆ ಅಜ್ಞಾನಿಗಳ ಆಚರಣೆಯ ಅನುಸಂಧಾನದ ಮೂಲಕ ತೃಪ್ತಿ ಹೊಂದುತ್ತಾನೆ.

—ಆ ಅನುಸಂಧಾನವೆಂಥದು ?

**ದುಃಖಿನೋಽಜ್ಞಾಃ ಸಂಸರಂತು ಕಾಮಂ ಪುತ್ರಾದ್ಯಪೇಕ್ಷಯಾ।**
**ಪರಮಾನಂದ ಪೂರ್ಣೋಽಹಂ ಸಂಸರಾಮಿ**
**ಕಿಮಿಚ್ಛಯಾ ॥೨೫೬॥**

ತಿಳಿವಳಿಕೆ ಇಲ್ಲದವರು ಹೆಂಡತಿ-ಮಕ್ಕಳುಮರಿ ಮೊದಲಾದವನ್ನು ಬಯಸಿ ದುಃಖಿಗಳಾಗಿ ಸಂಸಾರದಲ್ಲಿ ಬೀಳಲಿ. ಪರಮಾನಂದದಿಂದ ಪರಿಪೂರ್ಣನಾದ ನಾನು ಏನನ್ನು ಬಯಸಿ ಸಂಸಾರದಲ್ಲಿ ಬೀಳಲಿ ?

— ಸ್ವರ್ಗಾದಿಗಳನ್ನು ಬಯಸಿ ಯಜ್ಞ-ಯಾಗಾದಿ-ಕರ್ಮಾನುಷ್ಠಾನ ಮಾಡುವವರಿಗಿಂತ ನಮ್ಮ ವೈಲಕ್ಷ್ಯಣ್ಯ.

**ಅನುತಿಷ್ಠಂತು ಕರ್ಮಾಣಿ ಪರಲೋಕಯಿಯಾಸವಃ ।**
**ಸರ್ವಲೋಕಾತ್ಮಕಃ ಕಸ್ಮಾದನುತಿಷ್ಠಾಮಿ ಕಿಂ ಕಥಮ್ ॥೨೫೬॥**

ಸ್ವರ್ಗಾದಿಗಳಿಗೆ ಹೋಗಬೇಕೆಂದು ಯಾರಿಗೆ ಇಚ್ಛೆಇರುವದೋ ಅವರು ಬೇಕಾದಂತೆ ಕರ್ಮಾನುಷ್ಠಾನವಮಾಡುತ್ತಿರಲಿ. ಆದರೆ ಸಮಸ್ತಲೋಕಗಳ ಸ್ವರೂಪವೇ ಆಗಿ ಏನನ್ನೂ ಮಾಡುವವನಲ್ಲದ ನಾನು ಯಾವಫಲವನ್ನು ಬಯಸಿ, ಯಾವಕರ್ಮವನ್ನು ಹೇಗೆಮಾಡಬೇಕು ?

— ಸ್ವಾರ್ಥಕ್ಕಾಗಿ ಬೇಡ. ಪರಾರ್ಥಕ್ಕಾಗಿಯಾದರೂ ಯಾಕೆ ಮಾಡಬಾರದು ?

**ವ್ಯಾಚಕ್ಷತಾಂ ತೇ ಶಾಸ್ತ್ರಾಣಿ ವೇದಾನಧ್ಯಾಪಯಂತುವಾ ।**
**ಯೇಽತ್ರಾಧಿಕಾರಿಣೋ ಮೇ ತು ನಾಧಿಕಾರೋಽಕ್ರಿಯ-**
**ತ್ವತಃ ॥೨೫೭॥**

ವೇದದಲ್ಲಿ ಹೇಳಿರುವ ಕರ್ಮಗಳನ್ನು ಮಾಡುವವರು ಎಂದರೆ ಅಧಿಕಾರಿಗಳಾದವರು ಶಾಸ್ತ್ರಗಳ ವ್ಯಾಖ್ಯಾನ ಮಾಡಲಿ. ವೇದಾಧ್ಯಯನ ಮಾಡಿಸಲಿ. ನಾನು ಕರ್ಮಗಳನ್ನು ಮಾಡುವವನಲ್ಲದ ಕಾರಣ ನನಗೆ ಅವುಗಳ ಅಧಿಕಾರ ವಿಲ್ಲ.

— ಉದರಂಭರಣಕ್ಕಾಗೆ ಭಿಕ್ಷೆ, ಶುಚಿಗಾಗಿ ಸ್ನಾನ ಮೊದಲಾದವನ್ನಾದರೂ ನೀವು ಮಾಡುವಂತಿರುವದಲ್ಲ.

**ನಿದ್ರಾಭಿಕ್ಷೇ ಸ್ನಾನಶೌಚೇ ನೇಚ್ಛಾಮಿ ನ ಕರೋಮಿ ಚ ।**
**ದ್ರಷ್ಟಾರಶ್ಚೇತ್ಕಲ್ಪಯಂತಿ ಕಿಂ ಮೇ ಸ್ಯಾದನ್ಯಕಲ್ಪ-**
**ನಾತ್ ॥೨೫೮॥**

ನಿದ್ರೆ, ಭಿಕ್ಷೆ, ಸ್ನಾನ, ಮೃತ್ತಿಕಾಟಲಶೌಚ, ಮೊದಲಾದವನ್ನು ನಾನು ಬಯಸುವದೂ ಇಲ್ಲ. ವಸ್ತುತಃ ಮಾಡುವವನೂ ಅಲ್ಲ. ನನ್ನನ್ನು ನೋಡುತ್ತಿರುವವರು ನನ್ನಮೇಲೆ ಆ ಕರ್ಮಗಳ ಆರೋಪ ಮಾಡುತ್ತಿದ್ದರೆ ಮಾಡಲಿ. ಇತರರ ಆರೋಪಗಳಿಂದ ನನಗೇನಾಗಬೇಕಾಗಿದೆ ?

—ಎರಡನೆಯವರ ಕಲ್ಪನೆಗಳಿಂದ ಏನೂ ಬಾಧಕವಿಲ್ಲ. ಎಂಬುದಕ್ಕೆ ದೃಷ್ಟಾಂತ.

**ಗುಂಜಾಪುಂಜಾದಿ ದಹ್ಯೇತ ನಾನ್ಯಾರೋಪಿತವಹ್ನಿನಾ ।**
**ನಾನ್ಯಾರೋಪಿತಸಂಸಾರಧರ್ಮಾನೇವಮಹಂ ಭಜೇ ॥೨೫೯॥**

ಗುಲಗಂಜಿಯ ರಾಶಿಯನ್ನು ಕಂಡು ಅದು ಬೆಂಕಿ ಎಂದು ಯಾರಾದರೂ ಆರೋಪ ಮಾಡಿದರೆ ಅದೇನೂ ಮತ್ತೊಂದನ್ನು ಸುಡಲಾರದು. ಅದರಂತೆ ಬೇರೊಬ್ಬರು ಅರೋಪಿಸಿದ ಸಂಸಾರ ಧರ್ಮವನ್ನು ನಾನು ಸ್ವೀಕರಿಸಲಾರೆನು.

—ಕರ್ಮಾನುಷ್ಠಾನದ ಮಾತಿರಲಿ. ಜ್ಞಾನಕ್ಕಾಗಿ ಶ್ರವಣಾದಿಗಳನ್ನು ಮಾಡಬೇಕಲ್ಲ.

**ಶೃಣ್ವಂತ್ವಜ್ಞಾತತತ್ತ್ವಾಸ್ತೇ ಜಾನನ್ ಕಸ್ಮಾತ್ ಶೃಣೋಮ್ಯಹಮ್ ।**
**ಮನ್ಯಂತಾಂ ಸಂಶಯಾಪನ್ನಾ ನ ಮನ್ಯೇಽಹಮ-**
**ಸಂಶಯಃ ॥೨೬೦॥**

ಯಾರಿಗೆ ತತ್ತ್ವವು ತಿಳಿದಿಲ್ಲವೋ ಅವರು ಶ್ರವಣ ಮಾಡಲಿ. ನಾನು ತತ್ತ್ವವನ್ನು ತಿಳಿದಿದ್ದೇನೆ. ಎಂದಮೇಲೆ ಯಾತಕ್ಕೆ ಶ್ರವಣ ಮಾಡಲಿ ? ಯಾರಿಗೆ ಸಂದೇಹವಿರುವದೋ ಅವರು ಮತ್ತಷ್ಟು ಮನನ ಮಾಡಿಕೊಳ್ಳಲಿ. ನಾನು ಸಂಶಯವಿಲ್ಲದವನಾದ ಕಾರಣ ಮನನ ಮಾಡುವದಿಲ್ಲ.

—ವಿಪರೀತ ಭಾವನೆ ಕಳೆದುಕೊಳ್ಳಲು ನಿದಿಧ್ಯಾಸನ ಮಾಡಬೇಕಷ್ಟೇ?

**ವಿಪರ್ಯಸ್ತೋ ನಿದಿಧ್ಯಾಸೇತ್ ಕಿಂ ಧ್ಯಾನಮವಿಪರ್ಯ-**
**ಯಾತ್ ।**
**ದೇಹಾತ್ಮತ್ವವಿಪರ್ಯಾಸಂ ನ ಕದಾಚಿದ್ಭಜಾಮ್ಯ-**
**ಹಮ್ ॥೨೬೧॥**

ಇನ್ನೂ ದೇಹಾತ್ಮ ಬುದ್ಧಿಯುಳ್ಳವರು ಅದನ್ನು ಕಳೆದುಕೊಳ್ಳುವದಕ್ಕಾಗಿ ನಿದಿಧ್ಯಾಸನ ಮಾಡಲಿ. ಎಂದರೆ ಸದಾ ಬ್ರಹ್ಮ ಚಿಂತನ ಮಾಡಲಿ. ವಿಪರೀತ ಭಾವನೆಯೇ ಎಂದಮೇಲೆ ಅಲ್ಲಿ ಧ್ಯಾನದ ಉಪಯೋಗವೇನು ? ನಾನು "ದೇಹವೆಂದರೆ ಆತ್ಮ" ಎಂಬ ತಪ್ಪು ತಿಳಿವಳಿಕೆಯನ್ನು ಎಂದಿಗೂ ಮಾಡಿಕೊಳ್ಳಲಾರೆನು.

—ವಿಪರೀತ ಭಾವನೆ ಇಲ್ಲದೇ "ನಾನು ಮನುಷ್ಯ" ನೆಂಬ ವ್ಯವಹಾರ ಹೇಗೆ ಸಾಧ್ಯ ?

**ಅಹಂ ಮನುಷ್ಯ ಇತ್ಯಾದಿವ್ಯವಹಾರೋ ವಿನಾಪ್ಯಮುಮ್ ।**
**ವಿಪರ್ಯಾಸಂ ಚಿರಾಭ್ಯಸ್ತವಾಸನಾತೋಽವಕಲ್ಪತೇ ॥೨೬೨॥**

"ನಾನು ಮನುಷ್ಯ" ಎಂದು ಮೊದಲಾದ ವ್ಯವಹಾರವು ವಿಪರೀತ ಭಾವನೆ ಎಂದರೆ ದೇಹಾತ್ಮ ಬುದ್ಧಿ ಇಲ್ಲದೇ ಬಹುಕಾಲ ಅಭ್ಯಾಸ ಮಾಡಿದ ವಾಸನಾಯೋಗದಿಂದ ಆಗುವದು ಶಕ್ಯವಿದೆ.

—ಆ ವ್ಯವಹಾರ ನಾಶಕ್ಕಾದರೂ ಧ್ಯಾನ ಮಾಡಬೇಕಲ್ಲ ?

**ಪ್ರಾರಬ್ಧಕರ್ಮಣಿಕ್ಷೀಣೇ ವ್ಯವಹಾರೋ ನಿವರ್ತತೇ ।**
**ಕರ್ಮಾಕ್ಷಯೇ ತ್ವಸೌ ನೈವ ಶಾಮ್ಯೇತ್‌ಧ್ಯಾನಸಹಸ್ರತಃ॥೨೬೩॥**

ಪ್ರಾರಬ್ಧ ಕರ್ಮವು ತೀರಿತೆಂದರೆ ವ್ಯವಹಾರವು ತನ್ನಷ್ಟಕ್ಕೆ ತಾನೇ ಮುಗಿದು ಹೋಗುವದು. ಆ ಕರ್ಮವು ತೀರದಿರುವಾಗ ಸಾವಿರಾರುಸಾರೆ ಧ್ಯಾನ ಮಾಡಿದರೂ ಮುಗಿಯುವದಿಲ್ಲ.

—ಆ ವ್ಯವಹಾರವನ್ನು ಕ್ಷೀಣಗೊಳಿಸಲಿಕ್ಕಾದರೂ ಧ್ಯಾನವು ಬೇಕು.

**ವಿರಲತ್ವಂ ವ್ಯವಹೃತೇರಿಷ್ಟಂ ಚೇತ್‌ಧ್ಯಾನಮಸ್ತು ತೇ ।**
**ಅಬಾಧಿಕಾಂ ವ್ಯವಹೃತಿಂ ಪಶ್ಯನ್ ಧ್ಯಾಯಾಮ್ಯಹಂ-**
**ಕುತಃ ॥೨೬೪॥**

ವ್ಯವಹಾರವು ಸ್ವಲ್ಪಾದರೂ ಕಡಿಮೆಯಾಗಬೇಕೆಂದು ನೀನು ಬಯಸುವದಾದರೆ ಅದಕ್ಕಾಗಿ ನೀನು ಅವಶ್ಯಧ್ಯಾನಮಾಡು. ವ್ಯವಹಾರವು ಬಾಧಕವೆಂದು ನಾನು ತಿಳಿಯುವದಿಲ್ಲವಾದುದರಿಂದ ಯಾಕೆ ಧ್ಯಾನ ಮಾಡಲಿ ?

—ಧ್ಯಾನದ ಅವಶ್ಯಕತೆ ಇರಬೇಡ. ವಿಕ್ಷೇಪ ಎಂದರೆ ಮನಸ್ಸಿನ ಚಾಂಚಲ್ಯವನ್ನು ಕಳೆದುಕೊಳ್ಳಲಿಕ್ಕಾದರೂ ಸಮಾಧಿಯ ಅಭ್ಯಾಸಮಾಡಬಹುದು.

**ವಿಕ್ಷೇಪೋ ನಾಸ್ತಿ ಯಸ್ಮಾನ್ಮೇ ನ ಸಮಾಧಿಸ್ತತೋಮಮ ।**
**ವಿಕ್ಷೇಪೋ ವಾ ಸಮಾಧಿರ್ವಾ ಮನಸಃಸ್ಯಾದ್ವಿಕಾರಿಣಃ॥೨೬೫॥**

ನನಗೆ ವಿಕ್ಷೇಪವೇ ಇಲ್ಲದ್ದರಿಂದ ಸಮಾಧಿಯ ಅವಶ್ಯಕತೆಯೇ ಇಲ್ಲ. ವಿಕ್ಷೇಪವೆಂಬುದೂ ಸಮಾಧಿ ಎಂಬುದೂ ಬದಲಾವಣೆಯಾಗುವ ಮನಸ್ಸಿಗೆ ಸಂಬಂಧಪಟ್ಟವುಗಳು.

—ಸಮಾಧಿಯ ಫಲವಾದ ಅನುಭವವನ್ನು ನೀವು ಸಂಪಾದಿಸಬೇಕಷ್ಟೇ?

**ನಿತ್ಯಾನುಭವರೂಪಸ್ಯ ಕೋ ಮೇಽತ್ರಾನುಭವಃ ಪೃಥಕ್ ।**
**ಕೃತ ಕೃತ್ಯಂ ಪ್ರಾಪಣೀಯಂ ಪ್ರಾಪ್ತಮಿತ್ಯೇವ-**
**ನಿಶ್ಚಯಃ ॥೨೬೬॥**

ನಿತ್ಯ ಅನುಭವರೂಪನಾದ ನನ್ನ ಹೊರತೂ ಬೇರೆ ಅನುಭವ ಇನ್ನಾವುದು ? ಮಾಡತಕ್ಕದ್ದನ್ನು ಮಾಡಿದ್ದಾಯಿತು. ಪಡೆಯತಕ್ಕದ್ದನ್ನೆಲ್ಲ ಪಡೆದುದಾಯಿತು. ಹೀಗೆ ನನ್ನ ನಿಶ್ಚಯವಿದೆ.

—ಮನಸ್ಸು ಬಂದಂತೆ ನಡೆಯುವ ಪ್ರಸಂಗವೇ ?

**ವ್ಯವಹಾರೋ ಲೌಕಿಕೋ ವಾ ಶಾಸ್ತ್ರೀಯೋಽನ್ಯ-**
**ಥಾಽಪಿ ವಾ ।**
**ಮಮಾಕರ್ತುರಲೇಪಸ್ಯ ಯಥಾಽಽರಬ್ಧಂ ಪ್ರವರ್ತ-**
**ತಾಮ್ ॥೨೬೭॥**

ನಾನು ಮಾಡುವವನಲ್ಲ. ಮತ್ತು ಯಾವದನ್ನೂ ಹಚ್ಚಿಕೊಳ್ಳುವವನಲ್ಲ. ನನ್ನಿಂದ ತಾರ್ಕಿಕವಾಗಲಿ, ಶಾಸ್ತ್ರೀಯವಾಗಲಿ ಅಥವಾ ಯಾವದೇ ಮಾಡಬಾರದ ವ್ಯವಹಾರವಾಗಲಿ ಪ್ರಾರಬ್ಧಕ್ಕೆ ಅನುರೂಪವಾಗಿ ನಡೆಯಲಿ.

ಭಿಕ್ಷಾ—ಆಹಾರ ಮುಂ. ಲೌಕಿಕ. ಜಪ—ಸಮಾಧಿ ಮುಂ. ಶಾಸ್ತ್ರೀಯ. ಹಿಂಸೆಯಂಥ ಮಾಡಬಾರದ ಕಾರ್ಯ. ಹೀಗೆ ಯಾವದೇ ನಡೆದರೂ ಅದು ಪ್ರಾರಬ್ಧಕರ್ಮಾನುಗುಣವಾಗಿ ನಡೆಯುವದರಿಂದ ಅದರ ನಿಷೇಧನನ್ನು ನಾನು ಮಾಡಲಾರೆನು.

—ಹೀಗೆ ಸಹಜ ಸ್ಥಿತಿಯನ್ನು ಪ್ರೌಢವಾದವನ್ನು ಆರಂಭಿಸುತ್ತಾರೆ.

**ಅಥವಾ ಕೃತಕೃತ್ಯೋಽಪಿ ಲೋಕಾನುಗ್ರಹಕಾಮ್ಯಯಾ ।**
**ಶಾಸ್ತ್ರೀಯೇಣೈವ ಮಾರ್ಗೇಣ ವರ್ತೇಽಹಂ**
**ಕಾ ಮಮ ಕ್ಷತಿಃ ॥೨೬೮॥**

ಅಥವಾ ನಾನು ಮಾಡತಕ್ಕುದುದನ್ನೆಲ್ಲ ಮಾಡಿದವನಾದರೂ, ಜನರಿಗೆ ದಾರಿ ತೋರಬೇಕೆಂಬ ಬುದ್ಧಿಯಿಂದ ಶಾಸ್ತ್ರದಲ್ಲಿ ಹೇಳಿದ ಮಾರ್ಗದಂತೆಯೇ ನಡೆಯುತ್ತೇನೆ. ಆದರಿಂದ ನನಗಾಗುವ ಹಾನಿ ಏನು ?

—ಶಾಸ್ತ್ರಾನುಸಾರವಾಗಿ ನಡೆಯುವೆನೆಂದು ಒಮ್ಮೆ ಹೇಳಿದರೆ ಅದರಿಂದ ಅಭಿಮಾನವುಂಟಾಗಿ ಮನಸ್ಸು ವಿಕಾರಗೊಳ್ಳಬಹುದು.

**ದೇವಾರ್ಚನ ಸ್ನಾನಶೌಚಭಿಕ್ಷಾದೌ ವರ್ತತಾಂವಪುಃ ।**
**ತಾರಂ ಜಪತು ವಾಕ್ ತದ್ವತ್ ಪಠತ್ವಾಮ್ನಾಯ ಮಸ್ತಕಮ್ ॥೨೬೯॥**
**ವಿಷ್ಣುಂ ಧ್ಯಾಯತು ಧೀರ್ಯದ್ವಾ ಬ್ರಹ್ಮಾನಂದೇ ವಿಲೀಯತಾಮ್ ।**
**ಸಾಕ್ಷ್ಯಹಂ ಕಿಂ ಚಿದಪ್ಯತ್ರ ನಕುರ್ವೇ ನಾಪಿ ಕಾರಯೇ॥೨೭೦॥**

ಈ ಶರೀರವು ದೇವರಪೂಜೆ, ತೀರ್ಥ, ಸ್ನಾನ, ಶೌಚ, ಭಿಕ್ಷಾಟನೆ ಮೊದಲಾದ ಕೆಲಸಗಳನ್ನು ಮಾಡಲಿ. ಅದರಂತೆ ವಾಣಿಯು ಓಂಕಾರ ಜಪವನ್ನು ಮಾಡಲಿ. ಅಥವಾ ಉಪನಿಷತ್ತುಗಳ ಪಠಣ ಮಾಡಲಿ. ಬೇಕಾದರೆ ಬುದ್ಧಿಯು ವಿಷ್ಣುವಿನ ಧ್ಯಾನ ಮಾಡಲಿ ಅಥವಾ ಬ್ರಹ್ಮಾನಂದದಲ್ಲಿ ಮುಳುಗಿರಲಿ. ಈ ಮೂರು ಇಂದ್ರಿಯಗಳಿಗೂ ಸಾಕ್ಷಿಯಾದ ನಾನು ಏನನ್ನೂ ಮಾಡುವದಿಲ್ಲ ಮತ್ತು ಮಾಡಿಸುವದಿಲ್ಲ.

**ಏವಂ ಚ ಕಲಹಃ ಕುತ್ರ ಸಂಭವೇತ್ ಕರ್ಮಿಣೋ ಮಯಾ ।**
**ವಿಭಿನ್ನವಿಷಯತ್ವೇನ ಪೂರ್ವಾಪರಸಮುದ್ರವತ್ ॥೨೭೧॥**

ಹೀಗೆ ಪೂರ್ವ–ಮತ್ತು ಪಶ್ಚಿಮ ಸಮುದ್ರಗಳಂತೆ ಪ್ರತಿಯೊಬ್ಬರ ವಿಷಯಗಳು ಭಿನ್ನವಿರುವದರಿಂದ ಕರ್ಮಿಪುರುಷನಿಗೂ, ಸಾಕ್ಷಿಯಾದ ನನಗೂ ಜಗಳವು ಹೇಗೆ ಹುಟ್ಟುವದು?

ಪೂರ್ವಾಪರ ಸಮುದ್ರಗಳಂತೆ ಇಬ್ಬರ ವಿಷಯಗಳೂ ಭಿನ್ನವೆಂತು ?

**ವಪುರ್ವಾಗ್ಧೀಷು ನಿರ್ಬಂಧಃ ಕರ್ಮಿಣೋ ನ ತು ಸಾಕ್ಷಿಣಿ ।**
**ಜ್ಞಾನಿನಃ ಸಾಕ್ಷ್ಯಲೇಪತ್ವೇ ನಿರ್ಬಂಧೋ ನೇತರತ್ರ ಹಿ ॥೨೭೨॥**

ಕರ್ಮಿಪುರುಷನ ಆಗ್ರಹವು ಶರೀರ-ವಾಣಿ–ಬುದ್ಧಿ ಎಂಬ ಮೂರು ಕರಣಗಳ ವಿಷಯಕ್ಕಿರುವದೇ ಹೊರತು ಸಾಕ್ಷಿಯ ಬಗೆಗಲ್ಲ. ಎಂದರೆ

ಶಾಸ್ತ್ರೀಯ ಕರ್ಮಗಳನ್ನು ಮಾಡಲೇಬೇಕೆಂಬ ನಿರ್ಬಂಧವು ಈ ಕರಣ ತ್ರಯಕ್ಕೆ. ಇನ್ನು ಜ್ಞಾನಿಯ ಆಗ್ರಹವು ಸಾಕ್ಷಿಯು ನಿರ್ಲೇಪನಿರಬೇಕೆಂಬ ಬಗೆಗೇ ಹೊರತು ಮತ್ತೊಂದಕ್ಕಲ್ಲ.

ಹೀಗಿದ್ದು ಬೇರೆ ಬೇರೆ ಬಗೆಯವರಾದ ಜ್ಞಾನಿ-ಕರ್ಮಿಗಳು ಬಡಿದಾಟ ದಲ್ಲಿ ತೊಡಗಿ ನಿಜವಾದ ಜ್ಞಾನಿಗಳ ಉಪಹಾಸಕ್ಕೆ ಗುರಿಯಾಗುವರು ಎನ್ನುತ್ತಾರೆ.

**ಏವಂಚಾನ್ಯೋನ್ಯವೃತ್ತಾಂತಾನಭಿಜ್ಞೌ ಬಧಿರಾವಿವ ।**
**ವಿವದೇತಾಂ ಬುದ್ಧಿಮಂತೋ ಹಸಂತ್ಯೇವ ವಿಲೋಕ್ಯ ತೌ ॥೨೭೩॥**

ಈ ರೀತಿಯಾಗಿದ್ದರೂ ತಮ್ಮ ತಮ್ಮ ವೃತ್ತಾಂತಗಳನ್ನರಿಯದ ಇಬ್ಬರು ಕಿವುಡರಂತೆ ಪೂರ್ವ ಮತ್ತು ಉತ್ತರ ಮೀಮಾಂ ಸಾಭಿಮಾನಿಗಳು ವಾದ-ವಿವಾದವನ್ನು ಮಾಡುವರು. ವಿವೇಕಿಗಳು ಅವರನ್ನು ಕಂಡು ನಗುವರು ಮಾತ್ರ.

—ಹಾಗೇಕೆ?

**ಯಂ ಕರ್ಮೀ ನ ವಿಜಾನಾತಿ ಸಾಕ್ಷಿಣಂ ತಸ್ಯ ತತ್ವವಿತ್ ।**
**ಬ್ರಹ್ಮತ್ವಂ ಬುಧ್ಯತಾಮ್ ತತ್ರ ಕರ್ಮಿಣಃ ಕಿಂ ವಿಹೀಯತೇ ॥೨೭೪॥**

ಕರ್ಮಠನು ಯಾವ ಸಾಕ್ಷಿಯನ್ನು ಅರಿಯನೋ ಅದನ್ನೇ ಬ್ರಹ್ಮನೆಂದು ತತ್ವಜ್ಞನು ತಿಳಿಯಲಿ. ಎಂದರೆ ಸಾಕ್ಷಿಯು ಬ್ರಹ್ಮವೆಂದು ತಿಳಿಯಲಿ. ಅದರಲ್ಲಿ ಕರ್ಮಿಯ ಹಾನಿಯಾಗುವದೇನು?

ಜ್ಞಾನಿಯ ತಿರಸ್ಕಾರಕ್ಕೆ ಪಾತ್ರವಾದ ಕರ್ತೃ, ಕರ್ಮ, ಕರಣ, ಫಲ ಗಳಲ್ಲಿ ನಿಜವಾದವುಗಳೆಂದು ಅಭಿಮಾನತಾಳಿ ಕರ್ಮಿಯು ಕರ್ಮವನ್ನು ಮಾಡಿಕೊಳ್ಳಲಿ. ಇವೆಲ್ಲವುಗಳಿಗಿಂತ ಬೇರೆಯಾದ ಪ್ರತ್ಯಗಾತ್ಮನ ಅರಿವು ಅವನಿ ಗಿರುವದಿಲ್ಲ. ಅವನು ಕರ್ಮಿಯ ವಿಷಯವೂ ಅಲ್ಲ. ತನ್ನ ವಿಷಯವಲ್ಲ ದುದನ್ನು ತತ್ವಜ್ಞನು ಬ್ರಹ್ಮವೆಂದು ತಿಳಿಯುವದಾದರೆಕರ್ಮಿಯ ಕರ್ಮಾನು ಷ್ಠಾನಕ್ಕೆ ಕೊರತೆಯಾಗುವದು ? ಮತ್ತು ಅದರಿಂದ ಅವನಿಗೆ ಹಾನಿ ಏನು?

**ದೇವವಾಗ್ಬುದ್ಧಯಸ್ತ್ಯಕ್ತ್ವಾ ಜ್ಞಾನಿನಾಽನೃತಬುದ್ಧಿತಃ ।**
**ಕರ್ಮೀಽಪ್ರವರ್ತಯತ್ವಾಭಿರ್ಜ್ಞಾನಿನೋ ಹೀಯತೇಽತ್ರ ಕಿಮ್ ॥೨೭೫॥**

ಜ್ಞಾನಿಯು ದೇಹ-ವಾಣಿ-ಬುದ್ಧಿಗಳು ಸುಳ್ಳಾದವುಗಳೆಂದು ತಿಳಿದು ಬಿಟ್ಟು ಬಿಟ್ಟನು. ಅವುಗಳಿಂದ ಕರ್ಮಿಯು ಕರ್ಮಾಚರಣೆ ಮಾಡಿಕೊಳ್ಳಲಿ. ಇದರಲ್ಲಿ ಜ್ಞಾನಿಗೇನು ಹಾನಿ

—ಕರ್ಮಾನುಷ್ಠಾನವು ವ್ಯರ್ಥವಾದುದರಿಂದ ಜ್ಞಾನಿಯು ಅದನ್ನು ಸ್ವೀಕರಿಸುವದಿಲ್ಲ.

**ಪ್ರವೃತ್ತಿರ್ನೋಪಯುಕ್ತಾ ಚೇನ್ನಿವೃತ್ತಿಃ ಕ್ವೋಪಯುಜ್ಯತೇ।**
**ಬೋಧಹೇತುರ್ನಿವೃತ್ತಿಶ್ಚೇದ್ ಬುಭುತ್ಸಾಯಾಂ ತಥೇತರಾ ॥೨೭೬॥**

ಕರ್ಮವನ್ನು ಮಾಡುವದು ಪ್ರಯೋಜನವಿಲ್ಲವೆಂದರೆ, ಕರ್ಮವನ್ನು ಬಿಡುವದರಿಂದಾದರೂ ಏನು ಪ್ರಯೋಜನವಿದೆ? ಕರ್ಮವನ್ನು ಬಿಡುವದು ಜ್ಞಾನಕ್ಕೆ ಸಾಧನವೆನ್ನುವೆಯ? ಕರ್ಮವನ್ನು ಮಾಡುವದು ಜ್ಞಾನಕ್ಕೆ ಪಾತ್ರತೆಯನ್ನು ಪಡೆಯಬಲ್ಲ ಚಿತ್ತಶುದ್ಧಿಗೆ ಕಾರಣ.

—ಒಮ್ಮೆ ಜ್ಞಾನಿಯಾದವನಿಗೆ ಮತ್ತೆ ಜಿಜ್ಞಾಸೆಯ ಸಂಭವವಿಲ್ಲ. ಆದುದರಿಂದ ಜ್ಞಾನಿಗೆ ಕರ್ಮಮಾಡುವದರಿಂದ ಯಾವ ಉಪಯೋಗವೂ ಇಲ್ಲ.

**ಬುದ್ಧಶ್ಚೇನ್ನ ಬುಭುತ್ಸೇತ ನಾಪ್ಯಸೌ ಬುಧ್ಯತೇ ಪುನಃ ।**
**ಅಬಾಧಾದನುವರ್ತೇತ ಬೋಧೋ ನತ್ವನ್ಯ ಸಾಧನಾತ್ ॥೨೭೭॥**

ಜ್ಞಾನಿಗೆ ತಿಳಿಯುವ ಇಚ್ಛೆ ಇಲ್ಲದ್ದರಿಂದ ಅವನು ಕರ್ಮಮಾಡುವದಿಲ್ಲ ಎಂದರೆ—ಸರಿ. ಜ್ಞಾನಿಗೆ ಮರಳಿ ಜ್ಞಾನಾಪೇಕ್ಷೆ ಇಲ್ಲದ ಕಾರಣ ಆ ಜ್ಞಾನಕ್ಕೆ ಕಾರಣವಾದ ಕರ್ಮಮಾಡದಿರುವಿಕೆಯನ್ನೂ ಸ್ವೀಕರಿಸಬಾರದು. ಒಮ್ಮೆ ಹುಟ್ಟಿದ ಜ್ಞಾನವು ಸ್ಥಿರವಾಗಬೇಕಾದುದರಿಂದ ನಿವೃತ್ತಿ (ಕರ್ಮಮಾಡದಿರುವಿಕೆ)ಯು ಇಲ್ಲಿ ಅಪೇಕ್ಷಿತ. ಎಂದರೆ ಸ್ಥಿರತ್ವವು ಬಾಧಕವಿಲ್ಲದುದನ್ನು ಅಪೇಕ್ಷಿಸುತ್ತದೆಯೇ ಹೊರತು ಮತ್ತೊಂದು ಸಾಧನವನ್ನಲ್ಲ.

—ಜ್ಞಾನಕ್ಕೆ ಬೇರೊಂದು ಪ್ರಮಾಣದಿಂದ ಹಾನಿ ಇಲ್ಲವಾದರೂ ಅವಿದ್ಯೆಯಿಂದ ಹಾಗೂ ಅದರ ಕಾರ್ಯವಾದ ನಾನು ಮಾಡುವವ ಮುಂ. ಗಳಿಂದ ಬಾಧೆ ಇದೆ.

**ನಾವಿದ್ಯಾ ನಾಪಿ ತತ್ಕಾರ್ಯ ಬೋಧಂ ಬಾಧಿತುಮರ್ಹತಿ ।**
**ಪುರೈವ ತತ್ತ್ವಬೋಧೇನ ಬಾಧಿತೇ ತೇ ಉಭೇ ಯತಃ ॥೨೭೮॥**

ತತ್ತ್ವಜ್ಞಾನದಿಂದ ಅವೆರಡು ಮೊದಲೇ ಸುಳ್ಳಾದವುಗಳೆಂದು ಸಿದ್ಧವಾಗಿ ಹೋಗಿವೆ. ಎಂದಮೇಲೆ ಅವಿದ್ಯೆಯಾಗಲೀ, ಅದರ ಕಾರ್ಯವಾಗಲೀ ಇವೆ ರಡರಲ್ಲಿಯ ಒಂದರಿಂದಲೂ ಕೂಡ ಜ್ಞಾನಕ್ಕೆ ಹಾನಿಯಾಗುವದು ಶಕ್ಯವಿಲ್ಲ.

—ಅವಿದ್ಯೆಯು ಸುಳ್ಳೆಂದು ಸಿದ್ಧವಾಗಿದ್ದರೂ ಅದರ ಕಾರ್ಯ ಎಂದರೆ ಜಗತ್ತು ಇನ್ನೂ ಅನುಭವಕ್ಕೆ ಬರುತ್ತದೆ. ಎಂದಮೇಲೆ ಅವಿದ್ಯೆ ಸುಳ್ಳಾಗಿದೆ ಎನ್ನಲು ಬರುವಂತಿಲ್ಲ. ಆದುದರಿಂದ ಜ್ಞಾನಕ್ಕೆ ಹಾನಿಯಾಗುವದು. ಎಂದರೆ—

**ಬಾಧಿತಂ ದೃಶ್ಯತಾಮಕ್ಷೈಸ್ತೇನ ಬಾಧೋ ನ ಶಕ್ಯತೇ ।**
**ಜೀವನ್ನಾಖುರ್ನ ಮಾರ್ಜಾರಂ ಹಂತಿ ಹನ್ಯಾತ್ಕಥಂ**
**ಮೃತಃ ॥೨೭೯॥**

ಒಮ್ಮೆ ಸುಳ್ಳಾದ ಜಗತ್ತು ಕಣ್ಣಿಗೆ ಕಾಣಲಿ. ಅದರಿಂದ ಜ್ಞಾನಕ್ಕೇನೂ ಬಾಧಕವಿಲ್ಲ. ಜೀವಂತವಾಗಿದ್ದರೇ ಇಲಿಗೆ ಬೆಕ್ಕನ್ನು ಕೊಲ್ಲುವ ಶಕ್ತಿಯಿಲ್ಲ. ಸತ್ತದ್ದು ಹೇಗೆ ಕೊಲ್ಲುವದು?

(ಉಪಾದಾನ ಕಾರಣವೆನಿಸಿದ ಅವಿದ್ಯೆಯು ಬಂಧಿತವಾದಮೇಲೆ ಅದರ ಕಾರ್ಯವೂ ಬಾಧಿತವಾದಂತೆ. ಉತ್ತರಾರ್ಧ ಶ್ಲೋಕದಲ್ಲಿ ಇದಕ್ಕೆ ದೃಷ್ಟಾಂತವಿದೆ.)

—ದ್ವೈತ (ಜಗತ್ತಿನ) ದರ್ಶನದಿಂದ ಜ್ಞಾನಕ್ಕೆ ಹಾನಿಯಾಗುವದಿಲ್ಲ ಎಂದು ದೃಷ್ಟಾಂತದಿಂದ ದೃಢಪಡಿಸುತ್ತಾರೆ.

**ಅಪಿ ಪಾಶುಪತಾಸ್ತ್ರೇಣ ವಿದ್ಧಶ್ಚೇನ್ನ ಮಮಾರಯಃ ।**
**ನಿಷ್ಫಲೇಷು ವಿನುನ್ನಾಂಗೋ ನಂಕ್ಷ್ಯತೀತ್ಯತ್ರ ಕಾ**
**ಪ್ರಮಾ ॥೨೮೦॥**

ಯಾವನು ಪಾಶುಪತಾಸ್ತ್ರದಿಂದ ಹೊಡೆದ ಗಾಯದಿಂದಲೂ ಸಾಯಲಿಲ್ಲವೋ, ಅವನು ಮೊನೆ ಇಲ್ಲದ ಬಾಣದಿಂದ ತಿವಿಸಿಕೊಂಡರೆ ಸಾಯುತ್ತಾನೆಂಬುದಕ್ಕೆ ಪ್ರಮಾಣವೇನು ?

—ದೃಷ್ಟಾಂತದಿಂದ ಸಿದ್ಧವಾದ ಅರ್ಥವನ್ನು ದಾರ್ಷ್ಟಾಂತಿಕದಲ್ಲಿ ಯೋಜಿಸುತ್ತಾರೆ.

**ಆದಾವವಿದ್ಯಯಾ ಚಿತ್ರೈಃ ಸ್ವಕಾರ್ಯೈರ್ಜೃಂಭಮಾಣಯಾ।**
**ಯುದ್ಧ್ವಾ ಬೋಧೋಽಜಯತ್ಸೋಽದ್ಯ ಸುದೃಢೋ**
**ಬಾಧ್ಯತಾಂ ಕಥಮ್ ॥೨೮೧॥**

ಅಭ್ಯಾಸ ಕಾಲದಲ್ಲಿ ತನ್ನ ಹಲವು ಬಗೆಯ ಕಾರ್ಯಗಳಿಂದ ಅಟ್ಟಹಾಸ ಮಾಡಿ ಮೆರೆದ ಅವಿದ್ಯೆಯೊಡನೆ ಜ್ಞಾನವು ಜಯಶಾಲಿಯಾಯಿತು. ಅದೀಗ ಅಭ್ಯಾಸದಿಂದ ಬಲಿತಿರಲು ಹೇಗೆ ಹಾನಿಗೊಂಡೀತು ?

—ಪುನಃ ರೂಪಕ ಮುಖದಿಂದ ಪ್ರಪಂಚದ ಪ್ರತೀತಿಯು ಇಷ್ಟಾದುದು ಎನ್ನುತ್ತಾರೆ.

**ತಿಷ್ಠಂತ್ವಜ್ಞಾನ ತತ್ಕಾರ್ಯಶವಾ ಬೋಧೇನ ಮಾರಿತಾಃ ।**
**ನ ಭೀತಿರ್ಬೋಧ ಸಮ್ರಾಜಃ ಕೀರ್ತಿಃ ಪ್ರತ್ಯುತ**
**ತಸ್ಯ ತೈಃ ॥೨೮೨॥**

ಜ್ಞಾನದಿಂದ ಪೆಟ್ಟುತಿಂದಿರುವ ಅಜ್ಞಾನ ಮತ್ತು ಅದರ ಕಾರ್ಯಗಳಾದ ದೇಹ ಇಂದ್ರಿಯ ಮುಂತಾದ ಹೆಣಗಳು ತೋರುತ್ತಿರಲಿ. ಜ್ಞಾನ ಚಕ್ರವರ್ತಿಗೆ ಅವುಗಳ ಭಯವೇನೂ ಇಲ್ಲ. ತಿರುಗಿ ಅವುಗಳು ಹಾಗೆ ತೋರುತ್ತಿರುವದರಿಂದ ಆವನ ಕೀರ್ತಿ ಬೆಳೆಯುವದು.

**ಯ ಏವಮತಿಶೂರೇಣ ಬೋಧೇನ ನ ವಿಯುಜ್ಯತೇ ।**
**ಪ್ರವೃತ್ತ್ಯಾ ವಾ ನಿವೃತ್ತ್ಯಾ ವಾ ದೇಹಾದಿಗತಯಾಽಸ್ಯ-**
**ಕಿಮ್ ॥೨೮೩॥**

ಯಾವನು ಹೀಗೆ ವೀರಾಧಿವೀರನಾದ ಜ್ಞಾನರೂಪನನ್ನು ಅಗಲದೇ ಇರುವವನಿಗೆ ದೇಹ ಮತ್ತು ಇಂದ್ರಿಯ ಮೊದಲಾದವುಗಳ ಸಂಬಂಧವಾದ ಕರ್ಮವನ್ನು ಮಾಡುವದರಿಂದ ಅಥವಾ ಬಿಡುವದರಿಂದ ಆಗಬೇಕಾದುದೇನು?

—ಇದರಂತೆ ಜ್ಞಾನಿಯಾದ ಪುರುಷನ ಹಾಗೆ ಅಜ್ಞಾನಿಯಾದವನಿಗೂ ಕರ್ಮ ಮಾಡುವ ವಿಷಯದಲ್ಲಿ ಆಗ್ರಹವಿರುವದು ಒಳ್ಳೆಯದಲ್ಲ. ಅಲ್ಲವೇ ?

**ಪ್ರವೃತ್ತಾವಾಗ್ರಹೋ ನ್ಯಾಯ್ಯೋ ಬೋಧಹೀನಸ್ಯ ಸರ್ವಥಾ ।**
**ಸ್ವರ್ಗಾಯ ವಾಽಪವರ್ಗಾಯ ಯತಿತವ್ಯಂ ಯತೋಽಸ್ಯ ಭಿಃ॥೨೮೪॥**

ಜ್ಞಾನವಿಲ್ಲದವರು ಎಲ್ಲ ರೀತಿಯಿಂದಲೂ ಕರ್ಮದಲ್ಲಿ ತೊಡಗಿರುವದು ಸರಿಯಾದುದು. ಆದುದರಿಂದ ಮನುಷ್ಯರು ಸ್ವರ್ಗ ಪಡೆಯುವದಕ್ಕಾಗಲೀ, ಮೋಕ್ಷ ಪಡೆಯುವದಕ್ಕಾಗಲೀ ಯತ್ನ ಮಾಡುವದು ಯೋಗ್ಯವು.

—ಜ್ಞಾನಿಯು ಕರ್ಮಿಗಳ ಮಧ್ಯದಲ್ಲಿರುವಾಗ ಹೇಗೆ ನಡೆಯಬೇಕು?

**ವಿದ್ವಾಂಶ್ಚೇತ್ತಾದೃಶಾಂ ಮಧ್ಯೇ ತಿಷ್ಠೇತ್ತದನು ರೋಧತಃ ।**
**ಕಾಯೇನ ಮನಸಾ ವಾಚಾ ಕರೋತ್ಯೇವಾಖಿಲಾಃ**
**ಕ್ರಿಯಾಃ ॥೨೮೫॥**

ಅಂಥವರ ಮಧ್ಯದಲ್ಲಿ ವಿದ್ವಾಂಸನು ಇರುದದಾದರೆ ಕರ್ಮಿಗಳಂತೆಯೇ ಮೈ–ಮಾತು–ಮನಗಳಿಂದ ಎಲ್ಲ ಕರ್ಮಗಳನ್ನು ಮಾಡುವನು.

—ಇನ್ನು ತತ್ತ್ವವನ್ನು ತಿಳಿಯಬೇಕೆನ್ನುವವರ ಮಧ್ಯದಲ್ಲಿ ?

**ಏಷ ಮಧ್ಯೇ ಬುಭುತ್ಸೂನಾಂ ಯದಾ ತಿಷ್ಠೇತ್ತದಾ ಪುನಃ ।**
**ಬೋಧಾಯೈಷಾಂ ಕ್ರಿಯಾಃ ಸರ್ವಾ ದೂಷಯಂಸ್ತ್ಯಜತು**
**ಸ್ವಯಮ್ ॥೨೮೬॥**

ಜ್ಞಾನಿಯು ಜಿಜ್ಞಾಸುಗಳ ಮಧ್ಯದಲ್ಲಿ ಇರುವದಾದರೆ, ಅವರ ತಿಳಿವಳಿಕೆಗೋಸುಗ ಎಲ್ಲ ಕರ್ಮಗಳನ್ನು ನಿಂದಿಸುತ್ತ ತಾನೂ ಅವುಗಳನ್ನು ಬಿಟ್ಟು ಇರಬಹುದು.

—ಒಳ್ಳೇದು, ಅವನು ಹೀಗೇಕೆ ಮಾಡಬೇಕು ?

**ಅವಿದ್ವದನುಸಾರೇಣ ವೃತ್ತಿರ್ಬುದ್ಧಸ್ಯ ಯುಜ್ಯತೇ ।**
**ಸ್ತನಂಧಯಾನುಸಾರೇಣ ವರ್ತತೇ ತತ್ಪಿತಾ ಯತಃ ॥೨೮೭॥**

ತಂದೆಯಾದವನು ಮೊಲೆ ಕುಡಿಯುವ ಮಕ್ಕಳನ್ನು ಸಂತೋಷಗೊಳಿಸಲು ಅವರ ಮನಸ್ಸನ್ನು ಅನುಸರಿಸಿ ನಡೆಯುವಂತೆ, ಜ್ಞಾನಿಯು ಅಜ್ಞಾನಿಗಳನ್ನು ಉದ್ಧರಿಸುವ ಇಚ್ಛೆಯಿಂದ ಅವರಂತೆ ನಡೆಯುವದು ಯೋಗ್ಯವೇಸರಿ.

–ತಂದೆಯು ಮೊಲೆ ಕುಡಿಯುವ ಮಕ್ಕಳನ್ನು ಹೇಗೆ ಅನುಸರಿಸುವನು?

**ಅಧಿಕ್ಷಿಪ್ತಸ್ತಾಡಿತೋ ವಾ ಬಾಲೇನ ಸ್ವಪಿತಾ ತದಾ ।**
**ನ ಕ್ಲಿಶ್ನಾತಿ ನ ಕುಪ್ಯೇತ ಬಾಲಂ ಪ್ರತ್ಯುತ ಲಾಲಯೇತ್॥೨೮೮॥**

ಅಜ್ಞಾನಿಯಾದ ಬಾಲಕನು ಬೈಯಲಿ-ಹೊಡೆಯಲಿ, ತಂದೆಯು ದುಃಖಗೊಳ್ಳುವದಿಲ್ಲ. ಅದರಂತೆ ಸಿಟ್ಟಿಗೇಳುವದಿಲ್ಲ. ತಿರುಗಿ ಆ ಕೂಸನ್ನು ಮುದ್ದಿಸುವನು,

—ಈ ದೃಷ್ಟಾಂತವನ್ನು ದಾರ್ಷ್ಟಾಂತಿಕದಲ್ಲಿ ಯೋಜಿಸುತ್ತಾರೆ.

**ನಿಂದಿತಸ್ತೂಯಮಾನೋ ವಾ ವಿದ್ವಾನಜ್ಞೈರ್ನ ನಿಂದತಿ ।**
**ನ ಸ್ತೌತಿ ಕಿಂ ತು ತೇಷಾಂ ಸ್ಯಾದ್ಯಥಾ ಬೋಧಸ್ತಥಾಽಽ-**
**ಚರೇತ್ ॥೨೮೯॥**

ಅದರಂತೆ ತಿಳಿಯದವರು ಬೈಯಲಿ, ಹೊಗಳಲಿ, ಜ್ಞಾನಿಯು ಅವರನ್ನು ನಿಂದಿಸುವದೂ ಇಲ್ಲ. ಹೊಗಳುವದೂ ಇಲ್ಲ. ಹೇಗೆ ನಡೆದರೆ ಅವರಿಗೆ ಜ್ಞಾನವಾಗುವದೋ ಹಾಗೆ ನಡೆಯುತ್ತಾನೆ.

— ಹೀಗೆ ನಡೆಯುವ ಕಾರಣವನ್ನು ಹೇಳುತ್ತಾರೆ.

**ಯೇನಾಯಂ ನಟನೇನಾತ್ರ ಬುಧ್ಯತೇ ಕಾರ್ಯಮೇವ ತತ್ ।**
**ಅಜ್ಞಪ್ರಬೋಧಾನ್ನೈವಾನ್ಯತ್ ಕಾರ್ಯಮಸ್ತ್ಯತ್ರತದ್ವಿದಃ ॥೨೯೦॥**

ಅಜ್ಞಾನಿಗಳು ಜ್ಞಾನಿಯ ಯಾವ ಆಚರಣೆ ಕಂಡು ಜ್ಞಾನಿಗಳಾಗುವರೋ ಆ ಆಚರಣೆಯನ್ನು ಜ್ಞಾನಿಯು ಅವಶ್ಯ ಆಚರಿಸಬೇಕು. ಈ ಲೋಕದಲ್ಲಿ ಅಜ್ಞರನ್ನು ತಿದ್ದುವದಕ್ಕಿಂತ ಬೇರಾವ ಕಾರ್ಯವು ಅಜ್ಞಾನಿಗಿಲ್ಲ.

(ಇದೇ ನ್ಯಾಯದಂತೆ ಬೇರೆ ಕರ್ಮಗಳನ್ನು ಜ್ಞಾನಿಯು ಮಾಡಲಿ. ಎಂದರೆ ಅಜ್ಞರನ್ನು ತಿದ್ದುವದಕ್ಕಿಂತ ಬೇರೆ ಕಾರ್ಯವು ಜ್ಞಾನಿಗಿಲ್ಲಿ.)

**ಕೃತಕೃತ್ಯತಯಾ ತೃಪ್ತಃ ಪ್ರಾಪ್ತಪ್ರಾಪ್ಯತಯಾ ಪುನಃ ।**
**ತೃಪ್ಯನ್ನೇವಂ ಸ್ವಮನಸಾ ಮನ್ಯತೇಽಸೌ ನಿರಂತರಮ್॥೨೯೧॥**

ಮಾಡತಕ್ಕದುದನ್ನೆಲ್ಲ ಮಾಡಿದೆನೆಂದು, ಅಲ್ಲದೇ ಪಡೆಯಬೇಕಾದುದನ್ನೆಲ್ಲ ಪಡೆದೆನೆಂದು ಜ್ಞಾನಿಯು ತಿಳಿದಿರುತ್ತಾನೆ.

—ಅವನು ಚಿಂತನಮಾಡುವ ರೀತಿ ಹೇಗೆ ?

**ಧನ್ಯೋಽಹಂ ಧನ್ಯೋಽಹಂ ನಿತ್ಯಂ ಸ್ವಾತ್ಮಾನಮಂಜಸಾ ವೇದ್ಮಿ।**
**ಧನ್ಯೋಽಹಂ ಧನ್ಯೋಽಹಂ ಬ್ರಹ್ಮಾನಂದೋ ವಿಭಾತಿ**
**ಮೇ ಸ್ಪಷ್ಟಮ್ ॥೨೯೨॥**

ನಾನು ಆತ್ಮನನ್ನು ಯಾವಾಗಲೂ ಪ್ರತ್ಯಕ್ಷವಾಗಿ ತಿಳಿಯುತ್ತೇನೆ. ಆದುದರಿಂದ ನಾನು ಧನ್ಯನು. ನನಗೆ ಬ್ರಹ್ಮಾನಂದದ ಅನುಭವವು ಸ್ಪಷ್ಟವಾಗಿ ಬರುತ್ತದೆ. ಆದುದರಿಂದ ನಾನು ಧನ್ಯನು, ಧನ್ಯನು.

—ಹೀಗೆ ಇಷ್ಟಲಾಭದಿಂದ ಅವನು ಸಂತೋಷಗೊಂಡು ಅನಿಷ್ಟಗಳ ತೊಲಗುವಿಕೆಯಿಂದಲೂ ಅವನು ಸಂತೋಷಪಡುತ್ತಾನೆ.

**ಧನ್ಯೋಽಹಂ ಧನ್ಯೋಽಹಂ ದುಃಖಂ ಸಂಸಾರಿಕಂ ನ ವೀಕ್ಷೇಽದ್ಯ ।**
**ಧನ್ಯೋಽಹಂ ಧನ್ಯೋಽಹಂ ಸ್ವಸ್ಯಾಜ್ಞಾನಂ**
**ಪಲಾಯಿತಂ ಕ್ವಾಪಿ ॥೨೯೩॥**

ಇಂದು ಪ್ರಾಪಂಚಿಕವೆನಿಸುವ ಯಾವ ದುಃಖವನ್ನೂ ನಾನು ಕಾಣುವದಿಲ್ಲ. ಆದುದರಿಂದ ನಾನು ಧನ್ಯನು, ಧನ್ಯನು. ಆತ್ಮನ ಸಂಬಂಧಿಕವಾದ ಅಜ್ಞಾನವು ಎಲ್ಲಿಗೋ ಓಡಿಹೋಯಿತು. ಆದುದರಿಂದ ನಾನು ಧನ್ಯನು, ಧನ್ಯನು.

**ಧನ್ಯೋಽಹಂ ಧನ್ಯೋಽಹಂ ಕರ್ತವ್ಯಂ ಮೇನ ವಿದ್ಯತೇಕಿಂಚಿತ್।**
**ಧನ್ಯೋಽಹಂ ಧನ್ಯೋಽಹಂ ಪ್ರಾಪ್ತವ್ಯಂ ಸರ್ವಮದ್ಯ**
**ಸಂಪನ್ನಮ್ ॥೨೯೪॥**

ಈ ಲೋಕದ ಹಾಗೂ ಪರಲೋಕದ ಸುಖಕ್ಕಾಗಿ ನಾನು ಮಾಡಬೇಕಾದ ಕರ್ತವ್ಯವು ಸ್ವಲ್ಪವೂ ಉಳಿಯಲಿಲ್ಲ. ಆದುದರಿಂದ ನಾನು ಧನ್ಯನು, ಧನ್ಯನು. ನಾನು ಪಡೆಯತಕ್ಕದುದನ್ನೆಲ್ಲ ಪಡೆದಂತಾಗಿರುವದರಿಂದ ನಾನು ಧನ್ಯನು, ಧನ್ಯನು, ಕೃತಕೃತ್ಯನು.

**ಧನ್ಯೋಽಹಂ ಧನ್ಯೋಽಹಂ ತೃಪ್ತಿರ್ಮೇ ಕೋಪಮಾ**
**ಭವೇಲ್ಲೋಕೇ ।**
**ಧನ್ಯೋಽಹಂ ಧನ್ಯೋಽಹಂ ಧನ್ಯೋ ಧನ್ಯಃ ಪುನಃ**
**ಪುನರ್ಧನ್ಯಃ ॥೨೯೫॥**

ನಾನು ಧನ್ಯನು. ನಾನು ಧನ್ಯನು. ಜಗತ್ತಿನಲ್ಲಿ ನನಗಾದ ತೃಪ್ತಿಗೆ ಯಾವದು ಉಪಮೆಯಾಗಬಲ್ಲದು? ಧನ್ಯನು. ನಾನು ಧನ್ಯನು. ನಾನು ಧನ್ಯನು. ಕೃತಕೃತ್ಯನು. ತೃಪ್ತನು. ಜ್ಞಾನದಿಂದ ಬಹು ಸಂತುಷ್ಟನಾಗಿದ್ದೇನೆ

—ಈ ಕೃತಕೃತ್ಯತೆ ಅವರ್ಣನೀಯವಾದ ತೃಪ್ತಿ ಯಾವ ಪುಣ್ಯ ಪರಿಪಾಕದಿಂದ ದೊರೆಯಿತೋ ಅದನ್ನು ನೆನೆದು ಸಂತೋಷಪಡುತ್ತಾರೆ.

**ಅಹೋ ಪುಣ್ಯಮಹೋ ಪುಣ್ಯಂ ಫಲಿತಂ ಫಲಿತಂ ದೃಢಮ್ ।**
**ಅಸ್ಯ ಪುಣ್ಯಸ್ಯ ಸಂಪತ್ತೇರಹೋ ವಯಮಹೋ ವಯಮ್ ॥೨೯೬॥**

ಅಹಹಾ ! ಅದೆಷ್ಟು ನನ್ನ ಪುಣ್ಯ ಅದೆಂಥ ಭಾಗ್ಯ. ನಿಜವಾಗಿಯೂ ಅದು ಉತ್ತಮಫಲ ಕೊಟ್ಟಿತು. ಇಂಥ ಪುಣ್ಯ ಭಾಗ್ಯವು ನಮಗೆ ದೊರೆಯಲು ನಾವು ಭಾಗ್ಯವಂತರೇ ಸರಿ.

—ಇನ್ನು ಆತ್ಮನ ನಿಜವಾದ ಜ್ಞಾನಸಾಧನವೆನಿಸಿದ ಶಾಸ್ತ್ರ, ಮತ್ತು ಗುರುವನ್ನು ನೆನೆದು ಜ್ಞಾನಿಯು ಸಂತೋಷಪಡುತ್ತಾನೆ.

**ಅಹೋ ಶಾಸ್ತ್ರಮಹೋ ಶಾಸ್ತ್ರಮಹೋ ಗುರುಹೋ ಗುರುಃ ।**
**ಅಹೋ ಜ್ಞಾನಮಹೋ ಜ್ಞಾನಮಹೋ ಸುಖಮಹೋ ಸುಖಮ್ ॥೨೯೭॥**

ಅಹಾಹಾ ! ವೇದಾಂತ ಶಾಸ್ತ್ರದ ಮಹಿಮೆ ಇನ್ನೆಷ್ಟು ? ಏನು ಹೇಳೋಣ. ಅದನ್ನು ಬೋಧಿಸಿದ ಗುರುವನ್ನೆಂತು ವರ್ಣಿಸೋಣ. ಅಹಾ ಜ್ಞಾನವು ಜ್ಞಾನವು, ಸುಖವೇ ಸುಖವು !!

—ಈಗ ಗ್ರಂಥಾಭ್ಯಾಸದ ಫಲಶುತ್ರಿ.

**ತೃಪ್ತಿದೀಪಮಿಮಂ ನಿತ್ಯಂ ಯೋಽನುಸಂದಧತೇ ಬುಧಾಃ ।**
**ಬ್ರಹ್ಮಾನಂದೇ ನಿಮಜ್ಜಂತಸ್ತೇ ತೃಪ್ಯಂತಿ ನಿರಂತರಮ್॥೨೯೮॥**

ಈ ತೃಪ್ತಿದೀಪವನ್ನು ನಿತ್ಯ ಅಭ್ಯಾಸ ಮಾಡುವ ಪಂಡಿತರು ಬ್ರಹ್ಮಾನಂದದಲ್ಲಿ ಮುಳುಗಿ ಯಾವಾಗಲೂ ತೃಪ್ತಿಯಿಂದಿರುವರು.

ಇತಿ ಪಂಚದಶ್ಯಾಂ ತೃಪ್ತಿದೀಪ ॥ ೭ ॥

ತಾನು ಕೂಟಸ್ಥನೆಂದು ತಿಳಿದರೆ ಭೋಕ್ತಾ, ಭೋಗ್ಯ, ಭೋಗಗಳು ಇಲ್ಲದಂತಾಗಿ ಎಲ್ಲವೂ ಕೈವಶವಾದಂತೆನಿಸಿ ಕೃತಕೃತ್ಯತೆಯಿಂದ ಅತಿಶಯ ತೃಪ್ತಿ ಉಂಟಾಗುವದು.

....○....

# ೮. ಕೂಟಸ್ಥ ದೀಪ

ಹಿಂದಿನ ಪ್ರಕರಣದಲ್ಲಿ ಅಜ್ಞಾನವೇ ಮೊದಲಾದ ಏಳು ಅವಸ್ಥೆಗಳು ಚಿದಾಭಾಸನವು ಕೂಟಸ್ಥನವಲ್ಲ ಎಂದು ಹೇಳಿತು. ಆದರೆ ಕೂಟಸ್ಥನು ಯಾರು ? ಎಂಬುದು ಇದುವರೆಗೆ ಅಷ್ಟು ಸ್ಪಷ್ಟವಾಗಿ ತಿಳಿದಿಲ್ಲ. ಆದುದರಿಂದ ಅದನ್ನು ಸ್ಪಷ್ಟಗೊಳಿಸುವದಕ್ಕಾಗಿ ಕೂಟಸ್ಥ ಮತ್ತು ಚಿದಾಭಾಸರ ವಿವೇಚನೆಯನ್ನು ಮಾಡುತ್ತಾರೆ.

**ಖಾದಿತ್ಯದೀಪಿತೇ ಕುಡ್ಯೇ ದರ್ಪಣಾದಿತ್ಯ ದೀಪ್ತಿವತ್ ।**
**ಕೂಟಸ್ಥಭಾಸಿತೋ ದೇಹೋ ಧೀಸ್ಥಜೀವೇನ ಭಾಸ್ಯತೇ ॥೧॥**

ಆಕಾಶದಲ್ಲಿಯ ಸೂರ್ಯನ ಬೆಳಕಿನಿಂದ ಬೆಳಗುತ್ತಿರುವ ಗೋಡೆಯನ್ನು, ಕನ್ನಡಿಯಲ್ಲಿ ಪ್ರತಿಫಲಿಸಿ ಪರಾವರ್ತನಗೊಂಡ ಸೂರ್ಯ ಕಿರಣಗಳೂ ಬೆಳಗುವಂತೆ ಕೂಟಸ್ಥ (ಸೂರ್ಯ) ನಿಂದ ಸಾಮಾನ್ಯವಾಗಿ ಬೆಳಗುತ್ತಿರುವ ದೇಹವು, ಬುದ್ಧಿಯಲ್ಲಿ ಪ್ರತಿಬಿಂಬಿಸಿದ ಚಿದಾಭಾಸನಿಂದ ವಿಶೇಷವಾಗಿ ಬೆಳಗುತ್ತದೆ.

—ಕನ್ನಡಿಯಲ್ಲಿ ಪ್ರತಿಬಿಂಬಿಸಿದ್ದ ಬೆಳಕಿನ ವಿನಾ ಗೋಡೆಯ ಮೇಲೆ ಬೇರೊಂದು ಬೆಳಕು ಕಾಣಿಸುವದಿಲ್ಲ.

**ಅನೇಕದರ್ಪಣಾದಿತ್ಯ ದೀಪ್ತೀನಾಂ ಬಹುಸಂಧಿಷು ।**
**ಇತರಾ ವ್ಯಜ್ಯತೇ ತಾಸಾಮಭಾವೇಽಪಿ ಪ್ರಕಾಶತೇ ॥೨॥**

ಬೇರೆ ಬೇರೆ ಕನ್ನಡಿಗಳಲ್ಲಿ ಪ್ರತಿಬಿಂಬಿತನಾದ ಸೂರ್ಯನ ವರ್ತುಲಾಕಾರ ಕಿರಣಗಳು ಅನೇಕಕಡೆಗೆ ಬಿದ್ದಿರಲು ಅವುಗಳ ನಡುನಡುವೆ ಸೂರ್ಯನ

ಸಾಮಾನ್ಯ ಬೆಳಕು ಸ್ಪಷ್ಟವಾಗಿ ಕಾಣುತ್ತದೆ. ಅದರಂತೆ ಮೇಲಿನ ಬೆಳಕು ಗಳ ಅಭಾವದಲ್ಲಿಯೂ ಸೂರ್ಯನ ಬೆಳಕು ಇದ್ದೇ ಇರುತ್ತದೆ.

—ದೃಷ್ಟಾಂತದಿಂದ ಸಿದ್ಧವಾದ ಈ ಅರ್ಥವನ್ನು ದಾರ್ಷ್ಟಾಂತಿಕದಲ್ಲಿ ಯೋಜಿಸಿ ತೋರಿಸುತ್ತಾರೆ.

**ಚಿದಾಭಾಸವಿಶಿಷ್ಟಾನಾಂ ತಥಾಽನೇಕಧಿಯಾಮಸೌ ।**
**ಸಂಧಿಂ ಧಿಯಾಮಭಾವಂ ಚ ಭಾಸಯನ್ ಪ್ರವಿವಿಚ್ಯ-**
**ತಾಮ್ ॥೩॥**

ಅದರಂತೆ ಚಿದಾಭಾಸನಿಂದ ಕೂಡಿಕೊಂಡಿರುವ ಅನೇಕ ಬುದ್ಧಿವೃತ್ತಿಗಳ ಸಂಧಿಗಳನ್ನು, ಆವೃತ್ತಿಗಳು ಅಡಗಿಸುವದನ್ನು ಬೆಳಗುತ್ತಿರುವ ಈ ಕೂಟಸ್ಥನು ಅವುಗಳಿಂದ ಬೇರೆಯಾಗಿರುವನೆಂದು ತಿಳಿಯಬೇಕು.

—ದೇಹದಲ್ಲಿರುವ ಕೂಟಸ್ಥ ಹಾಗೂ ಚಿದಾಭಾಸರಲ್ಲಿ ಭೇದವುಂಟೆಂದು ಹೇಳಲು ದೇಹದಿಂದ ಹೊರಗೆ ಚಿದಾಭಾಸ ಹಾಗೂ ಬ್ರಹ್ಮರನ್ನು ಬೇರ್ಪಡಿಸಿ ತೋರಿಸುತ್ತಾರೆ.

**ಘಟೈಕಾಕಾರಧೀಸ್ಥಾ ಚಿದ್ಘಟಮೇವಾವಭಾಸಯೇತ್ ।**
**ಘಟಸ್ಯ ಜ್ಞಾತತಾ ಬ್ರಹ್ಮಚೈತನ್ಯೇನಾವಭಾಸತೇ ॥೪॥**

ಒಂದುಘಟವನ್ನು ಕಂಡು ಘಟಾಕಾರವಾದ ಬುದ್ಧಿವೃತ್ತಿಯಲ್ಲಿರುವ ಚಿದಾಭಾಸನು 'ಇದು ಘಟ'ವೆಂದು ಮಾತ್ರ ಬೆಳಗುವನು. ಘಟವು ತಿಳಿದುಬಂತೆಂಬುದನ್ನು ಆ ಘಟದ ಕಲ್ಪನೆಗೆ ಆಧಾರವಾದ ಬ್ರಹ್ಮಚೈತನ್ಯವು ಬೆಳಗುವದು.

—ಘಟವು ತಿಳಿಯಬಂತೆನ್ನುವದು ಬ್ರಹ್ಮ ಚೈತನ್ಯದಿಂದಲೇ ಆಗುವದಾದರೆ ಅಲ್ಲಿ ಬುದ್ಧಿಯ ಅವಶ್ಯಕತೆ ಏನು?

**ಅಜ್ಞಾತತ್ವೇನ ಜ್ಞಾತೋಽಯಂ ಘಟೋಬುದ್ಧ್ಯುದಯಾತ್ಪುರಾ।**
**ಬ್ರಹ್ಮಣೈವೋಪರಿಷ್ಟಾತ್ತು ಜ್ಞಾತತ್ವೇನೇತ್ಯಸೌ ಭಿದಾ ॥೫॥**

ಬುದ್ಧಿವೃತ್ತಿಯು ಹುಟ್ಟುವ ಪೂರ್ವದಲ್ಲಿ ಬ್ರಹ್ಮಚೈತನ್ಯವು ಆ ಘಟವನ್ನು ತಿಳಿಯಬರದ್ದು ಎಂಬರೂಪದಿಂದ ಬೆಳಗಿತ್ತು. ಬುದ್ಧಿವೃತ್ತಿಯು ಹುಟ್ಟಿದ ಮೇಲೆ ಬ್ರಹ್ಮಚೈತನ್ಯವೇ ಆ ಘಟವನ್ನು ತಿಳಿಯಬಂತೆಂಬ ರೂಪದಿಂದ ಬೆಳಗಿತು. ಹೀಗೆ ಇಲ್ಲಿ ಭೇದವುಂಟು.

—ಒಂದೇ ಘಟದ ವಿಷಯದಲ್ಲಿ ಎರಡು ಬಗೆಯಾದುದು ಹೇಗೆ ?

**ಚಿದಾಭಾಸಾಂತಧೀವೃತ್ತಿರ್ಜ್ಞಾನಂ ಲೋಹಾಂತಕುಂತವತ್ ।**
**ಜಾಡ್ಯಮಜ್ಞಾನಮೇತಾಭ್ಯಾಂ ವ್ಯಾಪ್ತಃ ಕುಂಭೋ ದ್ವಿಧೋ-**
**ಚ್ಯತೇ ॥೬॥**

ಕಬ್ಬಿಣದ ಅಲಗನ್ನು ತುದಿಗಿಟ್ಟುಕೊಂಡಿರುವ ಈಟಿ (ಆಯುಧ)ಯಂತೆ ಚಿದಾಭಾಸನನ್ನು ಮುಂದಿಟ್ಟುಕೊಂಡಿರುವ ಬುದ್ಧಿವೃತ್ತಿಯೇ ಜ್ಞಾನವು. ತಾನೇ ಬೆಳಗಿಕೊಳ್ಳದಿರುವ ಜಡತ್ವವೇ ಅಜ್ಞಾನವು. ಇವುಗಳಿಂದ ಸಂಬಂಧ ಗೊಂಡಿರುವ ಘಟವು ಎರಡು ಬಗೆ ಎಂದು ಹೇಳಲಾಗುವದು.

(ಚಿದಾಭಾಸನಿಂದ ಕೂಡಿದ ವೃತ್ತಿಯ ಸಂಬಂಧಗೊಂಡಾಗ ಘಟವು ತಿಳಿಯಬಂತೆನಿಸುವದು. ಅಜ್ಞಾನದ ಸಂಬಂಧಗೊಂಡಾಗ ತಿಳಿಯಬರದ್ದೆನಿಸುವದು.)

—ಘಟವು ತಿಳಿಯಬರದ್ದು ಎನಿಸುವಾಗ ಅಜ್ಞಾನ ಮುಸುಕುಹಾಕಿರುವ ಅದನ್ನು ಬ್ರಹ್ಮವು ಬೆಳಗುವುದೆಂಬುದೇ ಸರಿ. ತಿಳಿಯಬಂತು ಎನಿಸುವಾಗ ಅದನ್ನು ಬ್ರಹ್ಮವು ಬೆಳಗುವದೆಂಬುದು ಹೇಗೆ ?

**ಅಜ್ಞಾತೋ ಬ್ರಹ್ಮಣಾ ಭಾಸ್ಯೋಽಜ್ಞಾತಃ ಕುಂಭಸ್ತಥಾ ನ ಕಿಮ್ ।**
**ಜ್ಞಾತತ್ವಜನನೇನೈವ ಚಿದಾಭಾಸಪರಿಕ್ಷಯಃ ॥೭॥**

ತಿಳಿಯಬರದ್ದು ಎನಿಸುವ ಘಟವು ಬ್ರಹ್ಮವು ಬೆಳಗುವದಕ್ಕೆ ಯೋಗ್ಯವಾಗಿದೆ. ಅದರಂತೆ ತಿಳಿಯಬಂತೆನಿಸುವದು ಯೋಗ್ಯವಲ್ಲವೇ? ಯೋಗ್ಯವೇ. ಯಾಕಂದರೆ ಚಿದಾಭಾಸನಿಂದ ಬೆಳಗಿಸಿಕೊಂಡ ಘಟವು ತಿಳಿಯಬಂತು ಎಂಬ ಭಾವವನ್ನು ಹುಟ್ಟಿಸುವಷ್ಟರಲ್ಲಿ ಎಲ್ಲ ರೀತಿಯಿಂದಲೂ ಚಿದಾಭಾಸನು ನಾಶವಾಗುತ್ತಾನೆ.

(ಆದುದರಿಂದ ತಿಳಿಯಬಂತು ಎಂಬುದನ್ನು ಬ್ರಹ್ಮವೇ ಬೆಳಗಿದಂತಾಯಿತು.)

—ತಿಳಿಯಬಂತೆಂಬ ಧರ್ಮವನ್ನು ಹುಟ್ಟಿಸಲಿಕ್ಕೆ ಬುದ್ಧಿಯೇ ಸಾಕೆನಿಸುವಾಗ ಮತ್ತೆ ಚಿದಾಭಾಸನೇತಕ್ಕೆ ಬೇಕು ?

**ಆಭಾಸಹೀನಯಾಬುದ್ಧ್ಯಾ ಜ್ಞಾತತ್ವಂ ನೈವಜಾಯತೇ ।**
**ತಾದೃಗ್ಬುದ್ಧೇರ್ವಿಶೇಷಃ ಕಃ ಮೃದಾದೇಃ ಸ್ಯಾದ್ವಿ-**
**ಕಾರಿಣಃ ॥೮॥**

ಚಿದಾಭಾಸನಿಲ್ಲದ ಬುದ್ಧಿಯಿಂದ ತಿಳಿಯಬಂತೆಂಬ ಭಾವವನ್ನು ಹುಟ್ಟಿಸಲು ಸಾಧ್ಯವಿಲ್ಲ. ಚಿದಾಭಾಸನ ಬೆಳಕಿಲ್ಲದ ಅಂಥ ಬುದ್ಧಿಗೂ ಪಂಚೀಕೃತ ಪಂಚಮಹಾಭೂತಗಳಿಂದಾದ ವಿಕಾರಿಯಾದ ಮಣ್ಣಿಗೂ ವಿಶೇಷವೇನು ?

—ಚಿದಾಭಾಸನಿಲ್ಲದ ಬರಿ ಬುದ್ಧಿಯು ಪದಾರ್ಥಗಳನ್ನೇನೋ ವ್ಯಾಪಿಸಬಹುದು. ಆದರೆ ತಿಳಿಯಬಂತೆಂಬ ಧರ್ಮವು ಅಲ್ಲಿ ಹುಟ್ಟುವದಿಲ್ಲ ಎಂಬುದಕ್ಕೆ ದೃಷ್ಟಾಂತ.

**ಜ್ಞಾತ ಇತ್ಯುಚ್ಯತೇ ಕುಂಭೋ ಮೃದಾಲಿಪ್ತೋ ನ ಕುತ್ರ-**
**ಚಿತ್ ।**
**ಧೀಮಾತ್ರವ್ಯಾಪ್ತಕುಂಭಸ್ಯ ಜ್ಞಾತವ್ಯಂ ನೇಷ್ಯತೇತದಾ ॥೯॥**

ಒಂದು ಘಟಕ್ಕೆ ಕೆಮ್ಮಣ್ಣನ್ನಾಗಲೀ, ಸುಣ್ಣವನ್ನಾಗಲೀ ಬಳಿದರೆ ಅದರ ಪ್ರಭಾವದಿಂದ ಘಟವು ತಿಳಿಯಬಂತು ಎಂದು ಎಲ್ಲಾದರೂ ಹೇಳಬಂದೀತೇ ? ಅದರಂತೆ ಕೇವಲ ಬುದ್ಧಿಯಿಂದ ವ್ಯಾಪ್ತವಾದ ಘಟವು ತಿಳಿಯಬಂತು. ಎಂಬ ಧರ್ಮವುಳ್ಳದುದಾಗುವದಿಲ್ಲ.

**ಜ್ಞಾತತ್ವ ನಾಮ ಕುಂಭೇಽತಶ್ಚಿದಾಭಾಸಫಲೋದಯಃ ।**
**ನ ಫಲಂ ಬ್ರಹ್ಮಚೈತನ್ಯಂ ಮಾನಾತ್ಪ್ರಾಗಪಿ ಸತ್ವತಃ ॥೧೦॥**

ಕೇವಲ ಬುದ್ಧಿಯಲ್ಲಿ ತಿಳಿಯಬಂತೆಂಬ ಧರ್ಮವನ್ನು ಹುಟ್ಟಿಸುವ ಸಾಮರ್ಥ್ಯವಿಲ್ಲದ್ದರಿಂದ ಚಿದಾಭಾಸರೂಪೀ ಫಲ ಚೇತನವು ಪದಾರ್ಥವನ್ನು ವ್ಯಾಪಿಸುವದೇ ತಿಳಿಯಬಂತು ಎಂಬ ಧರ್ಮವು. ಬ್ರಹ್ಮ ಚೇತನವು ಫಲ ಎಂದರೆ ಘಟ ಮೊದಲಾದವುಗಳ ಸ್ಫುರಣಕ್ಕೆ ಕಾರಣವಲ್ಲ. ಯಾಕಂದರೆ ಪ್ರತ್ಯಕ್ಷ ಮೊದಲಾದ ಪ್ರಮಾಣಗಳು ತೋರುವ ಮೊದಲೇ ಬ್ರಹ್ಮ ಚೇತನವಿರುತ್ತದೆ.

(ವಿಷಯ ಸ್ಫುರಣವು ಪ್ರಮಾಣಗಳು ತೋರಿದನಂತರ ಉಂಟಾಗುತ್ತದೆ.)

—ನಿಮ್ಮ ಅಭಿಪ್ರಾಯವು ಸುರೇಶ್ವರಾಚಾರ್ಯರ ವಾರ್ತಿಕಕ್ಕೆ ವಿರುದ್ಧವಾಗಿದೆಯಲ್ಲ.

**ಪರಾಗರ್ಥಪ್ರಮೇಯೇಷು ಯಾ ಫಲತ್ವೇನ ಸಂಮತಾ ।**
**ಸಂವಿತ್ಸೈವೇಹ ಮೇಯೋಽರ್ಥೋ ವೇದಾಂತೋಕ್ತಿ**
**ಪ್ರಮಾಣತಃ ॥೧೧॥**

ಹೊರಗಿರುವ ಘಟ–ಪಟ ಮೊದಲಾದ ವಸ್ತುಗಳು ಪ್ರಮಾಣದ ವಿಷಯವಾದಾಗ ಯಾವ ಚೇತನ–ಎಂದರೆ ಜ್ಞಾನವು ಅವುಗಳ ಅರಿವನ್ನುಂಟು ಮಾಡಿತೋ, ಅದೇ ವೇದಾಂತ ಶಾಸ್ತ್ರದಲ್ಲಿ ಹೇಳಿರುವ ವಾಕ್ಯ ಪ್ರಮಾಣಗಳಿಂದ ತಿಳಿಯಬೇಕಾದ ವಿಷಯವು.

—ಒಟ್ಟು ತಾತ್ಪರ್ಯ.

**ಇತಿ ವಾರ್ತಿಕಕಾರೇಣ ಚಿತ್ಸಾದೃಶ್ಯಂ ವಿವಕ್ಷಿತಮ್ ।**
**ಬ್ರಹ್ಮಚಿತ್ಫಲಯೋರ್ಭೇದಃ ಸಾಹಸ್ರ್ಯಾಂ ವಿಶ್ರುತೋ**
**ಯತಃ ॥೧೨॥**

ಈ ವಾರ್ತಿಕದಿಂದ ವಾರ್ತಿಕಕಾರರಾದ ಸುರೇಶ್ವರಾಚಾರ್ಯರಿಗೆ ಚೈತನ್ಯಗಳ ಸಾದೃಶ್ಯವಿರುವದೆಂದು ಮಾತ್ರ ಹೇಳಬೇಕಾಗಿದೆ. ಆದುದರಿಂದ ಉಪದೇಶ ಸಾಹಸ್ರಿಯಲ್ಲಿ ಶ್ರೀ ಶಂಕರಾಚಾರ್ಯರು ಬ್ರಹ್ಮಚೇತನ ಹಾಗೂ ಫಲಚೇತನಗಳಿಗೆ ಸ್ಪಷ್ಟವಾಗಿ ಭೇದವನ್ನು ಹೇಳಿದ್ದಾರೆ.

(ಶ್ರೀ ಶಂಕರಾಚಾರ್ಯರು ವಾರ್ತಿಕಕಾರರೆನಿಸಿದ ಸುರೇಶ್ವರಾಚಾರ್ಯರ ಗುರುಗಳು. ಅವರು ಎಲ್ಲವನ್ನು ಬೆಳಗುವದು ಬ್ರಹ್ಮವೆಂದೂ, ಪ್ರಮಾಣದ ಫಲವಾಗಿ ಬೆಳಗುವದು ಚಿದಾಭಾಸನೆಂದೂ ಸ್ಪಷ್ಟವಾಗಿ ಅವರಿಬ್ಬರಲ್ಲಿ ಭೇದವನ್ನು ಹೇಳಿದ್ದಾರೆ.)

**ಆಭಾಸ ಉದಿತಸ್ತಸ್ಮಾತ್ ಜ್ಞಾತತ್ವಂ ಜನಯೇದ್ ಘಟೇ ।**
**ತತ್ಪುನಬ್ರ್ರಹ್ಮಣಾಭಾಸ್ಯಮಜ್ಞಾತತ್ವವದೇವಹಿ ॥೧೩॥**

ಪ್ರಮಾಣದ ಫಲವಾಗಿ ಬುದ್ಧಿವೃತ್ತಿಯಲ್ಲಿ ಹುಟ್ಟಿದ ಚಿದಾಭಾಸನು ಘಟ ವಿಷಯದಲ್ಲಿ ಇದು ತಿಳಿಯಬಂತು ಎಂಬ ಧರ್ಮವನ್ನು ಹುಟ್ಟಿಸುವನು. ತರುವಾಯ ಬ್ರಹ್ಮವು ತಿಳಿಯಬರದ ವಸ್ತುಗಳನ್ನು ಹೇಗೋ ಹಾಗೆಯೇ ತಿಳಿಯಬಂದ ವಸ್ತುಗಳನ್ನು ಮತ್ತೆ ಇದು ನನಗೆ ತಿಳಿಯಬಂತು ಎಂದು ಬೆಳಗುವನು.

(ಸೂರ್ಯಪ್ರಕಾಶದ ಸಹಾಯದಿಂದ ಕಾರ್ಯಮಾಡಬಲ್ಲ ಕಣ್ಣುಗಳ ದ್ವಾರಾ ಪದಾರ್ಥಗಳನ್ನು ವ್ಯಾಪಿಸಿ ಇಲ್ಲಿ ಘಟಾಕಾರವಾದ ಬುದ್ಧಿವೃತ್ತಿಯು ತಿಳಿಯಬಂತು ಎಂಬ ಧರ್ಮವನ್ನು ಹುಟ್ಟಿಸುತ್ತದೆ. ಇದಕ್ಕೂ ಮೊದಲು ಬ್ರಹ್ಮವು ಘಟದ ತಿಳಿದುಬರದಿರುವಿಕೆಯನ್ನು ಬೆಳಗುತ್ತಿದ್ದಂತೆ ಈಗ ತಿಳಿದು ಬರುವಿಕೆಯನ್ನು ಬೆಳಗುತ್ತದೆ. ಯಾವ ಯಾವದು ಎದುರಿಗೆ ಬರುವದೋ ಅದನ್ನು ದೀಪದಂತೆ ಬೆಳಗುವದಷ್ಟೇ ಬ್ರಹ್ಮಚೈತನ್ಯದ ಕಾರ್ಯವಾಗಿದೆ.)

—ಹೀಗೆ ಬ್ರಹ್ಮ ಮತ್ತು ಚಿದಾಭಾಸರಲ್ಲಿ ಭೇದವನ್ನು ಹೇಳಿ ಈಗ ಅವರ ವಿಷಯಗಳೂ ಭಿನ್ನ-ಭಿನ್ನವಾದುದರಿಂದ ಅವರು ಭಿನ್ನರೆಂದು ಸ್ಪಷ್ಟಗೊಳಿಸುತ್ತಾರೆ.

**ಧೀವೃತ್ತ್ಯಾಭಾಸಕುಂಭಾನಾಂ ಸಮೂಹೋಭಾಸ್ಯತೇ ಚಿತಾ ।**
**ಕುಂಭಮಾತ್ರಫಲತ್ವಾತ್ಸ ಏಕ ಆಭಾಸತಃಸ್ಫುರೇತ್ ॥೧೪॥**

ಬ್ರಹ್ಮಚೈತನ್ಯವು ಬುದ್ಧಿವೃತ್ತಿಯನ್ನು, ಚಿದಾಭಾಸನನ್ನು ಹಾಗೂ ಘಟವನ್ನು ಹೀಗೆ ಈ ಸಮುದಾಯವನ್ನೇ ಬೆಳಗುವದು. ಯಾವ ಘಟದಲ್ಲಿ ಬುದ್ಧಿವೃತ್ತಿಯ ಸಂಬಂಧ ಉಂಟಾಗುವದೋ ಆ ಒಂದು ಗಡಿಗೆಯನ್ನು ಮಾತ್ರ ಚಿದಾಭಾಸನು ಬೆಳಗುವನು.

(ಚಿದಾಭಾಸನು ಆಯಾ ಪದಾರ್ಥಗಳ ಮೇಲೆ ಎಂದರೆ ಫಲರೂಪನಾಗಿ ಇರುವವನಾದುದರಿಂದ ಆ ಆ ಪದಾರ್ಥಗಳಷ್ಟೇ ಭಾಸವಾಗುವವು. ಬುದ್ಧಿ ವೃತ್ತಿ ಮುಂ. ಗಳ ಸಮುದಾಯವು ಅವನಿಂದ ಬೆಳಗಲಾರದು.)

—ಈಗ ಘಟವು ಚಿದಾಭಾಸ ಮತ್ತು ಬ್ರಹ್ಮ ಇವರಿಬ್ಬರಿಂದ ಬೆಳಗಿತು ಎಂಬುದಕ್ಕೆ ಗುರುತು ಹೇಳಿಕೊಡುತ್ತಾರೆ.

**ಚೈತನ್ಯಂ ದ್ವಿಗುಣಂ ಕುಂಭೇ ಜ್ಞಾತತ್ವೇನಸ್ಫುರತ್ಯತಃ ।**
**ಅನ್ಯೇಽನುವ್ಯವಸಾಯಾಖ್ಯಮಾಹುರೇತದ್ಯಥೋದಿತಮ್॥೧೫॥**

ಘಟವು ಬ್ರಹ್ಮಚೈತನ್ಯ ಮತ್ತು ಚಿದಾಭಾಸ ಇವರಿಬ್ಬರಿಂದಲೂ ಬೆಳಗುತ್ತಿರುವದರಿಂದ ಅದರಲ್ಲಿ ಜ್ಞಾನತತ್ವರೂಪದಿಂದ ಎರಡುಬಗೆಯ ಚೈತನ್ಯಗಳಿರುವವೆಂದುಂತಾಯಿತು, ಬ್ರಹ್ಮವು ಬೆಳಗುವದನ್ನೇ ತರ್ಕಸಾಸ್ತ್ರಿಗಳು 'ಅನುವ್ಯವಸಾಯ'ವೆಂಬ ಬೇರೊಂದು ಜ್ಞಾನವೆಂದು ಹೇಳುತ್ತಾರೆ.

—ಮೇಲಿನ ಅರ್ಥವನ್ನೇ ಉದಾಹರಣೆಯಿಂದ ಸ್ಪಷ್ಟಗೊಳಿಸುತ್ತಾರೆ.

**ಘಟೋಽಯಮಿತ್ಯಸಾವುಕ್ತಿರಾಭಾಸಸ್ಯಪ್ರಸಾದತಃ ।**
**ವಿಜ್ಞಾತೋ ಘಟ ಇತ್ಯುಕ್ತಿಬ್ರಹ್ಮಾನುಗ್ರಹತೋ ಭವೇತ್ ॥೧೬॥**

ಚಿದಾಭಾಸನ ಪ್ರಸಾದದಿಂದ ಇದು ಘಟವೆಂದು ಮಾತ್ರ ಅನ್ನಬಹುದು. ಆದರಂತೆ ಘಟವು ತಿಳಿಯಬಂತು ಎಂದು ಬ್ರಹ್ಮನ ಅನುಗ್ರಹದಿಂದ ಅನ್ನಬಹುದು.

(ಒಟ್ಟು ಯಾವದಾದರೊಂದು ಪದಾರ್ಥಜ್ಞಾನಕ್ಕೆ ಎರಡೂ ಚೈತನ್ಯಗಳ ಅವಶ್ಯಕತೆಯುಂಟು.)

ದೇಹದ ವ್ಯವಹಾರದಿಂದ ಚಿದಾಭಾಸನನ್ನೂ, ಬ್ರಹ್ಮನನ್ನೂ ಬೇರೆ ಮಾಡಿ ತಿಳಿದಂತೆ ದೇಹದ ಒಳಗೆ ಇರುವ ಕೂಟಸ್ಥ–ಚಿದಾಭಾಸರನ್ನೂ ಬೇರೆ ಮಾಡಿ ತಿಳಿಯಬೇಕು.

**ಆಭಾಸಬ್ರಹ್ಮಣೀ ದೇಹಾದ್ಬಹಿರ್ಯದ್ವದ್ವಿವೇಚಿತೇ ।**
**ತದ್ವದಾಭಾಸಕೂಟಸ್ಥೌ ವಿವಿಚ್ಯೇತಾಂ ವಪುಷ್ಯಪಿ ॥೧೭॥**

ದೇಹದ ಹೊರಗೆ ಚಿದಾಭಾಸ ಮತ್ತು ಬ್ರಹ್ಮರ ವಿವೇಕವನ್ನು ಮಾಡಿಕೊಂಡಂತೆ, ದೇಹದ ಒಳಗೂ ಚಿದಾಭಾಸ–ಕೂಟಸ್ಥರ ವಿವೇಕವನ್ನು ಮಾಡಿಕೊಳ್ಳಬೇಕು.

—ದೇಹದ ಹೊರಗೆ ಘಟ ಮುಂ. ಪದಾರ್ಥಾಕಾರವಾದ ಬುದ್ಧಿವೃತ್ತಿಯನ್ನು ಚಿದಾಭಾಸನನ್ನು ಗುರುತಿಸಲು ಬಂದಿತು. ದೇಹದೊಳಗೆ ಅಂಥ ವಿಷಯಗಳಿಲ್ಲದ್ದರಿಂದ ಬುದ್ಧಿವೃತ್ತಿಯು ಹುಟ್ಟುವದಕ್ಕೆ ಆಸ್ಪದವಿಲ್ಲ ಎಂದ ಮೇಲೆ ಚಿದಾಭಾಸನನ್ನು ಅರಿಯುವುದು ಹೇಗೆ ?

**ಅಹಂವೃತ್ತೌ ಚಿದಾಭಾಸಃ ಕಾಮ–ಕ್ರೋಧಾದಿಕಾಸು ಚ ।**
**ಸಂವ್ಯಾಪ್ಯ ವರ್ತತೇ ತಪ್ತೇ ಲೋಹೇ ವಹ್ನಿರ್ಯಥಾ ತಥಾ ॥೧೮॥**

ಕಾದ ಕಬ್ಬಿಣದಲ್ಲಿ ಬೆಂಕಿಯು ವ್ಯಾಪಿಸಿಕೊಂಡಿರುವಂತೆ, ಅಹಂಕಾರದಲ್ಲಿ ಎಂದರೆ 'ನಾನು' ಎಂಬ ವೃತ್ತಿಯಲ್ಲಿ ಕಾಮ–ಕ್ರೋಧ ಮೊದಲಾದವುಗಳಲ್ಲಿ ಚಿದಾಭಾಸನು ವ್ಯಾಪಿಸಿಕೊಂಡಿರುವನು.

—ಇದೇ ದೃಷ್ಟಾಂತವನ್ನು ಸ್ಪಷ್ಟಗೊಳಿಸಿ ವಿಷಯ ತಿಳಿಸುತ್ತಾರೆ.

**ಸ್ವಮಾತ್ರಂ ಭಾಸಯೇತ್ತಪ್ತಂ ಲೋಹಂ ನಾನ್ಯತ್ ಕದಾಚನ ।**
**ಏವಮಾಭಾಸಸಹಿತಾವೃತ್ತಯಃ ಸ್ವಸ್ವಭಾಸಿಕಾಃ ॥೧೯॥**

ಕಾದ ಕಬ್ಬಿಣವು ತನ್ನ ಬೆಳಕಿನಿಂದ ತನ್ನನ್ನು ಮಾತ್ರ ಬೆಳಗಿಕೊಳ್ಳುತ್ತದೆ ಹೊರತು ಎಂದಿಗೂ ಇನ್ನೊಂದನ್ನಲ್ಲ. ಅದರಂತೆಯೇ ಚಿದಾಭಾಸನಿಂದ ಕೂಡಿದ ವೃತ್ತಿಗಳು ತಮ್ಮನ್ನು ಮಾತ್ರ ಬೆಳಗಿಕೊಳ್ಳುತ್ತವೆ.

(ಚಿದಾಭಾಸನಿಂದ ಕೂಡಿದ ಒಂದು ವೃತ್ತಿಗೆ ಇನ್ನೊಂದು ವೃತ್ತಿಯ ಜ್ಞಾನವಾಗುವದಿಲ್ಲ.)

**ಕ್ರಮಾದ್ವಿಚ್ಛಿದ್ಯ ವಿಚ್ಛಿದ್ಯ ಜಾಯಂತೇ ವೃತ್ತಯೋಽಖಿಲಾಃ ।**
**ಸರ್ವಾ ಅಪಿ ವಿಲೀಯಂತೇ ಸುಪ್ತಿ-ಮೂರ್ಛಾ-ಸಮಾಧಿಷು ॥೨೦॥**

ಎಲ್ಲ ವೃತ್ತಿಗಳು ಕ್ರಮವಾಗಿ ಮೇಲಿಂದಮೇಲೆ ಅಡಗುತ್ತ ಅಡಗುತ್ತ ಹುಟ್ಟುತ್ತವೆ. ಅಲ್ಲದೇ ಅವೆಲ್ಲ ಗಾಢನಿದ್ರೆ, ಮೂರ್ಛೆ–ಸಮಾಧಿ ಅವಸ್ಥೆಗಳಲ್ಲಿ ಅಡಗಿಹೋಗುತ್ತವೆ.

(ವೃತ್ತಿಗಳು ಹುಟ್ಟಿ ಅಡಗಿಹೋಗುತ್ತವೆ. ಹುಟ್ಟಿದ ಒಂದು ವೃತ್ತಿಯು ಅಡಗುವವರೆಗೆ ಮತ್ತೊಂದು ವೃತ್ತಿ ಹುಟ್ಟಲಾರದು. ಆ ಮತ್ತೊಂದು ವೃತ್ತಿ ಹುಟ್ಟುವವರೆಗೆ ಅವೆರಡರ ನಡುವೆ ವೃತ್ತಿಯ ಅಭಾವವಿರುತ್ತದೆ. ಗಾಢನಿದ್ರೆ ಮುಂ. ಗಳಲ್ಲಿಯಂತೂ ವೃತ್ತಿಗಳು ಇರುವದಿಲ್ಲವೆಂಬುದು ಪ್ರಸಿದ್ಧವೇ ಇದೆ.)

—ನಿಮ್ಮ ವಿವರಣೆಯಿಂದ ಕೂಟಸ್ಥನ ಜ್ಞಾನವಾಗುವದು ಹೇಗೆ ?

**ಸಂಧಯೋಽಖಿಲವೃತ್ತೀನಾಮಭಾವಾಶ್ಚಾವಭಾಸಿತಾಃ ।**
**ನಿರ್ವಿಕಾರೇಣ ಯೇನಾಸೌ ಕೂಟಸ್ಥ ಇತಿ ಚೋಚ್ಯತೇ ॥೨೧॥**

ಯಾವ ಬದಲಾವಣೆಯನ್ನೂಹೊಂದದ ಆತ್ಮನಿಂದ ಎಲ್ಲ ವೃತ್ತಿಗಳ ಸಂಧಿ ಎಂದರೆ ಒಂದುವೃತ್ತಿ ಹುಟ್ಟಿ ಅಡಗಿ ಮತ್ತೊಂದುವೃತ್ತಿ ಹುಟ್ಟಬೇಕಾದರೆ ನಡುವೆ ಕಳೆಯುವ ಕಾಲ ಮತ್ತು ಈ ವೃತ್ತಿಗಳಿಲ್ಲದಿರುವಿಕೆ ಬೆಳಗಿತೋ ಅವನಿಗೆ ಕೂಟಸ್ಥನೆನ್ನುವರು.

**ಘಟೇ ದ್ವಿಗುಣ ಚೈತನ್ಯಂ ಯಥಾ ಬಾಹ್ಯೇ ತಥಾಂತರೇ ।**
**ವೃತ್ತಿಷ್ವಪಿ ತತಸ್ತತ್ರ ವೈಶದ್ಯಂ ಸಂಧಿತೋಽಧಿಕಮ್ ॥೨೨॥**

ಹೊರಗಿರುವ ಘಟದಲ್ಲಿ ಹೇಗೆ ಎರಡುಬಗೆಯ ಚೈತನ್ಯವಿರುವವೋ ಹಾಗೆ ಒಳಗಿರುವವೃತ್ತಿಗಳಲ್ಲಿ ಕೂಡ. ಆದುದರಿಂದ ವೃತ್ತಿಗಳಲ್ಲಿ ಅವುಗಳ ಸಂಧಿಗಿಂತ ಹೆಚ್ಚು ಸ್ಪಷ್ಟತೆ ಇರುತ್ತದೆ.

—ಘಟವೇ ಮೊದಲಾದ ಹೊರಗಿನ ಪದಾರ್ಥಗಳಲ್ಲಿ ಜ್ಞಾತತೆ-ಅಜ್ಞಾತತೆಗಳಿರುವಂತೆ ವೃತ್ತಿಗಳಲ್ಲಿಯೂ ಇರುತ್ತವೆ. ಅವುಗಳನ್ನು ಬೆಳಗುವದಕ್ಕೆ ಕೂಟಸ್ಥನಿರುತ್ತಾನೆ ಎನ್ನಲು ಅಡ್ಡಿ ಏನು ? ಎಂದರೆ—

**ಜ್ಞಾತತಾ ಜ್ಞಾತತೇ ನ ಸ್ತೋ ಘಟವದ್ ವೃತ್ತಿಷು ಕ್ವಚಿತ್ ।**
**ಸ್ವಸ್ಯ ಸ್ವೇನಾ ಗೃಹೀ ತತ್ವಾತ್ತಾಭಿಶ್ಚಾ ಜ್ಞಾನ ನಾಶನಾತ್॥೨೩॥**

ತನ್ನನ್ನು ತಾನೇ ಹಿಡಿದುಕೊಳ್ಳಲಾಗುವದಿಲ್ಲ. ವೃತ್ತಿಗಳ ಹುಟ್ಟುವಿಕೆಯಿಂದ, ಅಜ್ಞಾನನಾಶವಾಗುತ್ತಿರುವದರಿಂದ ಘಟದಲ್ಲಿರುವಂತೆ ತಿಳಿಯಬರುವಿಕೆ, ತಿಳಿಯಬರದಿರುವಿಕೆಗಳು ಎಂದಿಗೂ ಇರಲಾರವು.

(ಜ್ಞಾನ-ಮತ್ತು ಅಜ್ಞಾನಗಳ ವ್ಯಾಪ್ತಿಯಿಂದ ಜ್ಞಾತತೆ-ಅಜ್ಞಾತತೆಗಳು ಉಂಟಾಗುತ್ತವೆ. ಘಟವೇ ಮೊದಲಾದ ಹೊರಗಿನ ಪದಾರ್ಥಗಳು ಜ್ಞಾನ ಮತ್ತು ಅಜ್ಞಾನವ್ಯಾಪ್ತಿಯಿಂದ ಕೂಡಿರುವಕಾರಣ ಅಲ್ಲಿಮಾತ್ರ ಆ ಧರ್ಮಗಳು ಕಾಣುವವು. ದೇಹದೊಳಗಿನ ಆಹಮಾದಿವೃತ್ತಿಗಳು ತಮ್ಮನ್ನು ತಾವೇ ಬೆಳಗಿಕೊಳ್ಳುವಂಥವು. ಅಲ್ಲಿ ಜ್ಞಾನಕ್ಕೆ ವ್ಯಾಪ್ತಿ ಇಲ್ಲ, ಎಂದಮೇಲೆ ಅಜ್ಞಾನಕ್ಕೂ ಇಲ್ಲ. ಕಣ್ಣು ಹೊರಗಿನಪದಾರ್ಥಗಳನ್ನು ಗ್ರಹಿಸಬಲ್ಲದು, ತನ್ನನ್ನು ತಾನು ನೋಡಲಾರದು. ಆದುದರಿಂದ ವೃತ್ತಿಗಳ ಜ್ಞಾತತ್ವ-ಅಜ್ಞಾತತ್ವಗಳ ಅರಿವಿನಿಂದ ಕೂಟಸ್ಥನನ್ನು ಅರಿಯಬಾರದು.)

ಚಿದಾಭಾಸ ಮತ್ತು ಕೂಟಸ್ಥರು ತಮ್ಮನ್ನು ತಾವೇ ಬೆಳಗಿಕೊಳ್ಳುವ ಧರ್ಮದವರಾದರೆ ಅವರಲ್ಲಿ ಒಬ್ಬನು ಕೂಟಸ್ಥ, ಇನ್ನೊಬ್ಬನು ವಿಕಾರಿ ಎಂದು ಯಾಕೆ ಅನ್ನಬೇಕು !

**ದ್ವಿಗುಣೀಕೃತ ಚೈತನ್ಯೇ ಜನ್ಮನಾಶಾನು ಭೂತಿತಃ ।**
**ಅಕೂಟಸ್ಥಂ ತದನ್ಯತ್ತು ಕೂಟಸ್ಥಮವಿಕಾರತಃ ॥೨೪॥**

ಎರಡಾದ ಚೈತನ್ಯದಲ್ಲಿ ಚಿದಾಭಾಸರೂಪ ಚೈತನ್ಯದ ಹುಟ್ಟುವಿಕೆ, ಅಡಗುವಿಕೆಗಳು ಅನುಭವಕ್ಕೆ ಬರುತ್ತವೆ; ಆದುದರಿಂದ ಅವನು ಕೂಟಸ್ಥನಲ್ಲ. ಯಾವಬದಲಾವಣೆಯನ್ನೂಹೊಂದದ ಇನ್ನೊಬ್ಬನು ಕೂಟಸ್ಥನು.

(ಎಚ್ಚರ-ಕನಸು ಈ ಅವಸ್ಥೆಗಳಲ್ಲಿ ಚಿದಾಭಾಸನು ಹುಟ್ಟುತ್ತಾನೆ. ಗಾಢನಿದ್ರೆ – ಸಮಾಧಿ ಮುಂತಾದ ಅವಸ್ಥೆಗಳಲ್ಲಿ ನಾಶಹೊಂದುತ್ತಾನೆ; ಆದುದರಿಂದ ಇವನು ವಿಕಾರಿ. ಇನ್ನೊಂದು ಚೇತನವು 'ಕೂಟವನ್ನಿರ್ವಿಕಾರೇಣತಿಷ್ಠತೀತಿ ಕೂಟಸ್ಥಃ' ನಿರ್ವಿಕಾರವಾದುದರಿಂದ ಕೂಟಸ್ಥನೆಂದು ಹೇಳಬೇಕು.)

—ಚಿದಾಭಾಸನಿಗಿಂತ ಬೇರೆಯಾಗಿ ಕೂಟಸ್ಥನನ್ನು ಸ್ವೀಕರಿಸಲು ಪ್ರಮಾಣಗಳಿಲ್ಲ; ಅದು ನಿಮ್ಮದೇ ಕಪೋಲಕಲ್ಪಿತ ಕಲ್ಪನೆ. ಎಂದರೆ—

**ಅಂತಃಕರಣ ತದ್ವೃತ್ತಿಸಾಕ್ಷೀತ್ಯಾದಾವನೇಕಧಾ ।**
**ಕೂಟಸ್ಥ ಏವ ಸರ್ವತ್ರ ಪೂರ್ವಾಚಾರ್ಯೈರ್ವಿನಿಶ್ಚಿತಃ ॥೨೫॥**

'ಅಂತಃಕರಣತದ್ವೃತ್ತಿಸಾಕ್ಷಿ' ಎಂದು ಮೊದಲಾದ ವಾಕ್ಯಗಳಲ್ಲಿ ಎಂದರೆ ಅಂತಃಕರಣಕ್ಕೂ, ಅದರ ವೃತ್ತಿಗಳಿಗೂ ಸಾಕ್ಷಿಯಾಗಿರುವ ಎಂಬ ವಾಕ್ಯಗಳಲ್ಲಿ ಮೊದಲಿನ ಆಚಾರ್ಯರು ಎಲ್ಲಕಡೆಗೆ ಕೂಟಸ್ಥನನ್ನೇ ನಿಶ್ಚಯಿಸಿದ್ದಾರೆ.

(ಆ ಪ್ರಮಾಣವು ಹೀಗಿದೆ— ಅಂತಃಕರಣತದ್ವೃತ್ತಿಸಾಕ್ಷೀಚೈತನ್ಯವಿಗ್ರಹಃ । ಆನಂದರೂಪಃ ಸತ್ಯಃಸನ್ ಕಿಂ ನಾತ್ಮಾನಂ ಪ್ರಪದ್ಯಸೇ ॥ ಶ್ರೀ ಶಂಕರಾಚಾರ್ಯ – ಬೃಹದ್ವಾಕ್ಯವೃತ್ತಿ.)

ಕೂಟಸ್ಥನಿಂದ ಬೇರೆಯಾದ ಚಿದಾಭಾಸನನ್ನೂ ಅವರು ವರ್ಣಿಸುತ್ತಾರೆ.

**ಆತ್ಮಾಭಾಸಾಶ್ರಯಾಶ್ಚೈವಂ ಮುಖಾಭಾಸಾಶ್ರಯಾ ಯಥಾ ।**
**ಗಮ್ಯಂತೇ ಶಾಸ್ತ್ರಯುಕ್ತಿಭ್ಯಾಮಿತ್ಯಾಭಾಸಶ್ಚ ವರ್ಣಿತಃ ॥೨೬॥**

ಬಿಂಬವೆನಿಸುವ ಮುಖ, ಪ್ರತಿಬಿಂಬವಾದ ಮುಖ, ಪ್ರತಿಬಿಂಬಕ್ಕೆ ಆಶ್ರಯವಾದ ಕನ್ನಡಿ, ಈ ಮೂರು ಇರುವಂತೆ ಬಿಂಬನಾದ ಕೂಟಸ್ಥ, ಪ್ರತಿಬಿಂಬನಾದ ಚಿದಾಭಾಸ, ಚಿದಾಭಾಸನಿಗೆ ಆಶ್ರಯವಾದ ಅಂತಃಕರಣ ಇವು ಮೂರು ಇರುವವೆಂದು ಶಾಸ್ತ್ರ ಮತ್ತು ಯುಕ್ತಿಗಳಿಂದ ತಿಳಿದುಬರುತ್ತದೆ.

(ಶ್ರೀಮಚ್ಛಂಕರಾಚಾರ್ಯರ ಉಪದೇಶ ಸಾಹಸ್ರಿಯಲ್ಲಿ ತುಸು ಶಬ್ದ ಭೇದದಿಂದ ಮೇಲಿನಶ್ಲೋಕವಿದೆ. ಮೂರು ಚರಣಗಳಂತೂ ಉಪದೇಶ ಸಾಹ ಸ್ರಿಯವೇ. ಇರಲಿ, ಒಟ್ಟು ಆಚಾರ್ಯರಿಗೂ ಕೂಡ ಚಿದಾಭಾಸನು ಒಪ್ಪಿಗೆ ಯಾಗಿದ್ದನೆಂದು ತಿಳಿಯುವದು.

ಈ ಚಿದಾಭಾಸನ ವಿಷಯದಲ್ಲಿ ಆಕ್ಷೇಪ.

**ಬುಧ್ಯವಚ್ಛಿನ್ನ ಕೂಟಸ್ಥೋ ಲೋಕಾಂತರಗಮಾಗಮೌ ।**
**ಕರ್ತುಂ ಶಕ್ತೋ ಘಟಾಕಾಶ ಇವಾಭಾಸೇನ ಕಿಂ ವದ ॥೨೭॥**

ಘಟದಹೋಗುವಿಕೆಯಿಂದ, ಬರುವಿಕೆಯಿಂದ, ಘಟದಸಂಬಂಧಹೊಂದಿದ ಆಕಾಶವೂ ಹೋದಂತೆ ಮತ್ತು ಬಂದಂತೆ, ಬುದ್ಧಿಯಸಂದಂಥ ಹೊಂದಿದ ಅರ್ದ್ಧಾತ್ ಅದರಿಂದ ಪರಿಚ್ಛಿನ್ನನಾದ ಕೂಟಸ್ಥನೇ ಲೋಕಾಂತರಗಳಿಗೆ ಹೋಗಿ ಬರುವದಕ್ಕೆ ಸಮರ್ಥನಿರುವಾಗ ಚಿದಾಭಾಸನಿಂದ ಏನಾಗಬೇಕು? ಹೇಳು.

—ಸಿದ್ಧಾಂತಿಯು ಉತ್ತರಕೊಡುತ್ತಾನೆ.

**ಶೃಣ್ವಸಂಗಃ ಪರಿಚ್ಛೇದ ಮಾತ್ರಾಜ್ಜೀವೋ ಭವೇನ್ನ ಹಿ ।**
**ಅನ್ಯಥಾ ಘಟ ಕುಡ್ಯಾದ್ಯೈರವಚ್ಛಿನ್ನಸ್ಯ ಜೀವತಾ ॥೨೮॥**

ಕೇಳು, ಕೇವಲ ಅಸಂಗನಾದ ಕೂಟಸ್ಥನು ಬುದ್ಧಿಯಿಂದ ಮರ್ಯಾದಿತನಾದ ಮಾತ್ರಕ್ಕೆ ಜೀವನೆನಿಸಲಾರನು. ಯಾಕಂದರೆ ಮರ್ಯಾದಿತವಾದಮಾತ್ರದಿಂದ ಜೀವನಾಗುತ್ತಾನೆ ಎಂದುಬಿಟ್ಟರೆ ಘಟ-ಕುಡ್ಯ (ಗೋಡೆ) ಮೊದಲಾದವುಗಳಿಂದ ಮರ್ಯಾದಿತನಾದ ಕೂಟಸ್ಥನಿಗೂ ಜೀವತ್ವವು ಉಂಟಾದೀತು.

(ಕೂಟಸ್ಥನು ವ್ಯಾಪಕನಾದುದರಿಂದ ಘಟವೇ ಮೊದಲಾದ ಪದಾರ್ಥಗಳಿಂದಲೂ ಅವನು ಮರ್ಯಾದಿತನಾಗುತ್ತಾನೆ; ಆಗ ಅವನಿಗೆ ಜೀವಭಾವವುಂಟಾದಂತೆ ಅನುಭವವಿಲ್ಲ.)

—ಬುದ್ಧಿ ಮತ್ತು ಘಟ ಮೊದಲಾದ ಪದಾರ್ಥಗಳಲ್ಲಿ ಸ್ವಚ್ಛತೆ-ಅಸ್ವಚ್ಛತೆಗಳ ಯೋಗದಿಂದ ಭೇದವಿರುತ್ತದಲ್ಲ.

**ನ ಕುಡ್ಯಸದೃಶೀ ಬುದ್ಧಿಃ ಸ್ವಚ್ಛತ್ವಾದಿತಿ ಚೇತ್‌ತಥಾ ।**
**ಅಸ್ತು ನಾಮ ಪರಿಚ್ಛೇದೇ ಕಿಂ ಸ್ವಾಚ್ಛ್ಯೇನ ಭವೇತ್ತವ ॥೨೯॥**

ಬುದ್ಧಿಯು ಸ್ವಚ್ಛವಾಗಿರುವದರಿಂದ ಗೋಡೆಯಂತಾಗಲಾರದು ಎನ್ನುವದಾದರೆ ಅದು ಸ್ವಚ್ಛವಾಗಿಯೇ ಇರಲಿ. ಮರ್ಯಾದಿತವಾಗುವದಕ್ಕೆ ಸ್ವಚ್ಛತೆಯಿಂದ ಆಗುವ ಲಾಭವೇನು ?

ಇದನ್ನೇ ದೃಷ್ಟಾಂತದಿಂದ ಸ್ಪಷ್ಟಗೊಳಿಸುತ್ತಾರೆ.

**ಪ್ರಸ್ಥೇನ ದಾರುಜನ್ಯೇನಕಾಂಸ್ಯಜನ್ಯೇನ ವಾ ನ ಹಿ ।**
**ವಿಕ್ರೇತುಸ್ತಂಡುಲಾದೀನಾಂ ಪರಿಮಾಣಂ ವಿಶಿಷ್ಯತೇ ॥೩೦॥**

ಕಾಳು ಮಾರುವ ವ್ಯಾಪಾರಿಗೆ ಕಟ್ಟಿಗೆಯಿಂದ ಮಾಡಿದ (ಅಸ್ವಚ್ಛ) ಬಳ್ಳವಿರಲಿ, ಕಂಚಿನಿಂದ ಮಾಡಿದ (ಸ್ವಚ್ಛ) ಬಳ್ಳವಿರಲಿ, ಅಳತೆಯಲ್ಲಿ ಏನೂ ಹೆಚ್ಚು ಕಡಿಮೆಯಾಗುವದಿಲ್ಲವಷ್ಟೇ ? —ಪುನಃ ಶಂಕೆ.

**ಪರಿಮಾಣಾವಿಶೇಷೇऽಪಿ ಪ್ರತಿಬಿಂಬೋ ವಿಶಿಷ್ಯತೇ ।**
**ಕಾಂಸ್ಯೇಯದಿ ತದಾ ಬುದ್ಧಾವಪ್ಯಾಭಾಸೋ ಭವೇದ್ಬ-**
**ಲಾತ್ ॥೩೧॥**

ಎರಡೂ ಬಳ್ಳಗಳ ಅಳತೆ ಸಮವಾಗಿದ್ದರೂ ಕಂಚಿನ ಬಳ್ಳದಲ್ಲಿ ಧಾನ್ಯದ ಪ್ರತಿಬಿಂಬವು ಕಾಣುವದೊಂದು ವಿಶೇಷ. ಎಂದರೆ ಬುದ್ಧಿಯಲ್ಲಿ ಕೂಡ ಕೂಟಸ್ಥನ ಪ್ರತಿಬಿಂಬವು ಅವಶ್ಯವಾಗಿ ಕಾಣುತ್ತದೆ.

(ಕಟ್ಟಿಗೆಯ ಬಳ್ಳ-ಕಂಚಿನ ಬಳ್ಳ ಇವುಗಳಲ್ಲಿ ಕಂಚಿನಬಳ್ಳದಲ್ಲಿ ವಿಶೇಷ ವಿರುತ್ತದೆ. ಎಂದರೆ ಅಲ್ಲಿ ಪ್ರತಿಬಿಂಬ ಮೂಡುತ್ತದೆ. ಎಂದರೆ ಬುದ್ಧಿಯೂ ಸ್ವಚ್ಛವಿರುವದರಿಂದ ಅಲ್ಲಿ ಕೂಟಸ್ಥನ ಪ್ರತಿಬಿಂಬ ಮೂಡುತ್ತದೆ. ಇದಕ್ಕೆ ಚಿದಾಭಾಸನೆಂಬ ಹೆಸರು.)

—ಪ್ರತಿಬಿಂಬದ ಅಂಗೀಕಾರ ಮಾಡಿದ ಮಾತ್ರಕ್ಕೆ ಚಿದಾಭಾಸನನ್ನು ಒಪ್ಪಿಕೊಂಡಂತಾಯಿತೇ ?

**ಈಷದ್ಭಾಸನಮಾಭಾಸಃ ಪ್ರತಿಬಿಂಬಸ್ತಥಾವಿಧಃ ।**
**ಬಿಂಬಲಕ್ಷಣಹೀನಃ ಸನ್ ಬಿಂಬವದ್ಭಾಸತೇಹಿ ಸಃ ॥೩೨॥**

ಸ್ವಲ್ಪ ಬೆಳಗುವದಕ್ಕೆ ಆಭಾಸವೆನ್ನುವರು. ಅದರಂತೆಯೇ ಪ್ರತಿಬಿಂಬವು. ಯಾಕಂದರೆ ಅದು ಬಿಂಬ ಲಕ್ಷಣವಿಲ್ಲದುದಾಗಿದ್ದು ಬಿಂಬದಂತೆ ಕಾಣುವದು ಮಾತ್ರ.

('ಆಭಾಸ' ವೆಂಬ ಶಬ್ದದ ಅರ್ಥವು ಸ್ವಲ್ಪ ಬೆಳಗುವದು ಎಂದಾಗುವದು. ಇದರಲ್ಲಿ ಆ, ಎಂಬ ಉಪಸರ್ಗದ ಅರ್ಥವು ಈಷತ್=ಸ್ವಲ್ಪ. ಭಾಸ=ಬೆಳಗುವದು. ಶಬ್ದದಲ್ಲಿರುವ ಉಪಸರ್ಗ, ಪ್ರತ್ಯಯ, ಧಾತು ಇತ್ಯಾದಿ ಅವಯವಗಳಮೇಲಿಂದಾಗುವ ಅರ್ಥಕ್ಕೆ ಯೌಗಿಕಾರ್ಥವೆನ್ನುವರು. ಇರಲಿ. ಈ ಆಭಾಸದ ಲಕ್ಷಣಗಳು ಪ್ರತಿಬಿಂಬದಲ್ಲಿಯೂ ಇರುತ್ತವೆ. ಬಿಂಬದ ಲಕ್ಷಣಗಳಿರದಿದ್ದರೂ ಬಿಂಬದಂತೆ ಕಾಣುವದಕ್ಕೆ ಪ್ರತಿಬಿಂಬವೆನ್ನುವರು. ಸ್ವಲ್ಪ ಬೆಳಗುವದು ಎಂಬ ಲಕ್ಷಣವು ಪ್ರತಿಬಿಂಬದಲ್ಲಿಯೂ ಇರುವದು. ಆದುದರಿಂದ ಆಭಾಸ ಮತ್ತು ಪ್ರತಿಬಿಂಬಗಳು ಸಮಾನಾರ್ಥಗಳು.)

—ಪ್ರತಿಬಿಂಬದಲ್ಲಿ ಆಭಾಸಲಕ್ಷಣಗಳು ಹೇಗಿರುತ್ತವೆ ?

**ಸಸಂಗತ್ವವಿಕಾರಾಭ್ಯಾಂ ಬಿಂಬಲಕ್ಷಣಹೀನತಾ ।**
**ಸ್ಫೂರ್ತಿರೂಪತ್ವಮೇತಸ್ಯ ಬಿಂಬವದ್ಭಾಸನಂ ವಿದುಃ ॥೩೩॥**

ಚಿದಾಭಾಸನು ಬುದ್ಧಿವೃತ್ತಿಯ ಸಂಬಂಧವುಳ್ಳವನು. ಮತ್ತು ಬದಲಾವಣೆಯನ್ನು ಹೊಂದತಕ್ಕವನು. ಅಸಂಗನೂ, ನಿರ್ವಿಕಾರಿಯೂ ಆದ ಬಿಂಬ (ಕೂಟಸ್ಥ) ಲಕ್ಷಣಗಳಿಲ್ಲದವನು. ಇವನಲ್ಲಿ ಸ್ವಲ್ಪ ಬೆಳಗುವಿಕೆ ಮಾತ್ರವಿದೆ. ಅಷ್ಟರಿಂದ ಅವನು ಕೂಟಸ್ಥನನ್ನು ಹೋಲುವನೆಂದು ಪೂರ್ವದ ಆಚಾರ್ಯರು ತಿಳಿಯುವರು.

—ಬುದ್ಧಿಗಿಂತ ಚಿದಾಭಾಸ ಬೇರೆ ಎಂದು ಸಿದ್ಧಮಾಡುತ್ತಾರೆ.

**ನ ಹಿ ಧೀಭಾವಭಾವಿತ್ವಾದಾಭಾಸೋಽಸ್ತಿ ಧಿಯಃ ಪೃಥಕ್ ।**
**ಇತಿ ಚೇದಲ್ಪಮೇವೋಕ್ತಂ ಧೀರಪ್ಯೇವಂ ಸ್ವದೇಹತಃ ॥೩೪॥**

ಬುದ್ಧಿಯನ್ನು ಬಿಟ್ಟು ಚಿದಾಭಾಸನು ಇರಲಾರನಾದುದರಿಂದ ಅವನು ಬುದ್ಧಿಯಿಂದ ಬೇರೆ ಅಲ್ಲ. ಎನ್ನುವದಾದರೆ ನೀನು ಹೇಳಿದುದ ಬಹಳ ಕಡಿಮೆಯಾಯಿತು. ಯಾಕೆಂದರೆ ತನ್ನ ದೇಹವನ್ನು ಬಿಟ್ಟು ಬುದ್ಧಿಯು ಇರಲಾರದು. ಆದುದರಿಂದ ದೇಹಕ್ಕಿಂತ ಬೇರೆ ಬುದ್ಧಿ ಇಲ್ಲವೆನ್ನಬೇಕಾಗುವದು.

**ದೇಹೇಮೃತೇಽಪಿ ಬುದ್ಧಿಶ್ಚೇತ್ ಶಾಸ್ತ್ರಾದಸ್ತಿ ತಥಾ ಸತಿ ।**
**ಬುದ್ಧೇರನ್ಯಶ್ಚಿದಾಭಾಸಃ ಪ್ರವೇಶಶ್ರುತಿಷು ಶ್ರುತಃ ॥೩೫॥**

ದೇಹವು ಸತ್ತ ಮೇಲೆ ಕೂಡ ಬುದ್ಧಿ ಇರುತ್ತದೆ ಎಂದು ಶಾಸ್ತ್ರದಿಂದ ತಿಳಿಯುತ್ತದೆ. ಎಂದರೆ- ಸರಿ. ಹಾಗಿದ್ದಲ್ಲಿ ಬುದ್ಧಿಗಿಂತ ಚಿದಾಭಾಸನು ಬೇರೆಯಾಗಿರುವನೆಂದು ಪ್ರವೇಶ ಶ್ರುತಿಯಲ್ಲಿ ಹೇಳಿರುತ್ತದೆ.

—ಬುದ್ಧಿಯಿಂದೊಡಗೂಡಿದ ಚೈತನ್ಯನಿಗೆ ಮಾತ್ರ ಪ್ರವೇಶ ಸಲ್ಲುವದು. ಮತ್ತಾರಿಗೂ ಅಲ್ಲ.

**ಧೀಯುಕ್ತಸ್ಯ ಪ್ರವೇಶಶ್ಚೇನ್ನೈತರೇಯೇ ಧಿಯಃಪೃಥಕ್ ।**
**ಆತ್ಮಾಪ್ರವೇಶಂ ಸಂಕಲ್ಪ್ಯ ಪ್ರವಿಷ್ಟ ಇತಿ ಗೀಯತೇ ॥೩೬॥**

ಬುದ್ಧಿಯಿಂದೊಡಗೂಡಿದ ಕೂಟಸ್ಥನಿಗೆ ಮಾತ್ರ ಪ್ರವೇಶವು ಸಲ್ಲುವದು ಎಂದರೆ ಅದು ಸರಿಯಲ್ಲ. ಯಾಕಂದರೆ ಐತರೇಯೋಪನಿಷತ್ತಿನಲ್ಲಿ ಬುದ್ಧಿಗಿಂತ ಬೇರೆಯಾದ ಆತ್ಮನು ಪ್ರವೇಶದ ಸಂಕಲ್ಪವನ್ನು ಮಾಡಿ ಅದರಲ್ಲಿ ಪ್ರವೇಶ ಮಾಡಿದನು ಎಂದು ಹೇಳಿದೆ.

—ಆ ಶ್ರುತಿಯ ಅರ್ಥವನ್ನು ಹೇಳುತ್ತಾರೆ.

**ಕಥಂ ನ್ವಿದಂ ಸಾಕ್ಷದೇಹಂ ಮದೃತೇ ಸ್ಯಾದಿತೀರಿತಾತ್ ।**
**ವಿದಾರ್ಯ ಮೂರ್ಧಸೀಮಾನಂ ಪ್ರವಿಷ್ಟಃ ಸಂಸರತ್ಯ-ಯಮ್ ॥೩೭॥**

ಆ ಪರಮಾತ್ಮನು "ಇಂದ್ರಿಯ-ದೇಹ ಮೊದಲಾದ ಈ ಜಡಸಮೂಹವು ನಾನಿಲ್ಲದೇ ಹೇಗೆ ವ್ಯವಹರಿಸೀತು ? ಎಂದು ವಿಚಾರಿಸಿ ನಡುನೆತ್ತಿಯನ್ನು ಸೀಳಿ ಒಳಗೆಪ್ರವೇಶಿಸಿ ಸಂಸಾರಮಾಡತೊಡಗಿದನು ಎಂದು ವರ್ಣನೆ ಇದೆ.

—ಆದರೆ ಅಸಂಗನಾದ ಆತ್ಮನ ಪ್ರವೇಶವು ಸಂಭವಿಸುವದಿಲ್ಲ.

**ಕಥಂ ಪ್ರವಿಷ್ಟೋಽಸಂಗಶ್ಚೇತ್ ಸೃಷ್ಟಿರ್ವಾಽಸ್ಯ ಕಥಂ ವದ ।**
**ಮಾಯಿಕತ್ವಂ ತಯೋಸ್ತುಲ್ಯಂ ವಿನಾಶಶ್ಚ ಸಮಸ್ತಯೋಃ ॥೩೮॥**

ಅಸಂಗನಾದ ಆತ್ಮನು ಹೇಗೆ ಪ್ರವೇಶ ಮಾಡಿದನು ? ಎಂದು ಅನ್ನುವದಾದರೆ- ಇವನು ಸೃಷ್ಟಿಯನ್ನಾದರೂ ಹೇಗೆ ಮಾಡಿದನು ? ಹೇಳು. ಸೃಷ್ಟಿಕರ್ತನಿಗೂ, ಪ್ರವೇಶಕರ್ತನಿಗೂ ಮಾಯೆಯು ಸ್ವಾಧೀನದಲ್ಲಿದೆ. ಆದುದರಿಂದ ಅವರಿಗೆ ನಾಶವೂ ಸಮಾನವಾಗಿದೆ. ಒಟ್ಟಿನಲ್ಲಿ ಅವರಿಬ್ಬರೂ ಸುಳ್ಳು.

ಉಪಾಧಿಮೂಲಕವಾಗಿ ಬಂದ ಸ್ವರೂಪದ ವಿನಾಶಿತ್ವವನ್ನು ಹೇಳುತ್ತಾರೆ.

**ಸಮುತ್ಥಾಯೈಷ ಭೂತೇಭ್ಯಸ್ತಾನ್ಯೇವಾನುವಿನಶ್ಯತಿ ।**
**ವಿಸ್ಪಷ್ಟಮಿತಿ ಮೈತ್ರೇಯ್ಯೈ ಯಾಜ್ಞವಲ್ಕ್ಯ ಉವಾಚ ಹಿ॥೩೯॥**

ಪ್ರಜ್ಞಾನ ಘನನಾದ ಈ ಆತ್ಮನು ಪಂಚಮಹಾಭೂತಗಳಿಂದಾದ ದೇಹ ಮೊದಲಾದವುಗಳೊಡನೆ ಸಂಬಂಧಗೊಂಡು ಜೀವನೆಂದು ಅಭಿಮಾನ ತಾಳಿ ಆ ದೇಹ ಮೊದಲಾದವುಗಳು ನಾಶವಾಗಲು ತಾನೂ ಅದರೊಡನೆ ನಷ್ಟನಾಗುವನು. ಹೀಗೆ ಯಾಜ್ಞವಲ್ಕ್ಯರು ಮೈತ್ರೇಯಿಗೆ ಸ್ಪಷ್ಟವಾಗಿ ಹೇಳಿರುವರು.

(ಚಿದಾಭಾಸನು ನಾಶಹೊಂದತಕ್ಕವನು.)

—ಅದರಂತೆ 'ಅವಿನಾಶೀ ವಾ.' ಎಂಬ ಶ್ರುತಿಯಿಂದ ಕೂಟನು ಚಿದಾಭಾಸನಿಗಿಂತ ಬೇರೆ ಎಂದು ಹೇಳಿದ್ದಾರೆ.

**ಅವಿನಾಶ್ಯಯಮಾತ್ಮೇತಿ ಕೂಟಸ್ಥಃ ಪ್ರವಿವೇಚಿತಃ ।**
**ಮಾತ್ರಾಸಂಸರ್ಗ ಇತ್ಯೇವಮಸಂಗತ್ವಸ್ಯ ಕೀರ್ತನಾತ್ ॥೪೦॥**

ಈ ಆತ್ಮನು ನಾಶವಿಲ್ಲದವನು ಎಂದು ಹೇಳಿ ಕೂಟಸ್ಥನನ್ನು ಚಿದಾಭಾಸನಿಗಿಂತ ಬೇರೆಯಾದವನು ಎಂದು ಉತ್ತಮವಾಗಿ ವಿವೇಚಿಸಿದ್ದಾರೆ. ದೇಹ ಮೊದಲಾದವುಗಳೊಡನೆ ಅವನಿಗೆ ಎಷ್ಟೂ ಸಂಬಂಧವಿರುವದಿಲ್ಲ. ಎಂದು ಆತ್ಮನ ಅವಿನಾಶಿತ್ವಕ್ಕೆ ಅಸಂಗತ್ವವು ಒಂದು ಕಾರಣವೆಂದು ಹೇಳಿದ್ದಾರೆ.

(ಅವಿನಾಶೀವಾ ಅರೇ ಅಯಮಾತ್ಮಾ ಎಂಬಶ್ರುತಿ ಕಾಣ್ವಶಾಖೆಯದು. ಅಮಾತ್ರಾಸಂಸರ್ಗಸ್ತ್ವಸ್ಯಭವತಿ ಎಂಬುದು ಮಾಧ್ಯಂದಿನ ಶಾಖೆಯದು)

—'ಜೀವಾಪೇತಂ' ಎಂಬ ಶ್ರುತಿಯಲ್ಲಿ ಔಪಾಧಿಕ ಜೀವನಿಗೂ ಕೂಡ ಅವಿನಾಶಿತ್ವವನ್ನು ಹೇಳಿದ್ದಾರೆ.

**ಜೀವಾಪೇತಂ ವಾವ ಕಿಲ ಶರೀರಂ ಮ್ರಿಯತೇ ನ ಸಃ ।**
**ಇತ್ಯತ್ರ ನ ವಿಮೋಕ್ಷೋಽರ್ಥಃ ಕಿಂತು ಲೋಕಾಂತರೇ ಗತಿಃ ॥೪೧॥**

ಜೀವವು ತ್ಯಜಿಸಿದ ಶರೀರವು ಸಾಯುವದೇ ಹೊರತು ಜೀವನು ಸಾಯುವದಿಲ್ಲ ಎಂಬ ಶ್ರುತಿಯಲ್ಲಿ ಮೋಕ್ಷರೂಪ ಅರ್ಥವನ್ನು ಹೇಳಿಲ್ಲ. ಜೀವನ ದೇಹಾಂತರಗತಿಯನ್ನು ಹೇಳಿದ್ದಾರೆ.

—ಆದರೆ ಜೀವನು ನಾಶವಾಗುವವನೆಂದು ತಿಳಿದರೆ ಅವನು ಅವಿನಾಶಿಯಾದ ಬ್ರಹ್ಮದೊಡನೆ 'ನಾನು ಬ್ರಹ್ಮ' ನೆಂದು ತಾದಾತ್ಮ್ಯ ಜ್ಞಾನ ಪಡೆಯುವದು ಹೇಗೆ?

**ನಾಹಂ ಬ್ರಹ್ಮೇತಿ ಬುಧ್ಯೇತ ಸ ವಿನಾಶೀತಿ ಚೇನ್ನ ತತ್ ।**
**ಸಾಮಾನಾಧಿಕರಣ್ಯಸ್ಯ ಬಾಧಾಯಾಮಪಿ ಸಂಭವಾತ್ ॥೪೨॥**

ಆ ವಿನಾಶಿಯಾದ ಜೀವನು 'ನಾನು ಬ್ರಹ್ಮ' ಎಂದು ತಿಳಿಯಲಾರನೆನ್ನುವೆಯಾದರೆ ಅದು ಸರಿಯಲ್ಲ. ಯಾಕಂದರೆ ಸಮಾನಾಧಿಕರಣ ಭಾವವು ಬಾಧೆಯಲ್ಲಿ ಕೂಡ ಸಂಭವಿಸುವದು.

(ಸಾಮಾನಾಧಿಕರಣ್ಯದಲ್ಲಿ ಮುಖ್ಯ–ಹಾಗೂ ಬಂಧ ಸಾಮಾನಾಧಿಕರಣ್ಯವೆಂದು ಎರಡು ವಿಧ. ಒಂದು ಆಶ್ರಯವನ್ನವಲಂಬಿಸಿ ಇರುವ ಅನೇಕ ಧರ್ಮಗಳಲ್ಲಿ ಸಾಮಾನಾಧಿಕರಣ್ಯ ವಿರುತ್ತದೆ. ಉದಾ:— ಗೋವಿನಲ್ಲಿರುವ ಗೋತ್ವ, ಕೆಂಪಾಗಿರುವಿಕೆ, ಸಾಧುತ್ವ ಇತ್ಯಾದಿಧರ್ಮಗಳು ಪರಸ್ಪರ ಸಾಮಾನಾಧಿಕರಣವೆನಿಸುವವು. ಕಾರ್ಯ–ಮತ್ತು ಕಾರಣಗಳು ಒಂದೇ ಎಂದು ಸಾಂಖ್ಯ ಹಾಗೂ ವೇದಾಂತ ಶಾಸ್ತ್ರಗಳು ಹೇಳುತ್ತವೆ. ಆದುದರಿಂದ ಅವುಗಳಲ್ಲಿ ಸಾಮಾನಾಧಿಕರಣ್ಯ ಸಂಬಂಧವಿದೆ. ಬೇರೆ ಬೇರೆಯಲ್ಲದ ಎರಡುವಸ್ತುಗಳಲ್ಲಿರುವ ಸಾಮಾನಾಧಿಕರಣ್ಯವು ಮುಖ್ಯವೆನಿಸುವದು. ಹೇಗಂದರೆ ಘಟಾಕಾಶ ಮತ್ತು ಮಹಾಕಾಶಗಳಲ್ಲಿ ನಿತ್ಯತಾದಾತ್ಮ್ಯವಿರುತ್ತದೆ. ಆದುದರಿಂದ ಅವುಗಳಲ್ಲಿರುವದು ಮುಖ್ಯಸಾಮಾನಾಧಿಕರಣ. ಭ್ರಮೆಯಿಂದುಂಟಾದ ವಸ್ತುಗಳಬಾಧವಾಗಿ ಆ ಮೇಲೆ ಆ ವಸ್ತು ಯಾವ ಆಶ್ರಯಭೂತ ಮೂಲ ವಸ್ತುವಿನೊಡನೆ ತಾದಾತ್ಮ್ಯಪಡೆಯುವುದೋ ಆ ಆಶ್ರಯಭೂತ– ಹಾಗೂ ಭ್ರಾಮಕ ವಸ್ತುಗಳ ನಡುವಿನ ಸಂಬಂಧವು ಬಾಧ ಸಾಮಾನಾಧಿಕರಣ್ಯ. ಸ್ಥಾಣು ಪುರುಷ, ರಜ್ಜು, ಸರ್ಪ, ಕನ್ನಡಿಯಲ್ಲಿ ಮೂಡಿದ ಪ್ರತಿಬಿಂಬ ಇವು ಬಾಧ ಸಾಮಾನಾಧಿಕರಣ್ಯದ ಉದಾಹರಣೆಗಳು. ಮೇಲಿನ ಶ್ಲೋಕದಲ್ಲಿ ವಿನಾಶಿಯಾದ ಜೀವ ಮತ್ತು ಅವಿನಾಶಿಯಾದ ಬ್ರಹ್ಮ ಇವರಲ್ಲಿ ಒಂದು ವಿಭಕ್ತಿ ಪ್ರತ್ಯಯವುಳ್ಳ ಸಾಮಾನಾಧಿಕರಣ್ಯವು ಅಶಕ್ಯ. ಆದರೂ ಇಲ್ಲಿ ಬಾಧ ಸಾಮಾನಾಧಿಕರಣ್ಯವು ಅಶಕ್ಯವಲ್ಲ. ಕನ್ನಡಿಯನಾಶವಾದೊಡನೆ ಅದರಲ್ಲಿ ಮೂಡಿದ

ಆಭಾಸ ಮುಖಕ್ಕೆ ಬಾಧವುಂಟಾಗಿ ಅದು ನಿಜವಾದ ಮುಖದಲ್ಲಿ ಒಂದು ಗೂಡುವಂತೆ ಬಾಧ ಸಾಮಾನಾಧಿಕರಣ್ಯದಿಂದ ಅಭೇದ ಜ್ಞಾನವು ಸಂಭವಿಸುವದು ಎಂದರೆ ನಾನು ಬ್ರಹ್ಮ, ಎಂಬ ವಾಕ್ಯ ಜ್ಞಾನದಿಂದ ಜೀವಭಾವವು ನಾಶವಾಗಿ ಬ್ರಹ್ಮ ಭಾವವನ್ನು ಹೊಂದಲು ಶಕ್ಯ.) —ಅದು ಹೇಗೆ?

**ಯೋಽಯಂ ಸ್ಥಾಣುಃ ಪುಮಾನೇಷ ಪುಂಧಿಯಾ**
**ಸ್ಥಾಣುಧೀರಿವ ।**
**ಬ್ರಹ್ಮಾಸ್ಮೀತಿ ಧಿಯಾ ಶೇಷಾಪ್ಯಹಂಬುದ್ಧಿರ್ನಿವರ್ತ್ಯತೇ॥೪೩॥**

ಈ ಮೋಟು ಮರವೆಂದು ಕಾಣುವದು ಒಬ್ಬ ಪುರುಷ ಎಂಬ ವಾಕ್ಯದಲ್ಲಿ ಪುರುಷತ್ವ ಜ್ಞಾನದಿಂದ ಸ್ಥಾಣುಬುದ್ಧಿಯು ತೊಲಗುವದು. ಅದರಂತೆ ನಾನು ಬ್ರಹ್ಮ, ಎಂಬ ಜ್ಞಾನದಿಂದ ಸ್ವಲ್ಪವೂ ಉಳಿಯದೇ ಅಹಂಬುದ್ಧಿಯು ತೊಲಗುವದು.

(ಅಹಂಬುದ್ಧಿ ಎಂದರೆ ನಾನು ಎಂಬಬುದ್ಧಿ. ಅದರಿಂದ ಕರ್ತೃತ್ವ-ಭೋಕ್ತೃತ್ವ ಮೊದಲಾದವು ಅರ್ಥಾತ್ ಸಂಸಾರಿತ್ವದಜ್ಞಾನ ಇದೆಲ್ಲ ನಾಶವಾಗುವದು. ಇದರಿಂದ 'ತತ್ವಮಸಿ'ಯೇ ಮೊದಲಾದ ಮಹಾ ವಾಕ್ಯದಲ್ಲಿಯ ಪದಗಳ ಬಾಧ ಸಾಮಾನಾಧಿಕರಣ್ಯವು ಸಿದ್ಧವಾಗುವದು.)

**ನೈಷ್ಕರ್ಮ್ಯಸಿದ್ಧಾವಪ್ಯೇವ ಮಾಚಾರ್ಯೈಃ ಸ್ಪಷ್ಟಮೀರಿತಮ್।**
**ಸಾಮಾನಾಧಿಕರಣ್ಯಸ್ಯ ಬಾಧಾರ್ಥತ್ವಮತೋಽಸ್ತು ತತ್ ॥೪೪॥**

ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಸುರೇಶ್ವರಾಚಾರ್ಯರು ನೈಷ್ಕರ್ಮ್ಯ ಸಿದ್ಧಿ ಎಂಬ ಗ್ರಂಥದಲ್ಲಿ ಸಾಮಾನಾಧಿಕರಣ್ಯದ ಬಾಧಾರ್ಥತೆಯನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಆದುದರಿಂದ 'ನಾನು ಬ್ರಹ್ಮ' ವೆಂಬ ವಾಕ್ಯದಲ್ಲಿ ಬಾಧ ಸಾಮಾನಾಧಿಕರಣ್ಯವಿರಲಿ.

(ಆಚಾರ್ಯ ಶಬ್ದದವ್ಯಾಖ್ಯೆಯು :— ಆಚಿನೋತಿ ಶಾಸ್ತ್ರಾರ್ಥ ಮಾಚಾರೇ ಸ್ಥಾಪಯತ್ಯಪಿ। ಸ್ವಯಮ ವ್ಯಾಚರೇದ್ಯಸ್ತು ಸ ಆಚಾರ್ಯ ಇತಿ ಸ್ಮೃತಃ॥)

—ಆದರೂ ಶ್ರುತಿಯಲ್ಲಿ ಬಂಧ ಸಾಮಾನಾಧಿಕರಣ್ಯವು ಎಲ್ಲಿಯೂ ಕಂಡು ಬರುವದಿಲ್ಲ.

**ಸರ್ವಂ ಬ್ರಹ್ಮೇತಿ ಜಗತಾ ಸಾಮಾನಾಧಿ ಕರಣ್ಯವತ್ ।**
**ಅಹಂ ಬ್ರಹ್ಮೇತಿ ಜೀವೇನ ಸಾಮಾನಾಧಿಕೃತಿರ್ಭವೇತ್ ॥೪೫॥**

'ಎಲ್ಲವೂ ಬ್ರಹ್ಮ' ಎಂಬ ವಾಕ್ಯದಲ್ಲಿ ಜಗತ್ತಿಗೆ ಬ್ರಹ್ಮನ ಸಾಮಾನಾಧಿ ಕರಣ್ಯವನ್ನು ಹೇಳಿದೆ. ಅದರಂತೆ 'ನಾನು ಬ್ರಹ್ಮ' ಎಂಬ ವಾಕ್ಯದಲ್ಲಿ ಜೀವ ನಿಗೆ ಬ್ರಹ್ಮನ ಸಾಮಾನಾಧಿಕರಣ್ಯವಾಗುವದು.

(ಮಾಂಡೂಕ್ಯೋಪನಿಷತ್ತಿನಲ್ಲಿ 'ಸರ್ವಂ ಹಿ ಏತತ್ ಬ್ರಹ್ಮ' ಎಂಬ ವಾಕ್ಯಬಂದಿದೆ. ಬೃಹದಾರಣ್ಯಕದಲ್ಲಿ 'ಇದಂ ಸರ್ವಂ ಯದಯಮಾತ್ಮಾ' ಎಂಬವಾಕ್ಯವಿದೆ. ಇವುಗಳಲ್ಲಿ ಬಾಧಸಾಮಾನಾಧಿಕರಣ್ಯವೇ ವಿವಕ್ಷಿತವಿದೆ.)

—ಹೀಗಿದ್ದಮೇಲೆ ಶ್ರೀ ಪ್ರಕಾಶಾತ್ಮ ಮುನಿಗಳು 'ವಿವರಣಾ' ಗ್ರಂಥ ದಲ್ಲಿ ಬಂಧ ಸಾಮಾನಾಧಿಕರಣ್ಯವನ್ನು ಯಾಕೆ ನಿರಾಕರಣಮಾಡಿದರು?

**ಸಾಮಾನಾಧಿ ಕರಣ್ಯಸ್ಯ ಬಾಧಾರ್ಥತ್ವಂ ನಿರಾಕೃತಮ್ ।**
**ಪ್ರಯತ್ನತೋ ವಿವರಣೇ ಕೂಟಸ್ಥತ್ವ ವಿವಕ್ಷಯಾ ॥೪೬॥**

ವಿವರಣೆಯಲ್ಲಿ ಕೂಟಸ್ಥನೆಂದು ಪ್ರತಿಪಾದಿಸುವ ಇಚ್ಛೆಯಿಂದ ಸಾಮಾ ನಾಧಿಕರಣ್ಯಕ್ಕೆ ಬಾಧ ಅರ್ಥವಿಲ್ಲ ಎಂದು ಪ್ರಯತ್ನಪೂರ್ವಕವಾಗಿ ನಿರಾ ಕರಿಸಿದ್ದಾರೆ.

(ಅವರು 'ನಾನು' ಎಂಬ ಶಬ್ದಕ್ಕೆ ಚಿದಾಭಾಸನೆಂದು ಅರ್ಥವಿಟ್ಟು ಕೊಳ್ಳದೇ ಕೂಟಸ್ಥನೆಂದು ಹೇಳಬೇಕೆಂಬ ಅಭಿಪ್ರಾಯದಿಂದ ಹಾಗೆ ಹೇಳಿ ದ್ದಾರೆ. ನಿರುಪಾಧಿಕವಾದ 'ಅಹಂ' (ನಾನು) ಶಬ್ದದ ಅರ್ಥವೇ ಕೂಟಸ್ಥ. ಇದನ್ನು ಸಾಧಿಸಬೇಕೆಂದು ಅವರು 'ಅಹಂ' ಮತ್ತು 'ಬ್ರಹ್ಮ'ರಲ್ಲಿ ಬಾಧ ಸಾಮಾನಾಧಿಕರಣ್ಯವನ್ನು ನಿರಾಕರಿಸಿದ್ದಾರೆ. ಅಷ್ಟರರಿಂದ ಸೋಪಾಧಿಕ 'ಅಹಂ' ಮತ್ತು 'ಬ್ರಹ್ಮ'ರಲ್ಲಿ ಬಾಧಸಾಮಾನಾಧಿಕರಣ್ಯವಿಲ್ಲ ಎಂದೇನೂ ತಿಳಿಯಬೇಕಾಗಿಲ್ಲ. ಯಾಕಂದರೆ ವಿವರಣಕಾರರೂ ಪ್ರತಿಬಿಂಬವಾದಿಗಳು ಎಂಬುದಾಗಿ ಅವರಗ್ರಂಥಗಳಿಂದ ತಿಳಿಯುತ್ತದೆ.)

—ಕೂಟಸ್ಥತ್ವ ವಿವಕ್ಷಯಾ, ಎಂಬ ಅರ್ಥದ ವಿವರಣೆ.

**ಶೋಧಿತಸ್ತ್ವಂಪದಾರ್ಥೋ ಯಃ ಕೂಟಸ್ಥೋ ಬ್ರಹ್ಮರೂಪತಾಮ್ ।**
**ತಸ್ಯ ವಕ್ತುಂ ವಿವರಣೇ ತಥೋಕ್ತಮಿತರತ್ರ ಚ ॥೪೭॥**

'ನಾನು' ಎಂಬ ಶಬ್ದಾರ್ಥವನ್ನು ಬುದ್ಧಿ ಮೊದಲಾದವುಗಳಿಂದ ಬೇರೆ ಮಾಡಿ ನೋಡಿದಾಗ ಲಕ್ಷಣಾವೃತ್ತಿಯಿಂದ ತೋರಿದ ಕೂಟಸ್ಥನು ಬ್ರಹ್ಮ ರೂಪನೆಂದು ಹೇಳುವದಕ್ಕಾಗಿ ವಿವರಣೆಯಲ್ಲಿ ಮತ್ತು ಬೇರೆ ಕೆಲವು ಗ್ರಂಥಗಳಲ್ಲಿ ಹಾಗೆ ಹೇಳುತ್ತಾರೆ.

(ವಿವರಣಕಾರರಂತೆ ಭಾಮತಿಕಾರರೂ ಅಭಿಪ್ರಾಯಪಡುತ್ತಾರೆ ಎಂದರೆ ಜೀವ ಬ್ರಹ್ಮರಲ್ಲಿ ಮುಖ್ಯ ಸಾಮಾನಾಧಿಕರಣ್ಯವಿದೆ. ಬಾಧ ಸಾಮಾನಾಧಿಕರಣ್ಯವಿಲ್ಲ. ಹೀಗೆ ಹೇಳುವ ರೀತಿಯಲ್ಲಿ ಭಿನ್ನತೆ ಕಂಡರೂ ಕೊನೆಯ ಫಲಿತಾಂಶವು ಎಲ್ಲರದೂ ಒಂದೇ ಆಗುತ್ತದೆ.)

—ಕೂಟಸ್ಥನೆಂದರಾದರೂ ಯಾರು ?

**ದೇಹೇಂದ್ರಿಯಾದಿಯುಕ್ತಸ್ಯ ಜೀವಾಭಾಸ ಭ್ರಮಸ್ಯ ಯಾ ।**
**ಅಧಿಷ್ಠಾನ ಚಿತಿಃ ಸೈಷಾ ಕೂಟಸ್ಥಾತ್ರ ವಿವಕ್ಷಿತಾ ॥೪೮॥**

ದೇಹ, ಇಂದ್ರಿಯ ಮೊದಲಾದವುಗಳಿಂದ ಕೂಡಿದ ಜೀವಾಭಾಸನ ಭ್ರಮಕ್ಕೆ ಆಶ್ರಯರೂಪವಾದ ಚೈತನ್ಯಕ್ಕೆ ಇಲ್ಲಿ ಕೂಟಸ್ಥನೆಂದು ಹೇಳುವರು.

(ಅಧಿಷ್ಠಾನ=ಆಶ್ರಯವಿಲ್ಲದೇ ಭ್ರಮೆಯು ಉಂಟಾಗುವದಿಲ್ಲವೆಂದು ಹಿಂದೆ ಹೇಳಿದೆ.)

—ಬ್ರಹ್ಮ ಶಬ್ದದ ಅರ್ಥ.

**ಜಗತ್ ಭ್ರಮಸ್ಯ ಸರ್ವಸ್ಯ ಯದಧಿಷ್ಠಾನಮೀರಿತಮ್ ।**
**ತ್ರಯ್ಯಂತೇಷು ತದತ್ರ ಸ್ಯಾದ್ಬ್ರಹ್ಮ ಶಬ್ದ ವಿವಕ್ಷಿತಮ್ ॥೪೯॥**

ಎಲ್ಲ ಜಗತ್ತಿನ ರೂಪವಾದ ಭ್ರಮಕ್ಕೆ ಆಧಾರವೆಂದು ವೇದಾಂತ ಶಾಸ್ತ್ರದಲ್ಲಿ ಹೇಳಿರುವ ಚೈತನ್ಯವೇ ಇಲ್ಲಿ ಬ್ರಹ್ಮವೆಂದು ತಿಳಿಯಬೇಕು.

—ಈಗ ಚಿದಾಭಾಸನಿಗೆ ಕಲ್ಪಿತತ್ವವನ್ನು ಕೈಮುತಿಕ ನ್ಯಾಯದಿಂದ ಸಾಧಿಸುತ್ತಾರೆ.

**ಏತಸ್ಮಿನ್ನೇವ ಚೈತನ್ಯೇ ಜಗದಾರೋಪ್ಯತೇ ಯದಾ ।**
**ತದಾ ತದೇಕದೇಶಸ್ಯ ಜೀವಾಭಾಸಸ್ಯ ಕಾ ಕಥಾ ॥೫೦॥**

ಇದೇ ಬ್ರಹ್ಮ ಚೈತನ್ಯದಲ್ಲಿ ಎಲ್ಲ ಜಗತ್ತಿನ ಆರೋಪವಾಗಿರಲಾಗಿ, ಈ ಜಗತ್ತಿನ ಸಣ್ಣ ಭಾಗವಾದ ಚಿದಾಭಾಸನ ಆರೋಪದ ಮಾತೇನು ?

—ಜಗತ್ತಿನ ಅಧಿಷ್ಠಾನವೇ ಎಲ್ಲದರ ಅಧಿಷ್ಠಾನವಾದರೆ ತತ್-ತ್ವಂ ಪದಾರ್ಥದಲ್ಲಿ ಭೇದವಿಲ್ಲ. ಎಂದಮೇಲೆ ತತ್-ತ್ವಂ ಎಂದರೆ ಪುನರುಕ್ತಿ ದೋಷವು ಸಂಭವಿಸುವದು. ಎಂದರೆ—

**ಜಗತದೇಕದೇಶಾಖ್ಯ ಸಮಾರೋಪ್ಯಸ್ಯ ಭೇದತಃ ।**
**ತತ್ವಂ ಪದಾರ್ಥೌ ಭಿನ್ನೌ ಸ್ತೋ ವಸ್ತು ತತ್ವೇಕತಾಚಿತೌ॥೩೧॥**

(ಜಗತ್ತು ಮತ್ತು ತದೇಕ ದೇಶವೆಂಬ ಆರೋಪಿತ ವಸ್ತುಗಳ ಉಪಾಧಿ ಭೇದದ ದೆಸೆಯಿಂದ ಅಧಿಷ್ಠಾನದಲ್ಲಿ ಭೇದವು ತೋರುವದು. ಆದರೆ ಭೇದವು ಔಪಾಧಿಕ, ನಿಜವಲ್ಲ.

ಚಿದಾಭಾಸನಲ್ಲಿ ಆರೋಪ್ಯ ಮತ್ತು ಅಧಿಷ್ಠಾನಗಳ ಧರ್ಮಗಳು ಕಂಡು ಬರುವದರಿಂದ ಅವನು ಭ್ರಮರೂಪನು.

**ಕರ್ತೃತ್ವಾದೀನ್ ಬುದ್ಧಿಧರ್ಮಾನ್ ಸ್ಫೂರ್ತ್ಯಾಖ್ಯಾಂ**
**ಚಾತ್ಮರೂಪತಾಮ್ ।**
**ದಧದ್ವಿಭಾತಿ ಪುರತ ಆಭಾಸೋಽತೋ ಭ್ರಮೋಭವೇತ್ ॥೩೨॥**

ಕರ್ತೃತ್ವಾದಿ ಎಂದರೆ ನಾನು ಮಾಡುವವ ಮುಂತಾದ ಬುದ್ಧಿ ಧರ್ಮಗಳನ್ನು ಸ್ಫೂರ್ತಿ ಎಂಬ ಆತ್ಮನ ಸ್ವರೂಪವನ್ನು ಧಾರಣಮಾಡುವ ಆಭಾಸನು ಸ್ಪಷ್ಟವಾಗಿ ಗೋಚರಿಸುವನು. ಆದುದರಿಂದ ಅವನು ಭ್ರಮರೂಪನು.

(ರಜ್ಜುವಿನ ಅಜ್ಞಾನದಿಂದ ತೋರುವ ಸರ್ಪದಲ್ಲಿ ಕೆಲವು ರಜ್ಜುವಿನಧರ್ಮಗಳು, ಕೆಲವು ಸರ್ಪದವು ಕಾಣುತ್ತವೆ. ಗಾತ್ರ, ಉದ್ದಳತೆ, ಇದಂ ಅಂಶ ಇವು ರಜ್ಜುಧರ್ಮಗಳು. ಭ್ರಮೆಯಿಂದ ತೋರುತ್ತಿರುವ ಚಟುವಟಿಕೆ, ಮೋರೆ, ಬಾಲ ಇತ್ಯಾದಿ ಸರ್ಪದ ಧರ್ಮಗಳು. ಹೀಗಾಗುವದಕ್ಕೆ ಭ್ರಮವೆನ್ನುವರು. ಇದರಂತೆ ಚಿದಾಭಾಸನಲ್ಲಿ ಕರ್ತೃತ್ವ, ಭೋಕ್ತೃತ್ವ, ಪ್ರಮಾತೃತ್ವ ಇತ್ಯಾದಿ ಬುದ್ಧಿಧರ್ಮಗಳು ಮತ್ತು ಸ್ಫೂರ್ತಿ ಎಂಬ ಆತ್ಮಧರ್ಮವು ಸ್ಪಷ್ಟವಾಗಿ ಅನುಭವಕ್ಕೆ ಬರುತ್ತವೆ. ಆದುದರಿಂದ ಅವನು ಭ್ರಮವೆಂದು ಸಿದ್ಧವಾಗುತ್ತದೆ.)

—ಈ ಭ್ರಮೆಗೆ ಕಾರಣವೇನು ?

**ಕಾ ಬುದ್ಧಿಃ ಕೋಽಯಮಾಭಾಸಃ ಕೋ ವಾತ್ಮಾಽತ್ರ**
**ಜಗತ್ಕಥಮ್ ।**
**ಇತ್ಯನಿರ್ಣಯತೋ ಮೋಹಃ ಸೋಽಯಂ ಸಂಸಾರಇಷ್ಯತೇ॥೩೩॥**

ಬುದ್ಧಿ ಎಂದರೆ ಯಾವದು ? ಚಿದಾಭಾಸನೆಂದರೆ ಯಾರು ? ಇವರಲ್ಲಿ ಆತ್ಮನುಯಾರು? ಈ ಆತ್ಮನಲ್ಲಿ ಜಗತ್ತು ಹೇಗೆಕಾಣುವದು? ಇವೆಲ್ಲ ನಿರ್ಣಯ ಮಾಡಿಕೊಳ್ಳದಿರುವದರಿಂದ ಉಂಟಾಗುವ ಮೋಹವೇ ಸಂಸಾರವೆನಿಸುವದು.

—ಇರಲಿ. ಈ ಮೋಹರೂಪ ಸಂಸಾರದ ನಿವೃತ್ತಿ ಹೇಗೆ ?

**ಬುದ್ಧ್ಯಾದೀನಾಂ ಸ್ವರೂಪಂ ಯೋ ವಿವಿನಕ್ತಿ ಸ ತತ್ತ್ವವಿತ್ ।**
**ಸ ಏವ ಮುಕ್ತ ಇತ್ಯೇವಂ ವೇದಾಂತೇಷು ವಿನಿಶ್ಚಯಃ ॥೫೪॥**

ಬುದ್ಧಿ ಮೊದಲಾದವುಗಳ ಸ್ವರೂಪವನ್ನು ಯಾವನು ಬಿಡಿಸಿ ತಿಳಿದು ಕೊಳ್ಳುವನೋ ಅವನೇ ತತ್ತ್ವವನ್ನು ತಿಳಿದವನು. ಅವನೇ ಮುಕ್ತನು ಎಂದು ವೇದಾಂತದಲ್ಲಿ ನಿಶ್ಚಯ ಮಾಡಲಾಗಿದೆ.

—ಹೀಗೆ ಬಂಧ ಮತ್ತು ಮೋಕ್ಷಗಳಿಗೆ ಅವಿವೇಕವೇ ಕಾರಣವೆಂದು ಹೇಳಿದ ಮೇಲೆ ಅದ್ವೈತ ವಾದದಲ್ಲಿ ಬಂಧನವು ಯಾರಿಗೆ ? ಮೋಕ್ಷವು ಯಾರಿಗೆ ? ಎಂದು ಮೊದಲಾಗಿ ತಾರ್ಕಿಕರು ಶ್ರುತಿ ವಿರುದ್ಧ ವಾದವನ್ನು ಆರಂಭಿಸುವರು. ಅವರ ವಾದಗಳನ್ನು ಶ್ರೀ ಹರ್ಷಮಿಶ್ರರು ಖಂಡನ ಖಂಡ ಖಾದ್ಯವೆಂಬ ಗ್ರಂಥದಲ್ಲಿ ಚನ್ನಾಗಿ ಖಂಡಿಸಿರುವರು. ಆ ರೀತಿಯಾಗಿ ತಾರ್ಕಿಕರನ್ನು ಖಂಡಿಸಬೇಕು ಎನ್ನುತ್ತಾರೆ.

**ಏವಂ ಚ ಸತಿ ಬಂಧಃ ಸ್ಯಾತ್‌ಕಸ್ಯೇತ್ಯಾದಿ ಕುತರ್ಕಜಾಃ ।**
**ವಿಡಂಬನಾ ದೃಢಂ ಖಂಡ್ಯಾಃ ಖಂಡನೋಕ್ತಿ ಪ್ರಕಾರತಃ॥೫೫॥**

ಹೀಗಿರುವದರಿಂದ 'ಬಂಧನವು ಯಾರಿಗಾಗುವದು ?' ಇತ್ಯಾದಿ ರೀತಿ ಯಿಂದ ತಾರ್ಕಿಕರು ಮಾಡುವ ಕುತರ್ಕರೂಪ ಪರಿಹಾಸಗಳನ್ನು 'ಖಂಡನ ಖಂಡಖಾದ್ಯ'ವೆಂಬ ಗ್ರಂಥದಲ್ಲಿ ಹೇಳಿದಂತೆ ಖಂಡಿಸಲು ಯೋಗ್ಯವೆನ್ನಬೇಕು.

—ಈ ರೀತಿ ಶ್ರುತಿ ಮತ್ತು ಯುಕ್ತಿಗಳಿಂದ ಕೂಟಸ್ಥನನ್ನು ಬುದ್ಧಿ ಮೊದಲಾದವುಗಳಿಂದ ಬೇರ್ಪಡಿಸಿ ತೋರಿಸಿ ಪುರಾಣದಲ್ಲಿ ಕೂಡ ಇದರ ವಿವೇಕವಿದೆ ಎನ್ನುತ್ತಾರೆ.

**ವೃತ್ತೇಃ ಸಾಕ್ಷಿತಯಾ ವೃತ್ತಿಪ್ರಾಗಭಾವಸ್ಯ ಚ ಸ್ಥಿತಃ ।**
**ಬುಭುತ್ಸಾಯಾಂ ತಥಾಽಜ್ಞೋಽಸ್ಮೀತ್ಯಾಭಾಸಾ**
**ಜ್ಞಾನವಸ್ತುನಃ ॥೫೬॥**

ವೃತ್ತಿಗಳು ಹುಟ್ಟಿದಾಗ, ಅವು ಹುಟ್ಟುವದಕ್ಕೆ ಮೊದಲು, ನಾನು ಯಾರೆಂದು ತಿಳಿಯುವ ಇಚ್ಛೆಯುಂಟಾದಾಗ, ಆ ಇಚ್ಛೆಯುಂಟಾಗುವದಕ್ಕೆ ಮೊದಲು 'ನಾನು ಅರಿಯದವನು' ಎಂದು ಅನುಭವಕ್ಕೆ ಬರುವ ಅಜ್ಞಾನಕ್ಕೆ ಹೀಗೆ ಎಲ್ಲಕ್ಕೂ ಸಾಕ್ಷಿಯಾಗಿ ಶಿವನೇ ಇರುವನು.

(ಈ ಶ್ಲೋಕ ಮತ್ತು ಇದರ ಮುಂದಿನ ಎರಡು ಶ್ಲೋಕಗಳು ಶೈವ ಪುರಾಣದೊಳಗಿನವು.)

**ಅಸತಾ್ಯಲಂಬನತ್ವೇನ ಸತ್ಯಃ ಸರ್ವಜಡಸ್ಯ ತು ।**
**ಸಾಧಕತ್ವೇನ ಚಿದ್ರೂಪಃ ಸದಾ ಪ್ರೇಮಾಸ್ಪದ ತತ್ವಃ ॥೩೭॥**
**ಅನಂದ ರೂಪಃ ಸರ್ವಾರ್ಥಸಾಧಕತ್ವೇನ ಹೇತುನಾ ।**
**ಸರ್ವಸಂಬಂಧವತ್ವೇನ ಸಂಪೂರ್ಣಃ ಶಿವಸಂಜ್ಞಿತಃ ॥೩೮॥**

ಈ ಶಿವ ಸಂಜ್ಞಕನಾದ ಕೂಟಸ್ಥನು ಸುಳ್ಳಾದ ಜಗತ್ತಿಗೆ ಆಶ್ರಯರೂಪ ನಾದುದರಿಂದ ಸತ್ಯ. ಜಡ ಪದಾರ್ಥಗಳನ್ನೆಲ್ಲ ಬೆಳಗುವವನಾದುದರಿಂದ ಚಿದ್ರೂಪ. ಪರಮ ಪ್ರೀತಿಗೆ ಪಾತ್ರನಾದುದರಿಂದ ಆನಂದರೂಪ. ಮತ್ತು ಎಲ್ಲ ಪದಾರ್ಥಗಳನ್ನು ಬೆಳಗುವವನಾದುದರಿಂದ, ಎಲ್ಲವುಗಳ ಸಂಬಂಧ ಪಡೆದವನಾದುದರಿಂದ ಪರಿಪೂರ್ಣನು. —ಸಾರಾಂಶ.

**ಇತಿಶೈವ ಪುರಾಣೇಷು ಕೂಟಸ್ಥಃ ಪ್ರವಿವೇಚಿತಃ ।**
**ಜೀವೇಶತ್ವಾದಿ ರಹಿತಃ ಕೇವಲಃ ಸ್ವಪ್ರಭಃ ಶಿವಃ ॥೩೯॥**

ಹೀಗೆ ಶೈವ ಪುರಾಣದಲ್ಲಿ ಜೀವ-ಈಶ್ವರ ಮೊದಲಾದ ಭಾವರಹಿತನು, ಕೇವಲನು, ಸ್ವಯಂಪ್ರಕಾಶನು ಆದ ಶಿವನೆಂಬ ಹೆಸರಿನ ಕೂಟಸ್ಥನು ಬೇರೆ ಯಾಗಿ ಚನ್ನಾಗಿ ವಿವೇಚಿತನಾಗಿರುವನು.

—ಜೀವ-ಮೊದಲಾದ ಭಾವರಹಿತನೆಂದು ಯಾಕೆ ಹೇಳಬೇಕಾಯಿತು?

**ಮಾಯಾಭಾಸೇನ ಜೀವೇಶೌ ಕರೋತೀತಿ ಶ್ರುತತ್ವತಃ ।**
**ಮಾಯಿಕಾವೇವ ಜೀವೇಶೌ ಸ್ವಚ್ಛೌ ತೌ**
**ಕಾಚಕುಂಭವತ್ ॥೪೦॥**

ಮಾಯೆಯು ತನ್ನ ಮಲಿನಸತ್ವದಲ್ಲಿರುವ ಪ್ರತಿಬಿಂಬರೂಪನಾದ ಚಿದಾ ಭಾಸನಿಂದ ಜೀವನನ್ನೂ, ಶುದ್ಧ ಸತ್ವದಲ್ಲಿರುವ ಪ್ರತಿಬಿಂಬರೂಪನಾದ ಚಿದಾ

ಭಾಸನಿಂದ ಈಶ್ವರನನ್ನೂ ಉಂಟುಮಾಡುತ್ತದೆ ಎಂದು ಶ್ರುತಿ ಇರುವದರಿಂದ ಜೀವ ಮತ್ತು ಈಶ್ವರರು ಮಾಯಿಕ (ಸುಳ್ಳು) ಎಂದಂತಾಯಿತು. ಆದರೆ ಅವರು ಕಾಜಿನ ಗಡಿಗೆಯಂತೆ ಸ್ವಚ್ಛವಾಗಿರುವರು.

—ಕಾಜಿನ ಗಡಿಗೆಗೂ ಮಣ್ಣಿನ ಗಡಿಗೆಗೂ ಭೇದವಿರಲಿ. ಆದರೆ ಜಗತ್ತು-ಜೀವ-ಈಶ್ವರ ಇವುಗಳ ಭೇದ ತೋರಲು ಕಾರಣವಾದ ಮಾಯೆ ಒಂದೇ ಆದುದರಿಂದ ಅವುಗಳಲ್ಲಿ ವೈಲಕ್ಷಣ್ಯ ತೋರುವ ಕಾರಣವಿಲ್ಲ ಎಂದರೆ-

**ಅನ್ನಜನ್ಯಂ ಮನೋ ದೇಹಾತ್ಸ್ವಚ್ಛಂ ಯದ್ವತ್ ತಥೈವ ತೌ।**
**ಮಾಯಿಕಾವಪಿ ಸರ್ವಸ್ಮಾದನ್ಯಸ್ಮಾತ್ ಸ್ವಚ್ಛತಾಂ-**
**ಗತೌ ॥೬೧॥**

ಅನ್ನದಿಂದ ಹುಟ್ಟುವ ಮನಸ್ಸು, ಅದೇ ಅನ್ನದಿಂದ ಹುಟ್ಟಿದ ದೇಹಕ್ಕಿಂತ ಸ್ವಚ್ಛವಾಗಿರುವಂತೆ ಜೀವೇಶ್ವರರು ಮಾಯಿಕರಾದರೂ ಉಳಿದೆಲ್ಲವುಗಳಿಗಿಂತ ಸ್ವಚ್ಛತೆಯನ್ನು ಹೊಂದಿರುವರು.

—ಕಾಜಿನಂತೆ ಸ್ವಚ್ಛರಾಗಿರಲಿ. ಚೇತನರೂಪರು ಹೇಗೆ ?

**ಚಿದ್ರೂಪತ್ವಂ ಚ ಸಂಭಾವ್ಯಂ ಚಿತ್ತ್ವೇನೈವ ಪ್ರಕಾಶನಾತ್ ।**
**ಸರ್ವಕಲ್ಪನಶಕ್ತಾಯಾ ಮಾಯಾಯಾ ದುಷ್ಕರಂ ನ ಹಿ ॥೬೨॥**

ಚೈತನ್ಯದಿಂದಲೇ ಬೆಳಗುವವರಾದ ಕಾರಣ ಅವರು ಚಿದ್ರೂಪರಾಗುವದು ಸಂಭವನೀಯ. ಯಾಕಂದರೆ ಎಲ್ಲ ಕಲ್ಪನೆಗಳನ್ನು ಹುಟ್ಟಿಸುವ ಸಾಮರ್ಥ್ಯವುಳ್ಳ ಮಾಯೆಗೆ ಅದು ಅಸಾಧ್ಯವೇನೂ ಅಲ್ಲ.

—ಇದನ್ನೇ ಸಿದ್ಧಮಾಡುತ್ತಾರೆ.

**ಅಸ್ಮನ್ನಿದ್ರಾಽಪಿ ಜೀವೇಶೌ ಚೇತನೌ ಸ್ವಪ್ನಗೌ ಸೃಜೇತ್ ।**
**ಮಹಾಮಾಯಾ ಸೃಜತ್ಯೇತಾವಿತ್ಯಾಶ್ಚರ್ಯಂ ಕಿಮತ್ರ ತೇ ॥೬೩॥**

ನಮ್ಮ ನಿದ್ರೆಯೇ ನಮ್ಮ ಕನಸಿನ ಜೀವರನ್ನೂ, ಈಶ್ವರನನ್ನೂ ಕಲ್ಪಿಸಲು ಸಮರ್ಥವಾಗಿರುವಾಗ, ನಿಜವಾದ ಜೀವೇಶ್ವರರನ್ನು ಮಹಾಮಾಯೆ ಹುಟ್ಟಿಸುವದೆಂಬುದಕ್ಕೆ ನಿನಗೆ ಆಶ್ಚರ್ಯವೇಕೆ ?

—ಒಳ್ಳೇದು. ಈಶ್ವರನಿಗೆ ಕೂಡ ಮಾಯಿಕತ್ವವಿರುವದೆಂದರೆ ಅವನೂ ಜೀವನಂತೆ ಅಲ್ಪಜ್ಞನಾಗಬಹುದಲ್ಲ.

**ಸರ್ವಜ್ಞತ್ವಾದಿಕಂ ಚೇಶೇ ಕಲ್ಪಯಿತ್ವಾ ಪ್ರದರ್ಶಯೇತ್ ।**
**ಧರ್ಮಿಣಂ ಕಲ್ಪಯೇದಾsಸ್ಯಾಃ ಕೋ ಭಾರೋ**
**ಧರ್ಮಕಲ್ಪನೇ ॥೬೪॥**

ಸರ್ವಜ್ಞತ್ವವೇ ಮುಂತಾದವುಗಳನ್ನು ಈಶ್ವರನಲ್ಲಿ ಕಲ್ಪಿಸಿ ಮಾಯೆಯು ತೋರಿಸುವದು. ಧರ್ಮಿಯಾದ ಈಶ್ವರನನ್ನೇ ಕಲ್ಪಿಸಬಲ್ಲ ಮಾಯೆಗೆ ಅವನಲ್ಲಿ ಧರ್ಮಗಳನ್ನು ಕಲ್ಪಿಸುವದೊಂದು ಭಾರವೇ ?

( ಸರ್ವ ಜ್ಞಾನದ ಜೊತೆಗೆ ಸರ್ವ ಶಕ್ತಿತ್ವ–ಸರ್ವಕರ್ಮತ್ವವೆಂಬ ಶ್ರುತಿಯಲ್ಲಿ ಹೇಳಿದ ಈಶ್ವರನ ಧರ್ಮಗಳನ್ನೂ ಜೋಡಿಸಿಕೊಳ್ಳಬೇಕು. )

—ಜೀವೇಶ್ವರರಂತೆ ಕೂಟಸ್ಥನಿಗೂ ಮಾಯಿಕತ್ವವೆಂದು ಹೇಳಬಹುದೇ ?

**ಕೂಟಸ್ಥೇsಪ್ಯತಿಶಂಕಾ ಸ್ಯಾದಿತಿ ಚೇನ್ಮಾತಿ ಶಂಕ್ಯತಾಮ್ ।**
**ಕೂಟಸ್ಥ ಮಾಯಿಕತ್ವೇ ತು ಪ್ರಮಾಣಂ ನ ಹಿ-**
**ವಿದ್ಯತೇ ॥೬೫॥**

ಕೂಟಸ್ಥನ ವಿಷಯದಲ್ಲಿ ಮಾಯಿಕತ್ವದ ಅತಿಶಂಕೆಯು ತಲೆದೋರುವುದು ಎಂದರೆ ಹಾಗೆ ಅತಿ ಶಂಕೆಯನ್ನು ತಾಳಬಾರದು. ಯಾಕಂದರೆ ಕೂಟಸ್ಥನು ಮಾಯಿಕನೆಂಬುದಕ್ಕೆ ಯಾವ ಪ್ರಮಾಣಗಳೂ ಇಲ್ಲ.

**ವಸ್ತುತ್ವಂ ಘೋಷಯಂತ್ಯಸ್ಯ ವೇದಾಂತಾಃ ಸಕಲಾ ಅಪಿ ।**
**ಸಪತ್ನರೂಪಂ ವಸ್ತ್ವನ್ಯನ್ನ ಸಹಂತೇsತ್ರ ಕಿಂಚನ ॥೬೬॥**

ಅವನು ಯಾವಾಗಲೂ ಸತ್ಯರೂಪನೆಂದು ಉಪನಿಷತ್ತುಗಳು ಸಾರಿ ಹೇಳುವವು. ಕೂಟಸ್ಥನ ಜೊತೆಗೆ ಇನ್ನೊಂದು ಎದುರಾಳಿಯಾದುದು ಇತ್ತೆಂಬುದನ್ನು ಶ್ರುತಿಗಳು ಸ್ವಲ್ಪ ಕೂಡ ಸಹನಮಾಡಲಾರವು.

—ಕೂಟಸ್ಥನು ನತ್ಯ, ಜೀವೇಶ್ವರರು ಸುಳ್ಳು. ಎಂಬುದನ್ನೆಲ್ಲ ಸಿದ್ಧಮಾಡುವದಕ್ಕೆ ನೀವು ಶ್ರುತಿಯನ್ನು ಮಾತ್ರ ಉಲ್ಲೇಖಿಸುವಿರಿ. ತರ್ಕದಿಂದ ಏನೂ ಹೇಳುವದಿಲ್ಲವಲ್ಲ.

**ಶ್ರುತ್ಯರ್ಥಂ ವಿಶದೀಕುರ್ಮೋ ನ ತರ್ಕಾದ್ವಚ್ಮಿ ಕಿಂಚನ ।**
**ತೇನ ತಾರ್ಕಿಕ ಶಂಕಾನಾಮತ್ರ ಕೋsವಸರೋ ವದ ॥೬೭॥**

ನಾವು ಶ್ರುತಿಯ ಅರ್ಥವನ್ನು ಮಾತ್ರ ಸ್ಪಷ್ಟಪಡಿಸುತ್ತೇವೆ. ತರ್ಕದ ರೀತಿಯನ್ನು ಅನುಸರಿಸಿ ಎಷ್ಟು ಮಾತ್ರವೂ ಹೇಳುವದಿಲ್ಲ. ಎಂದ ಮೇಲೆ ಇಲ್ಲಿ ತಾರ್ಕಿಕರ ಶಂಕೆಗಳಿಗೆ ಅವಕಾಶದೊರೆಯುವುದು ಹೇಗೆ ಹೇಳು.

( ಕೆಲವು ಸಂದರ್ಭಗಳಲ್ಲಿ ತರ್ಕವನ್ನು ಉಪಯೋಗಿಸಿದರೂ ಅದರಿಂದ ಶ್ರುತಿಯ ಅರ್ಥವು ಬಲಪಡುವದಕ್ಕಾಗಿ ಹೊರತೂ ವಾದವಿವಾದದ ಉದ್ದೇಶದಿಂದಲ್ಲ. )

**ತಸ್ಮಾತ್ ಕುತರ್ಕಂ ಸಂತ್ಯಜ್ಯ ಮುಮುಕ್ಷುಃ**
**ಶ್ರುತಿಮಾಶ್ರಯೇತ್ ।**
**ಶ್ರುತೌ ತು ಮಾಯಾ ಜೀವೇಶೌ ಕರೋತೀತಿ**
**ಪ್ರದರ್ಶಿತಮ್ ॥೬೮॥**

ಆದುದರಿಂದ ಮೋಕ್ಷವನ್ನು ಬಯಸುವವನು ಕುತರ್ಕವನ್ನು ಬಿಟ್ಟು ಶ್ರುತಿಗೆ ಶರಣುಹೋಗಬೇಕು. ಆ ಶ್ರುತಿಯಲ್ಲಿ ಮಾಯೆಯೇ ಜೀವ-ಮತ್ತು ಈಶ್ವರರನ್ನು ಕಲ್ಪಿಸುವುದೆಂದು ಹೇಳಿದೆ.

**ಈಕ್ಷಣಾದಿ ಪ್ರವೇಶಾಂತಾ ಸೃಷ್ಟಿರೀಶಕೃತಾ ಭವೇತ್ ।**
**ಜಾಗ್ರದಾದಿ ವಿಮೋಕ್ಷಾಂತಃ ಸಂಸಾರೋ ಜೀವ-**
**ಕರ್ತೃಕಃ ॥೬೯॥**

ಎಲ್ಲ ಜಗತ್ತಿನ ರೂಪವಾಗುವೆನೆಂದು ಮನಸ್ಸಿನಲ್ಲಿ ಯೋಚನೆ ಮೂಡಿದುದು ಮೊದಲಗೊಂಡು ಜೀವರೂಪದಿಂದ ದೇಹದ ಒಳಹೊಕ್ಕವರೆಗಿನ ಸೃಷ್ಟಿ ಎಲ್ಲ ಈಶ್ವರನಿಂದಾದುದು. ಎಚ್ಚರವೇ ಮೊದಲಾದವನ್ನೊಳಗೊಂಡು ಮೋಕ್ಷದವರೆಗಿನ ಸಂಸಾರವು ಜೀವನದು.

**ಅಸಂಗ ಏವ ಕೂಟಸ್ಥಃ ಸರ್ವದಾ ನಾಸ್ಯ ಕಶ್ಚನ ।**
**ಭವತ್ಯತಿಶಯಸ್ತೇನ ಮನಸ್ಯೇವಂ ವಿಚಾರ್ಯತಾಮ್ ॥೭೦॥**

ಕೂಟಸ್ಥನು ಒಂದನ್ನೂ ಹಚ್ಚಿಕೊಳ್ಳದವನು. ಇವನಲ್ಲಿ ಯಾವ ಪ್ರಕಾರದ ಹೆಚ್ಚು ಕಡಿಮೆಗಳೂ ಆಗುವದಿಲ್ಲ. ಆದುದರಿಂದ ಮುಮುಕ್ಷುವು ಹೀಗೆ ಮನಸ್ಸಿನಲ್ಲಿ ವಿಚಾರ ಮಾಡಿಕೊಳ್ಳಬೇಕು.

( ಅತಿಶಯ=ಜನ್ಮವೇಮೊದಲಾದವುಗಳು. )

**ನ ನಿರೋಧೋ ನ ಚೋತ್ಪತ್ತಿರ್ನ ಬದ್ಧೋ ನಚ ಸಾಧಕಃ ।**
**ನ ಮುಮುಕ್ಷುರ್ನ ವೈಮುಕ್ತ ಇತ್ಯೇಷಾ ಪರಮಾರ್ಥತಾ॥೭೦॥**

ನಿಜವಾಗಿ ನಾಶವಿಲ್ಲ. ಮತ್ತು ಉತ್ಪತ್ತಿಯೂ ಇಲ್ಲ. ಬದ್ಧನಲ್ಲ, ಸಾಧಕನಲ್ಲ. ಮುಮುಕ್ಷುವಲ್ಲ. ಮುಕ್ತನಲ್ಲ. ಇದೇ ನಿಜ.

—ಚೇತನ ಒಂದೇ ಆದರೆ ಶ್ರುತಿಯು ಅನೇಕಕಡೆಗೆ ಜೀವ-ಈಶ್ವರ-ಜಗತ್ತು ಇವುಗಳ ಸ್ವರೂಪದ ವರ್ಣನೆ ಮಾಡುವದೇಕೆ ?

**ಅವಾಙ್ಮನಸಗಮ್ಯಂ ತಂ ಶ್ರುತಿರ್ಬೋಧಯಿತುಂ ಸದಾ ।**
**ಜೀವಮೀಶಂ ಜಗದ್ವಾಪಿ ಸಮಾಶ್ರಿತ್ಯ ಪ್ರಬೋಧಯೇತ್॥೭೨॥**

ಶ್ರುತಿಯು ಯಾವಾಗಲೂ ವಾತು-ಮನಗಳಿಗೆ ನಿಲುಕದವನಾದ ಕೂಟಸ್ಥನನ್ನು ಬೋಧಿಸುವದಕ್ಕಾಗಿ ಜೀವ-ಜಗತ್ತು-ಈಶ್ವರರನ್ನವಲಂಬಿಸಿ ಬೋಧಿಸುತ್ತದೆ.

—ಶ್ರುತಿಯು ಏಕರೂಪತ್ವವನ್ನು ಮಾತ್ರ ಬೋಧಿಸುವದಾದರೆ ಹೇಳುವರೀತಿಗಳಲ್ಲಿ ಪರಸ್ಪರ ವಿರೋಧವೇಕೆ ?

**ಯಯಾ ಯಯಾ ಭವೇತ್ಪುಂಸಾಂ ವ್ಯುತ್ಪತ್ತಿಃ ಪ್ರತ್ಯಗಾತ್ಮನಿ।**
**ಸಾ ಸೈವ ಪ್ರಕ್ರಿಯೇಹ ಸ್ಯಾತ್ ಸಾಧ್ವೀತ್ಯಾಚಾರ್ಯ-**
**ಭಾಷಿತಮ್ ॥೭೩॥**

ಪುರುಷರಿಗೆ ಯಾವಯಾವ ಸರಣಿಯಿಂದ ಆತ್ಮನಬೋಧವಾಗುವದೋ, ಆ ಆದೇಸರಣಿಯೇ ಇಲ್ಲಿ ಉತ್ತಮವೆನ್ನಬೇಕು ಎಂದು ಆಚಾರ್ಯರು ಹೇಳಿರುವರು.

( ಇದು ಸುರೇಶ್ವರಾಚಾರ್ಯರ ವಾರ್ತಿಕದ ಶ್ಲೋಕವು. )

—ಒಂದೇಒಂದಾದ ಶ್ರುತಿಯ ಅರ್ಥವನ್ನು ಪ್ರತಿಪಾದಿಸುವವರಲ್ಲಿ ಮತಭೇದವೇಕೆ ?

**ಶ್ರುತಿ ತಾತ್ಪರ್ಯಮಖಿಲಮಬುದ್ಧ್ವಾ ಭ್ರಾಮ್ಯತೇ ಜಡಃ ।**
**ವಿವೇಕೀ ತ್ವಖಿಲಂ ಬುದ್ಧ್ವಾ ತಿಷ್ಠತ್ಯಾನಂದವಾರಿಧೌ ॥೭೪॥**

ಮೂಢನು ಬೇರೆ ಬೇರೆ ಶಾಖೆಗಳ ಶ್ರುತಿಯ ತಾತ್ಪರ್ಯವನ್ನು ತಿಳಿಯದೇ ಭ್ರಾಂತನಾಗುತ್ತಾನೆ. ವಿವೇಕಿಯು ಎಲ್ಲವನ್ನು ತಿಳಿದು ಆನಂದ ಸಮುದ್ರದಲ್ಲಿ ನಿಮಗ್ನನಾಗಿರುತ್ತಾನೆ.

—ವಿವೇಕಿಯ ನಿಶ್ಚಯ.

**ಮಾಯಾಮೇಘೋ ಜಗನ್ನೀರಂ ವರ್ಷತ್ವೇಷ ಯಥಾ ತಥಾ ।**
**ಚಿದಾಕಾಶಸ್ಯ ನೋ ಹಾನಿರ್ನ ವಾ ಲಾಭ ಇತಿ ಸ್ಥಿತಿಃ ॥೭೫॥**

ಈ ಮಾಯಾ ರೂಪದ ಮೇಘವು ಜಗದ್ರೂಪೀ ಮಳೆಯನ್ನು ಮನಸ್ಸಿಗೆ ಬಂದಂತೆ ಸುರಿಸಲಿ ಅದರಿಂದ ಜ್ಞಾನಸ್ವರೂಪನಾದ ಆತ್ಮನೆಂಬ ಆಕಾಶಕ್ಕೆ ಹಾನಿ-ಲಾಭಗಳಿಲ್ಲವೆಂಬುದೇ ನಿಜ. ಹೀಗಿದೆ ವಸ್ತುಸ್ಥಿತಿ.

—ಗ್ರಂಥಾಭ್ಯಾಸದ ಫಲ.

**ಇಮಂ ಕೂಟಸ್ಥದೀಪಂ ಯೋಽನುಸಂಧತ್ತೇ ನಿರಂತರಮ್ ।**
**ಸ್ವಯಂ ಕೂಟಸ್ಥರೂಪೇಣ ದೀಪ್ಯತೇಽಸೌ ನಿರಂತರಮ್॥೭೬॥**

ಈ ಕೂಟಸ್ಥ ದೀಪ ಪ್ರಕರಣವನ್ನು ಯಾರು ತತತವಾಗಿ ಚಿಂತನ ಮಾಡುವರೋ, ಅವನು ಸ್ವತಃ ಕೂಟಸ್ಥರೂಪದಿಂದ ಯಾವಾಗಲೂ ಬೆಳಗುತ್ತಾನೆ.

### ಕೂಟಸ್ಥ ದೀಪ ಪ್ರಕರಣದ ಸಾರಾಂಶ

ಕೂಟಸ್ಥನಲ್ಲಿ ಜೀವ-ಜಗತ್ತು-ಈಶ್ವರ ಮುಂತಾದ ಯಾವ ಭೇದವೂ ಇಲ್ಲ. ಭೇದವು ಮಾಯಿಕ.

...○....

# ೯. ಧ್ಯಾನದೀಪ

ಮಹಾವಾಕ್ಯದ ಅರ್ಥಜ್ಞಾನದಿಂದ ಬ್ರಹ್ಮಸಾಕ್ಷಾತ್ಕಾರವೆಂದು ಹೇಳಿದ್ದಾಯಿತು. ಹೀಗೆ ಶ್ರವಣ ಮಾಡಿದರೂ ಕೆಲವರಿಗೆ ಸಾಕ್ಷಾತ್ಕಾರವಾಗುವದಿಲ್ಲ. ಅಂಥ ಮಂದಾಧಿಕಾರಿಗಳಿಗೆ ಉಪಾಸನೆಯಿಂದ ಮೋಕ್ಷವಾಗುವದೆಂದು ಹೇಳುತ್ತಾರೆ. ಮೊದಲು ಬ್ರಹ್ಮತತ್ವದ ಉಪಾಸನೆ ತಿಳಿಸುತ್ತಾರೆ.

**ಸಂವಾದಿಭ್ರಮವದ್ಬ್ರಹ್ಮ ತತ್ತ್ವೋಪಾಸ್ತ್ಯಾಪಿ ಮುಚ್ಯತೇ ।**
**ಉತ್ತರೇ ತಾಪನಿಯೇಽತಃ ಶ್ರುತೋಪಾಸ್ತಿರನೇಕಧಾ ॥೧॥**

ಸಂವಾದಿ ಭ್ರಮೆಯಂತೆ ಬ್ರಹ್ಮತತ್ವದ ಉಪಾಸನೆಯಿಂದಲೂ ಸಾಧಕನು ಮುಕ್ತನಾಗುವನು. ಹಾಗೆಂದು ಉತ್ತರತಾಪನೀಯೋಪನಿಷತ್ತಿನಲ್ಲಿ ಅನೇಕ ಬಗೆಯ ಉಪಾಸನೆಗಳನ್ನು ಹೇಳಿದ್ದಾರೆ.

—ಸಂವಾದಿ ಭ್ರಮೆ ಎಂದರೇನು ? ಎಂದು ತಿಳಿಸುವದಕ್ಕಾಗಿ ಸುರೇಶ್ವರಾಚಾರ್ಯರ ಒಂದು ವಾರ್ತಿಕವನ್ನು ಇಲ್ಲಿ ಹೇಳುತ್ತಾರೆ.

**ಮಣಿಪ್ರದೀಪಪ್ರಭಯೋರ್ಮಣಿಬುದ್ಧ್ಯಾಽಭಿಧಾವತೋಃ ।**
**ಮಿಥ್ಯಾಜ್ಞಾನಾವಿಶೇಷೇಽಪಿ ವಿಶೇಷೋಽರ್ಥಕ್ರಿಯಾಂ ಪ್ರತಿ॥೨॥**

ಮಣಿಯ ಬೆಳಕು ಮತ್ತು ದೀಪದ ಬೆಳಕು ಇವುಗಳ ಕಡೆಗೆ, "ಇದು ಮಣಿ" ಎಂದು ತಿಳಿದು ಓಡಿ ಹೋಗುವವರಲ್ಲಿ ಸುಳ್ಳು ತಿಳಿವಳಿಕೆ ಸಮಾನವಾಗಿದ್ದರೂ ಫಲಪ್ರಾಪ್ತಿಯಲ್ಲಿ ಭೇದವುಂಟಾಗುವದು.

(ಎಂದರೆ ದೂರದಿಂದ ಒಬ್ಬನು ಮಣಿಯ ಬೆಳಕು ಕಂಡಿದ್ದಾನೆ. ಆದರೆ ನಿಶ್ಚಯವಿಲ್ಲ. ಮತ್ತೊಬ್ಬನು ದೀಪದ ಬೆಳಕು ಕಂಡಿದ್ದಾನೆ. ಇಬ್ಬರೂ ಮಣಿ ಸಿಕ್ಕಿತೆಂದು ಭಾವಿಸಿ ಓಡುತ್ತಾರೆ. ಸುಳ್ಳು ತಿಳಿವಳಿಕೆಯಿಂದಲೇ ಇಬ್ಬರೂ ಧಾವಿಸಿದರು ಕೂಡ ಮಣಿ ಎಂದು ನಿಶ್ಚಯವಿಲ್ಲದೇ ಭ್ರಮೆಯಿಂದ ಮಣಿಯಕಡೆಗೆ ಓಡಿದವನಿಗೆ ಮಣಿ ಸಿಕ್ಕುತ್ತದೆ. ದೀಪದ ಬೆಳಕಿನಕಡೆಗೆ ಭ್ರಮೆಯಿಂದ ಹೋದವನಿಗೆ ನಿರಾಶೆಯಾಗುತ್ತದೆ. ಸುಳ್ಳು ತಿಳಿವಳಿಕೆಯಿಂದ ದೊರೆವ ಫಲದಲ್ಲಿ ಭೇದವುಂಟಾಗುತ್ತದೆ.)

—ಮುಂದಿನ ಮೂರು ಶ್ಲೋಕಗಳಲ್ಲಿ ಈ ವಾರ್ತಿಕದ ಸ್ಪಷ್ಟೀಕರಣ ಮಾಡುತ್ತಾರೆ.

**ದೀಪೋಽಪವರಕಸ್ಯಾಂತರ್ವರ್ತತೇ ತತ್ಪ್ರಭಾ ಬಹಿಃ ।**
**ದೃಶ್ಯತೇ ದ್ವಾರ್ಯಥಾನ್ಯತ್ರ ತದ್ವದ್‌ದೃಷ್ಟಾ ಮಣೇಃ ಪ್ರಭಾ ॥೩॥**

ಒಂದು ಮನೆಯ ಕಿಡಕಿಯಲ್ಲಿ ದೀಪವನ್ನಿಟ್ಟಿರುತ್ತದೆ. ರತ್ನವನ್ನು ಹೋಲುವ ಆದರ ದುಂಡನ್ನ ಬೆಳಕು ಹೊರಬಾಗಿಲಲ್ಲಿ ಕಾಣುತ್ತದೆ. ಅದರಂತೆ ಬೇರೊಂದು ಮನೆಯ ಕಿಡಕಿಯಲ್ಲಿಟ್ಟ ರತ್ನದ ಬೆಳಕು ದೀಪ ಹೋಳಿದಂತೆ ಕಾಣಿಸಿತು.

**ದೂರೇ ಪ್ರಭಾದ್ವಯಂ ದೃಷ್ಟ್ವಾ ಮಣಿಬುದ್ಧ್ಯಾಽಭಿ-**
**ಧಾವತೋಃ ।**
**ಪ್ರಭಾಯಾಂ ಮಣಿಬುದ್ಧಿಸ್ತು ಮಿಥ್ಯಾಜ್ಞಾನಂ ದ್ವಯೋ-**
**ರಪಿ ॥೪॥**

ದೂರದ ಎರಡು ಬೆಳಕುಗಳನ್ನು ನೋಡಿ ಅಲ್ಲಿ ಮಣಿಗಳಿವೆ ಎಂದು ಓಡುವವರಿಬ್ಬರೂ ಬೆಳಕನ್ನು ಮಾತ್ರ ಕಂಡು ಮಣಿ ಎಂದು ತಿಳಿದದ್ದು ಸುಳ್ಳು ತಿಳಿವಳಿಕೆಯೇ ಸರಿ.

**ನ ಲಭ್ಯತೇ ಮಣಿರ್ದೀಪಪ್ರಭಾಂ ಪ್ರತ್ಯಭಿಧಾವತಾ ।**
**ಪ್ರಭಾಯಾಂ ಧಾವತಾಽವಶ್ಯಂ ಲಭ್ಯೇತೈವ ಮಣಿರ್ಮಣೇಃ ॥೫॥**

ದೀಪದ ಬೆಳಕಿನಕಡೆಗೆ ಓಡುವವನಿಗೆ ರತ್ನವು ದೊರೆಯುವದಿಲ್ಲ. ಆದರೆ ಮಣಿಯ ಬೆಳಕಿನಕಡೆಗೆ ಓಡುವವನಿಗೆ ರತ್ನವು ಅವಶ್ಯವಾಗಿದೊರೆಯುವದು.

ಹೀಗೆ ವಾರ್ತಿಕದ ಅರ್ಥವನ್ನು ಹೇಳಿ ಈಗ ಅದರಲ್ಲಿ ಸಸಂವಾದೀ ಭ್ರಮೆ ಯಾವುದು ? ವಿಸಂವಾದೀ ಭ್ರಮೆಯಾವುದೆಂದು ಹೇಳುತ್ತಾರೆ.

**ದೀಪಪ್ರಭಾಮಣಿಭ್ರಾಂತಿರ್ವಿಸಂವಾದಿ ಭ್ರಮಃ ಸ್ಮೃತಃ ।**
**ಮಣಿಪ್ರಭಾಮಣಿಭ್ರಾಂತಿಃ ಸಂವಾದಿಭ್ರಮ ಉಚ್ಯತೇ ॥೬॥**

ದೀಪದ ಬೆಳಕಿನಲ್ಲಿ ಮಣಿಭ್ರಾಂತಿಯುಂಟಾದುದು ವಿಸಂವಾದಿ ಭ್ರಮೆ ಎನ್ನಬೇಕು. ರತ್ನದ ಬೆಳಕಿನಲ್ಲಿ ಉಂಟಾದ ಮಣಿ ಭ್ರಾಂತಿಯು ಸಂವಾದಿ ಭ್ರಮೆ ಎಂದು ಹೇಳುತ್ತಾರೆ.

—ಹೀಗೆ ಪ್ರತ್ಯಕ್ಷ ವಿಷಯದಲ್ಲಿಯ ಭ್ರಮೆಯನ್ನು ತೋರಿಸಿ ಅನುಮಾನ ವಿಷಯದಲ್ಲಿಯ ಭ್ರಮೆಯನ್ನು ತೋರಿಸುತ್ತಾರೆ.

**ಬಾಷ್ಪಂ ಧೂಮತಯಾ ಬುದ್ಧ್ವಾ ತತ್ರಾಂಗಾರಾನುಮಾನತಃ ।**
**ವಹ್ನಿರ್ಯದೃಚ್ಛಯಾ ಲಬ್ಧಃ ಸ ಸಂವಾದಿಭ್ರಮೋ ಮತಃ ॥೭॥**

ಆವಿ (ಉಗಿ)ಯನ್ನು ಹೊಗೆಯೆಂದರಿತು ಅಲ್ಲಿ ಬೆಂಕಿ ಇರುವದೆಂದು ಅನುಮಾನಿಸಿ ಮುಂದುವರಿದವನಿಗೆ ಅಲ್ಲಿ ದೈವವಶದಿಂದ ಅಗ್ನಿಯು ದೊರೆತರೆ ಅದು ಸಂವಾದಿ ಭ್ರಮೆ ಎಂದು ತಿಳಿಯುವರು.

—ಆಗಮ ವಿಷಯಕವಾದ ಭ್ರಮೆಯನ್ನು ಹೇಳುವರು.

**ಗೋದಾವರ್ಯುದಕಂ ಗಂಗೋದಕಂ ಮತ್ವಾವಿಶುದ್ಧಯೇ ।**
**ಸಂಪ್ರೋಕ್ಷ್ಯ ಶುದ್ಧಿಮಾಪ್ನೋತಿ ಸ ಸಂವಾದಿಭ್ರಮೋ ಮತಃ ॥೮॥**

ಗೋದಾವರಿಯ ನೀರನ್ನು ಗಂಗೆಯದೆಂದು ಭಾವಿಸಿ ಅದನ್ನು ಶುದ್ಧಿಗೋಸ್ಕರ ಸಿಂಪಡಿಸಿ ಒಬ್ಬನು ಶುದ್ಧಿಯನ್ನು ಹೊಂದುತ್ತಾನೆ. ಅದು ಸಂವಾದಿ ಭ್ರಮವೆನಿಸುವದು.

—ಇಂಥದೇ ಇನ್ನೊಂದು ಆಗಮಜನ್ಯ ಸಂವಾದಿಭ್ರಮೆ.

**ಜ್ವರೇಣಾಪ್ತಃ ಸನ್ನಿಪಾತಂ ಭ್ರಾಂತ್ಯಾ ನಾರಾಯಣಂ ಸ್ಮರನ್ ।**
**ಮೃತಃ ಸ್ವರ್ಗಮವಾಪ್ನೋತಿ ಸ ಸಂವಾದಿಭ್ರಮೋ ಮತಃ ॥೯॥**

ಒಬ್ಬನಿಗೆ ಜ್ವರ ಬಂದು ಸನ್ನಿಪಾತವಾಗಿದೆ. ನಾರಾಯಣನನ್ನು ನೆನೆದರೆ ಸ್ವರ್ಗ ಲಾಭವೆಂದು ಅವನಿಗೇನೂ ಗೊತ್ತಿಲ್ಲ. ಭ್ರಮೆಯಿಂದ ಅವನು ನಾರಾಯಣನನ್ನು ನೆನೆಯುತ್ತ ಮರಣ ಹೊಂದಿದನು ಆದರೂ ಅವನಿಗೆ ಸ್ವರ್ಗ ಸಿಕ್ಕಿತು. ಇದಕ್ಕೆ ಸಂವಾದಿ ಭ್ರಮವೆಂದು ಹೆಸರು.

—ಈ ಮೂರು ಬಗೆಯ ಸಂವಾದಿ ಭ್ರಮೆಯಿಂದ ಸಿದ್ಧವಾದ ಅರ್ಥ ಹೇಳುತ್ತಾರೆ.

**ಪ್ರತ್ಯಕ್ಷಸ್ಯಾನುಮಾನಸ್ಯ ತಥಾ ಶಾಸ್ತ್ರಸ್ಯ ಗೋಚರೇ ।**
**ಉಕ್ತನ್ಯಾಯೇನ ಸಂವಾದಿಭ್ರಮಾಃ ಸಂತಿ ಹಿ ಕೋಟಿಶಃ ॥೧೦॥**

ಹೀಗೆ ಹಿಂದೆ ಹೇಳಿದ ನ್ಯಾಯಾನುಸಾರವಾಗಿ ಪ್ರತ್ಯಕ್ಷ–ಅನುಮಾನ ಮತ್ತು ಶಾಸ್ತ್ರಗಳಲ್ಲಿ ಸಂವಾದಿ ಭ್ರಮೆಗಳು ಕೋಟಿಗಟ್ಟಲೆ ಪ್ರಸಿದ್ಧವಾಗಿರುವವು.

**ಅನ್ಯಥಾ ಮೃತ್ತಿಕಾದಾರುಶಿಲಾಃ ಸ್ಯುರ್ದೇವತಾಃ ಕಥಮ್ ।**
**ಅಗ್ನಿತ್ವಾದಿಧಿಯೋಪಾಸ್ಯಾಃ ಕಥಂ ವಾ ಯೋಷಿದಾದಯಃ ॥೧೧॥**

ಹೀಗೆ ತಿಳಿಯದೇ ಹೋದರೆ ಮಣ್ಣು–ಕಟ್ಟಿಗೆ–ಕಲ್ಲುಗಳು ದೇವರೆಂದು ಎನಿಸಲು ಹೇಗೆ ಸಾಧ್ಯ ? ಅದರಂತೆ ಸ್ತ್ರೀ–ಪುರುಷಾದಿಕರಲ್ಲಿ ಅಗ್ನಿತ್ವ ಬುದ್ಧಿಯಿಂದ ಉಪಾಸನೆ ಮಾಡುವದು ಹೇಗೆ ಉಚಿತವೆನಿಸೀತು ?

ಮಣ್ಣು-ಕಲ್ಲು-ಕಟ್ಟಿಗೆಗಳಲ್ಲಿ ದೇವತ್ವ ಪ್ರತಿಷ್ಠೆ ಮಾಡಿಕೊಂಡು ಭಕ್ತಿಯಿಂದ ಉಪಾಸನೆ ಮಾಡುವದು ಪ್ರಸಿದ್ಧ ವಿಷಯ. ಅದರಂತೆ ಛಾಂದೋಗ್ಯದಲ್ಲಿ 'ಎಲೈ ಗೌತಮನೆ, ಸ್ತ್ರೀಯು ಅಗ್ನಿಯಾಗಿರುವಳು, ಪುರುಷನು ಅಗ್ನಿಯಾಗಿರುವನು. ಪೃಥ್ವಿಯು ಅಗ್ನಿಯಾಗಿರುವದು. 'ಯೋಷಾ ವಾವ ಗೌತಮಾಗ್ನಿಃ' ಇತ್ಯಾದಿ ವಾಕ್ಯಗಳಿಂದ ಉಪಾಸನೆ ಹೇಳಿ, ಇದರಿಂದ ಬ್ರಹ್ಮಲೋಕ ಪ್ರಾಪ್ತಿ ಎಂದು ಫಲ ಹೇಳಿದೆ.)

**ಅಯಥಾವಸ್ತುವಿಜ್ಞಾನಾತ್ ಫಲಂ ಲಭ್ಯೇತ ಈಪ್ಸಿತಮ್ ।**
**ಕಾಕತಾಲೀಯತಃ ಸೋಽಯಂ ಸಂವಾದಿಭ್ರಮ ಉಚ್ಯತೇ॥೧೨॥**

ಬೇರೊಂದು ವಸ್ತುವೆಂದು ತಿಳಿದರೂ ಬಯಸಿದ ಫಲವು ದೈವವಶದಿಂದ ದೊರೆತರೆ ಅದು ಸಂವಾದಿ ಭ್ರಮೆ ಎನಿಸುವದು. ಎಂದು ಹೇಳುತ್ತಾರೆ.

(ಯಾವ ಭ್ರಮೆಯ ಯೋಗದಿಂದ ಇಷ್ಟಫಲವು ದೊರೆಯಲಾರದೋ ಅದು ವಿಸಂವಾದಿ ಭ್ರಮೆ ಎನಿಸುವದು.)

**ಸ್ವಯಂ ಭ್ರಮೋಽಪಿ ಸಂವಾದೀ ಯಥಾಸಮ್ಯಕ್ ಫಲಪ್ರದಃ ।**
**ಬ್ರಹ್ಮತತ್ತ್ವೋಽಪಾಸನಾಽಪಿ ತಥಾ ಮುಕ್ತಿಫಲಪ್ರದಾ ॥೧೩॥**

ಸಂವಾದಿ ಎಂಬುದು ತಾನು ಭ್ರಮೆಯಾದರೂ ಸರಿಯಾದ ಫಲವನ್ನು ಕೊಡುತ್ತದೆ. ಅದರಂತೆ ಬ್ರಹ್ಮತತ್ತ್ವದ ಉಪಾಸನೆ ಕೂಡ ಮುಕ್ತಿರೂಪ ಫಲವನ್ನು ಕೊಡುತ್ತದೆ.

—ಬ್ರಹ್ಮತತ್ತ್ವದ ಉಪಾಸನೆಯು ಅರಿತು ನಡೆಯುವದೋ ಅರಿಯದೆಯೋ? ಅರಿತವರಿಗಂತೂ ಉಪಾಸನೆ ಅನವಶ್ಯ. ಅರಿಯದೆ ಮಾಡುವದೆಂದರೆ ಪರೋಕ್ಷ ಜ್ಞಾನವಿಲ್ಲದೆ ಉಪಾಸನೆ ನಡೆಯುವದಾದರೂ ಹೇಗೆ?

**ವೇದಾಂತೇಭ್ಯೋ ಬ್ರಹ್ಮತತ್ತ್ವಮಖಂಡೈಕರಸಾತ್ಮಕಮ್ ।**
**ಪರೋಕ್ಷಮವಗಮ್ಯೈತದಹಮಸ್ಮೀತ್ಯುಪಾಸತೇ ॥೧೪॥**

ವೇದಾಂತ ವಾಕ್ಯಗಳಿಂದ ಅಖಂಡವೂ, ಏಕರಸರೂಪವೂ ಆದ ಬ್ರಹ್ಮತತ್ತ್ವವನ್ನು ಪರೋಕ್ಷವಾಗಿ ತಿಳಿದು 'ಅದು ನಾನಿದ್ದೇನೆ' ಎಂದು ಉಪಾಸನೆ ಮಾಡುತ್ತಾರೆ.

—ಉಪಾಸ್ಯಬ್ರಹ್ಮತತ್ತ್ವದ ಪರೋಕ್ಷ ರೂಪ.

**ಪ್ರತ್ಯಗ್ವ್ಯಕ್ತಿಮನುಲ್ಲಿಖ್ಯ ಶಾಸ್ತ್ರಾದ್ವಿಷ್ಣ್ವಾದಿಮೂರ್ತಿ-**
**ವತ್ ।**
**ಅಸ್ತಿ ಬ್ರಹ್ಮೇತಿ ಸಾಮಾನ್ಯಜ್ಞಾನಮತ್ರ ಪರೋಕ್ಷಧೀಃ ॥೧೫॥**

ತನ್ನೊಳಗಿರುವ ಸಾಕ್ಷಿಯಾದ ಆತ್ಮನನ್ನು ತಿಳಿಯದಿದ್ದರೂ ಶಾಸ್ತ್ರಗಳಿಂದ 'ಬ್ರಹ್ಮವು ಇರುತ್ತದೆ' ಎಂದು ವಿಷ್ಣು-ಶಿವ ಮೊದಲಾದ ಮೂರ್ತಿಗಳ ಜ್ಞಾನವಿರುವಂತೆ ಬ್ರಹ್ಮವಿಷಯಕವಾದ ಸಾಮಾನ್ಯಜ್ಞಾನವು ಇಲ್ಲಿ ಪರೋಕ್ಷಜ್ಞಾನವೆನಿಸುತ್ತದೆ.

—ಶಾಸ್ತ್ರಗಳಿಂದ ವಿಷ್ಣು-ಶಿವ ಮುಂತಾದ ಮೂರ್ತಿಗಳ ಚತುರ್ಭುಜತ್ವಾದಿ ವಿಶೇಷ ಜ್ಞಾನವು ದೊರೆಯುತ್ತದೆ ಎಂದಮೇಲೆ ಅದು ಪರೋಕ್ಷ ಹೇಗೆ ?

**ಚತುರ್ಭುಜಾದ್ಯವಗತಾವಪಿ ಮೂರ್ತಿಮನುಲ್ಲಿಖನ್ ।**
**ಅಕ್ಷೈಃ ಪರೋಕ್ಷಜ್ಞಾನ್ಯೇವ ನ ತದಾವಿಷ್ಣುಮೀಕ್ಷತೇ ॥೧೬॥**

ಶಾಸ್ತ್ರಗಳಿಂದ 'ನಾಲ್ಕು ತೋಳಗಳು' ಮುಂತಾದ ಆಕಾರಗಳ ವಿಶೇಷ ಜ್ಞಾನವಾದರೂ, ಆ ಮೂರ್ತಿಯನ್ನು ಪ್ರತ್ಯಕ್ಷ ಕಾಣದವನು ಪರೋಕ್ಷ ಜ್ಞಾನಿಯೇ. ಆದುದರಿಂದ ಅವನು ಧ್ಯಾನಕಾಲದಲ್ಲಿ ವಿಷ್ಣುವನ್ನು ಪ್ರತ್ಯಕ್ಷವಾಗಿ ಕಾಣುವದಿಲ್ಲ.

—ಎಂದಮೇಲೆ ಅದು ಭ್ರಮೆಯಿಂದ ಹುಟ್ಟಿದ ಜ್ಞಾನವೆನ್ನಬೇಕಾಯಿತು. ಯಾಕಂದರೆ ಆ ಜ್ಞಾನದ ವಿಷಯವು ಪ್ರತ್ಯಕ್ಷವಾಗಿ ಕಾಣುವದಿಲ್ಲ.

**ಪರೋಕ್ಷತ್ವಾಪರಾಧೇನ ಭವೇನ್ನಾತತ್ತ್ವವೇದನಮ್ ।**
**ಪ್ರಮಾಣೇನೈವ ಶಾಸ್ತ್ರೇಣ ಸತ್ಯಮೂರ್ತೇರ್ವಿಭಾಸನಾತ್ ॥೧೭॥**

ಪರೋಕ್ಷವೆಂಬ ಒಂದು ದೋಷಮಾತ್ರದಿಂದ ಅದು ಭ್ರಮ ಜ್ಞಾನವೆನಿಸುವದಿಲ್ಲ. ಸದ್ಯದ ಉದಾಹರಣೆಯಲ್ಲಿ ಪ್ರಮಾಣಭೂತವೆನಿಸಿದ ಶಾಸ್ತ್ರಗಳಿಂದ ವಿಷ್ಣು ಮೊದಲಾದ ಸತ್ಯ ಮೂರ್ತಿಗಳ ಜ್ಞಾನವನ್ನು ಮಾಡಿಕೊಟ್ಟಿರುತ್ತದೆ.

(ಭ್ರಮಕ್ಕೆ ವಸ್ತು ಸುಳ್ಳಾಗಿರುವಿಕೆಯು ಕಾರಣವೇ ಹೊರತು ಪರೋಕ್ಷಜ್ಞಾನವಲ್ಲ.)

—ಸಚ್ಚಿದಾನಂದರೂಪವನ್ನು ಹೇಳುವ ಶಾಸ್ತ್ರಜನ್ಯ ಬ್ರಹ್ಮತತ್ವಜ್ಞಾನವು ಪರೋಕ್ಷವೆನ್ನುವದು ಹೇಗೆ ?

**ಸಚ್ಚಿದಾನಂದರೂಪಸ್ಯ ಶಾಸ್ತ್ರಾದ್‍ಭಾನೇಽಪ್ಯನುಲ್ಲಿಖನ್ ।**
**ಪ್ರತ್ಯಂಚಂ ಸಾಕ್ಷಿಣಂ ತತ್ತು ಬ್ರಹ್ಮ ಸಾಕ್ಷಾನ್ನ ವೀಕ್ಷತೇ ॥೧೮॥**

ಶಾಸ್ತ್ರದಿಂದ ಸಚ್ಚಿದಾನಂದ ರೂಪಬ್ರಹ್ಮದ ತಿಳಿವಳಿಕೆಯಾದರೂ, ನಮ್ಮೊಳಗಿನ ಆತ್ಮನ ತಿಳಿವಳಿಕೆ ಇಲ್ಲದುದರಿಂದ ಆ ಬ್ರಹ್ಮವನ್ನು ಸಾಕ್ಷಾತ್ತಾಗಿ ನೋಡುವದಿಲ್ಲ.

—ಎಂದಮೇಲೆ ಅಂಥ ಬ್ರಹ್ಮಜ್ಞಾನಕ್ಕೆ ತತ್ವಜ್ಞಾನವೆಂಬುದು ಹೇಗೆ ?

**ಶಾಸ್ತ್ರೋಕ್ತೇನೈವ ಮಾರ್ಗೇಣ ಸಚ್ಚಿದಾನಂದನಿಶ್ಚಯಾತ್ ।**
**ಪರೋಕ್ಷಮಪಿ ತದ್‍ಜ್ಞಾನಂ ತತ್ವಜ್ಞಾನಂ ನ ತು ಭ್ರಮಃ ॥೧೯॥**

ಆ ಜ್ಞಾನವು ಪರೋಕ್ಷವೆನಿಸಿದರೂ, ಶಾಸ್ತ್ರದ ದಾರಿಯಿಂದಲೇ ಬ್ರಹ್ಮದ ಸಚ್ಚಿದಾನಂದ ರೂಪದ ನಿಶ್ಚಯ ಮಾಡಿಸುವದಾದುದರಿಂದ ಅದು ತತ್ವಜ್ಞಾನವೇ ಸರಿ. ಭ್ರಮೆಯಲ್ಲ.

—ಒಳಗಿನ ಆತ್ಮವೇ ಬ್ರಹ್ಮವೆಂದು ಮಹಾವಾಕ್ಯಗಳು ಹೇಳುವದರಿಂದ ಶಾಸ್ತ್ರಜ್ಞಾನವನ್ನು ಅಪರೋಕ್ಷಜ್ಞಾನವೆಂದು ಅನ್ನಬೇಕಾಗುವದು.

**ಬ್ರಹ್ಮ ಯದ್ಯಪಿ ಶಾಸ್ತ್ರೇಷು ಪ್ರತ್ಯಕ್‍ತ್ವೇನೈವ ವರ್ಣಿತಮ್ ।**
**ಮಹಾವಾಕ್ಯೈಸ್ತಥಾಽಪ್ಯೇತದ್‍ದುರ್ಬೋಧಮವಿಚಾರಿಣಃ ॥೨೦॥**

ನಮ್ಮೊಳಗಿರುವ ಆತ್ಮವೇ ಬ್ರಹ್ಮವೆಂದು ಮಹಾವಾಕ್ಯಗಳು ಎಷ್ಟೋ ವಿಧವಾಗಿ ಹೇಳಿದರೂ ತತ್-ತ್ವಂ ಪದಾರ್ಥಗಳ ವಿವೇಕವನ್ನು ಮಾಡಿಕೊಳ್ಳದವರಿಗೆ ತಿಳಿಯುವದು ಕಷ್ಟ.

—ತತ್ವಜ್ಞಾನವು ಪ್ರಮಾಣಭೂತ ವಸ್ತುವಿನ ಅಧೀನವಾಗಿರುತ್ತದೆ. ಇಲ್ಲಿ ತತ್ವಮಸ್ಯಾದಿ ವಾಕ್ಯರೂಪ ಪ್ರಮಾಣವಿದೆ. ಮತ್ತು ಬ್ರಹ್ಮಾತ್ಮೈಕ್ಯ ರೂಪ ವಸ್ತುವೂ ಸಿದ್ಧವಿದೆ. ಹೀಗಿದ್ದು ವಿಚಾರ ಮಾಡದಿರುವವರಿಗೆ ಬ್ರಹ್ಮಜ್ಞಾನವು ಅದೇಕೆ ಕಷ್ಟಕರವೆನಿಸಬೇಕು ?

**ದೇಹಾದ್ಯಾತ್ಮತ್ವವಿಭ್ರಾಂತೌ ಜಾಗ್ರತ್ಯಾಂ ನ ಹಠಾತ್-**
**ಪುಮಾನ್ ।**
**ಬ್ರಹ್ಮಾತ್ಮತ್ವೇನ ವಿಜ್ಞಾತುಂ ಕ್ಷಮತೇ ಮಂದಧೀತ್ವತಃ ॥೨೧॥**

ದೇಹಾದಿ ಅನಾತ್ಮ ಪದಾರ್ಥಗಳೇ ಆತ್ಮವೆಂಬ ತಿಳಿವಳಿಕೆಯು ಜೀವಂತವಾಗಿರುವವರೆಗೆ ಮಂದ ಬುದ್ಧಿಯಾದ ಪುರುಷನು ಕೇವಲ ಹಟಮಾತ್ರದಿಂದ 'ಬ್ರಹ್ಮವೇ ಆತ್ಮವಾಗಿದೆ' ಎಂದು ತಿಳಿಯಲು ಶಕ್ತನಾಗುವದಿಲ್ಲ.

ಶ್ರದ್ಧೆಯುಳ್ಳವನಿಗೆ ಶಾಸ್ತ್ರದಿಂದ ಪರೋಕ್ಷಜ್ಞಾನವಾಗುತ್ತದೆ. ಎನ್ನುತ್ತಾರೆ.

**ಬ್ರಹ್ಮಮಾತ್ರಂ ಸುವಿಜ್ಞೇಯಂ ಶ್ರದ್ಧಾಲೋಃ ಶಾಸ್ತ್ರದರ್ಶಿನಃ ।**
**ಅಪರೋಕ್ಷದ್ವೈತಬುದ್ಧಿಃ ಪರೋಕ್ಷಾದ್ವೈತಬುದ್ಧ್ಯ-**
**ನುತ್ ॥೨೨॥**

ಪ್ರತ್ಯಕ್ಷವಾದ ದ್ವೈತಬುದ್ಧಿಯು ಪರೋಕ್ಷವೆನಿಸುವ ಅದ್ವೈತ ಬುದ್ಧಿಯ ನಾಶವನ್ನು ಮಾಡಲಾರದು. ಆದುದರಿಂದ ಶಾಸ್ತ್ರದಂತೆ ನೋಡುವ ಶ್ರದ್ಧಾವಂತನಿಗೆ ಕೇವಲ ಬ್ರಹ್ಮವು ಸಹಜವಾಗಿ ತಿಳಿಯುವಹಾಗಿದೆ.

—ಅಪರೋಕ್ಷಭ್ರಮವು ಪರೋಕ್ಷ ತತ್ವಜ್ಞಾನಕ್ಕೆ ವಿರೋಧಿಯಾಗಿಲ್ಲ. ದೃಷ್ಟಾಂತ.

**ಅಪರೋಕ್ಷಶಿಲಾಬುದ್ಧಿರ್ನ ಪರೋಕ್ಷೇಶತಾಂ ನುದೇತ್ ।**
**ಪ್ರತಿಮಾದಿಷು ವಿಷ್ಣುತ್ವೇ ಕೋ ವಾ ವಿಪ್ರತಿಪದ್ಯತೇ ॥೨೩॥**

ಶಾಲಗ್ರಾಮ, ಬಾಣ ಇತ್ಯಾದಿಗಳಲ್ಲಿ ಹಾಗೂ ಪ್ರತಿಮಾದಿಗಳಲ್ಲಿ ಇರುವ ಪ್ರತ್ಯಕ್ಷ ಶಿಲಾಬುದ್ಧಿಯು ಪರೋಕ್ಷವಾದ ಈಶ್ವರ ಬುದ್ಧಿಯನ್ನು ಕಳೆಯಲಾರದು. ಪ್ರತಿಮಾದಿಗಳಲ್ಲಿದ್ದ ವಿಷ್ಣುತ್ವದ ವಿಷಯದಲ್ಲಿ ವಿವಾದ ಬೆಳೆಸುವವರು ಯಾರು? ಯಾರೂ ಇಲ್ಲ.

—ಕೆಲವು ನಾಸ್ತಿಕರು ಪರೋಕ್ಷವೆನಿಸುವ ವಿಷ್ಣು ಬುದ್ಧಿಯ ವಿಷಯದಲ್ಲಿ ವಾದಮಾಡುವರು.

**ಅಶ್ರದ್ಧಾಲೋರವಿಶ್ವಾಸೋ ನೋದಾಹರಣಮರ್ಹತಿ ।**
**ಶ್ರದ್ಧಾಲೋರೇವ ಸರ್ವತ್ರ ವೈದಿಕೇಷ್ವಧಿಕಾರತಃ ॥೨೪॥**

ಸರ್ವವೈದಿಕ ಅನುಷ್ಠಾನ ಮಾಡಲು ಶ್ರದ್ಧಾಳುಗಳೇ ತಕ್ಕವರು. ಅಶ್ರದ್ಧೆಯುಳ್ಳವರ ಅವಿಶ್ವಾಸವೇನೂ ಯೋಗ್ಯವೆನಿಸುವ ಉದಾಹರಣೆ ಎನಿಸಲಾರದು. —ಇದರಿಂದ ಸಿದ್ಧವಾದುದೇನು?

**ಸಕೃದಾಪ್ತೋಪದೇಶೇನ ಪರೋಕ್ಷಜ್ಞಾನಮುದ್ಭವೇತ್ ।**
**ವಿಷ್ಣುಮೂರ್ತ್ಯುಪದೇಶೋ ಹಿ ನ ಮೀಮಾಂಸಾಮಪೇ-**
**ಕ್ಷತೇ ॥೨೫॥**

ಒಮ್ಮೆ ಆಪ್ತವಚನದ ಉಪದೇಶವಾದರೆ ಸಾಕು. ಪರೋಕ್ಷ ಜ್ಞಾನ ವುಂಟಾಗುತ್ತದೆ. ಇದು ವಿಷ್ಣು ಮೂರ್ತಿ ಎಂದು ಉಪದೇಶವಾದಮೇಲೆ ವಿಚಾರಮಾಡಬೇಕಾದ ಪ್ರಸಂಗವೇ ಇಲ್ಲ.

—ಆದರೆ ಪೂರ್ವಮೀಮಾಂಸೆ ಮುಂತಾದ ಗ್ರಂಥಗಳಲ್ಲಿ ವಿಚಾರ ಮಾಡಿರುವರಲ್ಲ. ಯಾಕೆ ?

**ಕರ್ಮೋಪಾಸ್ತೀ ವಿಚಾರ್ಯೇತೇ ಅನುಷ್ಠೇಯಾವಿನಿರ್ಣ-**
**ಯಾತ್ ।**
**ಬಹುಶಾಖಾ ವಿಪ್ರಕೀರ್ಣಂ ನಿರ್ಣೇತುಂ ಕಃ ಪ್ರಭುರ್ನರಃ॥೨೬॥**

ಅನುಷ್ಠಾನ ಮಾಡಲು ಯೋಗ್ಯವಾದ ಕರ್ಮ ಮತ್ತು ಉಪಾಸನೆಗಳ ನಿರ್ಣಯವು ಆಗದ್ದರಿಂದ ಅವುಗಳ ಬಗೆಗೆ ವಿಚಾರ ಮಾಡಬೇಕಾಗುವುದು. ಯಾಕಂದರೆ ವೇದಗಳ ಅನೇಕಶಾಖೆಗಳಲ್ಲಿ ಬೇರೆ ಬೇರೆ ರೀತಿಯಾಗಿ ಹೇಳಿರುವ ಕರ್ಮಗಳ ನಿರ್ಣಯಮಾಡಲು ಯಾವ ಮನುಷ್ಯನು ಸಮರ್ಥನಾದಾನು?

—ಅವುಗಳ ನಿರ್ಣಯಮಾಡುವದೇ ಅಸಾಧ್ಯವೆಂದಲ್ಲಿ ಅನುಷ್ಠಾನ ಮಾಡುವದೇ ಬೇಡವೆಂದಂತಾಯಿತಲ್ಲ.

**ನಿರ್ಣೀತೋಽರ್ಥಃ ಕಲ್ಪಸೂತ್ರೈರ್ಗ್ರಥಿತಸ್ತಾವತಾಽಽಸ್ತಿಕಃ ।**
**ವಿಚಾರಮಂತರೇಣಾಪಿ ಶಕ್ತೋಽನುಷ್ಠಾತುಮಂಜಸಾ ॥೨೭॥**

ಜೈಮಿನಿಯೇ ಮೊದಲಾದ ಆಚರ್ಯರು ಯಾವುವನ್ನು ಮೀಮಾಂಸಾ ಶಾಸ್ತ್ರದಮುಖಾಂತರವಾಗಿ ನಿರ್ಣಯ ಮಾಡಿರುವರೋ ಆ ಎಲ್ಲ ಅನುಷ್ಠಾನ ಗಳನ್ನು ಕಲ್ಪಸೂತ್ರಗಳು ಒಂದುಗೂಡಿಸಿವೆ. ಆದುದರಿಂದ ಆಸ್ತಿಕರಾದವನು ವಿಚಾರವಿಲ್ಲದೆಯೇ ಅನುಷ್ಠಾನ ಮಾಡಲು ಸಮರ್ಥನಾಗುವನು.

—ಆಗಲಿ. ಆದರೆ ಕಲ್ಪಸೂತ್ರವೇ ಮೊದಲಾದ ಗ್ರಂಥಗಳಲ್ಲಿ ಕೇವಲ ಕರ್ಮ ವಿಚಾರ ಮಾತ್ರ ಹೇಳಿದೆ. ಅಲ್ಲಿ ಉಪಾಸನೆಯ ವಿಷಯವೇ ಇಲ್ಲ. ಆದುದರಿಂದ ಉಪಾಸನೆನಡೆಸುವದು ಹೇಗೆ?

**ಉಪಾಸ್ತೀನಾಮನುಷ್ಠಾನ ಮಾರ್ಷಗ್ರಂಥೇಷು ವರ್ಣಿತಮ್ ।**
**ವಿಚಾರಾಕ್ಷಮತ್ಯಾರ್ಶ್ಚ ತತ್ಶ್ರುತ್ವೋಪಾಸತೇ ಗುರೋಃ॥೨೮॥**

ಉಪಾಸನೆ ಹೇಗೆ ಮಾಡಬೇಕೆಂಬುದು ಋಷಿಗಳು ಹೇಳಿದಗ್ರಂಥಗಳಲ್ಲಿ ವರ್ಣಿತವಾಗಿವೆ. ಆದುದರಿಂದ ವಿಚಾರಮಾಡಿಕೊಳ್ಳಲು ಅಸಮರ್ಥರಾದವರು ಗುರುಮುಖದಿಂದ ಅವನ್ನು ತಿಳಿದು ಉಪಾಸನೆ ಮಾಡುವರು.

—ಹೀಗೆ ಇರುವದಾದರೆ ಆಧುನಿಕರು ವೇದವಾಕ್ಯಗಳು ವಿಚಾರವನ್ನೇಕೆ ಮಾಡುವರು?

**ವೇದವಾಕ್ಯಾನಿ ನಿರ್ಣೇತು ಮಿಚ್ಛನ್ಮೀಮಾಂಸತಾಂ ಜನಃ ।**
**ಆಪ್ತೋಪದೇಶಮಾತ್ರೇಣ ಹ್ಯನುಷ್ಠಾನಂ ಹಿ ಸಂಭವೇತ್ ॥೨೯॥**

ವೇದವಾಕ್ಯಗಳ ನಿರ್ಣಯ ಮಾಡಬೇಕೆಂದು ಬಯಸುವವರು ಅವಶ್ಯವಾಗಿ ಆ ಬಗೆಗೆ ವಿಚಾರ ಮಾಡಲಿ. ಆದರೆ ಕೇವಲ ಆಪ್ತೋಪದೇಶದಿಂದ ಮಾತ್ರದಿಂದಲೇ ಅನುಷ್ಠಾನ ನಡೆಸಲು ಸಾಧ್ಯವಿದೆ.

(ಉಪಾಸನೆಯ ವಿಷಯವು ಬ್ರಾಹ್ಮ-ವಾಸಿಷ್ಠ ಮುಂ. ಮಂತ್ರಕಲ್ಪಗಳಲ್ಲಿ ಬಂದಿದೆ)

—ಅಂದಮೇಲೆ ಬ್ರಹ್ಮೋಪಾಸನೆಯಂತೆ ಬ್ರಹ್ಮ ಸಾಕ್ಷಾತ್ಕಾರವೂ ಕೇವಲ ಉಪದೇಶದಿಂದ ಸಿದ್ಧಿಸಬಹುದೇ?

**ಬ್ರಹ್ಮಸಾಕ್ಷಾತ್ ಕೃತಿ ಸ್ತ್ವೇವಂ ವಿಚಾರೇಣ ವಿನಾ ನೃಣಾಮ್।**
**ಆಪ್ತೋಪದೇಶಮಾತ್ರೇಣ ನ ಸಂಭವತಿ ಕುತ್ರಚಿತ್ ॥೩೦॥**

(ಬ್ರಹ್ಮ ಸಾಕ್ಷಾತ್ಕಾರವು ಮನುಷ್ಯನಿಗೆ ವಿಚಾರ ವಿಲ್ಲದೇ ಕೇವಲ ಆಪ್ತೋಪ ದೇಶದಿಂದ ಸಿದ್ಧಿಸಲಾರದು.

(ಬ್ರಹ್ಮ ಸಾಕ್ಷಾತ್ಕಾರಕ್ಕೆ ವಿಚಾರದ ಸಾಹಾಯ್ಯವು ಅವಶ್ಯವಾಗಿದೆ)

— ಹೀಗೆ ಹೇಳುವ ಕಾರಣವೇನು?

**ಪರೋಕ್ಷಜ್ಞಾನಮಶ್ರದ್ಧಾ ಪ್ರತಿಬಧ್ನಾತಿ ನೇತರತ್ ।**
**ಅವಿಚಾರೋಽಪರೋಕ್ಷಸ್ಯ ಜ್ಞಾನಸ್ಯ ಪ್ರತಿಬಂಧಕಃ ॥೩೦॥**

ಪರೋಕ್ಷಜ್ಞಾನಕ್ಕೆ ವಿಶ್ವಾಸವಿಲ್ಲದಿರುವದೇ ಅಡ್ಡಿಯಾಗಿರುತ್ತದೆ. ವಿಚಾರ ಮಾಡದಿರುವಿಕೆಯಲ್ಲ. ಅಪರೋಕ್ಷ ಜ್ಞಾನಕ್ಕೆ ವಿಚಾರವಿಲ್ಲದಿರುವಿಕೆ ಅಡ್ಡಿಯಾಗಿರುತ್ತದೆ.

—ವಿಚಾರ ಮಾಡಿಯೂ ಒಂದು ವೇಳೆ ಅಪರೋಕ್ಷ ಜ್ಞಾನವಾಗದಿದ್ದರೆ ಮುಂದೇನು!

**ವಿಚಾರ್ಯಾಪ್ಯಪರೋಕ್ಷೇಣ ಬ್ರಹ್ಮಾತ್ಮಾನಂ ನ ವೇತ್ತಿ ಚೇತ್ ।**
**ಆಪರೋಕ್ಷ್ಯಾವಸಾನತ್ವಾದ್ಭೂಯೋ ಭೂಯೋ**
**ವಿಚಾರಯೇತ್ ॥೩೧॥**

ವಿಚಾರ ಮಾಡಿಯೂ ಬ್ರಹ್ಮನ ಪ್ರತ್ಯಕ್ಷ ಜ್ಞಾನವಾಗದಿದ್ದರೆ, ಪುನಃ ಪುನಃ ಸಾಕಷ್ಟು ವಿಚಾರಮಾಡಬೇಕು. ಯಾಕಂದರೆ ಬ್ರಹ್ಮಸಾಕ್ಷಾತ್ಕಾರವೇ ವಿಚಾರದ ಕೊನೆ-ಹಾಗೂ ಫಲವೆನಿಸುವದು.

—ಹಾಗೆ ವಿಚಾರಮಾಡುತ್ತಿದ್ದರೂ ಸಾಕ್ಷಾತ್ಕಾರವಾಗದೇ ಹೋದರೆ ವಿಚಾರವು ವ್ಯರ್ಥವಾಗುವದು.

**ವಿಚಾರಯನ್ನಾಮರಣಮ್ ನೈವಾತ್ಮಾನಂ ಲಭೇತ ಚೇತ್ ।**
**ಜನ್ಮಾಂತರೇ ಲಭೇತೈವ ಪ್ರತಿಬಂಧಕ್ಷಯೇ ಸತಿ ॥೩೨॥**

ಸಾಯುವವರೆಗೆ ವಿಚಾರಮಾಡಿದರೂ ಆತ್ಮಲಾಭವಾಗದೇ ಹೋದರೆ, ಪ್ರತಿಬಂಧಕ್ಷಯವಾದೊಡನೆ ಇನ್ನೊಂದು ಜನ್ಮದಲ್ಲಿಯಾದರೂ ಆತ್ಮಲಾಭವಾಗಿಯೇ ತೀರುವದು.

—ಹೀಗೆ ನಂಬಲು ಆಧಾರವೇನು? ಎಂದರೆ ಬ್ರಹ್ಮಸೂತ್ರಕಾರರಾದ ವ್ಯಾಸರು ‹ಐಹಿಕ ಮಪ್ಯಪ್ರಸ್ತುತ ಪ್ರತಿಬಂಧೇತದ್ದರ್ಶನಾತ್; ಬ್ರ. ಸೂ. ಅ. ೩. ಪಾ. ೪ ಸೂ. ೫೧ ಎಂಬ ಸೂತ್ರದಲ್ಲಿ ಹಾಗೆಹೇಳಿದ್ದಾರೆ ಎನ್ನುತ್ತಾರೆ.

**ಇಹ ವಾಽಮುತ್ರ ವಾ ವಿದ್ಯೇತ್ಯೇವಂ ಸೂತ್ರಕೃತೋದಿತಮ್ ।**
**ಶೃಣ್ವಂತೋಽಪ್ಯತ್ರ ಬಹವೋ ಯನ್ನ ವಿದ್ಯುರಿತಿ**
**ಶ್ರುತಿಃ ॥೩೪॥**

ಈ ಲೋಕದಲ್ಲಾಗಲೀ ಪರಲೋಕದಲ್ಲಾಗಲೀ ವಿದ್ಯೆಯು ದೊರಕು ವದು ಎಂದು ಸೂತ್ರಕಾರರು ಹೇಳಿದ್ದಾರೆ. ಮತ್ತು ಈ ಜನ್ಮದಲ್ಲಿ ಬಹಳ ಜನರು ಶ್ರವಣಮಾಡುತ್ತಿದ್ದರೂ ಅವನನ್ನು ತಿಳಿಯುವದಿಲ್ಲ ಎಂಬ ಅರ್ಥ ಕೊಡುವ ಶ್ರುತಿಯೂ ಇರುತ್ತದೆ.

(ಮೇಲಿನ ಸೂತ್ರದ ಅರ್ಥ:—ಪ್ರಸ್ತುತ ಪ್ರತಿಬಂಧಗಳಿಲ್ಲದೇ ಹೋದಲ್ಲಿ ಈ ಜನ್ಮದಲ್ಲಿಯೂ ವಿದ್ಯೆಯು ದೊರೆಯುವದು. ಇನ್ನು ಫಲದೊರಕಲು ಪ್ರತಿ ಬಂಧಗಳೇನಾದರೂ ಇದ್ದರೆ ಅವುಗಳ ನಾಶವಾದ ನಂತರ ಮತ್ತೊಂದು ಜನ್ಮದಲ್ಲಿಯಾದರೂ ವಿದ್ಯೆಯು ದೊರೆಯುವದು. ಎಂದು ಅನೇಕಶ್ರುತಿ ಸ್ಮೃತಿಗಳಆಧಾರದಿಂದ ಈ ಸೂತ್ರಭಾಷ್ಯದಲ್ಲಿಆಚಾರ್ಯರು ಸಿದ್ಧಮಾಡಿದ್ದಾರೆ)

—ಈ ವಿಷಯದಲ್ಲಿ 'ಗರ್ಭೇನು ಸನ್ನನ್ವೇಷಾಮವೇದಮಹಂ, ಎಂಬ ವಾಕ್ಯವನ್ನು ಅರ್ಥತಃ ಹೇಳುತ್ತಾರೆ.

**ಗರ್ಭ ಏವ ಶಯಾನಃ ಸನ್ ವಾಮದೇವೋಽವ ಬುದ್ಧವಾನ್ ।**
**ಪೂರ್ವಾಭ್ಯಸ್ತವಿಚಾರೇಣ ಯದ್ವದಧ್ಯಯನಾದಿಷು ॥೩೫॥**

ಅಧ್ಯಯನಾದಿಗಳಲ್ಲಿ ಹಿಂದೆ ಮಾಡಿದ ಅಭ್ಯಾಸದ ಫಲವು ಮರುದಿನ ತೋರುವಂತೆ, ವಾಮದೇವನು ಗರ್ಭದಲ್ಲಿರುವಾಗಲೇ ಪೂರ್ವದಲ್ಲಿ ಮಾಡಿದ ಅಭ್ಯಾಸದ-ವಿಚಾರದ ಯೋಗದಿಂದ ಆತ್ಮನನ್ನು ಅರಿತುಕೊಂಡನು.

—ಈ ದೃಷ್ಟಾಂತದ ಸ್ಪಷ್ಟೀಕರಣ ಮಾಡುತ್ತಾರೆ.

**ಬಹುವಾರ ಮಧೀತೇಽಪಿ ತದಾ ನಾಯಾತಿ ಚೇತ್ಪುನಃ ।**
**ದಿನಾಂತರೇಽನಧೀತ್ಯೈವ ಪೂರ್ವಾಧೀತಂ ಸ್ಮರೇತ್ಪುಮಾನ್ ॥೩೬॥**

ಬಹಳಸಾರೆ ಅಧ್ಯಯನ ಮಾಡಿದರೂ ಒಂದು ಆ ವಿಷಯವು ಬಾರ ದಿದ್ದಲ್ಲಿ ಮರುದಿನ ಅಧ್ಯಯನ ಮಾಡದಿದ್ದರೂ ಆ ಪುರುಷನಿಗೆ ಮೊದಲುದಿನ ಮಾಡಿದ ಅಧ್ಯಯನದ ನೆನಪು ಬರುತ್ತದೆ.

—'ಅಧ್ಯಯನಾದಿಷು' ಎಂಬಲ್ಲಿ ಆದಿ ಶಬ್ದದಿಂದ ಸೂಚಿತ್ರವಾಗುವ ಬೇರೊಂದು ದೃಷ್ಟಾಂತವನ್ನು ಹೇಳುತ್ತಾರೆ.

**ಕಾಲೇನ ಪರಿಪಚ್ಯಂತೇ ಕೃಷಿಗರ್ಭಾದಯೋ ಯಥಾ ।**
**ತದ್ವದಾತ್ಮವಿಚಾರೋಽಪಿ ಶನೈಃ ಕಾಲೇನ ಪಚ್ಯತೇ ॥೩೭॥**

ಬಿತ್ತಿದಬೆಳೆ, ಹಾಗೂ ಗರ್ಭ ಮುಂತಾದವುಗಳು ಕಾಲಾನುಸಾರವಾಗಿ ಪರಿಪಕ್ವವಾಗುತ್ತವೆ. ಅದರಂತೆ ಆತ್ಮವಿಚಾರವುಕೂಡ ಕಾಲಯೋಗದಿಂದ ಮೆಲ್ಲಗೆ ಪಕ್ವವಾಗುತ್ತದೆ.

ಪ್ರತಿಬಂಧಗಳಿಂದ ಸಾಕ್ಷಾತ್ಕಾರವಾಗುವದಕ್ಕೆ ತಡವಾಗುವದು ಎಂದು ಸುರೇಶ್ವರಾಚಾರ್ಯರೂ ಹೇಳುತ್ತಾರೆ.

**ಪುನಃ ಪುನರ್ವಿಚಾರೇಽಪಿ ತ್ರಿವಿಧಪ್ರತಿಬಂಧತಃ ।**
**ನ ವೇತ್ತಿ ತತ್ವಮಿತ್ಯೇತದ್ವಾರ್ತಿಕೇ ಸಮ್ಯಗೀರಿತಮ್ ॥೩೮॥**

ಮೇಲಿಂದ ಮೇಲೆ ವಿಚಾರಮಾಡಿದರೂ ಮೂರು ಪ್ರಕಾರದ ಪ್ರತಿಬಂಧಗಳಿಂದ ಪುರುಷನು ತತ್ವವನ್ನು ತಿಳಿಯುವದಿಲ್ಲ. ಹೀಗೆಂದು ವಾರ್ತಿಕದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

—ಮೂರು ಅಡ್ಡಿಗಳು ಯಾವವೆಂಬುದನ್ನು ತಿಳಿಸುವ ಸುರೇಶ್ವರಾಚಾರ್ಯರ ಆ ವಾರ್ತಿಕಶ್ಲೋಕಗಳನ್ನೇ ಇಲ್ಲಿ ಹೇಳುತ್ತಾರೆ.

**ಕುತಸ್ತದ್ ಜ್ಞಾನಮಿತಿ ಚೇತ್ತದ್ಧಿ ಬಂಧಪರಿಕ್ಷಯಾತ್ ।**
**ಅಸಾವಪಿ ಚ ಭೂತೋ ವಾ ಭಾವೀವಾ ವರ್ತತೇಽಥವಾ॥೩೯॥**

ಹಾಗಾದರೆ ಆ ಜ್ಞಾನವಾಗುವ ಬಗೆ ಹೇಗೆ? ಎಂದು ವಿಚಾರಿಸುವದಾದರೆ, ಅದು ಅಡ್ಡಿಗಳು ನಾಶವಾದ ಕೂಡಲೆ ಆಗುವದು ಎಂದು ತಿಳಿ. ಆ ಅಡ್ಡಿಯು ಹಿಂದಿನದು, ಅಥವಾ ಮುಂದಿನದು ಅಥವಾ ಸದ್ಯದ್ದು ಆಗಿರಬಹುದು.

**ಅಧೀತವೇದವೇದಾರ್ಥೋಽಪ್ಯತ ಏವ ನ ಮುಚ್ಯತೇ ।**
**ಹಿರಣ್ಯನಿಧಿದೃಷ್ಟಾಂತಾದಿದಮೇವ ಹಿ ದರ್ಶಿತಮ್ ॥೪೦॥**

ಹೀಗೆ ಮೂರುಬಗೆಯ ಅಡ್ಡಿಗಳು ಇರಬಹುದಾದುದರಿಂದ ವೇದಗಳನ್ನು ವೇದಾರ್ಥಗಳನ್ನು ಅಭ್ಯಾಸ ಮಾಡಿದಂಥವನು ಕೂಡ ಮುಕ್ತನಾಗುವದಿಲ್ಲ. ನೆಲದಲ್ಲಿ ಹುಗಿದಿಟ್ಟಿರುವ ನಿಕ್ಷೇಪದೃಷ್ಟಾಂತದಿಂದ ಶ್ರುತಿಯು ಇದನ್ನೇ ತಿಳಿಸಿರುತ್ತದೆ.

(ನಿಕ್ಷೇಪವಿದ್ದ ಸ್ಥಳವನ್ನರಿಯದವರು ಅದರಮೇಲೆಯೇ ಅಡ್ಡಾಡುತ್ತಿದ್ದರೂ ನಿಧಿಯನ್ನು ಹೊಂದಲಾರರು. ಅದರಂತೆ ಎಲ್ಲ ಜೀವರು ಪ್ರತಿದಿನ

ನಿದ್ರೆಯಲ್ಲಿ ಬ್ರಹ್ಮಲೋಕವನ್ನು ಕಂಡು ಬರುತ್ತಿದ್ದರೂ ಅದನ್ನರಿಯುವುದಿಲ್ಲ. ಇದರ ಕಾರಣವೇನೆಂದರೆ ಎಲ್ಲರಿಗೆ ಅಜ್ಞಾನವು ಮುಸುಕುಹಾಕಿರುವುದೇ. ಎಂದು ಛಾಂದೋಗ್ಯದಲ್ಲಿ ಹೇಳಿದೆ)

—ಆಗಲಿ. ಹಿಂದಿನ (ಭೂತ) ಪ್ರತಿಬಂಧವೆಂದರೆ ಏನು!

**ಅತೀತೇನಾಪಿ ಮಹಿಷೀಸ್ನೇಹೇನ ಪ್ರತಿಬಂಧತಃ ।**
**ಭಿಕ್ಷುಸ್ತತ್ತ್ವಂ ನ ವೇದೇತಿ ಗಾಥಾಲೋಕೇ ಪ್ರಗೀಯತೇ ॥೪೧॥**

ಹಿಂದೆ ಒಬ್ಬಗೃಹಸ್ಥನು ಒಂದು ಎಮ್ಮೆಯನ್ನು ಅತಿಶಯ ಪ್ರೀತಿಸುತ್ತಿದ್ದು ಅದೇ ಪ್ರತಿಬಂಧದಿಂದ ಸನ್ಯಾಸಿಯಾದ ಮೇಲೆ ಕೂಡ ತತ್ತ್ವವನ್ನರಿಯಲಿಲ್ಲ. ಎಂಬಕಥೆಯು ಜನರಲ್ಲಿ ಪ್ರಚಾರವಿದೆ.

(ಇದು ಹಿಂದಿನ ಪ್ರತಿಬಂಧಕ್ಕೆ ಉದಾಹರಣೆ)

—ಹಾಗಾದರೆ ಅವನಿಗೆ ಜ್ಞಾನವು ಹೇಗಾಯಿತು?

**ಅನುಸೃತ್ಯ ಗುರುಃ ಸ್ನೇಹಂ ಮಹಿಷ್ಯಾಂ ತತ್ತ್ವಮುಕ್ತವಾನ್ ।**
**ತತೋ ಯಥಾವದ್ವೇದೈಷ ಪ್ರತಿಬಂಧಸ್ಯ ಸಂಕ್ಷಯಾತ್ ॥೪೨॥**

ಗುರುವು ಅವನಿಗೆ ಎಮ್ಮೆಯ ಸ್ವರೂಪದಲ್ಲಿರುವ ಬ್ರಹ್ಮವನ್ನೇ ಹೇಳಿದನು. ಆಗ ಅವನ ಅಡ್ಡಿಯು ಪೂರ್ಣನಾಶವಾಗಿ ತತ್ತ್ವವನ್ನು ಶಾಸ್ತ್ರೋಕ್ತ ರೀತಿಯಿಂದ ತಿಳಿದುಕೊಂಡನು.

—ಈಗ ವರ್ತಮಾನ ಪ್ರತಿಬಂಧವನ್ನು ಹೇಳುತ್ತಾರೆ.

**ಪ್ರತಿಬಂಧೋ ವರ್ತಮಾನೋ ವಿಷಯಾಸಕ್ತಿಲಕ್ಷಣಃ ।**
**ಪ್ರಜ್ಞಾಮಾಂದ್ಯಂ ಕುತರ್ಕಶ್ಚ ವಿಪರ್ಯಯ ದುರಾಗ್ರಹಃ ॥೪೩॥**

ಸದ್ಯಃಕಾಲದ ಅಡ್ಡಿಗಳು:— (೧) ವಿಷಯಾಸಕ್ತಿರೂಪ (೨) ಬುದ್ಧಿಮಾಂದ್ಯ (೩) ಕುತರ್ಕ (೪) ಹಟದಿಂದ ವಿಪರೀತ ಅರ್ಥ ಮಾಡುವದು. ಹೀಗೆ ನಾಲ್ಕು ಪ್ರಕಾರದ ಅಡ್ಡಿಗಳಿವೆ.

—ಈ ಪ್ರತಿಬಂಧಗಳು ಹೇಗೆ ದೂರಾಗುವವು ?

**ಶಮಾದ್ಯೈಃ ಶ್ರವಣಾದ್ಯೈಶ್ಚ ತತ್ರ ತತ್ರೋಚಿತೈಃ ಕ್ಷಯಮ್।**
**ನೀತೇಽಸ್ಮಿನ್ ಪ್ರತಿಬಂಧೇಽತಃ ಸ್ವಸ್ಯ ಬ್ರಹ್ಮತ್ವ-**
**ಮಶ್ನುತೇ ॥೪೪**

ಆಯಾ ಅಡ್ಡಿಗಳಿಗೆ ಉಚಿತವೆನಿಸುವ ಶಮ-ದಮ ಮೊದಲಾದವುಗಳಿಂದ ನಿರಂತರ ತತ್ವಶ್ರವಣದಿಂದ, ಇತ್ಯಾದಿ ಉಪಾಯಗಳ ಯೋಗದಿಂದ ಆಯಾ ಅಡ್ಡಿಗಳು ನಾಶವಾದನಂತರ ಸಾಧಕನು ತನ್ನ ಸ್ವರೂಪವೇ ಆದ ಬ್ರಹ್ಮವನ್ನು ಪಡೆಯುವನು.

—ಇನ್ನು ಮುಂದೆ ಉಂಟಾಗುವ ಪ್ರತಿಬಂಧಗಳು ಯಾವವು ?

**ಆಗಾಮಿಪ್ರತಿಬಂಧಶ್ಚ ವಾಮದೇವೇಸಮೀರಿತಃ ।**
**ಏಕೇನಜನ್ಮನಾಕ್ಷೀಣೋ ಭರತಸ್ಯ ತ್ರಿಜನ್ಮಭಿಃ ॥೪೫॥**

ಮುಂದೆ ಉಂಟಾಗುವ ಪ್ರತಿಬಂಧ (ಅಡ್ಡಿ) ವೆಂದರೆ ಮುಂದಿನ ಮತ್ತೊಂದು ಜನ್ಮಕ್ಕೆ ಕಾರಣವಾಗುವ ಪ್ರಾರಬ್ಧ ಕರ್ಮದ ಶೇಷ. ಇದನ್ನು ವಾಮದೇವನ ವಿಷಯದಲ್ಲಿ ಹೇಳಿದ್ದಾರೆ. ಆ ಪ್ರತಿಬಂಧವು ವಾಮದೇವನ ಒಂದೇ ಜನ್ಮದಿಂದ ಕ್ಷೀಣವಾಯಿತು. ಭರತನಿಗೆ ಮೂರು ಜನ್ಮಗಳಿಂದ ಕ್ಷೀಣವಾಯಿತು.

(ವಾಮದೇವನಕಥೆ ಐತರೇಯದಲ್ಲಿದೆ. ಭರತನಕಥೆ ಭಾಗವತದಲ್ಲಿದೆ.)

ಪ್ರಾರಬ್ಧ ಕ್ಷೀಣವಾಗುವದಕ್ಕೆ ನೀವು ಕಾಲನಿಯಮವನ್ನು ಹೇಳುವಿರಲ್ಲ ?

**ಯೋಗಭ್ರಷ್ಟಸ್ಯ ಗೀತಾಯಾಮತೀತೇ ಬಹುಜನ್ಮನಿ ।**
**ಪ್ರತಿಬಂಧಕ್ಷಯಃ ಪ್ರೋಕ್ತೋ ನ ವಿಚಾರೋಽಪ್ಯನರ್ಥಕಃ॥೪೬॥**

ಭಗವದ್ಗೀತೆಯಲ್ಲಿ ಯೋಗಭ್ರಷ್ಟ ಪುರುಷನ ಅನೇಕ ಜನ್ಮಗಳು ಕಳೆದು ಹೋದ ನಂತರ ಅವನ ಅಡ್ಡಿಗಳು ದೂರವಾಗುವವೆಂದು ಹೇಳಿದೆ. ಆದುದರಿಂದ ವಿಚಾರ ಮಾಡಿದುದು ವ್ಯರ್ಥವಾಗುವದಿಲ್ಲ.

(ಭೋಗಾದಿಗಳಿಂದ ಕರ್ಮವು ನಾಶವಾಗಲು ಕೂಡಲೇ ಹಿಂದಿನ ವಿಚಾರ ಬಲದಿಂದ ಜ್ಞಾನರೂಪವಾದ ಫಲವು ದೊರೆಯುತ್ತದೆ.)

ಗೀತೆಯಲ್ಲಿ ಹೇಳಿದ ಅರ್ಥವನ್ನು ಗೀತೆಯಲ್ಲಿಯ ನಾಲ್ಕು ಶ್ಲೋಕದಿಂದ ತಿಳಿಸುತ್ತಾರೆ.

**ಪ್ರಾಪ್ಯ ಪುಣ್ಯಕೃತಾಂ ಲೋಕಾನಾತ್ಮತತ್ವ ವಿಚಾರತಃ ।**
**ಶುಚೀನಾಂ ಶ್ರೀಮತಾಂ ಗೇಹೇ ಸಾಭಿಲಾಷೋಽಭಿಜಾಯತೇ ॥೪೭॥**

ಆತ್ಮತತ್ತ್ವವನ್ನು ವಿಚಾರ ಮಾಡಿದ ಯೋಗದಿಂದ ಪುಣ್ಯವಂತರು ಪಡೆಯುವ ಸ್ವರ್ಗಾದಿಲೋಕಗಳನ್ನುಹೊಂದಿ ತರುವಾಯ ಶುದ್ಧರೂ, ಶ್ರೀಮಂತರೂ ಆದ ತಾಯ್ತಂದೆಗಳ ಹೊಟ್ಟೆಯಿಂದ ವಿರಕ್ತಿಯ ಕೊರತೆ ಇರುವ ಪುರುಷನು ಹುಟ್ಟುವನು. —ಇನ್ನು ವಿರಕ್ತನಾದ ಯೋಗಭ್ರಷ್ಟನ ವಿಷಯ.

**ಅಥ ವಾ ಯೋಗಿನಾಮೇವ ಕುಲೇ ಭವತಿಧೀಮತಾಮ್ ।**
**ನಿಸ್ಪೃಹೋ ಬ್ರಹ್ಮತತ್ವಸ್ಯ ವಿಚಾರಾತ್ತದ್ಧಿ ದುರ್ಲಭಮ್ ॥೪೮॥**

ಅಥವಾ ವಿರಕ್ತನಾದ ಯೋಗಭ್ರಷ್ಟನು ಬ್ರಹ್ಮತತ್ವದ ವಿಚಾರದಿಂದ ಬುದ್ಧಿವಂತರಾದ ಯೋಗಿಗಳ ಕುಲದಲ್ಲಿ ಹುಟ್ಟುತ್ತಾನೆ. ಇಂಥ ಜನ್ಮವು ದುರ್ಲಭವು. —ಯಾಕಂದರೆ-

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಮ್ ।**
**ಯತತೇ ಚ ತತೋ ಭೂಯಸ್ತಸ್ಮಾದೇ ತದ್ಧಿ**
**ದುರ್ಲಭಮ್ ॥೪೯॥**

ಆ ಜನ್ಮದಲ್ಲಿ ಹಿಂದಿನ ಜನ್ಮದಲ್ಲಿ ತತ್ವವಿಚಾರ ಮಾಡಿದ ಬುದ್ಧಿಯೇ ತಲೆದೋರುವದು. ಆಗ ಅವನು ಒಳ್ಳೆ ಬಲವಾಗಿ ಸಾಕ್ಷಾತ್ಕಾರಕ್ಕೆ ಯತ್ನಿಸುವನು. ಆದುದರಿಂದ ಇಂಥ ಜನ್ಮ ದುರ್ಲಭವೆನ್ನುವರು.

—ಹೀಗೆ ಹೆಚ್ಚು ಅಭ್ಯಾಸ ಮಾಡಲು ಕಾರಣವೇನು ?

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಅನೇಕಜನ್ಮ ಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥೫೦॥**

ಹಿಂದಿನ ಜನ್ಮದ ಅಭ್ಯಾಸಬಲದಿಂದ ಸಾಧಕನು ತತ್ವಾಭ್ಯಾಸದತ್ತ ಆಕರ್ಷಿತನಾಗುವನು. ಹೀಗೆ ಅನೇಕ ಜನ್ಮಗಳಲ್ಲಿ ಪ್ರಯತ್ನಿಸಿ ಸಿದ್ಧನಾದ ಆ ಮಹಾತ್ಮನು ಮೋಕ್ಷವನ್ನು ಹೊಂದುವನು.

—ಇನ್ನೊಂದು ಮುಂದಿನ ಪ್ರತಿಬಂಧವನ್ನು ಹೇಳುತ್ತಾರೆ.

**ಬ್ರಹ್ಮಲೋಕಾಭಿವಾಂಛಾಯಾಂ ಸಮ್ಯಕ್ ಸತ್ಯಾಂ**
**ನಿರುಧ್ಯತಾಮ್ ।**
**ವಿಚಾರಯೇದ್ಯ ಆತ್ಮನಂ ನತು ಸಾಕ್ಷಾತ್ ಕರೋತ್ಯ-**
**ಯಮ್ ॥೫೧॥**

ಬ್ರಹ್ಮಲೋಕವನ್ನು ಪಡೆಯಬೇಕೆಂದು ಬಲವಾದ ಅಪೇಕ್ಷೆ ಇರುವಾಗ ಅದನ್ನು ಹತ್ತಿಕ್ಕಿ ಯಾವನು ಜುಲುಮೆಯಿಂದ ಆತ್ಮವಿಚಾರ ಮಾಡತೊಡಗುವನೋ ಅವನಿಗೆ ಆತ್ಮಸಾಕ್ಷಾತ್ಕಾರವಾಗುವದಿಲ್ಲ.

—ಅಂದರೆ ಅವನಿಗೆ ಎಂದಿಗೂ ಮೋಕ್ಷವಿಲ್ಲವೇ ?

**ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾ ಇತಿ ಶಾಸ್ತ್ರತಃ ।**
**ಬ್ರಹ್ಮಲೋಕೇ ಸ ಕಲ್ಪಾಂತೇ ಬ್ರಹ್ಮಣಾ ಸಹ ಮುಚ್ಯತೇ॥೫೨॥**

"ವೇದಾಂತ ವಿಜ್ಞಾನಂ" ಎಂದರೆ ಮಹಾವಾಕ್ಯಗಳ ಅರ್ಥವನ್ನು ವಿಚಾರಮಾಡಿಕೊಂಡು ಅವನು ಬ್ರಹ್ಮಲೋಕದಲ್ಲಿ ಬ್ರಾಹ್ಮಕಲ್ಪದ ಅಂತ್ಯ ಕಾಲದಲ್ಲಿ ಬ್ರಹ್ಮದೇವನೊಡನೆ ಮುಕ್ತನಾಗುವನು.

ಪ್ರತಿಬಂಧಗಳಿಂದ ತತ್ವವಿಚಾರ ಮಾಡಿದರೂ ಸಾಕ್ಷಾತ್ಕಾರವಾಗುವದಿಲ್ಲ ಎಂದು ಹೇಳಿ, ತೀವ್ರಪಾಪಿಗಳಿಗೆ ತತ್ವವಿಚಾರದ ಇಚ್ಛೆಯೇ ಆಗುವದಿಲ್ಲ ಎನ್ನುತ್ತಾರೆ.

**ಕೇಷಾಂಚಿತ್ಸ ವಿಚಾರೋಽಪಿ ಕರ್ಮಣಾ ಪ್ರತಿಬಧ್ಯತೇ ।**
**ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯ ಇತಿ ಶ್ರುತೇಃ ॥೫೩॥**

ಪರಮಾತ್ಮ ವಿಚಾರವು ಅನೇಕರಿಗೆ ಕಿವಿಗೆ ಕೂಡ ಬೀಳುವದಿಲ್ಲ ಎಂಬ ಅರ್ಥದ ಶ್ರುತಿಯು ಉಂಟು. ಹೀಗಾಗಿ ಎಷ್ಟೋ ಜನರಿಗೆ ಅವರ ಕರ್ಮದ ಫಲವಾಗಿ ಆ ವಿಚಾರ ಗತಿಯೇ ಇಲ್ಲದಂತಾಗುವದು.

ಪುರುಷಾರ್ಥ ಸಾಧಿಸುವ ಇಚ್ಛೆ ಏನೋ ಇದೆ. ಆದರೆ ವಿಚಾರ ಮಾಡಲು ಅಸಾಮರ್ಥ್ಯವಿದೆ. ಅಂಥವರ ಗತಿ ?

**ಅತ್ಯಂತ ಬುದ್ಧಿಮಾಂದ್ಯಾದ್ವಾ ಸಾಮಗ್ರ್ಯಾ ವಾಽಪ್ಯಸಂಭವಾತ್ ।**
**ಯೋ ವಿಚಾರಂ ನ ಲಭತೇ ಬ್ರಹ್ಮೋಪಾಸೀತ ಸೋಽನಿಶಮ್ ॥೫೪॥**

ಅತ್ಯಂತ ಮಂದ ಬುದ್ಧಿ ಇರುವದರಿಂದಲೋ, ಯೋಗ್ಯ ಶಾಸ್ತ್ರವೂ–ಗುರುವೂ ದೊರೆಯದ್ದರಿಂದಲೋ ಯಾವನ ವಿಚಾರವು ಮುಂದುವರಿಯುವದಿಲ್ಲವೋ ಅವನು ಯಾವಾಗಲೂ ನಿರ್ಗುಣ ಬ್ರಹ್ಮವನ್ನು ಉಪಾಸನೆ ಮಾಡಬೇಕು.

—ನಿರ್ಗುಣ ಬ್ರಹ್ಮವು ಗುಣರಹಿತವಾದುದರಿಂದ ಅದರ ಉಪಾಸನೆ ಸಾಧ್ಯವಿಲ್ಲವೆಂದರೆ ಅನುಭವವನ್ನೇ ಮೇಲಿಂದ ಮೇಲೆ ನೆನಪಿಗೆ ತಂದುಕೊಳ್ಳುವದು ಉಪಾಸನೆ ಎನಿಸುವದರಿಂದ ಸಗುಣ ಬ್ರಹ್ಮನಂತೆ ನಿರ್ಗುಣ ಬಹ್ಮನ ಉಪಾಸನೆಯೂ ಶಕ್ಯ.

**ನಿರ್ಗುಣಬ್ರಹ್ಮತತ್ತ್ವಸ್ಯ ನ ಹ್ಯುಪಾಸೇರಸಂಭವಃ ।**
**ಸಗುಣಬ್ರಹ್ಮಣೀವಾತ್ರ ಪ್ರತ್ಯಯಾವೃತ್ತಿಸಂಭವಾತ್ ॥೫೫॥**

ಸಗುಣ ಬ್ರಹ್ಮನ ಎಂದರೆ ಮೂರ್ತಿ ಉಪಾಸನೆಯಂತೆ ನಿರ್ಗುಣ ಬ್ರಹ್ಮನಲ್ಲಿಯೂ ಮೇಲಿಂದ ಮೇಲೆ ಚಿಂತನ–ಸ್ಮರಣ ಅನುಸಂಧಾನಗಳ ಸಂಭವವಿರುವದರಿಂದ ನಿರ್ಗುಣ ಬ್ರಹ್ಮತತ್ತ್ವದ ಉಪಾಸನೆ ಶಕ್ಯವಿಲ್ಲವೆಂದು ಅನ್ನುವಂತಿಲ್ಲ.

—ನಿರ್ಗುಣ ಬ್ರಹ್ಮವು ಮಾತು–ಮನಗಳಿಗೆ ಅಗೋಚರವಾಗಿದೆ. ಆದುದರಿಂದ ಅದರ ಸ್ಮರಣರೂಪ ಉಪಾಸನೆ ಹೇಗೆ ? ಎಂದರೆ ಜ್ಞಾನಪಕ್ಷದಲ್ಲಿಯೂ ಆ ದೋಷವಿದೆ ಎಂದು ಪ್ರತಿ ಆಕ್ಷೇಪವನ್ನು ಹೇಳುತ್ತಾರೆ.

**ಅವಾಙ್ಮನಸಗಮ್ಯಂ ತನ್ನೋಪಾಸ್ಯಮಿತಿ ಚೇತ್ತದಾ ।**
**ಅವಾಙ್ಮನಸಗಮ್ಯಸ್ಯ ವೇದನಂ ನ ಚ–**
**ಸಂಭವೇತ್ ॥೫೬॥**

ಅದು ಮಾತು–ಮನಗಳಿಗೆ ಮೀರಿದುದು. ಆದುದರಿಂದ ಉಪಾಸನೆಗೆ ಯೋಗ್ಯವಲ್ಲ, ಎಂದರೆ ಉಪಾಸನೆ ಮಾಡಲು ಬ್ರಹ್ಮವು ಶಕ್ಯವಿಲ್ಲ ಎಂದರೆ ಮಾತು-ಮನಗಳಿಗೆ ಮೀರಿದ ಬ್ರಹ್ಮನನ್ನು ಅರಿತುಕೊಳ್ಳುವದೂ ಸಾಧ್ಯವಿಲ್ಲ.

—ಹಾಗಿದ್ದ ಬ್ರಹ್ಮನನ್ನರಿಯುವುದು ಶಕ್ಯವಿದೆ ಎಂದರೆ ಆ ಬ್ರಹ್ಮನನ್ನು ಉಪಾಸನೆ ಮಾಡುವದೂ ಶಕ್ಯವಿದೆ.

**ವಾಗಾದ್ಯಗೋಚರಾಕಾರಮಿತ್ಯೇವಂ ಯದಿ ವೇತ್ತ್ಯಸೌ ।**
**ವಾಗಾದ್ಯಗೋಚರಾಕಾರಮಿತ್ಯುಪಾಸೀತ ನೋ ಕುತಃ ॥೫೭॥**

ಆ ಬ್ರಹ್ಮನ ಆಕಾರವು ಮಾತು-ಮನಗಳ ವಿಷಯವಾಗುವಂಥದಲ್ಲ ಎಂದು ಈ ಸಾಧಕನು ತಿಳಿಯುವದಾದರೆ ಮಾತು–ಮನಗಳಿಗೆ ಬ್ರಹ್ಮನ ಯಾವ ಆಕಾರವು ಅಗೋಚರವಾಗಿರುವದೋ ಅಂಥ ಬ್ರಹ್ಮನ ಉಪಾಸನೆಯನ್ನು ಅವನೇಕೆ ಮಾಡಬಾರದು ?

(ಬ್ರಹ್ಮವು ಹೀಗಿದೆ, ಹೀಗಿದೆ ಎಂದು ಸಾಧಕ ತಿಳಿಯಬಲ್ಲನಾದರೆ ಅದರ ಚಿಂತನಾದಿಗಳು ಅವನಿಂದಾಗಬಾರದೇಕೆ ? ಯಾಕೆಂದರೆ ಬ್ರಹ್ಮನು ಉಪಾಸ್ಯನಾಗಿರುವನು.)

—ಉಪಾಸ್ಯನೆಂದರೆ ಬ್ರಹ್ಮನು ಸಗುಣನಾಗಲಿಕ್ಕಿಲ್ಲವೇ ? ಎಂದರೆ ಅವನನ್ನು ಅರಿಯುವದು ಸಾಧ್ಯವಿದೆ ಎಂದರೂ ಅವನು ಸಗುಣನಾಗುತ್ತಾನೆ ಎನ್ನುತ್ತಾರೆ.

**ಸಗುಣತ್ವಮುಪಾಸ್ಯತ್ವಾದ್ಯದಿ ವೇದ್ಯತ್ವತೋಽಪಿತತ್ ।**
**ವೇದ್ಯಂ ಚೇಲ್ಲಕ್ಷಣಾವೃತ್ತ್ಯಾ ಲಕ್ಷಿತಂ ಸಮುಪಾಸ್ಯತಾಮ್॥೫೮॥**

ಉಪಾಸ್ಯನಾಗಿರುವನೆಂದು ಬ್ರಹ್ಮನಿಗೆ ಸಗುಣತ್ವ ಬರುವದೆಂದರೆ ಅರಿವಿಗೊಳಗಾಗುವಾಗಲೂ ಅದು ಸಗುಣವೇ ಆಗುವದು. ಲಕ್ಷಣಾವೃತ್ತಿಯಿಂದ ಅದನ್ನು ತಿಳಿಯಲು ಸಾಧ್ಯ ಎಂದರೆ ಲಕ್ಷಣಾವೃತ್ತಿಯಿಂದ ತಿಳಿದುಬರುವ ಆ ಬ್ರಹ್ಮದ ಉಪಾಸನೆಯೇ ಉತ್ತಮರೀತಿಯಿಂದ ಸಾಗಲಿ.

—ಆದರೆ ನಿರ್ಗುಣ ಬ್ರಹ್ಮನ ಉಪಾಸನೆಯನ್ನು ಶ್ರುತಿಯು ನಿಷೇಧ ಮಾಡುವದಲ್ಲ.

**ಬ್ರಹ್ಮ ವಿದ್ಧಿ ತದೇವ ತ್ವಂ ನ ತ್ವಿದಂ ಯದುಪಾಸತೇ ।**
**ಇತಿಶ್ರುತೇರುಪಾಸ್ಯತ್ವಂ ನಿಷಿದ್ಧಂ ಬ್ರಹ್ಮಣೋಽಯದಿ ॥೫೯॥**

ಯಾವ ಜ್ಞಾನ ಸಾಧನ ( ಎಂದರೆ ಜ್ಞಾನೇಂದ್ರಿಯ-ಮನ ಮುಂ. ) ಗಳಿಗೂ ವಿಷಯವಾಗದ ತತ್ವವೇ ಬ್ರಹ್ಮವೆಂದರಿ. ನೀನು ಉಪಾಸನೆ ಮಾಡುತ್ತಿರುವದು ಬ್ರಹ್ಮವಲ್ಲ. ಹೀಗೆಂದು ಶ್ರುತಿಯು ಇರುವದರಿಂದ ಬ್ರಹ್ಮನಿಗೆ ಉಪಾಸ್ಯತ್ವವನ್ನು ಹೇಳುವದು ತಪ್ಪು ಎನ್ನುವದಾದರೆ ಈ ಉಪಾಸ್ಯತ್ವದಂತೆ ಬ್ರಹ್ಮನ ವೇದ್ಯತ್ವವನ್ನೂ ಶ್ರುತಿಯು ನಿಷೇಧಿಸಿದೆ.

**ವಿದಿತಾದನ್ಯದೇವೇತಿ ಶ್ರುತೇರ್ವೇದ್ಯತ್ವಮಸ್ಯ ನ ।**
**ಯಥಾಶ್ರುತ್ಯೈವ ವೇದ್ಯಂ ಚೇತ್ತಥಾಶ್ರುತ್ಯಾಽಪ್ಯುಪಾಸ್ಯ-**
**ತಾಮ್ ॥೬೦॥**

ತಿಳಿದುಕೊಂಡ ವಸ್ತುವಿಗಿಂತ ಬ್ರಹ್ಮವು ಬೇರೆಯೇ ಆಗಿದೆ ಎಂದು ಶ್ರುತಿಯು ಇರುವದರಿಂದ ಬ್ರಹ್ಮತ್ವಕ್ಕೆ ವೇದ್ಯತ್ವವಿಲ್ಲ. ಆದರೆ ಶ್ರುತಿಯು

ಪ್ರತಿಪಾದಿಸಿದಂತೆ ಮಾತ್ರ ಅದಕ್ಕೆ ವೇದ್ಯತ್ವವಿದೆ ಎಂದರೆ ಆ ಶ್ರುತಿಯು ಹೇಳಿದಂತೆಯಾದರೂ ಉಪಾಸನೆ ನಡೆಯಲಿ.

—ಬ್ರಹ್ಮನ ವೇದ್ಯತ್ವವು ವಾಸ್ತವಿಕವಲ್ಲ ಎನ್ನುವದಾದರೆ ಅವನ ಉಪಾಸ್ಯತ್ವವೂ ನಿಜವಾದುದಲ್ಲವೆನ್ನುತ್ತಾರೆ.

**ಅವಾಸ್ತವೀ ವೇದ್ಯತಾ ಚೇದುಪಾಸ್ಯತ್ವಂ ತಥಾ ನ ಕಿಮ್ ।**
**ವೃತ್ತಿವ್ಯಾಪ್ತಿರ್ವೇದ್ಯತಾ ಚೇದುಪಾಸ್ಯತ್ವೇಽಪಿ ತತ್ಸಮಮ್ ॥೬೧॥**

ಬ್ರಹ್ಮನಿಗೆ ವೇದ್ಯತ್ವವು ಸತ್ಯವಲ್ಲವೆಂದರೆ ಉಪಾಸ್ಯತ್ವವೂ ಹಾಗೇ ಎನಿಸಲಾರದೇ ? ಬ್ರಹ್ಮವು ಅರಿವಿಗೊಳಗಾಗುವಾಗ ಬುದ್ಧಿವೃತ್ತಿಯು ಅದನ್ನು ಮುಸುಕುವದೆಂದರೆ ಉಪಾಸನೆಯಲ್ಲಿಯೂ ಹಾಗೇ ಆಗುವದು.

—ಯುಕ್ತಿಶೂನ್ಯವಾದ ನಿಂದೆಯನ್ನೇ ಮಾಡುವದೆಂದರೆ ನಿನ್ನ ಪಕ್ಷದಲ್ಲಿಯೂ ಅದು ಇದ್ದೇ ಇದೆ.

**ಕಾ ತೇ ಭಕ್ತಿರುಪಾಸ್ತೌ ಚೇತ್ಕಸ್ತೇ ದ್ವೇಷಸ್ತದೀರಯ ।**
**ಮಾನಾಭಾವೋ ನ ವಾಚ್ಯೋಽಸ್ಯಾಂ ಬಹುಶ್ರುತಿಷುದರ್ಶನಾತ್ ॥೬೨॥**

ಉಪಾಸನೆಯ ಬಗೆಗೆ ನಿನಗಿಷ್ಟು ಆದರವೇಕೆ ? ಎನ್ನುವೆಯಾದರೆ ಅದರ ಬಗೆಗೆ ನಿನಗಿಷ್ಟು ದ್ವೇಷವೇಕೆ ? ಹೇಳು. ಅನೇಕ ಶ್ರುತಿಗಳಲ್ಲಿ ಬಂದಿರುವದರಿಂದ ಉಪಾಸನೆಯ ಬಗೆಗೆ ಪ್ರಮಾಣವಿಲ್ಲ ಎಂದು ಅನ್ನಲು ಬರುವದಿಲ್ಲ.

—ಆ ಶ್ರುತಿಗಳ ವಿವರಣ.

**ಉತ್ತರಸ್ಮಿಂಸ್ತಾಪನೀಯೇ ಶೈಬ್ಯಪ್ರಶ್ನೇಽಥ ಕಾಠಕೇ ।**
**ಮಾಂಡೂಕ್ಯಾದೌ ಚ ಸರ್ವತ್ರ ನಿರ್ಗುಣೋಪಾಸ್ತಿರೀರಿತಾ ॥೬೩॥**

ಅಥರ್ವವೇದದ ನೃಸಿಂಹೋತ್ತರ ತಾಪನೀಯೋಪನಿಷತ್ತಿನಲ್ಲಿ, ಪ್ರಶ್ನೋಪನಿಷತ್ತಿನ ಐದನೆಯ ಶೈಬ್ಯಪ್ರಶ್ನದಲ್ಲಿ, ಕಾಠಕೋಪನಿಷತ್ತಿನ ಎರಡನೆಯ ವಲ್ಲಿಯಲ್ಲಿ, ಮಾಂಡೂಕ್ಯದ ಆರಂಭದಲ್ಲಿ, ತೈತ್ತರೀಯ ಮೊದಲಾದ ಬೇರೆ ಅನೇಕ ಉಪನಿಷತ್ತುಗಳಲ್ಲಿ ನಿರ್ಗುಣೋಪಾಸನೆಯ ವಿಷಯ ಹೇಳಿದ್ದಾರೆ.

—ಆದರೆ ನಿರ್ಗುಣೋಪಾಸನೆಯ ಅನುಷ್ಠಾನವು ಹೇಗೆ ?

**ಅನುಷ್ಠಾನಪ್ರಕಾರೋಽಸ್ಯಾಃ ಪಂಚೀಕರಣ ಈರಿತಃ ।**
**ಜ್ಞಾನಸಾಧನಮೇತಚ್ಚೇನ್ನೇತಿ ಕೇನಾತ್ರ ವಾರಿತಮ್ ॥೬೪॥**

ಇದರ ಅನುಷ್ಠಾನದ ಬಗೆಯನ್ನು ಪಂಚೀಕರಣದಲ್ಲಿ ಹೇಳಿದುದಾಗಿದೆ. ಅದು ಜ್ಞಾನದ ಸಾಧನವಾಗಿದೆ ಎಂದರೆ ಜ್ಞಾನ ಸಾಧನವಲ್ಲವೆಂದು ಯಾರು ಹೇಳುತ್ತಾರೆ?

(ಬೇರೆ ಬೇರೆ ಉಪನಿಷತ್ತುಗಳಲ್ಲಿ ನಿರ್ಗುಣೋಪಾಸನೆ ಬಂದಿದ್ದರೂ, ಆ ಎಲ್ಲ ವಿಷಯಗಳನ್ನು ಒಂದೇ ಕಡೆಗೆ ನೋಡಬೆಕೆನ್ನುವವರು ಶ್ರೀ ಸುರೇಶ್ವರಾಚಾರ್ಯರ ಪಂಚೀಕರಣವನ್ನು ನೋಡಬೇಕು.)

—ಹಾಗಾದರೆ ಎಲ್ಲರೂ ಸಗುಣೋಪಾಸನೆ ಮಾತ್ರ ಮಾಡುತ್ತಾರೆ. ನಿರ್ಗುಣೋಪಾಸನೆಯನ್ನು ಯಾರೂ ಮಾಡುವದಿಲ್ಲವಲ್ಲ.

**ನಾನುತಿಷ್ಠತಿ ಕೋಽಪ್ಯೇತದಿತಿ ಚೇನ್ಮಾಽನುತಿಷ್ಠತು ।**
**ಪುರುಷಸ್ಯಾಪರಾಧೇನ ಕಿಮುಪಾಸ್ತಿಃ ಪ್ರದುಷ್ಯತಿ ? ॥೬೫॥**

ಯಾರೂ ಇದರ ಅನುಷ್ಠಾನ ಮಾಡುವದಿಲ್ಲವಲ್ಲ ಎಂದರೆ ಮಾಡದಿದ್ದರೆ ಇಲ್ಲ. ಮನುಷ್ಯರು ಮಾಡುವ ಅಪರಾಧಗಳಿಂದ ಉಪಾಸನೆಯು ದೂಷಿತವಾಗಬಲ್ಲದೇ ?

—ಪ್ರಮಾಣಸಿದ್ಧವಾದ ನಿರ್ಗುಣೋಪಾಸನೆಯನ್ನು ಯಾರೂ ಮಾಡುವದಿಲ್ಲವೆಂದ ಮಾತ್ರಕ್ಕೆ ಅದು ತ್ಯಾಜ್ಯವೆಂದೇನೂ ಹೇಳಬೇಕಾಗಿಲ್ಲ.

**ಇತೋಽಪ್ಯತಿಶಯಂ ಮತ್ವಾ ಮಂತ್ರಾನ್ವಶ್ಯಾದಿಕಾರಿಣಃ ।**
**ಮೂಢಾ ಜಪಂತು ತೇಭ್ಯೋಽತಿಮೂಢಾಃ ಕೃಷಿಮುಪಾಸ-ತಾಮ್ ॥೬೬॥**

ಮೂಢರಾದವರು ಸಗುಣೋಪಾಸನೆಗಿಂತ ಹೆಚ್ಚಿನ ಫಲಪ್ರದವೆಂದು ತಿಳಿದು ವಶೀಕರಣವೇ ಮೊದಲಾದ ಮಂತ್ರಗಳನ್ನು ಜಪಿಸಲಿ. ಅಥವಾ ಅದಕ್ಕಿಂತ ಮೂಢರಾದವರು ಒಕ್ಕಲುತನ ಮಾಡಲಿ.

(ತಾತ್ಕಾಲಕ್ಕೆ ಫಲವನ್ನು ಬಯಸುವವರು ನಾಶವಂತವೆನಿಸುವ ಐಹಿಕ ಸುಖ-ಸೌಕರ್ಯಗಳನ್ನು ಬಯಸಲಿ. ಆದರೆ ಅಕ್ಷಯಸುಖವನ್ನು ಬಯಸುವವನು ಎಂದರೆ ಮುಮುಕ್ಷುವು ನಿರ್ಗುಣೋಪಾಸನೆಯನ್ನು ಬಿಡುವದಿಲ್ಲ.)

—ಈ ಚರ್ಚೆಯನ್ನು ಇನ್ನು ನಿಲ್ಲಿಸಿ ಸದ್ಯದ ವಿಷಯದತ್ತ ತಿರುಗೋಣ.

**ತಿಷ್ಠಂತು ಮೂಢಾಃ ಪ್ರಕೃತಾ ನಿರ್ಗುಣೋಪಾಸ್ತಿರೀರ್ಯತೇ ।**
**ವಿದ್ಯೈಕ್ಯಾತ್ ಸರ್ವಶಾಖಾಸ್ಥಾನ್ ಗುಣಾಸತ್ರೋಪ**
**ಸಂಹರೇತ್ ॥೬೭॥**

ಮೂರ್ಖರ ಮಾತಿರಲಿ. ಸದ್ಯಕ್ಕೆ ನಿರ್ಗುಣೋಪಾಸನೆಯನ್ನು ಹೇಳುತ್ತೇವೆ. ಈ ವಿದ್ಯೆ ಎಂಬ ನಿರ್ಗುಣೋಪಾಸನೆಯು ಎಲ್ಲ ಕಡೆಗೆ ಒಂದೇ ರೂಪದ್ದಾದುದರಿಂದ ಎಲ್ಲ ಶಾಖೆಗಳಲ್ಲಿರುವ ಗುಣಗಳನ್ನು ಈ ಉಪಾಸನೆಯಲ್ಲಿ ಅಳವಡಿಸಿಕೊಳ್ಳಬೇಕು.

( 'ಸರ್ವ ವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾತ್' ಬ್ರ. ಸೂ. ೩-೩-೧.)

— ಈ ಅರ್ಥವನ್ನೇ ವಿಸ್ತರಿಸುತ್ತಾರೆ.

**ಆನಂದಾದೇರ್ವಿಧೇಯಸ್ಯ ಗುಣಸಂಘಸ್ಯ ಸಂಹೃತಿಃ ।**
**ಆನಂದಾದಯ ಇತ್ಯಸ್ಮಿನ್ ಸೂತ್ರೇ ವ್ಯಾಸೇನ ವರ್ಣಿತಾ ॥೬೮॥**

ಆನಂದಾದಿ ವಿಧೇಯ ಎಂದರೆ ವಿಧಿ ವಾಕ್ಯದಿಂದ ತಿಳಿದುಬರುವ ಗುಣ ಸಮೂಹವನ್ನು ನಿರ್ಗುಣ ಬ್ರಹ್ಮದಲ್ಲಿ ಗ್ರಹಿಸಿಕೊಳ್ಳಬೇಕು ಎಂದು 'ಆನಂದಾದಯಃ, ಎಂಬ ಸೂತ್ರದಲ್ಲಿ ವ್ಯಾಸರು ಹೇಳಿದ್ದಾರೆ.

('ಬ್ರಹ್ಮವು ಆನಂದರೂಪವು' 'ಬ್ರಹ್ಮವು ವಿಜ್ಞಾನ ಹಾಗೂ ಆನಂದ ರೂಪವು, ಅಲ್ಲದೆ ಶುದ್ಧ–ಬುದ್ಧ–ಮುಕ್ತ–ಸತ್ಯ–ನಿರಂಜನ–ವಿಭು–ದ್ವೈತ ಶೂನ್ಯ–ಆನಂದ–ಪರ–ಸರ್ವಾಂತರ್ಯಾಮಿ ಏಕರಸ ಇತ್ಯಾದಿ ವಿಧೆಯಗುಣಗಳು. ಕಾರಣ ಬ್ರಹ್ಮನ ಆನಂದಾದಿ ಎಲ್ಲ ಗುಣಗಳನ್ನು ಎಲ್ಲಶಾಖೆಗಳ ಉಪಾಸನೆಯಲ್ಲಿಯೂ ಸ್ವೀಕರಿಸಬೇಕೆಂಬುದು ವ್ಯಾಸ ಸೂತ್ರದ ತಾತ್ಪರ್ಯವಾಗಿದೆ)

—ಹೀಗೆ ವಿಧೇಯಗುಣಗಳಂತೆ ನಿಷೇಧ್ಯ ಎಂದರೆ ನಿಷೇಧವಾಕ್ಯಗಳಿಂದ ತಿಳಿದುಬರುವ ಗುಣಗಳನ್ನೂ ಸ್ವೀಕರಿಸಬೇಕೆಂದು ವ್ಯಾಸರು ಹೇಳುತ್ತಾರೆ.

**ಅಸ್ಥೂಲಾದೇರ್ನಿಷೇಧ್ಯಸ್ಯ ಗುಣಸಂಘಸ್ಯ ಸಂಹೃತಿಃ ।**
**ತಥಾ ವ್ಯಾಸೇನ ಸೂತ್ರೇಽಸ್ಮಿನ್ನುಕ್ತಾಽಕ್ಷರಧಿಯಾಂ**
**ತ್ವಿತಿ ॥೬೯॥**

ಇದರಂತೆ ವ್ಯಾಸಮಹರ್ಷಿಗಳು 'ಅಕ್ಷರಧಿಯಾಂ ತು, ಎಂಬ ಸೂತ್ರದಲ್ಲಿ ಅಸ್ಥೂಲಾದಿನಿಷೇಧ್ಯ ಗುಣಸಮೂಹದ ಗ್ರಹಣವನ್ನು ಹೇಳಿದ್ದಾರೆ.

('ಅಸ್ಥೂಲಾದಿ, ಎಂಬಲ್ಲಿ ಆದಿಶಬ್ದದಿಂದ ಅನಣು-ಅಹ್ರಸ್ವ-ಅದೃಶ್ಯ ಅಗ್ರಾಹ್ಯ-ಅಶಬ್ದ-ಅಸ್ಪರ್ಶ-ಅರೂಪ-ಅವ್ಯಯ ಇತ್ಯಾದಿ ಭಿನ್ನವೇದ ಶಾಖೆಗಳಲ್ಲಿಯ ನಿಷೇಧ್ಯ ಶಬ್ದಗಳನ್ನು ಗ್ರಹಿಸಬೇಕು. 'ಅಕ್ಷರದಿಯಾಂ ತುಂ' ೩-೩-೨೩ ಎಂಬ ಮೇಲಿನಸೂತ್ರದಲ್ಲಿ ಅಕ್ಷರದೀ ಎಂದರೆ ಬ್ರಹ್ಮ ಸಂಜ್ಞಕ ಧರ್ಮಿಯಲ್ಲಿ ಧ್ವೈತವಿಷಯಕವಾದ ವಿಶೇಷವನ್ನು ನಿಷೇಧವಮಾಡುವ ಬುದ್ಧಿಯು ಎಲ್ಲಶಾಖೆಗಳ ಉಪನಿಷತ್ತುಗಳಲ್ಲಿಯೂ ಸಮಾನವಾಗಿದೆ.)

ನಿರ್ಗುಣಬ್ರಹ್ಮೋಪಾಸನೆಯಲ್ಲಿ ಗುಣಗಳನ್ನು ಗ್ರಹಿಸುವದು ಯೋಗ್ಯವಲ್ಲ ಯಾಕಂದರೆ ಹಾಗೆ ಮಾಡಿದರೆ ನಿರ್ಗುಣೋಪಾಸನೆ ಎಂಬುದರಲ್ಲಿ ಬಾಧೆಯುಂಟಾಗುವದು ಎಂದರೆ ಸೂತ್ರಕಾರರು ಹೇಳಿದ ಮಾತನ್ನೇ ನಾವು ಹೇಳುತ್ತಿರುವದರಿಂದ ನಮಗೆ ಈ ಪ್ರಶ್ನೆಮಾಡುವದು ಸರಿಯಲ್ಲವೆನ್ನುತ್ತಾರೆ.

**ನಿರ್ಗುಣಬ್ರಹ್ಮತತ್ತ್ವಸ್ಯ ವಿದ್ಯಾಯಾಂ ಗುಣಸಂಹೃತಿಃ ।**
**ನ ಯುಜ್ಯೇತೇತ್ಯುಪಾಲಂಭೋ ವ್ಯಾಸಂ ಪ್ರತ್ಯೇವ ಮಾಂ ನ ತು ॥೭೦॥**

ನಿರ್ಗುಣ ಬ್ರಹ್ಮತತ್ವದ ಉಪಾಸನೆಯಲ್ಲಿ ಗುಣಗಳನ್ನು ಗ್ರಹಿಸುವದು ಯೋಗ್ಯವಲ್ಲ ಇತ್ಯಾದಿ ದೋಷಗಳನ್ನು ವ್ಯಾಸರಿಗೇ ಅಂಟಿಸಬೇಕು. ನನಗಲ್ಲ.

—ಭಂಗಾರಬಣ್ಣದ ಮೀಸೆ ಮುಂತಾದವುಗಳನ್ನು ಹೇಳಿದಂತೆ ಇಲ್ಲಿ ಮೂರ್ತಿ ವಿಶಿಷ್ಟಗುಣಗಳನ್ನು ಹೇಳದಿರುವುದರಿಂದ ಇದು ನಿರ್ಗುಣೋಪಾಸನೆಯೇ ಆಗಬಲ್ಲದು ಎಂದರೆ ಅದಕ್ಕೆನೂ ಅಡ್ಡಿ ಇಲ್ಲ ಎನ್ನುತ್ತಾರೆ.

**ಹಿರಣ್ಯಶ್ಮಶ್ರು ಸೂರ್ಯಾದಿ ಮೂರ್ತೀನಾಮನುದಾಹೃತೇಃ ।**
**ಅವಿರುದ್ಧಂ ನಿರ್ಗುಣತ್ವಮಿತಿ ಚೇತ್ತುಷ್ಯತಾಂ ತ್ವಯಾ ॥೭೧॥**

ಭಂಗಾರದ ಬಣ್ಣದ ಗಡ್ಡ-ಮೀಸೆ ಇತ್ಯಾದಿ ಲಕ್ಷಣಗಳಿಂದ ಕೂಡಿದ ಸೂರ್ಯನ ಮೂರ್ತಿಯನ್ನು ಹೇಳಿದಂತೆ ಇಲ್ಲಿ ಉಲ್ಲೇಖವಿಲ್ಲವಾದುದರಿಂದ ಆನಂಡವೇ ಮೊದಲಾದ ರೂಪಗಳು ನಿರ್ಗುಣತ್ವಕ್ಕೇನೂ ವಿರೋಧವನ್ನು ಉಂಟುಮಾಡುವುದಿಲ್ಲ ಎಂದರೆ ಹಾಗೇಸಂತೋಷಪಡು.

( ಛಾಂದೋಗ್ಯದ ಸಗುಣೋಪಾಸನಲ್ಲಿ ಮೇಲಿನಂತೆ ಸೂರ್ಯನ ವರ್ಣನೆಇದೆ)

—ಇರಲಿ. ಆನಂದಾದಿ ವಿಧೇಯಗುಣಗಳು, ಅಸ್ಥೂಲಾದಿ ನಿಷೇಧ್ಯ ಗುಣಗಳು ಇವೆರಡನ್ನೂ ಉಪಾಸ್ಯ ತತ್ವದಲ್ಲಿ ಸೇರಿಸುವದು ಶಕ್ಯವಿಲ್ಲ. ಅಂದ ಮೇಲೆ ಅಂಥ ಗುಣಯುಕ್ತವಾದ ಬ್ರಹ್ಮೋಪಾಸನೆ ಮಾಡುವದು ಹೇಗೆ ?

**ಗುಣಾನಾಂ ಲಕ್ಷಕತ್ವೇನ ನ ತತ್ವೇಽಂತಃ ಪ್ರವೇಶನಮ್ ।**
**ಇತಿ ಚೇದಸ್ತ್ವೇವಮೇವ ಬ್ರಹ್ಮತತ್ತ್ವಮುಪಾಸ್ಯತಾಮ್॥೭೨॥**

ಆ ಎಲ್ಲ ಗುಣಗಳು ಬ್ರಹ್ಮವನ್ನು ಪರಿಚಯ ಮಾಡಿಕೊಡತಕ್ಕವುಗಳು. ತತ್ವದಲ್ಲಿ ಅವುಗಳನ್ನು ಸೇರಿಸಿಕೊಳ್ಳಲಾಗುವದಿಲ್ಲ ಎಂದರೆ ಹಾಗೇ ಆಗಲಿ. ಬ್ರಹ್ಮತತ್ವದ ಉಪಾಸನೆ ಮಾತ್ರ ನಡಯಲಿ.

—ಆ ಉಪಾಸನೆಯ ರೀತಿ ಹೇಳುತ್ತಾರೆ.

**ಆನಂದಾದಿಭಿರಸ್ಥೂಲಾದಿಭಿಶ್ಚಾತ್ಮಾತ್ರ ಲಕ್ಷಿತಃ ।**
**ಅಖಂಡೈಕರಸಃ ಸೋಽಹಮಸ್ಮೀತ್ಯೇವಮುಪಾಸತೇ ॥೭೩॥**

ಎಲ್ಲ ಉಪನಿಷತ್ತುಗಳಲ್ಲಿ ಯಾವನು ಅಖಂಡನೂ, ಏಕರಸನೂ ಆದ ಆತ್ಮನು ಆನಂದವೇ ಮೊದಲಾದ ಇದ್ದ ಗುಣಗಳಿಂದ, ಅಸ್ಥೂಲವೇ ಮೊದಲಾದ ಇಲ್ಲದ ಗುಣಗಳಿಂದ ಲಕ್ಷಿತನಾಗಿರುವನೋ, ಅವನೇ ನಾನಿರುವೆನೆಂದು ಮುಮುಕ್ಷುಗಳು ಉಪಾಸನೆ ಮಾಡುವರು.

ಹೀಗಿರುವಲ್ಲಿ ಆತ್ಮಜ್ಞಾನ ಮತ್ತು ಉಪಾಸನೆಗಳಲ್ಲಿ ಭೇದವೆಣಿಸುವದೇಕೆ?

**ಬೋಧೋಪಾಸ್ತ್ಯೋರ್ವಿಶೇಷಃ ಕ ಇತಿ ಚೇದುಚ್ಯತೇ ಶೃಣು ।**
**ವಸ್ತುತಂತ್ರೋ ಭವೇದ್ಬೋಧಃ ಕರ್ತೃತಂತ್ರ ಮುಪಾಸನಮ್ ॥೭೪॥**

ಬೋಧ ಮತ್ತು ಉಪಾಸನೆಗಳಲ್ಲಿ ಹೆಚ್ಚು ಕಡಿಮೆ ಏನು ? ಎಂದರೆ ಹೇಳುವೆನು ಕೇಳು. ಬೋಧವು ವಸ್ತುವಿಗೆ ಅಧೀನವಾದುದು. ಉಪಾಸನೆಯು ಅದನ್ನು ಮಾಡುವವನಿಗೆ ಅಧೀನವಾದುದು.

ಬೋಧ ಮತ್ತು ಉಪಾಸನೆಗಳಲ್ಲಿರುವ ಹೆಚ್ಚುಕಡಿಮೆ ಸಿದ್ಧವಾಗುವದಕ್ಕಾಗಿ ಬೋಧಸ್ವರೂಪ-ಕಾರಣ-ಕಾರ್ಯಗಳನ್ನು ತಿಳಿಸುತ್ತಾರೆ.

**ವಿಚಾರಾಜ್ಜಾಯತೇ ಬೋಧೋಽನಿಚ್ಛಾ ಯಂ ನ ನಿವರ್ತಯೇತ್ ।**
**ಸ್ವೋತ್ಪತ್ತಿ ಮಾತ್ರಾತ್ ಸಂಸಾರೇ ದಹತ್ಯಖಿಲ ಸತ್ಯತಾಮ್ ॥೭೫॥**

ವಿಚಾರದಿಂದ ಬೋಧವು ಹುಟ್ಟುತ್ತದೆ. ಬೇಡವೆಂದರೂ ಅದೇನು ಆಗದೆ ಇರುವದಿಲ್ಲ. ಹೀಗೆ ಅದು ಹುಟ್ಟಿದಕೂಡಲೇ ಜಗತ್ತೆಲ್ಲ ನಿಜವೆಂದು ಅಜ್ಞಾನದಿಂದ ತೋರುವದನ್ನು ಅದು ನಾಶಗೊಳಿಸುತ್ತದೆ.

**ತಾವತಾ ಕೃತಕೃತ್ಯಃ ಸನ್ನಿತ್ಯತೃಪ್ತಿಮುಪಾಗತಃ ।**
**ಜೀವನ್ಮುಕ್ತಿ ಮನುಪ್ರಾಪ್ಯ ಪ್ರಾರಬ್ಧ ಕ್ಷಯಮೀಕ್ಷತೇ ॥೭೬॥**

ಆ ಜ್ಞಾನವನ್ನು ಪಡೆದವನು ಅಷ್ಟರಿಂದ ತಾನು ಕೃತಕೃತ್ಯನಾಗಿ ಅಳಿಯದ ತೃಪ್ತಿಯನ್ನು ಹೊಂದಿ ಜೀವನ್ಮುಕ್ತನಾಗಿ ಪ್ರಾರಬ್ಧಕರ್ಮವೆಂದಿಗೆ ತೀರುವದೋ ಎಂದು ನಿರೀಕ್ಷೆ ಮಾಡುತ್ತಾನೆ.

—ಇನ್ನು ಉಪಾಸನೆಯನ್ನು ವಿವರಿಸುತ್ತಾರೆ.

**ಆಪ್ತೋಪದೇಶಂ ವಿಶ್ವಸ್ಯ ಶ್ರದ್ಧಾಲುರವಿಚಾರಯನ್ ।**
**ಚಿಂತಯೇತ್ ಪ್ರತ್ಯಯೈರನ್ಯೈರನಂತರಿತ ವೃತ್ತಿಭಿಃ ॥೭೭॥**

ಉಪಾಸನೆಯನ್ನು ಮಾಡುವವನು ಗುರುವಿನ ಮಾತಿನಲ್ಲಿ ನಂಬಿಕೆ ಇಟ್ಟು ಬೇರೆ ವಿಚಾರ ಮಾಡದೇ ಮತ್ತೊಂದನ್ನು ಚಿಂತಿಸದೇ ಉಪಾಸ್ಯ ಸ್ವರೂಪವನ್ನು ಧ್ಯಾನಿಸಬೇಕು.

—ಎಷ್ಟು ದಿನಗಳವರೆಗೆ ?

**ಯಾವತ್ ಚಿಂತ್ಯಸ್ವರೂಪತ್ವಾಭಿಮಾನಃ ಸ್ವಸ್ಯಜಾಯತೇ ।**
**ತಾವದ್ವಿಚಿಂತ್ಯ ಪಶ್ಚಾಚ್ಚ ತಥೈವಾಮೃತಿ ಧಾರಯೇತ್ ॥೭೮॥**

ನಾನು ಉಪಾಸ್ಯ ಸ್ವರೂಪನೇ ಇರುತ್ತೇನೆ ಎಂಬ ಅಭಿಮಾನ ಮೂಡಬೇಕು. ಅಲ್ಲಿಯವರೆಗೆ ಹೀಗೆ ಚಿಂತಿಸುತ್ತಿದ್ದು ಸಾಯುವವರೆಗೆ ಅದನ್ನು ಮನದಲ್ಲಿಟ್ಟುಕೊಳ್ಳಬೇಕು.

—ಉಪಾಸಕನಿಗೆ ಉಂಟಾಗುವ ಉಪಾಸ್ಯದ ಅಭಿಮಾನವನ್ನು ಉದಾಹರಣೆಯಿಂದ ವಿವರಿಸುತ್ತಾರೆ.

**ಬ್ರಹ್ಮಚಾರೀ ಭಿಕ್ಷಮಾಣೋ ಯುತಃ ಸಂವರ್ಗವಿದ್ಯಯಾ ।**
**ಸಂವರ್ಗರೂಪತಾಂ ಚಿತ್ತೇ ಧಾರಯಿತ್ವಾ ಹ್ಯಭಿಕ್ಷತ ॥೭೯॥**

ಸಂವರ್ಗ ವಿದ್ಯೆಯಿಂದ ಕೂಡಿದ ಪ್ರಾಣದೇವತೆಯ ಉಪಾಸನೆಯನ್ನು ಮಾಡುವ ಒಬ್ಬ ಬ್ರಹ್ಮಚಾರಿಯು ಭಿಕ್ಷೆ ಬೇಡುವಾಗ ಮನದಲ್ಲಿ 'ನಾನು ಸಂವರ್ಗರೂಪನಿರುತ್ತೇನೆ' ಎಂಬ ಭಾವನೆಯನ್ನಿಟ್ಟುಕೊಂಡೇ ಭಿಕ್ಷೆಯನ್ನು ಬೇಡಿದನು.

(ಸಂವರ್ಗವೆಂದರೆ ದೇವತೆಗಳನ್ನು ಹಾಗೂ ಇಂದ್ರಿಯಗಳನ್ನು ಒಂದುಗೂಡಿಸುವದು ಎಂದು ಅರ್ಥ. ಈ ಸಂವರ್ಗ ಗುಣ ವಿಶಿಷ್ಟ ಪ್ರಾಣೋಪಾಸನೆಯನ್ನು ಮಾಡುವ ಒಬ್ಬ ಬ್ರಹ್ಮಚಾರಿಯು 'ಅಭಿಪ್ರತಾರಿ' ಎಂಬ ರಾಜನ ಮುಂದೆ 'ಮಹಾತ್ಮನಃ ಚತುರೋ ದೇವ ಏಕಃ' ಈ ಮಂತ್ರದಿಂದ 'ಅಪಾನವೇ ಮೊದಲಾದ ನಾಲ್ವರನ್ನು ನುಂಗಿದ ಪ್ರಾಣವೇ ನಾನು' ಎಂದು ಮೊದಲಾಗಿ ತನ್ನ ಸಂವರ್ಗರೂಪವನ್ನು ಹೊರಪಡಿಸುತ್ತ ಭಿಕ್ಷೆ ಬೇಡಿದನು. ಎಂದು ಛಾಂದೋಗ್ಯದಲ್ಲಿದೆ.)

ಹಿಂದೆ ೭೫ನೇ ಶ್ಲೋಕದಲ್ಲಿ ಹೇಳಿದ ಅನಿಚ್ಛೆಯು ಜ್ಞಾನವಾಗುವದನ್ನು ತಡೆಯಲಾರದೆಂಬ ಬೋಧ ಧರ್ಮಕ್ಕಿಂತಲೂ ಉಪಾಸನೆಯ ವೈಲಕ್ಷಣ್ಯವನ್ನು ಹೇಳುತ್ತಾರೆ.

**ಪುರುಷಸ್ಯೇಚ್ಛಯಾ ಕರ್ತುಮಕರ್ತುಂ ಕರ್ತುಮನ್ಯಥಾ ।**
**ಶಕ್ಯೋಪಾಸ್ತಿರತೋ ನಿತ್ಯಂ ಕುರ್ಯಾತ್ ಪ್ರತ್ಯಯ**
**ಸಂತತಿಮ್ ॥೮೦॥**

ಉಪಾಸನೆಯು ಪುರುಷನ ಇಚ್ಛೆಗೆ ಅಧೀನವಾದುದರಿಂದ ಮಾಡುವದಾಗಲೀ, ಮಾಡದಿರುವದಾಗಲೀ, ಅಥವಾ ಬೇಕಾದಂತೆ ಮಾಡುವದಾಗಲೀ ಶಕ್ಯವಿದೆ. ಇದೇನೇ ಆದರೂ ಯಾವಾಗಲೂ ತತ್ವಾನುಸಂಧಾನ ಮಾಡುತ್ತಿರಬೇಕು.

—ಹೀಗೆ ಸತತ ಚಿಂತನೆಯ ಫಲ.

**ವೇದಾಧ್ಯಾಯೀ ಹ್ಯಪ್ರಮತ್ತೋಽಧೀತೇ ಸ್ವಪ್ನೇಽಧಿ ವಾಸತಃ ।**
**ಜಪಿತಾ ತು ಜಪತ್ಯೇವ ತಥಾ ಧ್ಯಾತಾಽಪಿ ವಾಸಯೇತ್ ॥೮೧॥**

ಯಾವಾಗಲೂ ದಕ್ಷತೆಯಿಂದ ವೇದಾಧ್ಯಯನ ಮಾಡುವವನು ಬಲವಾದ ವಾಸನೆಯಿಂದ ಸ್ವಪ್ನದಲ್ಲಿಯೂ ಅಧ್ಯಯನ ಮಾಡುವನು. ಅಥವಾ ಜಪಿಸುವವನು ಜಪಮಾಡುವನು. ಅದರಂತೆ ಧ್ಯಾನ ಮಾಡುವವನು ಕನಸಿನಲ್ಲಿಯೂ ಧ್ಯಾನಿಸಬೇಕು.

—ಕನಸು ಮೊದಲಾದವುಗಳಲ್ಲಿ ಕೂಡ ಧ್ಯಾನದ ಅನುವೃತ್ತಿಯಾಗುವದರ ಕಾರಣ.

**ವಿರೋಧಿಪ್ರತ್ಯಯಂ ತ್ಯಕ್ತ್ವಾ ನೈರಂತರ್ಯೇಣ ಭಾವಯನ್ ।**
**ಲಭತೇ ವಾಸನಾವೇಶಾತ್ ಸ್ವಪ್ನಾದಾವಪಿ ಭಾವನಾಮ್ ॥೮೨॥**

ಧ್ಯಾನಕ್ಕೆ ವಿರೋಧಿಯಾಗುವಂಥ ಚಿಂತನೆಗಳನ್ನೆಲ್ಲ ಬಿಟ್ಟು ಯಾವಾಗಲೂ ಧ್ಯಾನತತ್ಪರನಾಗಿರುವ ಮುಮುಕ್ಷುವು ಭಾವನೆಯ ಉತ್ಕಟತೆಯ ಬಲದಿಂದ ಕನಸಿನಲ್ಲಿಯೂ ಅದನ್ನೇ ಕನವರಿಸಿಕೊಳ್ಳುವನು.

—ಆದರೆ ಪ್ರಾರಬ್ಧಕರ್ಮಾನುಸಾರವಾಗಿ ದೊರೆಯುವ ವಿಷಯಗಳನ್ನು ಭೋಗಿಸುತ್ತಿರುವವನಿಗೆ ನಿರಂತರ ಧ್ಯಾನದ ಸಿದ್ಧಿಯಾಗುವ ಬಗೆ ಹೇಗೆ ?

**ಭುಂಜಾನೋಽಪಿ ನಿಜಾರಬ್ಧಮಾಸ್ಥಾತಿಶಯತೋಽನಿಶಮ್ ।**
**ಧ್ಯಾತುಂ ಶಕ್ತೋ ನ ಸಂದೇಹೋ ವಿಷಯವ್ಯಸನೀ ಯಥಾ ॥೮೩॥**

ವಿಷಯಗಳನ್ನು ಅತಿಶಯವಾಗಿ ಪ್ರೀತಿಸುವವನಂತೆ, ತನ್ನ ಪ್ರಾರಬ್ಧ ಕರ್ಮವನ್ನು ಭೋಗಿಸುವವನಿಂದ ಬಲವಾದ ಪ್ರೀತಿಯಿಂದ ಯಾವಾಗಲೂ ಮಾಡಲು ಸಾಧ್ಯವೆಂಬಲ್ಲಿ ಎಷ್ಟೂ ಸಂಶಯವಿಲ್ಲ.

— ಮೇಲಿನ ದೃಷ್ಟಾಂತದ ವಿವರಣ.

**ಪರವ್ಯಸನಿನೀ ನಾರೀ ವ್ಯಗ್ರಾಽಪಿ ಗೃಹಕರ್ಮಣಿ ।**
**ತದೇವಾಸ್ವಾದಯತ್ಯಂತಃ ಪರಸಂಗ ರಸಾಯನಮ್ ॥೮೪॥**

ಪರಪುರುಷನ ನವಿಗಂಡ ಹೆಂಗಸು ಮನೆವಾರ್ತೆಯಲ್ಲಿ ತೊಡಗಿದಂತಿದ್ದರೂ, ಮನಸ್ಸಿನಲ್ಲಿ ಆ ಪರಪುರುಷನ ಸಹವಾಸರೂಪ ರಸಾಯನವನ್ನು ಸವಿಯುತ್ತಿರುವಳು.

—ಹಾಗಿದ್ದರೆ ಅವಳ ಮನೆವಾರ್ತೆ ಕಡದೇ ?

**ಪರಸಂಗಂ ಸ್ವಾದಯಂತ್ಯಾ ಅಪಿ ನೋ ಗೃಹಕರ್ಮತತ್ ।**
**ಕುಂಠೀಭವೇದಪಿ ತ್ವೇತದಾಪಾತೇನೈವ ವರ್ತತೇ ॥೮೫॥**

ಹಾಗೆ ಪರಸಂಗದ ಸವಿಯುಣ್ಣುತ್ತಿದ್ದರೂ ಅವಳ ಮನೆವಾರ್ತೆ ಏನೂ ತಡೆದುನಿಲ್ಲುವದಿಲ್ಲ. ಅದು ಹೇಗೆಹೇಗೋ ಸಾಗಿಹೋಗುವದು.

—ಅವಳ ಕಾರ್ಯ ಹೇಗೆಹೇಗೋ ಎಂಬುದರ ಸ್ಪಷ್ಟೀಕರಣ.

**ಗೃಹಕೃತ್ಯವ್ಯಸನಿನೀ ಯಥಾ ಸಮ್ಯಕ್ಕರೋತಿತತ್ ।**
**ಪರವ್ಯಸನಿನೀ ತದ್ವನ್ನ ಕರೋತ್ಯೇವ ಸರ್ವಥಾ ॥೮೬॥**

ಮನೆಯನ್ನು ಹೆಚ್ಚಾಗಿ ಹಚ್ಚಿಕೊಂಡವಳು ಮನೆವಾರ್ತೆಯನ್ನು ಹೇಗೆ ಉತ್ತಮವಾಗಿ ಸಾಗಿಸಬಲ್ಲಳೋ, ಹಾಗೆ ಪರಪುರುಷರ ವ್ಯಸನ ಹತ್ತಿದವಳು ಎಂದಿಗೂ ಸಾಗಿಸಲಾರಳು.

—ಈ ದೃಷ್ಟಾಂತವನ್ನು ದಾರ್ಷ್ಟಾಂತಿಕದಲ್ಲಿ ಜೋಡಿಸುತ್ತಾರೆ.

**ಏವಂ ಧ್ಯಾನೈಕನಿಷ್ಠೋಽಪಿ ಲೇಶಾಲ್ಲೌಕಿಕಮಾಚರೇತ್ ।**
**ತತ್ತ್ವವಿತ್ತ್ವವಿರೋಧಿತ್ವಾಲ್ಲೌಕಿಕಂ ಸಮ್ಯಗಾಚರೇತ್ ॥೮೭॥**

ಇದರಂತೆ ಧ್ಯಾನನಿಷ್ಠ ಪುರುಷನು ಸ್ವಲ್ಪವೇ ಲೌಕಿಕ ಕರ್ಮಗಳನ್ನು ಮಾಡುವನು. ಆದರೆ ಜ್ಞಾನಿಯು ಲೌಕಿಕ ಕರ್ಮವು ಜ್ಞಾನಕ್ಕೆ ವಿರೋಧಿ ಯಲ್ಲವಾದುದರಿಂದ ಅದನ್ನು ಉತ್ತಮವಾಗಿ ಮಾಡುವನು.

(ಪರಪುರುಷನ ವ್ಯಸನವಂಟಿದ ಸ್ತ್ರೀಯಂತೆ ಧ್ಯಾನನಿಷ್ಠನು ಲೌಕಿಕ ಕರ್ಮ ಮಾಡುವನು).

—ಲೌಕಿಕಕರ್ಮಗಳು ತತ್ತ್ವಜ್ಞಾನಕ್ಕೆ ವಿರೋಧಿಗಳಲ್ಲವೆಂಬುದು ಹೇಗೆ?

**ಮಾಯಾಮಯಃ ಪ್ರಪಂಚೋಽಯಮಾತ್ಮಾ ಚೈತನ್ಯ ರೂಪಧೃಕ್ ।**
**ಇತಿ ಬೋಧೇ ವಿರೋಧಃ ಕೋ ಲೌಕಿಕ ವ್ಯವಹಾರಿಣಃ॥೮೮॥**

ಈ ಪ್ರಪಂಚವೆಲ್ಲ ಮಾಯಾಮಯವಾದುದು. ಆತ್ಮನು ಚೈತನ್ಯ ರೂಪನು. ಇಷ್ಟು ಬೋಧವಾಗಿರುವಾಗ ಲೌಕಿಕ ವ್ಯವಹಾರ ಮಾಡುವವನಿಗೆ ಅಡ್ಡಿ ಏನು ?

—ಇದನ್ನೇ ಸ್ಪಷ್ಟಗೊಳಿಸುತ್ತಾರೆ.

**ಅಪೇಕ್ಷತೇ ವ್ಯವಹೃತಿರ್ನ ಪ್ರಪಂಚಸ್ಯ ವಸ್ತುತಾಮ್ ।**
**ನಾಪ್ಯಾತ್ಮಜಾಡ್ಯಂ ಕಿಂ ತ್ವೇಷಾ ಸಾಧನಾನ್ಯೇವ ಕಾಂಕ್ಷತಿ॥೮೯॥**

ವ್ಯವಹಾರವು ಪ್ರಪಂಚದ ಸತ್ಯತ್ವವನ್ನೇನೂ ಅಪೇಕ್ಷಿಸುವದಿಲ್ಲ. ಮತ್ತು ಆತ್ಮನ ಜಡತ್ವವನ್ನೂ ಬಯಸುವದಿಲ್ಲ. ಆದರೆ ವ್ಯವಹಾರವು ಸಾಧನಗಳನ್ನು ಮಾತ್ರ ಇಚ್ಛಿಸುತ್ತದೆ.

—ಸರಿ. ಹಾಗಾದರೆ ವ್ಯವಹಾರ ಸಾಧನಗಳಾದರೂ ಯಾವವು ?

**ಮನೋವಾಕ್ಕಾಯ ತದ್ಬಾಹ್ಯ ಪದಾರ್ಥಾಃ ಸಾಧನಾನಿ ತಾನ್ ।**
**ತತ್ತ್ವವಿನ್ನೋಪಮೃದ್ನಾತಿ ವ್ಯವಹಾರೋಽಸ್ಯ ನೋ ಕುತಃ॥೯೦॥**

ಮನ–ಮಾತು–ಶರೀರ ಮತ್ತು ಇವುಗಳ ಹೊರಗಿರುವ ಪದಾರ್ಥಗಳು ಇವೇ ವ್ಯವಹಾರದ ಸಾಧನಗಳು. ತತ್ವವನ್ನು ತಿಳಿದವನು ಅವುಗಳನ್ನು ನಾಶಗೊಳಿಸುವದಿಲ್ಲ. ಅಂದಮೇಲೆ ಅವನ ವ್ಯವಹಾರವು ಯಾಕೆ ಸಾಗದು ?

—ವಿಷಯಗಳ ನಾಶವಾಗದಿದ್ದರೂ, ಜ್ಞಾನಿಯಾದವನು ಚಿತ್ತವನ್ನು ನಾಶಗೊಳಿಸಬೇಕಾಗುವದಲ್ಲ.

**ಉಪಮೃದ್ನಾತಿ ಚಿತ್ತಂ ಚೇದ್ಧ್ಯಾತಾಽಸೌ ನ ತು ತತ್ತ್ವವಿತ್ ।**
**ನ ಬುದ್ಧಿಂ ಮರ್ದಯನ್ ದೃಷ್ಟೋ ಘಟತತ್ತ್ವಸ್ಯ ವೇದಿತಾ॥೯೧॥**

ಅವನಿನ್ನೂ ಚಿತ್ತವನ್ನು ಹಿಂಡಿ ಹಿಪ್ಪಿ ಮಾಡುವನೆಂದರೆ ಅವನು ಧ್ಯಾನ ಮಾಡುವವನೇ ಹೊರತು ಜ್ಞಾನಿಯಲ್ಲ. ಯಾಕೆಂದರೆ ಘಟದ ಸ್ವರೂಪವನ್ನು ತಿಳಿಯುವವನು ಯಾವನೇ ಇರಲಿ ತನ್ನ ಬುದ್ಧಿಯನ್ನು ಹಿಂಡಿ ಹಿಪ್ಪಿ ಮಾಡಬೇಕಾಗಿಲ್ಲ. ಮತ್ತು ಹಾಗೆ ಕಂಡುಬರುವದೂ ಇಲ್ಲ.

—ಘಟವು ಸ್ಥೂಲವಾದುದರಿಂದ ಸ್ಪಷ್ಟ ಕಾಣುತ್ತದೆ. ಆದುದರಿಂದ ಅದನ್ನು ನೋಡಬೇಕಾದರೆ ಚಿತ್ತನಿರೋಧ ಮಾಡಬೇಕಾಗಿಲ್ಲ. ಆದರೆ ಬ್ರಹ್ಮವು ಸೂಕ್ಷ್ಮವಾಗಿದೆ. ಹೀಗಾಗಿ ಅದನ್ನರಿಯಬೇಕಾದರೆ ಚಿತ್ತನಿರೋಧದ ಅಪೇಕ್ಷೆ ಇರುತ್ತದೆ.

**ಸಕೃತ್ಪ್ರತ್ಯಯಮಾತ್ರೇಣ ಘಟಶ್ಚೇದ್ಭಾಸತೇ ಸದಾ ।**
**ಸ್ವಪ್ರಕಾಶೋಽಯಮಾತ್ಮಾ ಕಿಂ ಘಟವಚ್ಚ ನ ಭಾಸತೇ ॥೯೨॥**

ಒಮ್ಮೆ ತಿಳಿದುಬಿಟ್ಟರಾಯಿತು. ಘಟವು ಯಾವಾಗಲೂ ಬೆಳಗುತ್ತಲೇ ಇರುತ್ತದೆ. ಹೀಗಿರಲು ಸ್ವಪ್ರಕಾಶರೂಪನಾದ ಆತ್ಮನು ಘಟದಂತೆ ಅದೇಕೆ ಬೆಳಗಲಾರನು ?

(ಬ್ರಹ್ಮವು ಸ್ವಪ್ರಕಾಶವಿರುವದರಿಂದ ಘಟಕ್ಕಿಂತಲೂ ಹೆಚ್ಚು ಸ್ಪಷ್ಟವಾಗಿದೆ. ಅದರ ಜ್ಞಾನಕ್ಕೆ ಚಿತ್ತನಿರೋಧದ ಅವಶ್ಯಕತೆ ಎಷ್ಟೂ ಇಲ್ಲ.)

—ಬ್ರಹ್ಮಕ್ಕೆ ಸ್ವಪ್ರಕಾಶತ್ವವಿರುವದು ನಿಜ. ಆದರೆ ಬುದ್ಧಿವೃತ್ತಿಗೆ ಮಾತ್ರ ಅರಿಯುವಿಕೆಯುಂಟು. ಆ ಬುದ್ಧಿವೃತ್ತಿಯು ಕ್ಷಣಿಕವಾಗಿದೆ. ಆದುದರಿಂದ ಬುದ್ಧಿವೃತ್ತಿಯನ್ನು ಮೇಲಿಂದಮೇಲೆ ಬ್ರಹ್ಮನಲ್ಲಿ ಸ್ಥಾಪಿಸುವ ಅವಶ್ಯಕತೆಯುಂಟು.

**ಸ್ವಪ್ರಕಾಶತಯಾ ಕಿಂ ತೇ ತದ್‌ಬುದ್ಧಿಸ್ತತ್ತ್ವವೇದನಮ್ ।**
**ಬುದ್ಧಿಶ್ಚ ಕ್ಷಣನಾಶ್ಯೇತಿ ಚೋದ್ಯಂ ತುಲ್ಯಂ ಘಟಾದಿಷು ॥೯೩॥**

ಆತ್ಮನು ಸ್ವಪ್ರಕಾಶನೆಂದುಬಿಟ್ಟರೆ ನಿನಗಾದ ಲಾಭವೇನು ? ಆತ್ಮವಿಷಯಕವಾದ ಬುದ್ಧಿ ಎಂದರೇ ತತ್ತ್ವಜ್ಞಾನವೆನಿಸುವದು. ಬುದ್ಧಿಯುಮಾತ್ರ ಹುಟ್ಟಿ ಹುಟ್ಟಿ ನಾಶವಾಗುವಂಥದು. ಹೀಗೆಂದು ಪ್ರಶ್ನೆ ಮಾಡುವದಾದರೆ ಘಟಾದಿಗಳ ಅರಿವಿನ ಸಂದರ್ಭದಲ್ಲಿಯೂ ಈ ಆಕ್ಷೇಪವಿದ್ದೇ ಇರುವದು.

—ಮತ್ತೆ ಆಕ್ಷೇಪ ಹಾಗೂ ಸಮಾಧಾನ.

**ಘಟಾದೌ ನಿಶ್ಚಿತೇ ಬುದ್ಧಿರ್ನಶ್ಯತ್ಯೇವ ಯದಾ ಘಟಃ ।**
**ಇಷ್ಟೋ ನೇತುಂ ತದಾ ಶಕ್ಯ ಇತಿ ಚೇತ್ ಸಮಮಾತ್ಮನಿ॥೯೪॥**

ಘಟ ಮೊದಲಾದವನ್ನು ಅರಿತುಕೊಂಡಿದ್ದರೂ ಮುಂದೆ ಕ್ಷಣದಲ್ಲಿಯೇ ಆ ತಿಳಿವಳಿಕೆ ನಾಶವಾಗುವದು. ಹಾಗೆಂದು ಘಟಾದಿಗಳ ಜ್ಞಾನವು ಕ್ಷಣಿಕವೆನ್ನಬಹುದು. ಆದರೆ ಒಂದುಸಾರೆ ಅರಿತುಕೊಂಡ ಘಟದ ವ್ಯವಹಾರವನ್ನು ಬೇಕೆನಿಸಿದಾಗ ಎಂದರೆ ಘಟ ತರುವದನ್ನು, ಒಯ್ಯುವದನ್ನು ಮಾಡಲು ಶಕ್ಯವಿದೆ ಎಂದು ಹೇಳುವೆಯಾದರೆ ಆತ್ಮ ವಿಷಯದಲ್ಲಿಯೂ ಈ ವ್ಯವಹಾರವು ಸಮಾನವಾಗಿದೆ. ಎಂದರೆ ಒಮ್ಮೆ ಆತ್ಮನನ್ನರಿತುಕೊಂಡಮೇಲೆ ಬೇಕೆನಿಸಿದಾಗ ತಾನು ಅರಿತ ಆತ್ಮ ಪ್ರಕಾರವನ್ನು ಕಾಣಬಹುದು.

—'ಆತ್ಮನಿಸಮಮ್' ಎಂಬುದರ ವಿವರಣೆ.

**ನಿಶ್ಚಿತ್ಯ ಸಕೃದಾತ್ಮಾನಂ ಯದಾಪೇಕ್ಷಾ ತದೈವ ತಮ್ ।**
**ವಕ್ತುಂ ಮಂತುಂ ತಥಾಧ್ಯಾತುಂ ಶಕ್ನೋತ್ಯೇವ ಹಿ ತತ್ವವಿತ್ ॥೯೫॥**

ಒಮ್ಮೆ ಆತ್ಮನನ್ನು ಅರಿತುಕೊಂಡು ಬೇಕೆನಿಸಿದಾಗ ಅವನ ವಿಷಯ ಮಾತಾಡುವದಕ್ಕೆ, ಮನನ ಮಾಡುವದಕ್ಕೆ ಅದರಂತೆ ಧ್ಯಾನ ಮಾಡುವದಕ್ಕೆ ಜ್ಞಾನಿಯು ಸಮರ್ಥನಿರುವನು.

—ಉಪಾಸಕನಂತೆ ಜ್ಞಾನಿಯಾದರೂ ಆತ್ಮಾನುಸಂಧಾನ ಮಾಡುತ್ತಿರುವದರಿಂದ ಜಗತ್ತನ್ನು ಮರೆಯುತ್ತಾನೆ.

**ಉಪಾಸಕ ಇವಧ್ಯಾಯನ್‌ಲೌಕಿಕಂ ವಿಸ್ಮರೇದ್ಯದಿ ।**
**ವಿಸ್ಮರತ್ಯೇವ ಸಾಧ್ಯಾನಾದ್ವಿಸ್ಮೃತಿರ್ನ ತು ವೇದನಾತ್ ॥೯೬॥**

ಉಪಾಸಕನಂತೆಯೇ ಧ್ಯಾನಿಸುವ ಜ್ಞಾನಿಕೂಡ ಜಗತ್ತನ್ನು ಮರೆಯುವನೆಂದರೆ ಅವಶ್ಯ ಮರೆಯಲಿ. ಅವನ ಆ ಮರೆಯುವಿಕೆಯು ಧ್ಯಾನದಿಂದ ಆದುದೇ ಹೊರತೂ ಜ್ಞಾನದಿಂದಾದುದಲ್ಲ.

—ಜ್ಞಾನಿಯಾದರೂ ಮುಕ್ತಿಯು ಸಿದ್ಧಿಸುವದಕ್ಕೆ ಬ್ರಹ್ಮನ ಧ್ಯಾನ ಮಾಡಬೇಕು.

**ಧ್ಯಾನಂ ತ್ವೈಚ್ಛಿಕಮೇತಸ್ಯ ವೇದನಾನ್ಮುಕ್ತಿ ಸಿದ್ಧಿತಃ ।**
**ಜ್ಞಾನಾದೇವತು ಕೈವಲ್ಯಮಿತಿ ಶಾಸ್ತ್ರೇಷು ಡಿಂಡಿಮಃ ॥೯೭॥**

ಜ್ಞಾನ ಮಾತ್ರದಿಂದಲೇ ಮುಕ್ತಿಯು ಸಿದ್ಧಿಸುತ್ತಿರುವಾಗ ಅವನಿಗೆ ಧ್ಯಾನದ ಅಗತ್ಯವಿಲ್ಲ. ಇಚ್ಛೆಯಾದರೆ ಮಾಡಬಹುದು. ಯಾಕಂದರೆ ಜ್ಞಾನದಿಂದಲೇ ಕೈವಲ್ಯ (ಮೋಕ್ಷ) ವೆಂದು ಶಾಸ್ತ್ರಗಳು ಘೋಷಿಸುತ್ತವೆ.

— ಹೀಗೆಂದುಬಿಟ್ಟರೆ ಜ್ಞಾನಿಯು ಹೊರಗಿನ ವ್ಯವಹಾರದಲ್ಲಿಯೇ ತೊಡಗುವನೆಂದಂತಾಯಿತಲ್ಲ.

**ತತ್ತ್ವವಿದ್ಯದಿ ನ ಧ್ಯಾಯೇತ್ ಪ್ರವರ್ತೇತ ತದಾ ಬಹಿಃ ।**
**ಪ್ರವರ್ತತಾಂ ಸುಖೇನಾಯಂ ಕೋ ಬಾಧೋಽಸ್ಯ ಪ್ರವರ್ತನೇ ॥೯೮॥**

ಜ್ಞಾನಿಯಾದವನು ಧ್ಯಾನ ಮಾಡುವದನ್ನು ಬಿಟ್ಟರೆ ಅವನು ಹೊರಗಿನ ವ್ಯವಹಾರದಲ್ಲಿ ತೊಡಗುವನು ಎಂದರೆ ಅವನು ಬೇಕಾದಂತೆ ತೊಡಗಲಿ. ಅದರಿಂದ ಅವನಿಗಾಗುವ ಹಾನಿ ಏನು ?

—ಹೀಗೆನ್ನುವದು ಅತಿಪ್ರಸಂಗ ಎಂದರೆ ಮೇರೆ ಮೀರಿದ ಮಾತು.

**ಅತಿಪ್ರಸಂಗ ಇತಿ ಚೇತ್ ಪ್ರಸಂಗಂ ತಾವದೀರಯ ।**
**ಪ್ರಸಂಗೋ ವಿಧಿಶಾಸ್ತ್ರಂ ಚೇನ್ನ ತತ್ತ್ವವಿದಂ ಪ್ರತಿ ॥೯೯॥**

ಅತಿಪ್ರಸಂಗವಾಗುವದೆನ್ನುವೆಯಾದರೆ ಪ್ರಸಂಗವು ಯಾವುದು ? ಅದನ್ನಾದರೂ ಹೇಳು. ಹೀಗೆ ಮಾಡಬೇಕು. ಹೀಗೆ ಮಾಡಬಾರದು. ಎಂದು ವಿಧಿಸುವ ಶಾಸ್ತ್ರವು ಎಂದರೆ ವಿಧಿಶಾಸ್ತ್ರವು ಜ್ಞಾನಿಗಳಿಗೋಸ್ಕರವಲ್ಲ.

—ಅದು ಹೇಗೆ ಎಂಬುದನ್ನು ಹೇಳುತ್ತಾರೆ.

**ವರ್ಣಾಶ್ರಮವಯೋವಸ್ಥಾಭಿಮಾನೋ ಯಸ್ಯ ವಿದ್ಯತೇ ।**
**ತಸ್ಯೈವಚ ನಿಷೇಧಾಶ್ಚ ವಿಧಯಃ ಸಕಲಾ ಅಪಿ ॥೧೦೦॥**

ಯಾರಿಗೆ ತನ್ನ ವರ್ಣ–ಆಶ್ರಮ–ವಯಸ್ಸು–ನಾನು ಯೋಗ್ಯನು ಎಂದು ಮೊದಲಾಗಿ ಅಭಿಮಾನಗಳಿರುವವೋ ಅವನಿಗೆ ಮಾತ್ರ ಎಲ್ಲ ನಿಷೇಧ ಹಾಗೂ ವಿಧಿಗಳುಂಟು.

—ಆದರೇನು ? ಜ್ಞಾನಿಯು ಕೂಡ ದೇಹವುಳ್ಳವನೇ. ಆದುದರಿಂದ ಅವನಿಗೆ ಕೂಡ ವರ್ಣಾಶ್ರಮಾದಿಗಳ ಅಭಿಮಾನವಿದ್ದೇ ಇರುತ್ತದೆ. ಎಂದರೆ-

**ವರ್ಣಾಶ್ರಮಾದಯೋ ದೇಹೇ ಮಾಯಯಾ ಪರಿಕಲ್ಪಿತಾಃ ।**
**ನಾತ್ಮನೋ ಬೋಧರೂಪಸ್ಯೇತ್ಯೇವಂ ತಸ್ಯ ವಿನಿಶ್ಚಯಃ॥೧೦೧॥**

ವರ್ಣ–ಆಶ್ರಮ ಮೊದಲಾದವುಗಳು ಮಾಯೆಯಿಂದ ದೇಹಕ್ಕೆ ಕಲ್ಪಿತವಾದವುಗಳು. ಜ್ಞಾನರೂಪನೆನಿಸುವ ಆತ್ಮನಿಗೆ ಅವುಗಳ ಸಂಬಂಧವಿಲ್ಲ. ಹೀಗೆ ಅವನ ದೃಢನಿಶ್ಚಯವಿರುತ್ತದೆ.

ನಿಶ್ಚಯವೇನಾದರೂ ಇರಲಿ. ಶಾಸ್ತ್ರವು ಅವನಕರ್ತವ್ಯವನ್ನು ಹೇಳುವದಲ್ಲ.

**ಸಮಾಧಿಮಥ ಕರ್ಮಾಣಿ ಮಾಕರೋತು ಕರೋತು ವಾ ।**
**ಹೃದಯೇನಾಸ್ತಸರ್ವಾಸ್ಥೋ ಮುಕ್ತ ಏವೋತ್ತ-**
**ಮಾಶಯಃ ॥೧೦೨॥**

ಯಾವನು ಎಲ್ಲ ವಿಷಯಗಳಮೇಲಿನ ಪ್ರೀತಿಯನ್ನು ತೊಡೆದು ಹಾಕಿರುವನೋ, ಅದರಿಂದ ಯಾವನ ಜ್ಞಾನವು ನಿಶ್ಚಳವಾಗಿರುವದೋ, ಅವನು ಮುಕ್ತನೇ ಸರಿ. ಆದುದರಿಂದ ಅವನು ಬೇಕಾದರೆ ಸಮಾಧಿಯನ್ನು ಮಾಡಲಿ. ಬೇಕಾದರೆ ಕರ್ಮವನ್ನು ಮಾಡಲಿ ಅಥವಾ ಬಿಡಲಿ.

—ಜ್ಞಾನಿಗೆ ಕರ್ತವ್ಯ ಕರ್ಮಗಳಿಲ್ಲವೆಂಬುದಕ್ಕೆ ಮತ್ತೊಂದು ವಚನ.

**ನೈಷ್ಕರ್ಮ್ಯೇಣ ನ ತಸ್ಯಾರ್ಥಸ್ತಸ್ಯಾರ್ಥೋಽಸ್ತಿ ನ ಕರ್ಮಭಿಃ|**
**ನ ಸಮಾಧಾನ ಜಪ್ಯಾಭ್ಯಾಂ ಯಸ್ಯ ನಿರ್ವಾಸನಂ-**
**ಮನಃ ||೧೦೩||**

ಯಾವನ ಮನಸ್ಸಿನ ವಾಸನೆಗಳೆಲ್ಲ ಅಳಿದಿರುವವೋ ಅವನಿಗೆ ಕರ್ಮ ಬಿಡುವಿಕೆಯಿಂದಾಗಲೀ, ಸನ್ಯಾಸದಿಂದಾಗಲೀ ಯಾವುದೇ ಲಾಭವಿಲ್ಲ. ಅದರಂತೆ ಕರ್ಮಗಳಿಂದಲೂ ಆಗಬೇಕಾದುದಿಲ್ಲ. ಮತ್ತು ಸಮಾಧಿ-ಜಪಗಳಿಂದಲೂ ಪ್ರಯೋಜನವಿಲ್ಲ.

—ವಾಸನೆಗಳನ್ನು ನಾಶಗೊಳಿಸಲಿಕ್ಕಾದರೂ ಧ್ಯಾನ ಮಾಡಬೇಕಲ್ಲ.

**ಆತ್ಮಾಸಂಗಸ್ತತೋಽನ್ಯತ್ ಸ್ಯಾದಿಂದ್ರಜಾಲಂ ಹಿ**
**ಮಾಯಿಕಮ್ ।**
**ಇತ್ಯಚಂಚಲ ನಿರ್ಣೀತೇ ಕುತೋ ಮನಸಿ ವಾಸನಾ ||೧೦೪||**

ಆತ್ಮನು ಯಾವುದನ್ನೂ ಹಚ್ಚಿಕೊಳ್ಳುವವನಲ್ಲ. ಅವನಿಂದ ಬೇರೆ ಯಾದುದೆಲ್ಲ ಮಾಯಿಕವಾದ ಇಂದ್ರಜಾಲವಾಗಿದೆ ಎಂದು ಗಟ್ಟಿಯಾದ ತಿಳಿವಳಿಕೆ ಇರುವಾಗ ವಾಸನೆಗಳು ಯಾವಕಡೆಯಿಂದ ಹುಟ್ಟಬಲ್ಲವು ?

**ಏವಂ ನಾಸ್ತಿ ಪ್ರಸಂಗೋಽಪಿ ಕುತೋಽಸ್ಯಾತಿಪ್ರಸಂಜನಮ್ ।**
**ಪ್ರಸಂಗೋ ಯಸ್ಯ ತಸ್ಯೈವ ಶಂಕ್ಯೇತಾತಿ ಪ್ರಸಂಜ-**
**ನಮ್ ||೧೦೫||**

ಹೀಗೆ ತತ್ತ್ವವನ್ನು ತಿಳಿದವನಿಗೆ ಮೇರೆ ಎಂಬುದೇ ಇಲ್ಲ ಎಂದಮೇಲೆ ಮೇರೆ ಮೀರುವದೆಲ್ಲಿ ? ಯಾವನಿಗೆ ಮೇರೆ ಎಂಬುದುಂಟೋ, ಅವನಿಗೆ ಮಾತ್ರ ಮೇರೆ ಮೀರುವ ದೋಷ.

—ಹೀಗೆ ಯಾತರಮೇಲಿಂದ ನೀವು ಹೇಳುವದು ?

**ವಿಧ್ಯಭಾವಾನ್ನ ಬಾಲಸ್ಯ ದೃಶ್ಯತೇಽತಿ ಪ್ರಸಂಜನಮ್ ।**
**ಸ್ಯಾತ್ಕುತೋಽತಿ ಪ್ರಸಂಗೋಽಸ್ಯ ವಿಧ್ಯಭಾವೇ ಸಮೇ ಸತಿ ॥೧೦೬॥**

ವಿಧಿ ಎಂಬುದೇ ಇಲ್ಲದ ಬಾಲಕನಿಗೆ ಅತಿ ಪ್ರಸಂಗವೂ ಇರುವದಿಲ್ಲ. ಹೀಗೆ ವಿಧಿಯ ಅಭಾವವು ಸಮಾನವಿರುವಾಗ ತತ್ವಜ್ಞಾನಿಗಾದರೂ ಅತಿ ಪ್ರಸಂಗದೋಷವು ಹೇಗೆ ಬರುವದು ?

—ಬಾಲಕನಿಗೆ ವಿಧಿ ಎಂಬುದಿಲ್ಲವೆಂಬುದರ ಕಾರಣವು ಅವನು ತಿಳಿವಳಿಕೆ ಇಲ್ಲದವನೆಂಬುದು. ಹಾಗೆ ವಿದ್ವಾಂಸನಿಗೆ ವಿಧಿ ಎಂಬುದಿಲ್ಲವೆನ್ನಲು ಕಾರಣವಿಲ್ಲ.

**ನ ಕಿಂಚಿದ್ವೇತ್ತಿ ಬಾಲಶ್ಚೇತ್ಸರ್ವಂ ವೇತ್ತ್ಯೇವ ತತ್ವವಿತ್ ।**
**ಅಲ್ಪಜ್ಞಸ್ಯೈವ ವಿಧಯಃ ಸರ್ವೇ ಸ್ಯುರ್ನಾನ್ಯಯೋ-ದ್ವಯೋಃ ॥೧೦೭॥**

ಬಾಲಕನು ಯಾವುದನ್ನೂ ತಿಳಿಯುವದಿಲ್ಲ. ಎಂದರೆ ಜ್ಞಾನಿಯು ಎಲ್ಲವನ್ನೂ ತಿಳಿಯುತ್ತಾನೆ. ಅರ್ಥಾತ್ ಎಲ್ಲ ವಿಧಿ-ನಿಷೇಧಗಳು ಅಲ್ಪಜ್ಞಾನಿಗೋಸ್ಕರ ಇರುತ್ತವೆ. ಉಳಿದ ಇಬ್ಬರ ಸಲುವಾಗಿ ಇರುವದಿಲ್ಲ.

—ವ್ಯಾಸಾದಿಕರಂತೆ ಶಾಪ ಕೊಡುವ-ವರಕೊಡುವ ಶಕ್ತಿ ಇದ್ದವರು ಮಾತ್ರ ಜ್ಞಾನಿಗಳು. ಉಳಿದವರಲ್ಲ ಎಂದರೆ.

**ಶಾಪಾನುಗ್ರಹಸಾಮರ್ಥ್ಯಂ ಯಸ್ಯಾಸೌ ತತ್ವವಿದ್ಯದಿ ।**
**ತನ್ನ ಶಾಪಾದಿಸಾಮರ್ಥ್ಯಂ ಫಲಂ ಸ್ಯಾತ್ತಪಸೋ ಯತಃ ॥೧೦೮॥**

ಯಾರಿಗೆ ಶಾಪಕೊಡುವ-ಹಾಗೂ ವರ ಕೊಡುವ ಶಕ್ತಿಯುಂಟೋ ಅವರು ಮಾತ್ರ ಜ್ಞಾನಿಗಳು ಎನ್ನುವದಾದರೆ ಅದು ಸರಿಯಲ್ಲ. ಯಾಕಂದರೆ ಶಾಪಾದಿಸಾಮರ್ಥ್ಯಗಳು ತಪಸ್ಸಿನ ಫಲಗಳಾಗಿರುವವು.

—ಆ ಸಾಮರ್ಥ್ಯಕ್ಕೂ ಜ್ಞಾನಕ್ಕೂ ಯಾವುದೇ ಸಂಬಂಧವಿಲ್ಲ.

**ವ್ಯಾಸಾದೇರಪಿ ಸಾಮರ್ಥ್ಯಂ ದೃಶ್ಯತೇ ತಪಸೋ ಬಲಾತ್ ।**
**ಶಾಪಾದಿಕಾರಣಾದನ್ಯ ತ್ತಪೋ ಜ್ಞಾನಸ್ಯ ಕಾರಣಮ್ ॥೧೦೯॥**

ತಪಸ್ಸಿನಬಲದಿಂದ ವ್ಯಾಸರೇ ಮೊದಲಾದವರಿಗೆ ಆ ಸಾಮರ್ಥ್ಯವಿರುವದು ಕಂಡು ಬರುತ್ತದೆ. ಆದರೆ ಇಂಥ ಸಾಮರ್ಥ್ಯ ಪಡೆಯುವ ತಪಸ್ಸು ಬೇರೆ. ಜ್ಞಾನಕ್ಕೆ ಕಾರಣವಾಗುವ ತಪಸ್ಸುಬೇರೆ.

— ಹೀಗನ್ನುವದಾದರೆ ವ್ಯಾಸಾದಿಕರಲ್ಲಿ ಎರಡೂ ಶಕ್ತಿಗಳಿದ್ದುದು ಹೇಗೆ?

**ದ್ವಯಂ ಯಸ್ಯಾಸ್ತಿ ತಸ್ಯೈವ ಸಾಮರ್ಥ್ಯಜ್ಞಾನಯೋರ್ಜನಿಃ।**
**ಏಕೈಕಂ ತು ತತಃ ಕುರ್ವನ್ನೈಕೈಕಂ ಲಭತೇ**
**ಫಲಮ್ ॥೧೧೦॥**

ಯಾರು ಎರಡೂ ಬಗೆಯ ತಪಸ್ಸುಗಳನ್ನಾಚರಿಸಿರುವರೋ ಅವರಿಗೆ ಶಾಪಾನುಗ್ರಹ ಸಾಮರ್ಥ್ಯ ಹಾಗೂ ಜ್ಞಾನ ಎಂಬ ಎರಡೂ ಫಲಗಳು ದೊರಕುವವು. ಆದರೆ ಅವುಗಳಲ್ಲಿ ಒಂದೊಂದೇ ತಪಸ್ಸನ್ನು ಮಾಡುವವರಿಗೆ ಒಂದೊಂದೇ ಫಲವು ದೊರೆಯುವುದು.

—ಯಾವ ಸಾಮರ್ಥ್ಯವೂ ಇಲ್ಲದ ಜ್ಞಾನಿಯು, ವಿಧಿ–ನಿಷೇಧಗಳನ್ನೂ ಬಿಟ್ಟರೆ ವಿಹಿತವಾದ ಅನುಷ್ಠಾನ ಮಾಡುವವರ ನಿಂದೆಗೆ ಗುರಿಯಾಗುತ್ತಾನೆ.

**ಸಾಮರ್ಥ್ಯಹೀನೋ ನಿಂದ್ಯಶ್ಚೇದ್ಯತಿಭಿರ್ವಿಧಿವರ್ಜಿತಃ।**
**ನಿಂದ್ಯಂತೇ ಯತಯೋಽಪ್ಯನ್ಯೈರನಿಶಂ ಭೋಗ–**
**ಲಂಪಟೈಃ ॥೧೧೧॥**

ಸಾಮರ್ಥ್ಯ ಹೀನನಾಗಿದ್ದು ವಿಹಿತಾನುಷ್ಠಾನ ಮಾಡುವವನು, ವಿಹಿತವಾದ ಆಚರಣೆ ಮಾಡುವವರ ನಿಂದೆಗೆ ಗುರಿಯಾಗುತ್ತಾನೆ ಎಂದರೆ ಶಾಸ್ತ್ರನಿಯಮಗಳನ್ನು ಕಟ್ಟಿಕೊಂಡು ಒದ್ದಾಡುವವರನ್ನು ವಿಷಯಲಂಪಟರಾದವರು ಸಾಕಷ್ಟು ನಿಂದಿಸುತ್ತಾರೆ. (ನಿಂದೆಯಾರಿಗೂ ತಪ್ಪಿಲ್ಲ)

—ಯತಿಗಳು ಕೂಡ ಭೋಗಕ್ಕಾಗಿ ವಿಷಯಗಳನ್ನು ಸಂಪಾದಿಸುವರು ಎಂದರೆ ಹಾಗೆ ಮಾಡುವದರಿಂದ ಅವರ ಯತಿಧರ್ಮ ನಾಶ ಎಂದು ಹೇಳುತ್ತಾರೆ.

**ಭಿಕ್ಷಾವಸ್ತ್ರಾದಿ ರಕ್ಷೇಯುರ್ಯದ್ಯೇತೇ ಭೋಗತುಷ್ಟಯೇ।**
**ಅಹೋ ಯತಿತ್ವಮೇತೇಷಾಂ ವೈರಾಗ್ಯಭರ–**
**ಮಂಥರಮ್ ॥೧೧೨॥**

ಒಂದು ವೇಳೆ ಯತಿಗಳು ಭೋಗದಿಂದ ತೃಪ್ತಿಯನ್ನು ಪಡೆಯಬೇಕೆಂದು ಭಿಕ್ಷೆ-ವಸ್ತ್ರ ಮುಂತಾದವುಗಳನ್ನು ಕಾಯ್ದುಕೊಳ್ಳುವುದಾದರೆ ಏನು ಹೇಳೋಣ? ವೈರಾಗ್ಯದ ಭಾರದಿಂದ ಜಡವಾದ ಅವರ ಆಶ್ರಮ ಧರ್ಮವು ಧನ್ಯವೆಂದೇ ಹೇಳಬೇಕು.

—ವಿಷಯಾಸಕ್ತರು ಮಾಡುವ ನಿಂದೆಯಿಂದ ವಿಹಿತಾಚರಣೆ ಮಾಡುವವರಿಗೇನು ಹಾನಿ ಎನ್ನುವುದಾದರೆ ಕರ್ಮಾನುಷ್ಠಾನದಲ್ಲಿ ತತ್ಪರರಾದ ದೇಹಾಭಿಮಾನಿಗಳು ಮಾಡುವ ನಿಂದೆಯಿಂದ ತತ್ವವೇತ್ತರಿಗೂ ಹಾನಿಯಿಲ್ಲ ಎನ್ನುತ್ತಾರೆ.

**ವರ್ಣಾಶ್ರಮಪರಾನ್ಮೂಢಾ ನಿಂದಂತ್ವಿತ್ಯುಚ್ಯತೇ ಯದಿ ।**
**ದೇಹಾತ್ಮತಯೋ ಬುದ್ಧಂ ನಿಂದಂತ್ವಾಶ್ರಮ-**
**ಮಾನಿನಃ ॥೧೧೩॥**

ಮೂಢರು ವರ್ಣಾಶ್ರಮಾದಿಗಳಿಗನುಸಾರ ನಡೆಯುವವರನ್ನು ನಿಂದಿಸಲಿ ಎಂದು ಒಪ್ಪುವದಾದರೆ ಆಶ್ರಮಾದಿಗಳ ಅಭಿಮಾನವಿಟ್ಟುಕೊಂಡು ದೇಹವೇನಾನೆಂದು ತಿಳಿಯುವ ಅಜ್ಞರು ಜ್ಞಾನಿಯನ್ನು ನಿಂದಿಸಲಿ (ಎಂದು ನಾವು ಹೇಳುವೆವು)

—ಇನ್ನು ಸದ್ಯದ ವಿಷಯದತ್ತ.

**ತದಿತ್ಥ ತತ್ವವಿಜ್ಞಾನೇ ಸಾಧನಾನುಪಮರ್ದನಾತ್ ।**
**ಜ್ಞಾನಿನಾಽಽಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ**
**ಲೌಕಿಕಮ್ ॥೧೧೪॥**

ಹೀಗೆ ತತ್ವ ಸಾಕ್ಷಾತ್ಕಾರವಾಗುತ್ತಿರಲು, ಕರ್ಮಸಾಧನಗಳೆನಿಸಿದ ದೇಹ ಇಂದ್ರಿಯ ಮೊದಲಾದವುಗಳ ನಾಶವೇನೂ ಆಗುವದಿಲ್ಲವಾದುದರಿಂದ ಜ್ಞಾನಿಗೆ ರಾಜ್ಯಕಾರಭಾರ-ಇತರ ಲೌಕಿಕ ವ್ಯವಹಾರಗಳನ್ನು ಉತ್ತಮ ರೀತಿಯಿಂದ ಮಾಡಲು ಶಕ್ಯವಿದೆ.

—ಪ್ರಪಂಚವನ್ನು ಸುಳ್ಳೆಂದು ಬಗೆದಿರುವ ಜ್ಞಾನಿಗೆ ಯಾವದೇ ವಿಷಯದ ಇಚ್ಛೆಯಾಗುವದಿಲ್ಲ ಎಂದರೆ. ‹ಅವನ ಕರ್ಮದಂತೆ ಅವನು ನಡೆಯಲು ಬಿಡು› ಎನ್ನುತ್ತಾರೆ.

**ಮಿಥ್ಯಾತ್ವಬುದ್ಧ್ಯಾ ತತ್ರೇಚ್ಛಾ ನಾಸ್ತಿ ಚೇತ್ತರ್ಹಿ ಮಾಽ-**
**ಸ್ತು ತತ್ ।**
**ಧ್ಯಾಯನ್ವಾಽಥ ವ್ಯವಹರನ್ ಯಥಾಽಽರಬ್ಧಂ**
**ವಸತ್ವಯಮ್ ॥೧೧೫॥**

ಸುಳ್ಳಾದುದೆಂಬ ಬುದ್ಧಿ ಇರುವದರಿಂದ ಪ್ರಪಂಚ ವಿಷಯದಲ್ಲಿ ಇಚ್ಛೆಯೇ ಇರುವದಿಲ್ಲವೆಂದರೆ ಇಲ್ಲದೇ ಹೋಗಲಿ. ಅವನು ತನ್ನ ಪ್ರಾರಬ್ಧ ಕರ್ಮದಂತೆ ಧ್ಯಾನವನ್ನಾದರೂ ಮಾಡಿಕೊಂಡಿರಲಿ. ಅಥವಾ ವ್ಯವಹಾರ ವನ್ನಾದರೂ ಮಾಡಿಕೊಂಡಿರಲಿ.

**ಉಪಾಸಕಸ್ತು ಸತತಂ ಧ್ಯಾಯನ್ನೇವ ವಸೇದ್ಯತಃ ।**
**ಧ್ಯಾನೇನೈವ ಕೃತಂ ತಸ್ಯ ಬ್ರಹ್ಮತ್ವಂ ವಿಷ್ಣುತಾದಿವತ್ ॥೧೧೬॥**

ಉಪಾಸಕನು ಮಾತ್ರ ಯಾವಾಗಲೂ ಧ್ಯಾನ ಮಾಡುತ್ತಲೇ ಇರಬೇಕು. ಯಾಕಂದರೆ ವಿಷ್ಣುತ್ವ ಮೊದಲಾದವುಗಳಂತೆ ಅವನ ಬ್ರಹ್ಮತ್ವವು ಧ್ಯಾನ ದಿಂದಲೇ ಸಿದ್ಧವಾಗಿರುವದು.

(ಉಪಾಸಕನ ಬ್ರಹ್ಮತ್ವವು ಪ್ರಮಾಣಗಳಿಂದ ಸಿದ್ಧವಾದುದಲ್ಲ. ನಿತ್ಯ ಉಪಾಸನೆಮಾಡಿ ವಿಷ್ಣುತ್ವ-ಶಿವತ್ವಗಳನ್ನು ಮೈಗೂಡಿಸಿಕೊಂಡಂತೆಯೇ ಅವನ ಬ್ರಹ್ಮತ್ವ)

—ಹಾಗಾದರೆ ಧ್ಯಾನದಿಂದ ಸಂಪಾದಿಸಿದ ಬ್ರಹ್ಮತ್ವಕ್ಕೆ ಪಾರಮಾರ್ಥಿ ಕತ್ವವು ಇಲ್ಲವೇ? ಉತ್ತರ:- ಇಲ್ಲ. ಧ್ಯಾನದಿಂದ ಪಡೆದವಸ್ತುವು ಧ್ಯಾನವನ್ನು ಬಿಟ್ಟನಂತರ ಅಳಿದು ಹೋಗುವುದು.

**ಧ್ಯಾನೋಪಾದಾನಕಂ ಯತ್ತದ್ಧ್ಯಾನಾಭಾವೇ ವಿಲೀಯತೇ।**
**ವಾಸ್ತವೀ ಬ್ರಹ್ಮತಾನೈವ ಜ್ಞಾನಾಭಾವೇ ವಿಲೀಯತೇ ॥೧೧೭॥**

ಧ್ಯಾನದಿಂದ ಮೈಗೂಡಿದ್ದು ಧ್ಯಾನವಿಲ್ಲದಂತಾದ ಕೂಡಲೇ ನಾಶ ವಾಗುವದು. ವಿಚಾರ ಪೂರ್ವಕವಾದ ಜ್ಞಾನದಿಂದ ಸಿದ್ಧವಾದ ಬ್ರಹ್ಮತ್ವವು ನೆನಪುಕೊಡುವ ವಿಚಾರವು ನಿಂತರೂ ನಾಶವಾಗುವದಿಲ್ಲ.

—ಬ್ರಹ್ಮತ್ವವು ಸಹಜ ಸಿದ್ಧವಾದುದು. ವಿಚಾರದಿಂದ ಅದೇನೂ ಹೊಸದಾಗಿ ಹುಟ್ಟಬೇಕಾಗಿಲ್ಲ.

**ತತೋಽಭಿಜ್ಞಾಪಕಂ ಜ್ಞಾನಂ ನ ನಿತ್ಯಂ ಜನಯತ್ಯದಃ ।**
**ಜ್ಞಾಪಕಾಭಾವ ಮಾತ್ರೇಣ ನ ಹಿ ಸತ್ಯಂ ವಿಲೀಯತೇ ॥೧೧೮॥**

ಬ್ರಹ್ಮತ್ವವು ನಿತ್ಯವಾದುದರಿಂದ ಜ್ಞಾನವು ಅದನ್ನು ನೆನಪಿಗೆ ತಂದು ಕೊಡುವದೇ ಹೊರತು ಅದನ್ನು ಹುಟ್ಟಿಸುವುದಿಲ್ಲ. ಯಾವುದು ಸತ್ಯವಾಗಿರುವದೋ ಅದು ಅದನ್ನು ನೆನಪಿಗೆ ತಂದುಕೊಡುವ ಪ್ರಮಾಣವು ಇಲ್ಲವಾದ ಮಾತ್ರಕ್ಕೆ ಇಲ್ಲದಂತಾಗುವದಿಲ್ಲ.

—ಜ್ಞಾನಿಯಂತೆ ಉಪಾಸಕನ ಬ್ರಹ್ಮತ್ವವೂ ಸತ್ಯವಾಗಿದೆ. ಎಂದರೆ

**ಅಸ್ತ್ಯೇವೋಪಾಸಕಸ್ಯಾಪಿ ವಾಸ್ತವೀ ಬ್ರಹ್ಮತೇತಿ ಚೇತ್ ।**
**ಪಾಮರಾಣಾಂ ತಿರಶ್ಚಾಂಚ ವಾಸ್ತವೀ ಬ್ರಹ್ಮತಾ ನ ಕಿಮ್॥೧೧೯॥**

ಉಪಾಸಕನ ಬ್ರಹ್ಮತ್ವವೂ ಸತ್ಯವಾದುದು ಎಂದರೆ ಮೂಢರಿಗೆ–ಮೂಕ ಪ್ರಾಣಿಗಳಿಗೆ ಆ ಬ್ರಹ್ಮತ್ವವಿಲ್ಲವೇನು?

—ಮೂಢರು ಮೊದಲಾದವರಿಗೆ ಆ ಬ್ರಹ್ಮತ್ವದ ಅರಿವಾಗದಿರುವದರಿಂದ ಅದರ ಉಪಯೋಗವಿಲ್ಲ.

**ಅಜ್ಞಾನಾದಪುಮರ್ಥತ್ವಮುಭಯತ್ರಾಪಿ ತತ್ಸಮಮ್ ।**
**ಉಪವಾಸಾದ್ಯಥಾ ಭಿಕ್ಷಾ ವರಂ ಧ್ಯಾನಂ ತಥಾನ್ಯತಃ ॥೧೨೦॥**

ಆತ್ಮತತ್ವದ ಅರಿವಿಲ್ಲದಿರುವದರಿಂದ ಸಹಜ ಸಿದ್ಧ ಬ್ರಹ್ಮತ್ವವು ಪುರುಷಾರ್ಥವೆನಿಸುವದಿಲ್ಲ. ಹೀಗಾಗಿ ಜ್ಞಾನವಿಲ್ಲದ್ದರಿಂದ ಉಂಟಾಗುವ ಬಂಧವು ಉಪಾಸಕ–ಮೂಢ–ಮೂಕಪ್ರಾಣಿಗಳು ಇವೆಲ್ಲಕಡೆಗೆ ಸಮಾನವಾಗಿದೆ. ಉಪವಾಸಕ್ಕಿಂತ ತಿರಿದುಣ್ಣುವದು ಮೇಲೆಂದಂತೆ ಇತರ ಸಾಧನಗಳಿಗಿಂತ ಧ್ಯಾನವು ಮೇಲು.

—ಇತರ ಸಾಧನಗಳಿಗಿಂತ ಧ್ಯಾನದ ಮೇಲ್ಮೆಯನ್ನು ಹೇಳುತ್ತಾರೆ.

**ಪಾಮರಾಣಾಂ ವ್ಯವಹೃತೇರ್ವರಂ ಕರ್ಮಾದ್ಯನುಷ್ಠಿತಿಃ ।**
**ತತೋಽಪಿ ಸಗುಣೋಪಾಸ್ತಿರ್ನಿರ್ಗುಣೋಪಾಸನಾ ತತಃ॥೧೨೧॥**

ಮೂಢರ ಪಶುಪ್ರಾಯವಾದ ನಡತೆಗಳಿಗಿಂತ ಕರ್ಮಾದಿ ಉಪಾಯಗಳನ್ನು ಮಾಡುವದು ಮೇಲು. ಅದಕ್ಕಿಂತಲೂ ಸಗುಣೋಪಾಸನೆ. ಅದಕ್ಕಿಂತ ನಿರ್ಗುಣೋಪಾಸನೆಯು ಶ್ರೇಷ್ಠ.

—ಹೀಗನ್ನುವ ಕಾರಣ.

**ಯಾವದ್ವಿಜ್ಞಾನಸಾಮೀಪ್ಯಂ ತಾವತ್ ಶ್ರೈಷ್ಠ್ಯಂ ವಿವರ್ಧತೇ ।
ಬ್ರಹ್ಮಜ್ಞಾನಾಯತೇ ಸಾಕ್ಷಾನ್ನಿರ್ಗುಣೋಪಾಸನಂ
ಶನೈಃ ॥೧೨೨॥**

ಎಷ್ಟು ಎಷ್ಟು ತತ್ವಜ್ಞಾನಕ್ಕೆ ಹತ್ತಿರವಾಗುವದೋ ಅಷ್ಟು ಮಟ್ಟಿಗೆ ಉಪಾಯಗಳ ಶ್ರೇಷ್ಠತ್ವವು ಹೆಚ್ಚಾಗುತ್ತದೆ. ನಿರ್ಗುಣೋಪಾಸನೆ ಎಲ್ಲಕ್ಕಿಂತ ಮೇಲು ಎನ್ನುವದರ ಕಾರಣವೇನಂದರೆ, ಅದು ಮೆಲ್ಲಗೆ ಬ್ರಹ್ಮಜ್ಞಾನವೇ ಆಗಿ ಪರಿಣಮಿಸುವದು.

— ಇದನ್ನೇ ದೃಢಪಡಿಸುತ್ತಾರೆ.

**ಯಥಾ ಸಂವಾದಿ ವಿಭ್ರಾಂತಿರ್ಫಲಕಾಲೇ ಪ್ರಮಾಯತೇ ।
ವಿದ್ಯಾಯತೇ ತಥೋಪಾಸ್ತಿರ್ಮುಕ್ತಿಕಾಲೇತಿಪಾಕತಃ॥೧೨೩॥**

ಸಂವಾದಿ ಭ್ರಮೆಯು ಮೊದಲು ಭ್ರಮೆ ಎನಿಸಿದರೂ ಫಲಕಾಲದಲ್ಲಿ ಸತ್ಯವೆನಿಸುವಂತೆ ನಿರ್ಗುಣೋಪಾಸನೆಯೂ ಪರಿಪಕ್ವವಾದಾಗ ಮುಕ್ತಿಕಾಲ ಬರಲು ವಿದ್ಯಾರೂಪ ಎಂದರೆ ಜ್ಞಾನರೂಪವಾಗುವದು.

—ಆದರೆ ಸಂವಾದಿ ಭ್ರಮೆಯು ಮೊದಲೇ ಯಥಾರ್ಥ ಜ್ಞಾನರೂಪ ವಾಗಿರುವದಿಲ್ಲ. ಅಂಥ ಭ್ರಮೆಯಿಂದ ಪ್ರವೃತ್ತನಾದ ಪುರುಷನ ಇಂದ್ರಿಯ ಗಳೊಡನೆ ಅದರ ವಿಷಯವೂ ಸೇರಿದಾಗ ಯಥಾರ್ಥವೆನಿಸುವದು ಎಂದರೆ

**ಸಂವಾದಿಭ್ರಮತಃ ಪುಂಸಃ ಪ್ರವೃತ್ತಸ್ಯಾನ್ಯಮಾನತಃ ।
ಪ್ರಮೇತಿ ಚೇತ್ತಥೋಪಾಸ್ತಿರ್ಮಾಂತರೇ ಕಾರಣಾಯ–
ತಾಮ್ ॥೧೨೪॥**

ಸಂವಾದಿ ಭ್ರಮೆಯಿಂದ ಮುಂದುವರೆದ ಪುರುಷನಿಗೆ ಬೇರೆ ಪ್ರಮಾಣ ಗಳಿಂದ ಯಥಾರ್ಥ ಜ್ಞಾನವಾಗುವದೆಂದರೆ ಅದರಂತೆಯೇ ಉಪಾಸನೆಯೂ ಯಥಾರ್ಥ ಜ್ಞಾನದ ಕಾರಣವೆನಿಸಲಿ.

(ಸಂವಾದಿ ಭ್ರಮೆಯು ಕೊನೆಗೆ ಯಥಾರ್ಥಜ್ಞಾನಕ್ಕೆ ಕಾರಣವಾಗು ವಂತೆ, ನಿರ್ಗುಣೋಪಾಸನೆಯೂ ನಿಧಿಧ್ಯಾಸನ ರೂಪವಾಗಿ ಮಹಾವಾಕ್ಯಜನ್ಯ ಅಪರೋಕ್ಷ ಜ್ಞಾನದ ಕಾರಣವೆನಿಸುವದು.)

ಹೀಗಂದರೆ ಸಗುಣ ಮೂರ್ತಿ ಧ್ಯಾನಾದಿಗಳು ಕೂಡ ಚಿತ್ತೈಕಾಗ್ರ್ಯತೆಗೆ ಸಾಧನವೆನಿಸಿ ಮುಂದೆ ಅಪರೋಕ್ಷ ಜ್ಞಾನಕ್ಕೆ ಕಾರಣವೆನಿಸಬಲ್ಲವು.

**ಮೂರ್ತಿಧ್ಯಾನಸ್ಯ ಮಂತ್ರಾದೇರಪಿ ಕಾರಣತಾಯದಿ |**
**ಅಸ್ತುನಾಮ ತಥಾಪ್ಯತ್ರ ಪ್ರತ್ಯಾಸತ್ತಿರ್ವಿಶಿಷ್ಯತೇ ||೧೨೫||**

ಮಂತ್ರ ಜಪ-ಮೂರ್ತಿಧ್ಯಾನ ಮುಂತಾದವುಗಳಿಗೆ ಕೂಡ ಜ್ಞಾನವನ್ನು ದೊರಕಿಸಿಕೊಡುವ ಶಕ್ತಿಯುಂಟೆಂದರೆ ಹಾಗೆಯೇ ಆಗಲಿ. ಆದರೂ ನಿರ್ಗುಣೋಪಾಸನೆಯಲ್ಲಿ ಜ್ಞಾನಕ್ಕೆ ಹತ್ತಿರವೆಂಬ ಗುಣವಿಶೇಷವಿದೆ.

—ಅದು ಹೇಗೆಂಬುದನ್ನು ಹೇಳುತ್ತಾರೆ.

**ನಿರ್ಗುಣೋಪಾಸನಂ ಪಕ್ವಂ ಸಮಾಧಿಃ ಸ್ಯಾತ್ ಶನೈಸ್ತತಃ |**
**ಯಃ ಸಮಾಧಿರ್ನಿರೋಧಾಖ್ಯಃ ಸೋಽನಾಯಾಸೇನ**
**ಲಭ್ಯತೇ ||೧೨೬||**

ನಿರ್ಗುಣೋಪಾಸನೆಯು ಪಕ್ವವಾಗುತ್ತ ಬಂದ ಹಾಗೆಯೇ ಮೆಲ್ಲನೆ ಅದು ಸವಿಕಲ್ಪ ಸಮಾಧಿಯಾಗುವದು. ಆನಂತರ ಸವಿಕಲ್ಪ ಸಮಾಧಿಯಿಂದ ಮೆಲ್ಲನೆ 'ನಿರೋಧ'ವೆಂಬ ಸಮಾಧಿಯು ಸುಲಭವಾಗಿ ಮೈಗೂಡುವದು.

( ಯೋಗಶಾಸ್ತ್ರದಲ್ಲಿ ನಿರೋಧ ಸಮಾಧಿಗೇ ನಿರ್ಬೀಜ ಸಮಾಧಿ ಎನ್ನುವರು. )

—ನಿರ್ವಿಕಲ್ಪ ಸಮಾಧಿಯಿಂದಾಗುವ ಲಾಭಗಳೇನು ?

**ನಿರೋಧ ಲಾಭೇ ಪುಂಸೋಽಂತರಸಂಗಂ ವಸ್ತು ಶಿಷ್ಯತೇ |**
**ಪುನಃ ಪುನರ್ವಾಸಿತೇಽಸ್ಮಿನ್ ವಾಕ್ಯಾಜ್ಜಾಯೇತ**
**ತತ್ವಧೀಃ ||೧೨೭||**

ಈ ನಿರ್ವಿಕಲ್ಪ ಸಮಾಧಿಯ ಲಾಭವಾಯಿತೆಂದರೆ ಆ ಪುರುಷನಲ್ಲಿ ಅಸಂಗವೆನಿಸುವ ವಸ್ತುವೊಂದು ಉಳಿದುಕೊಳ್ಳುವದು. ಅದನ್ನೇ ಮೇಲಿಂದಮೇಲೆ ಭಾವಿಸುತ್ತಿರುವದರಿಂದ ಮಹಾವಾಕ್ಯದ ಮೂಲಕ ಜ್ಞಾನವುಂಟಾಗುವದು.

— ಆ ಜ್ಞಾನದ ಸ್ವರೂಪವನ್ನು ಸ್ಪಷ್ಟಗೊಳಿಸುತ್ತಾರೆ.

**ನಿರ್ವಿಕಾರಾಸಂಗನಿತ್ಯ ಸ್ವಪ್ರಕಾಶೈಕ ಪೂರ್ಣತಾಃ |**
**ಬುದ್ಧೌಝಟಿತಿ ಶಾಸ್ತ್ರೋಕ್ತಾ ಆರೋಹಂತ್ಯವಿವಾದತಃ||೧೨೮||**

ಹೀಗೆ ಜ್ಞಾನವು ಹುಟ್ಟಲು ಶಾಸ್ತ್ರದಲ್ಲಿ ಹೇಳಿದ ನಿರ್ವಿಕಾರಿತ್ವ, ಅಸಂಗತ್ವ, ನಿತ್ಯತ್ವ, ಸ್ವಪ್ರಕಾಶತ್ವ, ಏಕತ್ವ ಮತ್ತು ಪೂರ್ಣತ್ವ ಮೊದಲಾದ ಭಾವಗಳು ಬುದ್ಧಿಯಲ್ಲಿ ಬಹುಬೇಗ ಎದ್ದು ಕಾಣುವವು.

—ನಿರ್ವಿಕಲ್ಪ ಸಮಾಧಿಯಿಂದ ಅಪರೋಕ್ಷ ಜ್ಞಾನವು ಹುಟ್ಟುವದೆಂಬುದಕ್ಕೆ ಪ್ರಮಾಣವೇನು ? ಎಂದರೆ ಅಮೃತಬಿಂದು ಮೊದಲಾದ ಎಲ್ಲ ಉಪನಿಷತ್ತುಗಳು ಈ ವಿಷಯದಲ್ಲಿ ಪ್ರಮಾಣವಾಗಿವೆ ಎಂಬುದೇ ಉತ್ತರ.

**ಯೋಗಾಭ್ಯಾಸಸ್ತ್ವೇತದರ್ಥೋಽಮೃತಬಿಂದ್ವಾದಿಷು ಶ್ರುತಃ ।**
**ಏವಂ ಚ ದೃಷ್ಟದ್ವಾರಾಪಿ ಹೇತುತ್ವಾದನ್ಯತೋ ವರಮ್ ॥೧೨೯॥**

ಅಮೃತಬಿಂದು-ಕಠ ಮೊದಲಾದ ಉಪನಿಷತ್ತುಗಳಲ್ಲಿ ಯೋಗಾಭ್ಯಾಸವನ್ನು ಬ್ರಹ್ಮಸಾಕ್ಷಾತ್ಕಾರವಾಗುವದಕ್ಕೇ ಹೇಳಿರುವರು. ಹೀಗೆ ನಿರ್ಗುಣೋಪಾಸನೆ ಅಪರೋಕ್ಷ ಜ್ಞಾನಕ್ಕೆ ಸಮೀಪವಿರುವ ಕಾರಣ ನಿರ್ವಿಕಲ್ಪ ಸಮಾಧಿ ಮೂಲಕವಾಗಿ ಅದು ಜ್ಞಾನ ಸಾಧನವಾಗಿದೆ. ಆದುದರಿಂದ ಅದು ಸಗುಣೋಪಾಸನೆಗಿಂತ ಮೇಲು.

—ಇಂಥ ಶ್ರೇಷ್ಠ ಸಾಧನವನ್ನು ಬಿಟ್ಟು ಇತರ ಬೇರೆ ಸಾಧನಗಳಲ್ಲಿ ತೊಡಗಿದವರಿಗೆ ವ್ಯರ್ಥ ಶ್ರಮವಾಗುವದೆಂದು ಲೌಕಿಕ ನ್ಯಾಯವನ್ನು ಹೇಳುತ್ತ ತೋರಿಸುತ್ತಾರೆ.

**ಉಪೇಕ್ಷ್ಯ ತತ್ತೀರ್ಥಯಾತ್ರಾ ಜಪಾದೀನೇವ ಕುರ್ವತಾಮ್ ।**
**ಪಿಂಡಂ ಸಮುತ್ಸೃಜ್ಯ ಕರಂ ಲೇಢೀತಿ ನ್ಯಾಯ**
**ಆಪತೇತ್ ॥೧೩೦॥**

ಆ ನಿರ್ಗುಣೋಪಾಸನೆಯನ್ನು ಉಪೇಕ್ಷೆಮಾಡಿ ಬಿಟ್ಟು ತೀರ್ಥಯಾತ್ರೆ, ಜಪ ಮೊದಲಾದವುಗಳನ್ನು ಮಾಡುವವರು, ಅಂಗೈಯ್ಯ ಸವಿತುತ್ತನ್ನು ಬಿಟ್ಟು ಮುಂಗೈಯನ್ನು ನೆಕ್ಕಿದವರಂತೆ ಆಗುತ್ತಾರೆ.

—ಹೀಗನ್ನುವದಾದರೆ ತತ್ತ್ವವಿಚಾರವನ್ನು ಬಿಟ್ಟು ನಿರ್ಗುಣೋಪಾಸನೆಯಲ್ಲಿ ಮುಳುಗಿದವರಿಗೆ ಕೂಡ ಇದೇನ್ಯಾಯವು ಅನ್ವಯಿಸುವದೆಂದಂತಾಯಿತು.

**ಉಪಾಸಕಾನಾಮಪ್ಯೇವಂ ವಿಚಾರತ್ಯಾಗತೋ ಯದಿ ।**
**ಬಾಢಂ ತಸ್ಮಾದ್ವಿಚಾರಸ್ಯಾಸಂಭವೇ ಯೋಗ ಈರಿತಃ ॥೧೩೧॥**

ವಿಚಾರವನ್ನು ತ್ಯಾಗಮಾಡಿದ ಉಪಾಸಕರಿಗೂ ಈ ದೋಷವಂಟುವ ದೆನ್ನುವೆಯಾದರೆ ಆ ಮಾತುಸತ್ಯ. ಅದಕ್ಕಾಗಿಯೇ ವಿಚಾರ ಮಾಡಲು ಸಾಮರ್ಥ್ಯವಿಲ್ಲದವರಿಗೆ ನಿರ್ಗುಣೋಪಾಸನೆಯನ್ನು ಹೇಳಿದ್ದಾಗಿದೆ.

—ತತ್ವವಿಚಾರದ ಸಂಭವವಿಲ್ಲವೆಂಬುದಕ್ಕೆ ಕಾರಣ.

**ಬಹುವ್ಯಾಕುಲಚಿತ್ತಾನಾಂ ವಿಚಾರಾತ್ತತ್ವಧೀರ್ನ ಹಿ |**
**ಯೋಗೋಮುಖ್ಯಸ್ತತಸ್ತೇಷಾಂ ಧೀದರ್ಪಸ್ತೇನ ನಶ್ಯತಿ||೧೩೨||**

ಯಾರ ಚಿತ್ತವು ಬಹಳ ಗಲಿಬಿಲಿಗೊಂಡಿರುವದೋ, ಅಂಥವರಿಗೆ ವಿಚಾರವು ನಾಟುವದಿಲ್ಲ. ಆದುದರಿಂದ ಅವರಿಗೆ ಯೋಗವೇ ಮುಖ್ಯ. ಎಂದರೆ ಉಪಾಸನೆ ಮುಖ್ಯ. ಅದರಿಂದ ಬುದ್ಧಿಯ ಕಠೋರತನವು ಇಲ್ಲದಂತಾಗುತ್ತದೆ

—ವ್ಯಾಕುಲಚಿತ್ತರಲ್ಲದವರಿಗೆ ವಿಚಾರವೇ ಮುಖ್ಯವೆನ್ನುತ್ತಾರೆ.

**ಅವ್ಯಾಕುಲಧಿಯಾಂ ಮೋಹಮಾತ್ರೇಣಾಚ್ಛಾದಿತಾತ್ಮನಾಮ್|**
**ಸಾಂಖ್ಯನಾಮಾ ವಿಚಾರಃ ಸ್ಯಾನ್ಮುಖ್ಯೋ ಝಟಿತಿ ಸಿದ್ಧಿದಃ ||೧೩೩||**

ಯಾರ ಬುದ್ಧಿ ಗಲಿಬಿಲಿಗೊಂಡಿಲ್ಲವೋ, ಕೇವಲ ಮೋಹಮಾತ್ರದಿಂದ ಮುಚ್ಚು ಹಾಕಿಕೊಂಡಿರುವದೋ, ಅಂಥವರಿಗೆ ಸಾಂಖ್ಯವೆಂಬ ವಿಚಾರವು ಮುಖ್ಯ. ಯಾಕೆಂದರೆ ಅದು ಬಹುಬೇಗ ಸಿದ್ಧಿಯನ್ನು ದೊರಕಿಸಿಕೊಡುವದು.

—ಸಾಂಖ್ಯ ಮತ್ತು ಯೋಗಗಳಿಗೆ ತತ್ವಜ್ಞಾನದ ಮುಖಾಂತರವೇಮುಕ್ತಿಯನ್ನು ದೊರಕಿಸಿಕೊಡುವ ಶಕ್ತಿ ಇದೆ. ಎಂಬುದಕ್ಕೆ ಗೀತಾವಾಕ್ಯದಪ್ರಮಾಣ.

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ |**
**ಏಕಂ ಸಾಂಖ್ಯಂಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ||೧೩೪||**

ಯಾವ ಸ್ಥಾನವನ್ನು ಸಾಂಖ್ಯರು ಪಡೆಯುವರೋ, ಯೋಗಿಗಳು ಕೂಡ ಅದನ್ನು ಪಡೆಯುವರು. ಆದುದರಿಂದ ಸಾಂಖ್ಯ ಮತ್ತು ಯೋಗಗಳು ಫಲಕೊಡುವ ಸಾಮರ್ಥ್ಯದಲ್ಲಿ ಒಂದೇ ಎಂದು ತಿಳಿಯುವವನೇ ಶಾಸ್ತ್ರವನ್ನು ಸರಿಯಾಗಿ ತಿಳಿದವನು.

—ಗೀತಾವಾಕ್ಯವಷ್ಟೇ ಅಲ್ಲ. ಇದೇ ಅರ್ಥದ ಶ್ರುತಿ ಪ್ರಮಾಣವೂಇದೆ.

**ತತ್ಕಾರಣಂ ಸಾಂಖ್ಯಯೋಗಾಧಿಗಮ್ಯಮಿತಿ ಹಿ ಶ್ರುತಿಃ ।**
**ಯಸ್ತು ಶ್ರುತೇರ್ವಿರುದ್ಧಃ ಸ ಆಭಾಸಃ ಸಾಂಖ್ಯ-**
**ಯೋಗಯೋಃ ॥೧೩೫॥**

'ತತ್ಕಾರಣಂ ಸಾಂಖ್ಯಂ' ಇತ್ಯಾದಿ ಶ್ವೇತಾಶ್ವತರ. ಜಗತ್ತಿನ ಸೃಷ್ಟಿ ಮೊದಲಾದವುಗಳ ಕಾರಣವೂ, ಸಾಂಖ್ಯ-ಮತ್ತು ಯೋಗಾದಿಗಳಿಂದ ತಿಳಿಯಲು ಯೋಗ್ಯವೂ ಆದ ಸ್ವಯಂಪ್ರಕಾಶ ತತ್ತ್ವವನ್ನು ತಿಳಿದುಕೊಂಡ ಪುರುಷನು ಮುಕ್ತನಾಗುತ್ತಾನೆ ಎಂಬುದು ಆ ಶ್ರುತಿಯ ಅರ್ಥವು. ಆದರೆ ಈ ಶ್ರುತಿಗೆ ವಿರುದ್ಧವೆನಿಸುವ ಸಾಂಖ್ಯ-ಮತ್ತು ಯೋಗಗಳ ಅರ್ಥವು ಬಾಧಿತವಾಗುವಂಥದು.

—ಇರಲಿ ಉಪಾಸಕನು ಜ್ಞಾನವಾಗುವ ಮೊದಲೇ ಮರಣ ಹೊಂದಿದರೆ ಅವನಿಗೆ ಮೋಕ್ಷವಾಗುವದು ಹೇಗೆ?

**ಉಪಾಸನಂ ನಾತಿಪಕ್ವಮಿಹ ಯಸ್ಯ ಪರತ್ರ ಸಃ ।**
**ಮರಣೇ ಬ್ರಹ್ಮಲೋಕೇ ವಾ ತತ್ತ್ವವಿಜ್ಞಾಯ**
**ಮುಚ್ಯತೇ ॥೧೩೬॥**

ಯಾರ ಉಪಾಸನೆಯು ಈ ಜನ್ಮದಲ್ಲಿ ಪರಿಪಕ್ವವಾಗುವುದಿಲ್ಲವೋ ಅವನಿಗೆ ಬೇರೊಂದು ಜನ್ಮದಲ್ಲಿ ತತ್ತ್ವದ ಅರಿವಾಗಿ ಮುಕ್ತಿದೊರೆಯುವದು. ಉಪಾಸನೆ ಪರಿಪಕ್ವವಾಗಿದ್ದರೆ ಅವನಿಗೆ ಮರಣಕಾಲದಲ್ಲಿ ಜ್ಞಾನವಾಗುವದು. ಅಥವಾ ಬ್ರಹ್ಮಲೋಕದ ಬಗೆಗೆ ವಾಸನೆ ಉಳಿದಿರುವದಾದರೆ ಅವನು ಬ್ರಹ್ಮಲೋಕವನ್ನು ಸೇರಿ ಅಲ್ಲಿ ಜ್ಞಾನವಡೆದನಂತರ ಮುಕ್ತಿ ದೊರೆಯುವದು.

—ಈ ವಿಷಯದಲ್ಲಿ ಪ್ರಮಾಣ.

**ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಯಚ್ಚಿತ್ತಸ್ತೇನಯಾತೀತಿ ಶಾಸ್ತ್ರತಃ ॥೧೩೭॥**

ಯಾವ ಯಾವ ಭಾವವನ್ನು ನೆನೆಯುತ್ತ ಮನುಷ್ಯನು ಅಂತ್ಯಕಾಲದಲ್ಲಿ ದೇಹವನ್ನು ಬಿಡುವನೋ, ಆಯಾ ಭಾವವನ್ನೇ ಅವನು ಹೊಂದುತ್ತಾನೆ. ಹೇಗೆ ಅವನ ಚಿತ್ತವಿರುವದೋ ಅದರ ಮುಖಾಂತರವಾಗಿಯೇ ಅವನು ತೆರಳುವನೆಂದು ಶಾಸ್ತ್ರ ವಚನವಿರುವದರಿಂದ ಅಂತ್ಯಕಾಲದಲ್ಲಿ ಉಪಾಸನೆ ಪರಿಪಕ್ವವಾಗಿದ್ದರೆ ಜ್ಞಾನವಾಗುವದೂ ಶಕ್ಯವಿದೆ.

—ಈಗ ಹೇಳಿದ ಶ್ರುತಿ–ಸ್ಮೃತಿ ವಚನಗಳಿಂದ ಕೊನೆಗಾಲದನೆನಪಿನಂತೆ ಮನುಷ್ಯನಿಗೆ ಮುಂದಿನ ಜನ್ಮದೊರೆಯುವದೆಂದು ತಿಳಿಯಿತು. ಆದರೆ ಜ್ಞಾನದಿಂದ ಮೋಕ್ಷದೊರೆಯುವದೆಂದೇನೂ ಹೇಳಿದಂತಾಗಲಿಲ್ಲ.

**ಅಂತ್ಯಪ್ರತ್ಯಯತೋ ನೂನಂ ಭಾವಿಜನ್ಮ ತಥಾ ಸತಿ ।**
**ನಿರ್ಗುಣಪ್ರತ್ಯಯೋಽಪಿ ಸ್ಯಾತ್ ಸಗುಣೋಪಾಸನೇ ಯಥಾ ॥೧೩೮॥**

ಅಂತ್ಯಕಾಲದ ಭಾವದಂತೆ ಮುಂದಿನ ಜನ್ಮದೊರೆಯುವದೆಂಬ ಮಾತು ನಿಜ. ದೃಢವಾಗಿಯೇ ನಿಶ್ಚಯ ಇರುವುದಾದರೆ ಸಗುಣೋಪಾಸನೆಯಲ್ಲಿಯಂತೆ ನಿರ್ಗುಣೋಪಾಸಕನಿಗೂ ನಿರ್ಗುಣಬ್ರಹ್ಮನ ನೆನವು ಉಂಟಾಗಿಯೇ ತೀರುತ್ತದೆ.

(ಮರಣ ಕಾಲದಲ್ಲಿ ಸಗುಣೋಪಾಸಕನಿಗೆ ಪೂರ್ವಾಭ್ಯಾಸಬಲದಿಂದ ಸಗುಣಬ್ರಹ್ಮಾಕಾರ ಪ್ರತ್ಯಯ ಬರುವಂತೆ ನಿರ್ಗುಣೋಪಾಸಕನಿಗೆ ಕೂಡ ನಿರ್ಗುಣ ಬ್ರಹ್ಮನ ಪ್ರತ್ಯಯವು ಬರುತ್ತದೆ)

—ನಿರ್ಗುಣೋಪಾಸನೆಯಿಂದ ನಿರ್ಗುಣ ಬ್ರಹ್ಮನ ಪ್ರಾಪ್ತಿಯಾದೀತು. ಮುಕ್ತಿಯು ಸಿಗುವುದಿಲ್ಲ. ಎಂದರೆ.

**ನಿತ್ಯನಿರ್ಗುಣರೂಪಂ ತನ್ನಾಮಮಾತ್ರೇಣ ಗೀಯತಾಮ್ ।**
**ಅರ್ಥತೋ ಮೋಕ್ಷ ಏವೈಷ ಸಂವಾದಿಭ್ರಮವನ್ಮತಃ ॥೧೩೯॥**

ಅದು ನಿತ್ಯ ನಿರ್ಗುಣ ರೂಪವಾಗಿದೆ ಎಂದು ಹೇಳುವದು ಕೇವಲ ನಾಮ ಮಾತ್ರಕ್ಕೆ. ಆದರೆ ಅದರ ಸ್ವರೂಪ ಸ್ಥಿತಿಯು ಸಂವಾದಿ ಭ್ರಮದಂತೆ ಮೋಕ್ಷವೇ ಆಗಿರುವದು ಎಂದು ತಿಳಿವಳಿಕೆಯುಂಟು.

—ಆದರೆ ನಿರ್ಗುಣೋಪಾಸನೆಯು ಮನಸ್ಸಿಗೆ ಸಂಬಂಧಪಟ್ಟ ಒಂದು ಕ್ರಿಯೆ. ಹೀಗಿರುವಾಗ ಅದೊಂದು ಮೋಕ್ಷ ಸಾಧನವೆನ್ನುವದು ತಪ್ಪು ಎಂದು ಅನ್ನುವುದಾದರೆ ಉಪಾಸನೆಯಿಂದಾಗುವ ಜ್ಞಾನವು ಮೋಕ್ಷಸಾಧನವಾಗುವದರಿಂದ ಅದರಲ್ಲೇನೂ ವಿರೋಧವಿಲ್ಲ ಎನ್ನುತ್ತಾರೆ.

**ತತ್ಸಾಮರ್ಥ್ಯಾಜ್ಜಾಯತೇ ಧೀರ್ಮೂಲಾ ವಿದ್ಯಾನಿವರ್ತಿಕಾ ।**
**ಅವಿಮುಕ್ತೋಪಾಸನೇನ ತಾರಕಬ್ರಹ್ಮಬುದ್ಧಿವತ್ ॥೧೪೦॥**

ಸಗುಣಬ್ರಹ್ಮನ ಉಪಾಸನೆಮಾಡಿದ್ದರಿಂದ ತಾರಕ ಬ್ರಹ್ಮನ ಜ್ಞಾನವಾಗುವಂತೆ, ನಿರ್ಗುಣೋಪಾಸನೆಯ ಸಾಮರ್ಥ್ಯದಿಂದ ಮೂಲ ಅವಿದ್ಯೆಯನ್ನು ಹೋಗಲಾಡಿಸುವ ವಿದ್ಯೆಯು ಉಂಟಾಗುತ್ತದೆ.

(ಲಘುಜಾಬಾಲೋಪನಿಷತ್ತಿನಲ್ಲಿ ಅವಿಮುಕ್ತೋಪಾಸನೆಯನ್ನು ಹೇಳಿದೆ)

—ನಿರ್ಗುಣೋಪಾಸನೆಯಿಂದ ಮೋಕ್ಷ ಫಲವೇ ದೊರೆಯುತ್ತದೆ ಎಂಬುದಕ್ಕೆ ಪ್ರಮಾಣ?

**ಸೋಽಕಾಮೋ ನಿಷ್ಕಾಮ ಇತಿ ಹ್ಯಶರೀರೋ ನಿರಿಂದ್ರಿಯಃ ।**
**ಅಭಯಂ ಹೀತಿ ಮುಕ್ತಿತ್ವಂ ತಾಪನೀಯೇ ಫಲಂಶ್ರುತಮ್॥೧೪೧॥**

ಅವನು ಅಕಾಮನು–ನಿಷ್ಕಾಮನು. ಅದರಂತೆ ಶರೀರವಿಲ್ಲದವನು. ಇಂದ್ರಿಯಗಳಿಲ್ಲದವನು. ಮತ್ತು ಅಭಯರೂಪನು. ಎನ್ನುತ್ತ ನೃಸಿಂಹೋತ್ತರ ತಾಪನೀಯೋಪನಿಷತ್ತಿನಲ್ಲಿ ಮುಕ್ತಿಯು ನಿರ್ಗುಣಬ್ರಹ್ಮೋಪಾಸನೆಯ ಫಲವೆಂದು ಹೇಳಿದೆ.

—ಉಪಾಸನೆಯಿಂದ ಮುಕ್ತಿ ದೊರೆಯುವದೆಂದರೆ "ನಾನ್ಯಃಪಂಥಾ" ಎಂಬಿವೇ ಮೊದಲಾದ ಶ್ರುತಿಗಳಿಗೆ ವಿರೋಧವಲ್ಲವೇ ?

**ಉಪಾಸನಸ್ಯ ಸಾಮರ್ಥ್ಯಾದ್ವಿದ್ಯೋತ್ಪತ್ತಿರ್ಭವೇತ್ತತಃ ।**
**ನಾನ್ಯಃ ಪಂಥಾ ಇತಿ ಹ್ಯೇತಚ್ಛಾಸ್ತ್ರಂ ನೈವ ವಿರುಧ್ಯತೇ ॥೧೪೨॥**

ಉಪಾಸನೆಯ ಸಾಮರ್ಥ್ಯದಿಂದ ವಿದ್ಯೆಯು ಹುಟ್ಟುತ್ತದೆ ಎಂದು ಹೇಳಿರುವದರಿಂದ 'ನಾನ್ಯಃಪಂಥಾ' ಮೊದಲಾದ ಶಾಸ್ತ್ರಗಳು ಅದಕ್ಕೆ ವಿರೋಧವನ್ನು ಮಾಡುವದಿಲ್ಲ.

—'ಮರಣೇ ಬ್ರಹ್ಮಲೋಕೇ ವಾಂ' ೧೩೭ ಶ್ಲೋಕಕ್ಕೆ ಶ್ರುತಿಪ್ರಮಾಣ ಕೊಡುತ್ತಾರೆ.

**ನಿಷ್ಕಾಮೋಪಾಸನಾನ್ಮುಕ್ತಿಸ್ತಾಪನೀಯೇ ಸಮೀರಿತಾ ।**
**ಬ್ರಹ್ಮಲೋಕಃ ಸಕಾಮಸ್ಯ ಶೈಬ್ಯಪ್ರಶ್ನೇ ಸಮೀರಿತಃ ॥೧೪೩॥**

ತಾಪನೀಯೋಪನಿಷತ್ತಿನಲ್ಲಿ ನಿಷ್ಕಾಮ ಉಪಾಸನೆಯಿಂದ ಮುಕ್ತಿ ದೊರೆಯುವದೆಂದು ಹೇಳಿದೆ. ಅದರಂತೆ ಪ್ರಶ್ನೋಪನಿಷತ್ತಿನ ಶೈಬ್ಯ ಪ್ರಶ್ನೆದಲ್ಲಿ ಸಕಾಮ ಪುರುಷರಿಗೆ ಬ್ರಹ್ಮಲೋಕ ದೊರೆಯುವದೆಂದು ಹೇಳಿದೆ.

—ಈಗ ಆ ಪ್ರಶ್ನೋಪನಿಷತ್ತಿನ ವಾಕ್ಯದ ಅರ್ಥವನ್ನು ಕೊಡುತ್ತಾರೆ.

**ಯ ಉಪಾಸ್ತೇ ತ್ರಿಮಾತ್ರೇಣ ಬ್ರಹ್ಮಲೋಕೇ ಸ ನೀಯತೇ ।**
**ಸ ಏತಸ್ಮಾಜ್ಜೀವ ಘನಾತ್ ಪರಂ ಪುರುಷಮೀಕ್ಷತೇ ॥೧೪೪॥**

ಯಾವನು ಅ–ಉ ಮತ್ತು ಮ್ ಎಂಬ ಮೂರುಮಾತ್ರೆಗಳಿಂದಕೂಡಿದ ಓಂ ಕಾರ ಯೋಗದಿಂದ ಪರಮ ಪುರುಷನನ್ನು ಧ್ಯಾನಿಸುವನೋ ಅವನನ್ನು ಬ್ರಹ್ಮಲೋಕಕ್ಕೆ ಒಯ್ಯುವರು. ಅವನು ಮುಂದೆ ಆ ಸಮಷ್ಟಿರೂಪ ಹಿರಣ್ಯಗರ್ಭನಿಗಿಂತ ಶ್ರೇಷ್ಠನಾದ ನಿರುಪಾಧಿಕ ಪುರುಷನನ್ನು ಕಾಣುವನು.

—ಸಕಾಮ ಉಪಾಸಕರು ಬ್ರಹ್ಮಲೋಕಕ್ಕೆ ತೆರಳುತ್ತಾರೆ ಎಂಬ ವಿಷಯದಲ್ಲಿ ಶಾರೀರಿಕ ಸೂತ್ರಗಳ ಪ್ರಮಾಣವನ್ನು ಕೊಡುತ್ತಾರೆ.

**ಅಪ್ರತೀಕಾಧಿಕರಣೇ ತತ್ ಕ್ರತುನ್ಯಾಯ ಈರಿತಃ ।**
**ಬ್ರಹ್ಮಲೋಕಫಲಂ ತಸ್ಮಾತ್ ಸಕಾಮಸ್ಯೇತಿ ವರ್ಣಿತಮ್॥೧೪೫॥**

ಅಪ್ರತೀಕಾಧಿಕರಣದಲ್ಲಿ ಆ ಬ್ರಹ್ಮದ ಉಪಾಸನೆಗೆ ಅನುರೂಪವಾದ ಫಲವಾಗುತ್ತದೆಂದು ಹೇಳಿದೆ. ಆದುದರಿಂದ ಸಕಾಮನಾದ ಉಪಾಸಕನಿಗೆ ಬ್ರಹ್ಮಲೋಕ ಫಲವಾಗುತ್ತದೆಂದು ವರ್ಣಿತವಾಗಿದೆ.

—ಎಂದಮೇಲೆ ಸಕಾಮ ಉಪಾಸಕನಿಗೆ ತತ್ವಜ್ಞಾನವಾಗುವ ಬಗೆ ?

**ನಿರ್ಗುಣೋಪಾಸ್ತಿ ಸಾಮರ್ಥ್ಯಾತ್ತತ್ರ ತತ್ವಮವೇಕ್ಷತೇ ।**
**ಪುನರಾವರ್ತತೇ ನಾಯಂ ಕಲ್ಪಾಂತೇ ಚ ವಿಮುಚ್ಯತೇ॥೧೪೬॥**

ನಿರ್ಗುಣೋಪಾಸನೆಯ ಸಾಮರ್ಥ್ಯದ ಬಲದಿಂದ ಅವನಿಗೆ ಬ್ರಹ್ಮಲೋಕ ದಲ್ಲಿ ತತ್ವಸಾಕ್ಷಾತ್ಕಾರವಾಗುವದು. ಮತ್ತು ಆಮೇಲೆ ಅವನಿಗೆ ಪುನರ್ಜನ್ಮ ವಿಲ್ಲ. ಬ್ರಹ್ಮ ಪ್ರಳಯದಲ್ಲಿ ಬ್ರಹ್ಮನೊಡನೆ ಅವನು ಮುಕ್ತನಾಗುವನು.

—ಈಗ ಪ್ರಣವೋಪಾಸನೆಯ ಪ್ರಕರಣವು ಆರಂಭವಾಗಿರುವದರಿಂದ ಅದರ ಎರಡು ಪ್ರಕಾರಗಳನ್ನು ಹೇಳುತ್ತಾರೆ.

**ಪ್ರಣವೋಪಾಸ್ತಯಃ ಪ್ರಾಯೋನಿರ್ಗುಣಾ ಏವ ವೇದಗಾಃ ।**
**ಕ್ವಚಿತ್ ಸಗುಣತಾಪ್ಯುಕ್ತಾ ಪ್ರಣವೋಪಾಸನಸ್ಯ ಹಿ ॥೧೪೭॥**

ವೇದೋಕ್ತ ಪ್ರಣವೋಪಾಸನೆಯು ಬಹುತೇಕವಾಗಿ ನಿರ್ಗುಣವಾಗಿದೆ. ಕೆಲವು ಪ್ರಸಂಗಗಳಲ್ಲಿ ಆದನ್ನು ಸಗುಣವಾಗಿಯೂ ಹೇಳಿದ್ದಾರೆ.

—ಅದು ಎರಡುಬಗೆಯಾಗಿರುವದೆಂಬ ವಿಷಯದಲ್ಲಿ ಪ್ರಮಾಣ.

**ಪರಾಪರಬ್ರಹ್ಮರೂಪ ಓಂಕಾರ ಉಪವರ್ಣಿತಃ ।**
**ಪಿಪ್ಪಲಾದೇನ ಮುನಿನಾ ಸತ್ಯಕಾಮಾಯ ಪೃಚ್ಛತೇ ॥೧೪೮॥**

ಪಿಪ್ಪಲಾದ ಮುನಿಯು ಪ್ರಶ್ನವನ್ನು ಕೇಳುವ ಸತ್ಯಕಾಮಶೈಬ್ಯನಿಗೆ ಪರ ಮತ್ತು ಅಪರವೆಂದು ಎರಡುಬಗೆಯಾದ ಬ್ರಹ್ಮರೂಪ ಓಂಕಾರವನ್ನು ಹೇಳಿದ್ದಾನೆ.

(ಈ ವಿಷಯವು ಪ್ರಶ್ನೋಪನಿಷತ್ತಿನಲ್ಲಿದೆ.)

—ಕಠೋಪನಿಷತ್ತಿನಲ್ಲಿ ಯಮನು 'ಏತದಾಲಂಬನಂ ಜ್ಞಾತ್ವಾ' ಮೊದಲಾದ ವಾಕ್ಯದಿಂದ ಉಪಾಸನೆಯು ಎರಡು ಬಗೆಯಾಗಿರುವದೆಂದು ಹೇಳಿರುವನು.

**ಏತದಾಲಂಬನಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ।**
**ಇತಿ ಪ್ರೋಕ್ತಂ ಯಮೇನಾಪಿ ಪೃಚ್ಛತೇ ನಚಿಕೇತಸೇ ॥೧೪೯॥**

ಪ್ರಶ್ನ ಕೇಳುವ ನಚಿಕೇತನಿಗೆ ಯಮನು ಕೂಡ 'ಈ ಆಧಾರ (ಆಶ್ರಮ) ವನ್ನು ತಿಳಿದು ಯಾವನು ಯಾವುದನ್ನು ಇಚ್ಛಿಸುವನೋ ಅದು ಅವನಿಗೆ ದೊರೆಯುವದು ಎಂದು ಹೇಳಿದ್ದಾನೆ.

—ಸಾರಾಂಶ.

**ಇಹ ವಾ ಮರಣೇ ವಾಽಸ್ಯ ಬ್ರಹ್ಮಲೋಕೇಽಥ ವಾ ಭವೇತ್ ।**
**ಬ್ರಹ್ಮಸಾಕ್ಷಾತ್ಕೃತಿಃ ಸಮ್ಯಗುಪಾಸೀನಸ್ಯ ನಿರ್ಗುಣಮ್॥೧೫೦॥**

ಉತ್ತಮರೀತಿಯಿಂದ ನಿರ್ಗುಣ ಉಪಾಸನೆಯನ್ನು ಮಾಡುವವನಿಗೆ ಬ್ರಹ್ಮಸಾಕ್ಷಾತ್ಕಾರವು ಈ ಜನ್ಮದಲ್ಲಾಗಲೀ, ಅಥವಾ ಮರಣಕಾಲದಲ್ಲಾಗಲೀ, ಅಥವಾ ಬ್ರಹ್ಮಲೋಕದಲ್ಲಾಗಲೀ ಆಗುವದು.

ಮಹಾವಾಕ್ಯದ ಅರ್ಥವನ್ನು ವಿಚಾರ ಮಾಡಲು ಶಕ್ತನಲ್ಲದವನಿಗೆ ನಿರ್ಗುಣ ಬ್ರಹ್ಮಜ್ಞಾನದಲ್ಲಿ ಅಧಿಕಾರವಿದೆ ಎಂದು ಆತ್ಮಗೀತೆಯಲ್ಲಿ ಹೇಳಿದೆ ಎನ್ನುತ್ತಾರೆ.

**ಅರ್ಥೋಽಯಮಾತ್ಮಗೀತಾಯಾಮಪಿ ಸ್ಪಷ್ಟಮುದೀರಿತಃ ।**
**ವಿಚಾರಾಕ್ಷಮ ಆತ್ಮಾನಮುಪಾಸೀತೇತಿ ಸಂತತಮ್ ॥೧೫೧॥**

ವಿಚಾರ ಮಾಡಲು ಶಕ್ತಿ ಇಲ್ಲದವನು ಯಾವಾಗಲೂ ನಿರ್ಗುಣ ಬ್ರಹ್ಮನನ್ನು ಧ್ಯಾನ ಮಾಡುತ್ತಿರಬೇಕು ಎಂಬ ಅರ್ಥವು ಆತ್ಮಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾಗಿದೆ.

—ಆ ಆತ್ಮಗೀತೆಯ ಮೂರು ವಾಕ್ಯಗಳನ್ನೇ ಉದ್ಧರಿಸುತ್ತಾರೆ.

**ಸಾಕ್ಷಾತ್ಕರ್ತುಮಶಕ್ತೋಽಪಿ ಚಿಂತಯೇನ್ಮಾಮಶಂಕಿತಃ ।**
**ಕಾಲೇನಾನುಭವಾರೂಢೋ ಭವೇಯಂ ಫಲಿತೋ ಧ್ರುವಮ್ ॥೧೫೨॥**

ವಿಚಾರದಿಂದ ಬ್ರಹ್ಮವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲಾಗದವನು ಎಲ್ಲ ಸಂಶಯಗಳನ್ನು ಬಿಟ್ಟು ಪರಮಾತ್ಮನಾದ ನನ್ನ ಧ್ಯಾನವನ್ನು ಮಾಡಬೇಕು. ಯೋಗ್ಯಕಾಲವು ಬರಲು ನಾನು ಅನುಭವಕ್ಕೆ ಬರುವವನೂ, ಫಲರೂಪನೂ ಅವಶ್ಯವಾಗಿ ಆಗುವೆನು.

ಧ್ಯಾನವು ಸಮ್ಯಗ್ಜ್ಞಾನದ ಉಪಾಯವಾಗಿದೆ ಎಂಬ ವಿಷಯದಲ್ಲಿ ದೃಷ್ಟಾಂತ.

**ಯಥಾಽಗಾಧನಿಧೇರ್ಲಬ್ಧೌ ನೋಪಾಯಃ ಖನನಂ ವಿನಾ ।**
**ಮಲ್ಲಾಭೇಽಪಿ ತಥಾ ಸ್ವಾತ್ಮಚಿಂತಾಂ ಮುಕ್ತ್ವಾ ನಚಾಪರಃ ॥೧೫೩॥**

ಬಹಳ ಆಳವಾಗಿ ನೆಲದಲ್ಲಿ ಹೂಳಿರುವ ಹಣದರಾಶಿಯನ್ನು ಪಡೆಯುವದಕ್ಕೆ ಅಗಿಯುವದರ ಹೊರತು ಬೇರೆಉಪಾಯವಿಲ್ಲ. ಅದರಂತೆ ನನ್ನನ್ನು ಪಡೆಯಬೇಕಾದರೆ ನನ್ನ ರೂಪವೇ ಆದ ಆತ್ಮಚಿಂತನೆಯನ್ನು ಬಿಟ್ಟರೆ ಬೇರೆಉಪಾಯವಿಲ್ಲ.

—ವ್ಯತಿರೇಕ ಮುಖವಾಗಿ ಹೇಳಿದ ಅರ್ಥವನ್ನು ಅನ್ವಯ ಮುಖವಾಗಿ ಹೇಳುತ್ತಾರೆ.

**ದೇಹೋಪಲಮಪಾಕೃತ್ಯ ಬುದ್ಧಿಕುದ್ದಾಲಕಾತ್ಪುನಃ ।**
**ಖಾತ್ವಾಮನೋಭುವಂ ಭೂಯೋ ಗೃಹ್ಣೀಯಾನ್ಮಾಂ ನಿಧಿಂ ಪುಮಾನ್ ॥೧೫೪॥**

ಪುರುಷನು ದೇಹವೆಂಬ ಕಲ್ಲನ್ನು ಮೇಲಕ್ಕೆಬ್ಬಿಸಿ ತರುವಾಯ ಬುದ್ಧಿ ಎಂಬ ಗುದ್ದಲಿಯಿಂದ ಮನವೆಂಬ ನೆಲವನ್ನು ಅಗಿದು ನಿಧಿರೂಪವಾದ ನನ್ನನ್ನು ಎಂದರೆ ಬ್ರಹ್ಮವನ್ನು ಪಡೆಯಬೇಕು.

—ಇದೇ ವಿಷಯದಲ್ಲಿ ಇನ್ನೊಂದು ವಾಕ್ಯ.

**ಅನುಭೂತೇರಭಾವೇಽಪಿ ಬ್ರಹ್ಮಾಸ್ಮೀತ್ಯೇವ ಚಿಂತ್ಯತಾಮ್ ।**
**ಅಪ್ಯಸತ್ ಪ್ರಾಪ್ಯತೇ ಧ್ಯಾನಾನ್ನಿತ್ಯಾಪ್ತಂ ಬ್ರಹ್ಮ ಕಿಂ ಪುನಃ ॥೧೫೫॥**

ಒಂದು ವೇಳೆ ಅನುಭವವಾಗದಿದ್ದರೂ 'ನಾನು ಬ್ರಹ್ಮ' ವೆಂದು ಧ್ಯಾನಿಸಬೇಕು. ಯಾಕಂದರೆ ಧ್ಯಾನದಿಂದ ಮೊದಲು ಇಲ್ಲದ ದೇವತ್ವ ಮುಂಗಳೂ ದೊರೆಯುತ್ತಿರುವಾಗ ಯಾವಾಗಲೂ ತನ್ನ ರೂಪವೇ ಆಗಿರುವ ನಿತ್ಯ ಪ್ರಾಪ್ತ ಬ್ರಹ್ಮದ ವಿಷಯದಲ್ಲಿ ಏನು ಹೇಳುವುದು?

—ಬ್ರಹ್ಮಧ್ಯಾನದ ಫಲವು ಪ್ರತ್ಯಕ್ಷವಾದುದಾಗಿದೆ. ಆದುದರಿಂದ ಧ್ಯಾನವನ್ನು ಅವಶ್ಯ ಮಾಡಬೇಕು ಎನ್ನುತ್ತಾರೆ.

**ಅನಾತ್ಮಬುದ್ಧಿಶೈಥಿಲ್ಯಂ ಫಲಂ ಧ್ಯಾನಾದ್ದಿನೇ ದಿನೇ ।**
**ಪಶ್ಯನ್ನಪಿ ನ ಚೇದ್ಧ್ಯಾಯೇತ್ಕೋಽಪರೋಽಸ್ಮಾತ್-ಪಶುರ್ವದ ॥೧೫೬॥**

ನಿರ್ಗುಣ ಬ್ರಹ್ಮವನ್ನು ಧ್ಯಾನಮಾಡುತ್ತ ಬಂದಹಾಗೆಲ್ಲ ಅನಾತ್ಮವಸ್ತುಗಳಲ್ಲಿರುವ ಮಮತ್ವ ಬುದ್ಧಿಯು ಸಡಲಿ ಹೋಗುತ್ತಿದೆ ಎಂಬ ಫಲವು ಪ್ರತ್ಯಕ್ಷ ಅನುಭವಕ್ಕೆ ಬರುತಿದ್ದರೂ ಯಾವನು ಧ್ಯಾನಮಾಡಲಿಕ್ಕೆ ಹಿಂದೆಳಿಸುವನೋ ಅವನಿಗಿಂತ ಪಶುವು ಮತ್ತಾರು? ಹೇಳು.

—ಇದುವರೆಗೆ ಪ್ರತಿಪಾದಿಸುತ್ತ ಬಂದಿರುವದರ ಸಾರಾಂಶ.

**ದೇಹಾಭಿಮಾನಂ ವಿಧ್ವಸ್ಯ ಧ್ಯಾನಾದಾತ್ಮಾನ-ಮದ್ವಯಮ್ ।**
**ಪಶ್ಯನ್ಮರ್ತ್ಯೋಽಮೃತೋ ಭೂತ್ವಾ ಹ್ಯತ್ರ ಬ್ರಹ್ಮ ಸಮಶ್ನುತೇ ॥೧೫೭॥**

ಧ್ಯಾನ ಯೋಗದಿಂದ ಮರಣ ಧರ್ಮವುಳ್ಳ ದೇಹವೇ ನಾನೆಂಬ ಅಭಿಮಾನವನ್ನು ನಾಶಗೊಳಿಸಿ ಬೇರೊಂದಿಲ್ಲದ ಆತ್ಮನನ್ನು ಕಂಡ ಮರ್ತ್ಯನು ಅಜರಾಮರನೆನಿಸಿ ಇಲ್ಲಿಯೇ ಬ್ರಹ್ಮಾನುಭವವನ್ನು ಪಡೆಯುವನು.

—ಇನ್ನು ಈ ಧ್ಯಾನದೀಪವನ್ನು ಅನುಸರಿಸಿದುದಕ್ಕೆ ಫಲ.

**ಧ್ಯಾನದೀಪಮಿಮಂ ಸಮ್ಯಕ್ಪರಾಮೃಶತಿ ಯೋ ನರಃ ।**
**ಮುಕ್ತಸಂಶಯ ಏವಾಯಂ ಧ್ಯಾಯತಿ ಬ್ರಹ್ಮ ಸಂತತಮ್ ॥೧೫೮॥**

ಯಾವ ಮನುಷ್ಯನು ಈ ಧ್ಯಾನದೀಪ ಪ್ರಕರಣವನ್ನು ಚನ್ನಾಗಿ ವಿಚಾರಿಸಿ ತಿಳಿಯುವನೋ ಅವನು ಜ್ಞಾನ ಮತ್ತು ಧ್ಯಾನಗಳ ಬಗೆಗೆ ಸಂಶಯ ವಿಲ್ಲದವನಾಗಿ ಯಾವಾಗಲೂ ಬ್ರಹ್ಮವನ್ನೇ ಧ್ಯಾನಿಸುವನು.

### ಧ್ಯಾನದೀಪದ ಸಾರಾಂಶ

ಉಪಾಸನೆಯ ರೀತಿ, ವಿಚಾರದಿಂದಾಗುವ ಅಪರೋಕ್ಷ ಜ್ಞಾನ, ಜ್ಞಾನಸಾಧನವಾದ ಉಪಾಸನೆ, ಜ್ಞಾನಕ್ಕೂ ಉಪಾಸನೆಗೂ ಇರುವ ಭೇದ, ನಿರ್ಗುಣೋಪಾಸನೆಯ ಫಲಗಳನ್ನು ಇದರಲ್ಲಿ ವಿವರಿಸಿದ್ದಾರೆ.

... ○....

## ೧೦. ನಾಟಕ ದೀಪ

ಆರಂಭಿಸಿದ ಗ್ರಂಥವು ನಿರ್ವಿಘ್ನವಾಗಿ ಮುಗಿಯಲೆಂದು ಇಷ್ಟದೇವತಾ ತತ್ತ್ವಸ್ಮರಣಾನುರೂಪ ಮಂಗಳಾಚರಣೆಯನ್ನು ಮಂದಾಧಿಕಾರಿಗಳಿಗೆ ಅದ್ವಿತೀಯ ಬ್ರಹ್ಮಾತ್ಮ ತತ್ತ್ವದ ಜ್ಞಾನವು ನಿರಾಯಾಸದಿಂದಾಗ ಬೇಕೆಂದು 'ಪ್ರಪಂಚವೆಲ್ಲ ಕಲ್ಪಿತ ಆದುದರಿಂದ ಅದು ಸುಳ್ಳು' ಎಂದು ಪ್ರತಿಪಾದಿಸಿ ಅದ್ವಿತೀಯ ಬ್ರಹ್ಮವನ್ನು ತಿಳಿಸುತ್ತಾರೆ.

—ಮೊದಲು ಅಧ್ಯಾರೋಪ (ಕಲ್ಪಿತವೆಂಬುದು)

**ಪರಮಾತ್ಮಾಽದ್ವಯಾನಂದಪೂರ್ಣಃ ಪೂರ್ವಃ ಸ್ವಮಾಯಯಾ।**
**ಸ್ವಯಮೇವಜಗದ್ಭೂತ್ವಾ ಪ್ರಾವಿಶಜ್ಜೀವರೂಪತಃ ॥೧॥**

ಸೃಷ್ಟಿಯ ಪೂರ್ವದಲ್ಲಿ ಎರಡನೆಯದೆಂಬುದಿಲ್ಲದ ಆನಂದ ಘನ ಪರಮಾತ್ಮನು ತನ್ನ ಮಾಯಾಶಕ್ತಿಯಿಂದ ತಾನೇ ಜಗತ್ತಿನರೂಪತಾಳಿ ತಾನೇ ಜೀವ ರೂಪದಿಂದ ಪ್ರವೇಶಿಸಿದನು.

—ಒಬ್ಬ ಪರಮಾತ್ಮನೇ ಎಲ್ಲಶರೀರಗಳಲ್ಲಿ ಇರುವದಾದರೆ ಪೂಜ್ಯ ಪೂಜಕ ಮುಂತಾದ ಉತ್ತಮಾಧಮ ಭಾವಗಳೇಕೆ?

**ವಿಷ್ಣ್ವಾದ್ಯುತ್ತಮದೇಹೇಷು ಪ್ರವಿಷ್ಟೋ ದೇವತಾ ಭವೇತ್ ।**
**ಮರ್ತ್ಯಾದ್ಯಧಮದೇಹೇಷು ಸ್ಥಿತೋಭಜತಿ ಮರ್ತ್ಯ-**
**ತಾಮ್ ॥೨॥**

ವಿಷ್ಣುವೇ ಮೊದಲಾದ ಉತ್ತಮ ದೇಹಗಳಲ್ಲಿ ಪ್ರವೇಶಿಸಿದ ಪರಮಾತ್ಮನು ದೇವರೆನಿಸಿ ಪೂಜೆಗೊಳ್ಳುವವನಾದನು. ಮನುಷ್ಯನೇ ಮೊದಲಾದ ಅಧಮದೇಹಗಳಲ್ಲಿ ಪ್ರವೇಶಿಸಿದ ಪರಮಾತ್ಮನು ಮರ್ತ್ಯನೆನಿಸಿ ಪೂಜಿಸುವವನಾದನು.

(ಈ ಉತ್ತಮಾಧಮ ಭಾವವು ಸ್ವಾಭಾವಿಕವಾದುದಲ್ಲ. ಅದು ಶರೀರದ ಉಪಾಧಿಯ ಮೂಲಕ ಉಂಟಾದುದು. ಆದುದರಿಂದ ಮೂಲ ಆತ್ಮನಲ್ಲಿ ಯಾವುದೇ ಹೆಚ್ಚು ಕಡಿಮೆ ಇಲ್ಲ)

—ಹೀಗೆ ಆತ್ಮನಮೇಲೆ ಸೃಷ್ಟಿಯ ಆರೋಪವು ಹೇಗೆ ಆಗುವುದೆಂಬುದನ್ನು ಸಂಕ್ಷೇಪವಾಗಿ ಹೇಳಿ ಇದೆಲ್ಲ ಕಲ್ಪಿತ ಎಂದರೆ ಅಪವಾದವೆಂಬದನ್ನು ತಿಳಿಸುತ್ತಾರೆ.

**ಅನೇಕಜನ್ಮಭಜನಾತ್ ಸ್ವವಿಚಾರಂ ಚಿಕೀರ್ಷತಿ ।**
**ವಿಚಾರೇಣ ವಿನಷ್ಟಾಯಾಂ ಮಾಯಾಯಾಂ ಶಿಷ್ಯತೇ**
**ಸ್ವಯಮ್ ॥೩॥**

ಅನೇಕ ಜನ್ಮಗಳಲ್ಲಿ ಈಶ್ವರನು ತೃಪ್ತಿಯಾಗಲೆಂದು ಮಾಡಿದ ಒಳ್ಳೆಯ ಕರ್ಮಗಳ ಫಲವಾಗಿ ಮನುಷ್ಯನು ಆತ್ಮ ವಿಚಾರ ಮಾಡುವ ಇಚ್ಛೆಯುಳ್ಳವನಾಗುವನು. ವಿಚಾರಮಾಡುತ್ತಹೋದಂತೆ ಮಾಯೆಯು ನಾಶವಾಗಲು ಆಗತಾನೇ ತಾನು ಪರಮಾತ್ಮನಾಗಿ ಉಳಿದುಕೊಳ್ಳುವನು.

ಜ್ಞಾನದ ಫಲವು ಸಂಸಾರ ಬಂಧದಿಂದ ಬಿಡುಗಡೆಯಾಗುವ ಮೋಕ್ಷವೆಂದು ಪ್ರಸಿದ್ಧವಿರಲು, ಪರಮಾತ್ಮನಾಗಿ ಉಳಿದುಕೊಳ್ಳುವದೆಂಬುದು ಯೋಗ್ಯವಲ್ಲ.

**ಅದ್ವಯಾನಂದರೂಪಸ್ಯ ಸದ್ವಯತ್ವಂ ಚ ದುಃಖಿತಾ ।**
**ಬಂಧಃ ಪ್ರೋಕ್ತಃ ಸ್ವರೂಪೇಣ ಸ್ಥಿತಿರ್ಮುಕ್ತಿರಿತೀರ್ಯತೇ ॥೪॥**

ತಾನೇ ತಾನಾದ ಆನಂದರೂಪ ಆತ್ಮನಿಗೆ ಎರಡನೆಯವುಗಳೊಡನೆ ಇರುವೆನೆಂಬ ಭ್ರಾಂತಿ-ಅದರಿಂದಾಗುವ ದುಃಖ ಇವೇ ಬಂಧವೆಂದು ಹೇಳುವರು. ಆದರಂತೆ ತನ್ನ ಸಹಜ ಸ್ವರೂಪದಿಂದ ಇರುವದಕ್ಕೆ ಮೋಕ್ಷವೆಂದು ಹೇಳುವರು.

—ಜನಕನೇ ಮೊದಲಾದ ರಾಜರು ಕರ್ಮಯೋಗದಿಂದ ಸಿದ್ಧರೆನಿಸಿದರು ಎಂದು ಭಗವಂತನು ಗೀತೆಯಲ್ಲಿ ಹೇಳುತ್ತಾನೆ. ಇದರ ಮೇಲಿಂದ ಕರ್ಮವು ಮೋಕ್ಷದಸಾಧನವೆಂದು ಸಿದ್ಧವಾಗುತ್ತದೆ. ಎಂದ ಮೇಲೆ ವಿಚಾರದಿಂದ ಹುಟ್ಟುವ ಜ್ಞಾನದಿಂದೇನು ಪ್ರಯೋಜನ?

**ಅವಿಚಾರಕೃತೋ ಬಂಧೋ ವಿಚಾರೇಣ ನಿವರ್ತತೇ ।**
**ತಸ್ಮಾಜ್ಜೀವಪರಾತ್ಮಾನೌ ಸರ್ವದೈವ ವಿಚಾರಯೇತ್ ॥೫॥**

ತಪ್ಪು ತಿಳಿವಳಿಕೆಯಿಂದ ಉಂಟಾದ ಬಂಧವು ಸರಿಯಾದ ತಿಳಿವಳಿಕೆಯಿಂದ ಕಳಚುವದು. ಆದುದರಿಂದ ಜೀವ ಮತ್ತು ಪರಮಾತ್ಮರ ಬಗೆಗೆ ಯಾವಾಗಲೂ ವಿಚಾರ ಮಾಡುತ್ತಿರಬೇಕು.

('ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' ಎಂಬ ಸ್ಮೃತಿ ವಚನದಲ್ಲಿ 'ಸಂಸಿದ್ಧಿ' ಎಂಬ ಪದಕ್ಕೆ ಚಿತ್ತಶುದ್ಧಿ ಎಂಬ ಅರ್ಥವೇ ವಿವಕ್ಷಿತವಾಗಿದೆ. ಮೋಕ್ಷವಲ್ಲ ಎಂದು ತಿಳಿದಿರಬೇಕು. ತತ್ವಸಾಕ್ಷಾತ್ಕಾರದವರೆಗೆ ಜೀವ–ಪರಮಾತ್ಮರ ವಿಚಾರವು ಇದ್ದೇ ಇರಬೇಕು.)

—ಮೊದಲು ಜೀವಸ್ವರೂಪವನ್ನು ತಿಳಿಸುತ್ತಾರೆ.

**ಅಹಮಿತ್ಯಭಿಮಂತಾ ಯಃ ಕರ್ತಾಽಸೌ ತಸ್ಯಸಾಧನಮ್ ।**
**ಮನಸ್ತಸ್ಯ ಕ್ರಿಯೇ ಅಂತರ್ಬಹಿರ್ವೃತ್ತೀ ಕ್ರಮೋತ್ಥಿತೇ ॥೬॥**

ಯಾವನು ದೇಹ ಮೊದಲಾದವುಗಳಲ್ಲಿ 'ನಾನು' ಎಂದು ಅಭಿಮಾನಗೊಳ್ಳುವನೋ ಅವನೇ ಕರ್ತನು. ಮನಸ್ಸು ಅವನಿಗೆ ಸಾಧನವಾಗಿದೆ. ಕ್ರಮವಾಗಿ ಹುಟ್ಟುತ್ತಿರುವ ಒಳಗಿನ–ಹೊರಗಿನ ವೃತ್ತಿಗಳೇ ಅವನ ಕ್ರಿಯೆ.

(ಚಿದಾಭಾಸ ವಿಶಿಷ್ಟ ಅಹಂಕಾರವೇ ಜೀವವೆಂದು ಹಿಂದೆ ಎರಡನೇ ಪ್ರಕರಣದಲ್ಲಿ ವಿಶದವಾಗಿ ಬಂದಿರುತ್ತದೆ.)

—ಈಗ ಆ ಎರಡು ವೃತ್ತಿಗಳ ಸ್ವರೂಪ ಮತ್ತು ವಿಷಯಗಳನ್ನು ಹೇಳುತ್ತಾರೆ.

**ಅಂತರ್ಮುಖಾಽಹಮಿತ್ಯೇಷಾ ವೃತ್ತಿಃ ಕರ್ತಾರಮುಲ್ಲಿಖೇತ್ ।**
**ಬಹಿರ್ಮುಖೇದಮಿತ್ಯೇಷಾ ಬಾಹ್ಯಂ ವಸ್ತ್ವಿದಮುಲ್ಲಿಖೇತ್ ॥೭॥**

ದೇಹದೊಳಗೆ 'ನಾನು' ಎಂಬ ರೂಪದಿಂದ ಹುಟ್ಟುವ ವೃತ್ತಿಯು ಕರ್ತೃತ್ವದ ಅಭಿಮಾನವನ್ನು ಹೊಂದಿದ ಜೀವನನ್ನು ತಿಳಿಸುವದು. ದೇಹದ ಹೊರಗೆ 'ಇದು' ಎಂಬ ರೂಪದಿಂದ ಹುಟ್ಟುವ ವೃತ್ತಿಯು ಹೊರಗಿನ ಪದಾರ್ಥಗಳನ್ನು ತಿಳಿಸುವದು.

—ಮನಸ್ಸಿನಿಂದಲೇ ಎಲ್ಲ ವ್ಯವಹಾರ ನಡೆಯುವದೆಂದಾಗ ಕಣ್ಣು ಮೊದಲಾದ ಇಂದ್ರಿಯಗಳು ವ್ಯರ್ಥವೆನ್ನಬೇಕಾಯಿತು.

**ಇದಮೋ ಯೇ ವಿಶೇಷಾಃ ಸ್ಯುರ್ಗಂಧರೂಪರಸಾದಯಃ ।**
**ಅಸಾಂಕರ್ಯೇಣ ತಾನ್ ಭಿಂದ್ಯಾದ್ ಘ್ರಾಣಾದೀಂದ್ರಿಯಪಂಚಕಮ್ ॥೮॥**

''ಇದಮ್'' ಎಂಬ ಹೊರಗಿನ ವೃತ್ತಿಯ ವಿಷಯಗಳಲ್ಲಿ ಗಂಧ-ರೂಪ-ರಸ ಮೊದಲಾದ ಭೇದಗಳುಂಟು. ಅವುಗಳನ್ನು ಮೂಗು ಮೊದಲಾದ ಐದು ಇಂದ್ರಿಯಗಳು ಬೇರೆ ಬೇರೆಯಾಗಿ ವಿಂಗಡಿಸುತ್ತವೆ.

ಹೀಗೆ ಮೂರು ಶ್ಲೋಕಗಳಿಂದ ಜೀವ ಸ್ವರೂಪವನ್ನು ಹೇಳಿ ಈಗ ಪರಮಾತ್ಮ ಸ್ವರೂಪವನ್ನು ತಿಳಿಸುತ್ತಾರೆ.

**ಕರ್ತಾರಂ ಚ ಕ್ರಿಯಾಂ ತದ್ವದ್ ವ್ಯಾವೃತ್ತವಿಷಯಾನಪಿ ।**
**ಸ್ಫೋರಯೇದೇಕಯತ್ನೇನ ಯೋಽಸೌ ಸಾಕ್ಷ್ಯತ್ರ ಚಿದ್ವಪುಃ ॥೯॥**

ಕರ್ತೃ ಮತ್ತು ಅವನ ಕ್ರಿಯೆಗಳು ಅದರಂತೆ ಭಿನ್ನ ಭಿನ್ನ ವಿಷಯಗಳು ಇವೆಲ್ಲವನ್ನು ಚಿದ್ರೂಪನಾದ ಆತ್ಮನು ಒಂದೇ ಕಾಲಕ್ಕೆ ಬೆಳಗುವನು. ಅವನನ್ನು ವೇದಾಂತ ಶಾಸ್ತ್ರದಲ್ಲಿ ಸಾಕ್ಷಿ ಎನ್ನುವರು.

—ಅದು ಹೇಗೆ ?

**ಈಕ್ಷೇ ಶೃಣೋಮಿ ಜಿಘ್ರಾಮಿ ಸ್ವಾದಯಾಮಿ ಸ್ಪೃಶಾ-**
**ಮ್ಯಹಮ್ ।**
**ಇತಿ ಭಾಸಯತೇ ಸರ್ವಂ ನೃತ್ಯಶಾಲಾಸ್ಥದೀಪವತ್ ॥೧೦॥**

ನಾನು ನೋಡುತ್ತೇನೆ. ಕೇಳುತ್ತೇನೆ. ಮೂಸುತ್ತೇನೆ. ತಿನ್ನುತ್ತೇನೆ. ಮುಟ್ಟುತ್ತೇನೆ. ಹೀಗೆಲ್ಲ ನೃತ್ಯಶಾಲೆಯಲ್ಲಿಯ ದೀಪದಂತೆ ಅವನು ಎಲ್ಲವನ್ನು ಒಮ್ಮೆಲೆ ಬೆಳಗುತ್ತಾನೆ.

—ಇದನ್ನೆ ಸ್ಪಷ್ಟಗೊಳಿಸುತ್ತಾರೆ.

**ನೃತ್ಯಶಾಲಾಸ್ಥಿತೋ ದೀಪಃ ಪ್ರಭುಂ ಸಭ್ಯಾಂಶ್ಚ ನರ್ತಕೀಮ್ ।**
**ದೀಪಯೇದವಿಶೇಷಣ ತದಭಾವೇಽಪಿ ದೀಪ್ಯತೇ ॥೧೧॥**

ನೃತ್ಯಶಾಲೆಯಲ್ಲಿರುವ ದೀಪವು ಅಲ್ಲಿರುವ ಅರಸನನ್ನು, ಸಭಿಕರನ್ನು ಮತ್ತು ನರ್ತಿಸುವವಳನ್ನು ಹೀಗೆ ಎಲ್ಲವನ್ನು ಬೆಳಗುತ್ತದೆ. ಅವರು ಯಾರೂ ಇಲ್ಲದಾಗಲೂ ತನ್ನಷ್ಟಕ್ಕೆ ತಾನು ಬೆಳಗುತ್ತಿರುವದು.

—ಈ ದೃಷ್ಟಾಂತವನ್ನು ದಾರ್ಷ್ಟಾಂತಿಕದಲ್ಲಿ ಜೋಡಿಸುತ್ತಾರೆ.

**ಅಹಂಕಾರಂ ಧಿಯಂ ಸಾಕ್ಷೀ ವಿಷಯಾನಪಿ ಭಾಸಯೇತ್ ।**
**ಅಹಂಕಾರಾದ್ಯಭಾವೇಽಪಿ ಸ್ವಯಂ ಭಾತ್ಯೇವ ಪೂರ್ವವತ್ ॥೧೨॥**

ಸಾಕ್ಷಿಯಾದ ಆತ್ಮನು, ಅಹಂಕಾರವನ್ನು-ಬುದ್ಧಿಯನ್ನು ಮತ್ತು ವಿಷಯಗಳನ್ನು ಹೀಗೆ ಎಲ್ಲವನ್ನು ಬೆಳಗುತ್ತಾನೆ. ಅದರಂತೆ ಇವು ಯಾವವೂ ಇಲ್ಲದಿರುವಾಗ ತಂತಾನೇ ಬೆಳಗುತ್ತ ಇರುತ್ತಾನೆ.

(ಭಾವ-ಅಭಾವ ಎರಡನ್ನೂ ಸಾಕ್ಷಿಯು ಬೆಳಗುತ್ತಾನೆ. ಎಚ್ಚರ-ಕನಸು ಎಂಬ ಅವಸ್ಥೆಗಳಲ್ಲಿಯ ಅಹಂಕಾರ ಮೊದಲಾದವನ್ನು ಗಾಢನಿದ್ರೆ ಎಂಬ ಅವಸ್ಥೆಯಲ್ಲಿ ಅವುಗಳಿಲ್ಲವೆಂಬ ಅಭಾವ ಸ್ಥಿತಿಯನ್ನು ಸಾಕ್ಷಿಯಾಗಿ ಬೆಳಗುತ್ತಲೇ ಇರುತ್ತಾನೆ.)

ಪ್ರಕಾಶರೂಪವಾದ ಬುದ್ಧಿಯು ಅಹಂಕಾರಾದಿಗಳನ್ನು ಬೆಳಗಲು ಸಮರ್ಥವಿರುವಾಗ ಸಾಕ್ಷಿಯ ಅವಶ್ಯಕತೆ ಏನು ?

**ನಿರಂತರಂ ಭಾಸಮಾನೇ ಕೂಟಸ್ಥೇ ಜ್ಞಪ್ತಿರೂಪತಃ ।**
**ತದ್ಭಾಸಾ ಭಾಸ್ಯಮಾನೇಯಂ ಬುದ್ಧಿರ್ನೃತ್ಯತ್ಯನೇಕಧಾ ॥೧೩॥**

ಯಾವ ಬದಲಾವಣೆಯನ್ನೂ ಹೊಂದದ ಆತ್ಮನು ಸ್ವಪ್ರಕಾಶ ಚೈತನ್ಯ ರೂಪನಾಗಿ ಬೆಳಗುತ್ತಿದ್ದರೆ ಮಾತ್ರ ಅವನ ಬೆಳಕಿನಿಂದ ಬೆಳಕನ್ನು ಪಡೆ ಯುವ ಬುದ್ಧಿಯು ಅನೇಕ ಬಗೆಯಿಂದ ಕುಣಿಯುತ್ತದೆ.

—ಈ ಸಿದ್ಧಾಂತವು ಶ್ರೋತೃಗಳಿಗೆ ಚನ್ನಾಗಿ ತಿಳಿಯಲೆಂದು ನಾಟಕದ ಬಗೆಯಿಂದ ನಿರೂಪಿಸುತ್ತಾರೆ.

**ಅಹಂಕಾರಃ ಪ್ರಭುಃ ಸಭ್ಯಾ ವಿಷಯಾ ನರ್ತಕೀ ಮತಿಃ ।**
**ತಾಲಾದಿಧಾರಿಣ್ಯಕ್ಷಾಣಿ ದೀಪಃ ಸಾಕ್ಷ್ಯವಭಾಸಕಃ ॥೧೪॥**

ಚಿದಾಭಾಸನಿಂದ ಕೂಡಿದ ಅಹಂಕಾರವು ಅರಸು. ವಿಷಯಗಳೇ ಸಭಾಸದರು. ಬುದ್ಧಿಯು ನರ್ತಕಿ. ಇಂದ್ರಿಯಗಳು ತಾಲ ಮೊದಲಾದ ವನ್ನು ಹಿಡಿದ ಹಿಮ್ಮೇಳ. ಸಾಕ್ಷಿಯು ಇವೆಲ್ಲವುಗಳನ್ನು ಬೆಳಗುವ ದೀಪ.

—ಹೀಗೆ ಸಾಕ್ಷಿಯು ಎಲ್ಲವನ್ನು ಬೆಳಗುವವನೆಂದರೆ ಅವುಗಳೊಡನೆ ಕೂಡುವಿಕೆ–ಅಗಲಿಕೆ ಮೊದಲಾದ ವಿಕಾರಗಳು ಅವನಿಗೆ ಉಂಟಾಗಬೇಕಾ ಯಿತು.

**ಸ್ವಸ್ಥಾನಸಂಸ್ಥಿತೋ ದೀಪಃ ಸರ್ವತೋ ಭಾಸಯೇದ್ಯಥಾ ।**
**ಸ್ಥಿರಸ್ಥಾಯೀ ತಥಾ ಸಾಕ್ಷೀ ಬಹಿರಂತಃ ಪ್ರಕಾಶಯೇತ್॥೧೫॥**

ತನ್ನ ಸ್ಥಳದಲ್ಲಿ ತಾನು ನೆಲೆಯಾಗಿದ್ದು ಸುತ್ತುಮುತ್ತಲಿನ ಎಲ್ಲ ಪದಾರ್ಥಗಳನ್ನು ಬೆಳಗುವ ದೀಪದಂತೆ ನೆಲೆಯಾಗಿದ್ದುಕೊಂಡ ಸಾಕ್ಷಿ ಒಳ– ಹೊರ ವಿಷಯಗಳನ್ನು ಬೆಳಗುವನು.

—ಹೀಗನ್ನುವದು ಸರಿಯಲ್ಲ. ಯಾಕಂದರೆ 'ಅಪೂರ್ವಂ' ಅನಪರಂ- ಅನಂತರಂ-ಅಬಾಹ್ಯಂ, ಎಂಬ ಶ್ರುತಿಯು ಸಾಕ್ಷಿ ಒಳ–ಹೊರಗೆ ಎಂಬ ಭಾವ ಗಳಿಲ್ಲವೆಂದು ತಿಳಿಸುತ್ತದೆ.

**ಬಹಿರಂತರ್ವಿಭಾಗೋಽಯಂ ದೇಹಾಪೇಕ್ಷೋ ನಸಾಕ್ಷಿಣಿ ।**
**ವಿಷಯಾ ಬಾಹ್ಯದೇಶಸ್ಥಾ ದೇಹಸ್ಯಾಂತರಹಂಕೃತಿಃ ॥೧೬॥**

ಈ ಹೊರಗೆ–ಒಳಗೆ ಎಂಬ ವಿಭಾಗವು ದೇಹಕ್ಕೆ ಸಂಬಂಧವಾದುದು. ಸಾಕ್ಷಿಗೆ ಅವುಗಳಸಂಬಂಧವಿಲ್ಲ. ವಿಷಯಗಳಿರುವದು ದೇಹದಿಂದ ಹೊರಗೆ. ಚಿದಾಭಾಸನಿಂದ ಕೂಡಿದ ಅಹಂಕಾರವಿರುವದು ದೇಹದ ಒಳಗೆ.

—ಸಾಕ್ಷಿಯು ನಿರ್ವಿಕಾರನಿದ್ದು ಹೊರಗಿನ ಒಳಗಿನ ವಿಷಯಗಳನ್ನು ಬೆಳಗುವನೆಂಬ ಮಾತು ಸರಿಯಲ್ಲ. ಯಾಕಂದರೆ 'ನಾನು ಘಟವನ್ನು ನೋಡುತ್ತೇನೆ' ಎಂಬ ವಾಕ್ಯದಲ್ಲಿ ಸಾಕ್ಷಿಯು ಮೊದಲು ನಾನು ಎಂಬುದನ್ನು ಬೆಳಗಿ ಆ ಮೇಲೆ ಘಟವೆಂಬುದನ್ನು ಬೆಳಗುವನು. ಇಲ್ಲಿ ಸಾಕ್ಷಿಯು ಒಳಗೆ-ಹೊರಗೆ ಅಡ್ಡಾಡಿದಂತೆ ಕಾಣುವದು. ಎಂದಮೇಲೆ ಅವನು ನಿರ್ವಿಕಾರನು ಹೇಗೆ?

**ಅಂತಸ್ಥಾ ಧೀಃ ಸಹೈವಾಕ್ಷೈರ್ಬಹಿರ್ಯಾತಿ ಪುನಃ ಪುನಃ ।**
**ಭಾಸ್ಯಬುದ್ಧಿಸ್ಥಚಾಂಚಲ್ಯಂ ಸಾಕ್ಷಿಣ್ಯಾರೋಪ್ಯತೇ ವೃಥಾ ॥೧೭॥**

ಒಳಗೆ ಇರುವ ಬುದ್ಧಿಯು ಇಂದ್ರಿಯಗಳೊಡನೆ ಮೇಲಿಂದ ಮೇಲಿ ಹೊರಗೆ ಬರುತ್ತದೆ. ಎಂದರೆ ರೂಪ ಮೊದಲಾದ ವಿಷಯಗಳನ್ನು ಗ್ರಹಿಸುವದಕ್ಕಾಗಿ ಹೊರಗೆ ಬರುತ್ತದೆ. ಆದುದರಿಂದ ಬೆಳಗಿಸಿಕೊಳ್ಳುವ ಬುದ್ಧಿಯ ಚಾಂಚಲ್ಯಧರ್ಮವನ್ನು ಸುಮ್ಮನೇ ಸಾಕ್ಷಿಯಮೇಲೆ ಆರೋಪಿಸಲಾಗುತ್ತದೆ.

—ಹಾಗೆ ಅನುಭವವು ಎಲ್ಲಿದೆ? ಎಂದರೆ

**ಗೃಹಾಂತರಗತಃ ಸ್ವಲ್ಪೋ ಗವಾಕ್ಷಾದಾತಪೋಽಚಲಃ ।**
**ತತ್ರಹಸ್ತೇ ನರ್ತ್ಯಮಾನೇ ನೃತ್ಯತೀವಾತಪೋ ಯಥಾ ॥೧೮॥**
**ನಿಜಸ್ಥಾನಸ್ಥಿತಃ ಸಾಕ್ಷೀ ಬಹಿರಂತರ್ಗಮಾಗಮೌ ।**
**ಅಕುರ್ವನ್ ಬುದ್ಧಿಚಾಂಚಲ್ಯಾತ್ ಕರೋತೀವ ತಥಾ ತಥಾ ॥೧೯॥**

ಬೆಳಕಿಂಡಿಯಿಂದ ಮನೆಯೊಳಗೆ ಬಿದ್ದಿರುವ ಬಿಸಿಲಕೋಲು ತಾನು ಯಾವ ಅಲ್ಲಾಡುವಿಕೆಯೂ ಇಲ್ಲದೇ ಇರುವದು. ಅದರಲ್ಲಿ ಯಾವನೊಬ್ಬನು ತನ್ನ ಕೈಯ್ಯನ್ನು ಕುಣಿಸಿದಂತೆ ಮಾಡಿದರೆ ಬಿಸಿಲಕೋಲೂ ಕುಣಿದಂತೆಯೇ ಕಾಣುವದು. ಅದರಂತೆ ಸಾಕ್ಷಿಯು ಒಳಗೆ-ಹೊರಗೆ ಬರ-ಹೋಗುವದನ್ನು ಮಾಡದಿದ್ದರೂ ಬುದ್ಧಿಯ ಚಾಂಚಲ್ಯದಿಂದ ಒಳಗೆ-ಹೊರಗೆ ಓಡಾಡುತ್ತಿರುವನೆಂದು ಕಾಣುವದು.

—ನಿಜಸ್ಥಾನಸ್ಥಿತಃ, ಎಂಬುದರ ಸ್ಪಷ್ಟೀಕರಣ ಮಾಡುತ್ತಾರೆ.

**ನ ಬಾಹ್ಯೋ ನಾಂತರಃ ಸಾಕ್ಷೀ ಬುದ್ಧೇರ್ದೇಶೌ ಹಿ ತಾವುಭೌ ।**
**ಬುದ್ಧ್ಯಾದ್ಯಶೇಷಸಂಶಾಂತೌ ಯತ್ರಭಾತ್ಯಸ್ತಿ ತತ್ರ ಸಃ ॥೨೦॥**

ಸಾಕ್ಷಿಗೆ ಹೊರಗೆ ಎಂಬುದೂ ಇಲ್ಲ. ಒಳಗೆ ಎಂಬುದೂ ಇಲ್ಲ. ಒಳಗೆ-ಹೊರಗೆ ಎಂಬವು ಬುದ್ಧಿಯ ಸ್ಥಳಗಳು. ಆದುದರಿಂದ ಬುದ್ಧಿ-ಇಂದ್ರಿಯ ಮೊದಲಾದವುಗಳ ವ್ಯಾಪಾರವು ಶಾಂತವಾದಾಗ ಎಲ್ಲಿ ಸಾಕ್ಷಿಯು ಬೆಳಗುತ್ತಿರುವನೋ ಅಲ್ಲಿಯೇ ಅವನು ಯಾವಾಗಲೂ ಇರುವನು.

—ಬುದ್ಧಿ ಮೊದಲಾದವುಗಳ ವ್ಯಾಪಾರ ಶಾಂತವಾದ ನಂತರ ಸ್ವಲ್ಪ ಕೂಡ ಸ್ಥಳವು ಉಳಿಯುವದಿಲ್ಲ. ಎಂದಮೇಲೆ ಎಲ್ಲಿ ಅವನು ಬೆಳಗುತ್ತಿರುವನೋ ಅಲ್ಲಿಯೇ ಇರುವನು ಎಂದು ಹೇಳುವದರ ಅರ್ಥವೇನು?

**ದೇಶಃ ಕೋಽಪಿ ನ ಭಾಸೇತ ಯದಿ ತರ್ಹ್ಯಸ್ತ್ವದೇಶಭಾಕ್ |**
**ಸರ್ವದೇಶಪ್ರಕ್ಲೃಪ್ತ್ಯೈವ ಸರ್ವಗತ್ವಂ ನ ತು ಸ್ವತಃ ||೨೦||**

ಒಂದು ವೇಳೆ ಯಾವಸ್ಥಳವೂ ಉಳಿಯುವದಿಲ್ಲವೆಂದು ನೀನು ಹೇಳುವದಾದರೆ ಸಾಕ್ಷಿಯು ಸ್ಥಳರಹಿತನಾಗಿಯೇ ಇರಲಿ. ಎಲ್ಲ ಸ್ಥಳಗಳ ಕಲ್ಪನೆಯು ಇರುವದಾದುದರಿಂದಲೇ ಅವನು ಎಲ್ಲಕಡೆಗೆ ಇರುವವನೆಂದು ಹೇಳುವದು. ಸ್ವಭಾವತಃ ಅವನಿಗೇನೂ ವ್ಯಾಪಕತ್ವವಿಲ್ಲ.

—ಇದರಂತೆ ಅವನ ಸರ್ವ ಸಾಕ್ಷಿತ್ವವೂ ಸಹಜವಲ್ಲವೆನ್ನುತ್ತಾರೆ.

**ಅಂತರ್ಬಹಿರ್ವಾ ಸರ್ವಂ ವಾ ಯಂ ದೇಶಂ ಪರಿಕಲ್ಪಯೇತ್ |**
**ಬುದ್ಧಿಸ್ತದ್ದೇಶಗಃ ಸಾಕ್ಷಿ ತಥಾ ವಸ್ತುಷು ಯೋಜ-**
**ಯೇತ್ ||೨೨||**

ಬುದ್ಧಿಯು ಒಳಗೆ-ಹೊರಗೆ-ಎಲ್ಲಕಡೆಗೆ ಎಂದು ಯಾವ ಯಾವ ಸ್ಥಳಗಳನ್ನು ಕಲ್ಪಿಸುವರೋ ಸಾಕ್ಷಿಯು ಅದು ಕಲ್ಪಿಸಿದ ಸ್ಥಳಗಳನ್ನು ಹೊಂದುವನು. ಅದರಂತೆ ಎಲ್ಲ ವಸ್ತುಗಳಲ್ಲಿಯೂ ಹೊಂದಿಸಿಕೊಳ್ಳಬೇಕು.

—ವಸ್ತುಗಳಲ್ಲಿ ಹೊಂದಿಸಿಕೊಳ್ಳುವದನ್ನು ವಿವರಿಸುತ್ತಾರೆ.

**ಯದ್ಯದ್ರೂಪಾದಿ ಕಲ್ಪ್ಯೇತ ಬುದ್ಧ್ಯಾ ತತ್ತತ್ಪ್ರಕಾಶಯನ್ |**
**ತಸ್ಯ ತಸ್ಯ ಭವೇತ್ ಸಾಕ್ಷೀ ಸ್ವತೋ ವಾಗ್ಬುದ್ಧ್ಯ-**
**ಗೋಚರಃ ||೨೩||**

ಬುದ್ಧಿಯು ಯಾವ ಯಾವ ಎಂದರೆ ರೂಪವೇ ಮೊದಲಾದ ವಿಷಯಗಳನ್ನು ಕಲ್ಪಿಸುವದೋ ಆ ವಿಷಯಗಳನ್ನು ಬೆಳಗುವ ಚಿದಾತ್ಮನು ಅವುಗಳಿ

ಗೆಲ್ಲ ಸಾಕ್ಷಿ ಎನಿಸುವನು. ಅವನ ನಿಜ ಸ್ವರೂಪವು ಮಾತು–ಮನಗಳಿಗೆ ಕಾಣದಂಥದು.

—ಹೀಗಂದರೆ ಮುಮುಕ್ಷುವಿಗೆ ಅವನ ಜ್ಞಾನವಾಗುವ ಬಗೆ?

**ಕಥಂ ತಾದೃಙ್ಮಯಾಗ್ರಾಹ್ಯ ಇತಿ ಚೇನ್ನೈವ ಗ್ರಹ್ಯತಾಮ್ ।**
**ಸರ್ವಗ್ರಹೋಪಸಂಶಾಂತೌ ಸ್ವಯಮೇವಾವ ಶಿಷ್ಯತೇ ॥೨೪॥**

ಅಂಥ ಆತ್ಮನನ್ನು ನಾನು ಅರಿತು ಕೊಳ್ಳುವದು ಹೇಗೆ? ಎಂದರೆ ನೀನೇನೂ ಅರಿತುಕೊಳ್ಳುವದು ಬೇಡ. ಅರಿವುಗಳೆಂಬುವೆಲ್ಲ ಅಡಗಿದ ಮೇಲೆ ಅವನು ತನ್ನಷ್ಟಕ್ಕೆ ತಾನು ಉಳಿದು ಕೊಳ್ಳುವನು.

—ಆದರೂ ಅವನ ಅಪರೋಕ್ಷ ಜ್ಞಾನಕ್ಕೆ ಕೆಲವಾದರೂ ಪ್ರಮಾಣ ಗಳು ಬೇಕಲ್ಲ.

**ನ ತತ್ರ ಮಾನಾಪೇಕ್ಷಾಽಸ್ತಿ ಸ್ವಪ್ರಕಾಶಸ್ವರೂಪತಃ ।**
**ತಾದೃಗ್ವ್ಯುತ್ಪತ್ತ್ಯಪೇಕ್ಷಾ ಚೇತ್ಶ್ರುತಿಂ ಪಠ ಗುರೋ–ರ್ಮುಖಾತ್ ॥೨೫॥**

ಆತ್ಮನು ತನ್ನಷ್ಟಕ್ಕೆ ತಾನೇ ಬೆಳಗುವ ಸ್ವರೂಪವುಳ್ಳವನಾದುದರಿಂದ ಅವನಿಗೆ ಇಂದ್ರಿಯಗಳ ಪ್ರಮಾಣದ ಅಪೇಕ್ಷೆ ಎಂದರೆ ಅವಶ್ಯಕತೆ ಇಲ್ಲ. ಆದುದರಿಂದ ಇಂಥ ಬಗೆಯ ಜ್ಞಾನದ ಅಪೇಕ್ಷೆ ಇರುವದಾದರೆ ಗುರುಮುಖ ಶ್ರುತಿಯನ್ನು ಅಭ್ಯಾಸಮಾಡು.

—ಇನ್ನು ಮಂದಾಧಿಕಾರಿಗೆ ಆತ್ಮಾನುಭವದ ಉಪಾಯವನ್ನು ಹೇಳುತ್ತಾರೆ.

**ಯದಿ ಸರ್ವಗ್ರಹತ್ಯಾಗೋಽಶಕ್ಯಸ್ತರ್ಹಿ ಧಿಯಂ ವ್ರಜ ।**
**ಶರಣಂ ತದಧೀನೋಽಂತರ್ಬಹಿರ್ವೈಷೋಽನುಭೂಯ–ತಾಮ್ ॥೨೬॥**

ಒಂದು ವೇಳೆ ಎಲ್ಲ ವಿಷಯಾನುಭವಗಳನ್ನು ಬಿಡುವದು ನಿನಗೆ ಅಸಾಧ್ಯವೆನಿಸಿದರೆ ಬುದ್ಧಿಗೆ ಶರಣಾಗತನಾಗು, ಎಂದರೆ ಬುದ್ಧಿಯು ಹೊರಗೆ ಅಥವಾ ಒಳಗೆ ಯಾವ ವಿಷಯಗಳನ್ನು ಕಲ್ಪಿಸುವದೋ ಅವುಗಳನ್ನೆಲ್ಲ ಬೆಳಗುವ ಸಾಕ್ಷಿಯಾದ ಪರಮಾತ್ಮನ ಅನುಭವವನ್ನು ಪಡೆ.

## ನಾಟಕದೀಪದ ಸಾರಾಂಶ

ಬಂಧವನ್ನು ಕಳೆಯುವ ಉಪಾಯದ ವಿಚಾರವನ್ನು ಹೇಳಿ ಪರಮಾತ್ಮ ಸ್ವರೂಪವನ್ನು ತಿಳಿಸುತ್ತಾರೆ.

....O....

# ೧೧ ಬ್ರಹ್ಮಾನಂದದಲ್ಲಿ ಯೋಗಾನಂದ

ಇಷ್ಟದೇವತಾತತ್ವಾನುಸಂಧಾನರೂಪ ಮಂಗಳಾಚರಣ ಮಾಡಿ ಗ್ರಂಥ ಕಾರರು ಈ ಪ್ರಕರಣದಲ್ಲಿ ವಿಷಯ ಮತ್ತು ಪ್ರಯೋಜನವನ್ನು ಹೇಳುತ್ತಾರೆ.

**ಬ್ರಹ್ಮಾನಂದಂ ಪ್ರವಕ್ಷ್ಯಾಮಿ ಜ್ಞಾತೇ ತಸ್ಮಿನ್ನಶೇಷತಃ |**
**ಐಹಿಕಾಮುಷ್ಮಿಕಾನರ್ಥವ್ರಾತಂ ಹಿತ್ವಾ ಸುಖಾಯತೇ ||೧||**

ಈಗ ಬ್ರಹ್ಮಾನಂದದ ವ್ಯಾಖ್ಯಾನವನ್ನು ಮಾಡುತ್ತೇವೆ. ಅದು ತಿಳಿದರೆ ಈ ಲೋಕದ ಮತ್ತು ಪರಲೋಕದ ಸಂಬಂಧವಾದ ದುಃಖಗಳನ್ನೆಲ್ಲ ನೀಗಿ ಸಾಧಕನು ಸುಖಿಯಾಗುವನು.

(ಈ ಶರೀರ ಹೆಂಡತಿ ಮಕ್ಕಳು ಮೊದಲಾದವುಗಳಲ್ಲಿ ನಾನು-ನನ್ನದೆಂದು ಅಭಿಮಾನ ತಾಳಿದ್ದರಿಂದ ಆಗುವ ಆಧ್ಯಾತ್ಮಿಕಾದಿ ಮೂರುಬಗೆಯ ತಾಪಗಳು ಈ ಲೋಕದದುಃಖ. ಪರಲೋಕದಲ್ಲಿ ದೇಹಾದಿಗಳಮೇಲೆ ನಾನು–ನನ್ನದೆಂಬ ಅಬಿಮಾನ ತಾಳಿದ್ದರಿಂದ ಉಂಟಾಗುವ ತಾಪಗಳು ಪರಲೋಕದದುಃಖ.)

—ಬ್ರಹ್ಮಜ್ಞಾನವು ಬೇಕಾದುದನ್ನು ಕೊಡುವ, ಬೇಡವಾದುದನ್ನು ದೂರಮಾಡುವಂಥದು. ಈ ವಿಷಯದಲ್ಲಿ ಅನೇಕ ಶ್ರುತಿ–ಸ್ಮೃತಿ ವಾಕ್ಯಗಳು ಪ್ರಮಾಣವೆನಿಸಿವೆ ಎಂದು ಸೂಚಿಸುವದಕ್ಕೆ ಶ್ರುತಿ ವಾಕ್ಯಗಳ ಅರ್ಥವನ್ನು ಕೊಡುತ್ತಾರೆ.

**ಬ್ರಹ್ಮವಿತ್ಪರಮಾಪ್ನೋತಿ ಶೋಕಂ ತರತಿ ಚಾತ್ಮವಿತ್ |**
**ರಸೋ ಬ್ರಹ್ಮರಸಂ ಲಬ್ಧ್ವಾಽಽನಂದೀಭವತಿ ನಾನ್ಯಥಾ ||೨||**

ಬ್ರಹ್ಮವನ್ನು ಅರಿತವನು ಆನಂದರೂಪ ಬ್ರಹ್ಮವನ್ನು ಹೊಂದುವನು. ಮತ್ತು ಆತ್ಮಜ್ಞಾನಿಯು ದುಃಖವನ್ನು ನೀಗುತ್ತಾನೆ. ಈ ಆತ್ಮನು ರಸರೂಪನು. ಇಂಥ ಬ್ರಹ್ಮರಸವನ್ನು ಪಡೆದು ಆನಂದಿತನಾಗುವನಲ್ಲದೇ ಮತ್ತೆ ಯಾತರಿಂದಲೂ ಆಗುವದಿಲ್ಲ. —ತೈತ್ತಿರೀಯದಲ್ಲಿಯ ವಾಕ್ಯಾರ್ಥ.

**ಪ್ರತಿಷ್ಠಾಂ ವಿಂದತೇ ಸ್ವಸ್ಮಿನ್ ಯದಾ ಸ್ಯಾದಥ ಸೋಽಭಯಃ।**
**ಕುರುತೇಽಸ್ಮಿನ್ನಂತರಂ ಚೇದಥ ತಸ್ಯ ಭಯಂ ಭವೇತ್ ॥೩॥**

ಯಾವಾಗ ತನ್ನಲ್ಲಿಯೇ ತನಗೆ ಬೇರೊಂದಿಲ್ಲದ ಆತ್ಮರೂಪದಲ್ಲಿ ಸ್ಥಳವು ಭದ್ರವಾಗುವದೋ ಆಗ ಮುಮುಕ್ಷುವು ನಿರ್ಭಯನಾಗುವನು. ಹೀಗಿರುವ ಸ್ವರೂಪದಲ್ಲಿ ಸ್ವಲ್ಪಮಟ್ಟಿಗಾದರೂ ಭೇದವನ್ನು ಕಾಣುವನಾದರೆ ಎಂದರೆ ಬ್ರಹ್ಮವು ಪೂಜ್ಯ—ನಾನು ಪೂಜಕ ಎಂದು ಮೊದಲಾಗಿ ಬ್ರಹ್ಮಕ್ಕೂ ತನಗೂ ಭೇದವನ್ನು ಮಾಡಿದರೆ ಅವನಿಗೆ ದೊಡ್ಡ ಭಯವುಂಟಾಗುವದು.

—ಭೇದವನ್ನು ಕಾಣುವವರಿಗೆ ಭಯವುಂಟಾಗುತ್ತದೆ ಎಂಬ ಮಾತನ್ನು ಬಲಗೊಳಿಸುವದಕ್ಕಾಗಿ ಬ್ರಹ್ಮಾತ್ಮೈಕತ್ವ ಜ್ಞಾನವಿಲ್ಲದ ವಾಯು ಮೊದಲಾದ ದೇವತೆಗಳು ಭಯಗೊಂಡಿರುವವೆಂದು ತೋರಿಸುವ 'ಭೀಷಾಸ್ಮಾತ್' ಮೊದಲಾದ ತೈತ್ತಿರೀಯ ಮಂತ್ರಗಳ ಅರ್ಥ ಪರಿಸುತ್ತಾರೆ.

**ವಾಯುಃ ಸೂರ್ಯೋ ವಹ್ನಿರಿಂದ್ರೋ ಮೃತ್ಯುರ್ಜ-**
**ನ್ಮಾಂತರೇಂತರಮ್ ।**
**ಕೃತ್ವಾ ಧರ್ಮಂ ವಿಜಾನಂತೋಽಪ್ಯಸ್ಮಾದ್ಭೀತ್ಯಾ ಚರಂತಿ ಹಿ ॥೪॥**

ವಾಯು-ಸೂರ್ಯ-ಅಗ್ನಿ-ಇಂದ್ರ ಮತ್ತು ಮೃತ್ಯು ಇವರೆಲ್ಲರು ಪೂರ್ವಜನ್ಮದಲ್ಲಿ ತಿಳಿವಳಿಕೆಯಿಂದ ಧರ್ಮವನ್ನು ಆಚರಿಸಿದವರಾದರೂ ಭೇದ ದೃಷ್ಟಿಯಿಂದ ಬ್ರಹ್ಮವನ್ನು ಕಂಡದ್ದರಿಂದ ಆ ಬ್ರಹ್ಮದ ಭೀತಿಗೊಳಗಾಗಿ ತಂತಮ್ಮ ಕಾರ್ಯಗಳನ್ನು ಮಾಡುತ್ತಿರುವರು.

(ಕಠೋಪನಿಷತ್ತಿನಲ್ಲಿಯೂ ಈ ವಿಷಯವಿದೆ.)

—"ತರತಿ ಶೋಕಮಾತ್ಮವಿತ್" ಎಂಬ ಶ್ರುತಿ ವಾಕ್ಯದಲ್ಲಿ ಬ್ರಹ್ಮಾನಂದದ ಅರಿವು ದುಃಖಗಳನ್ನೆಲ್ಲ ದೂರಮಾಡುವ ಸಾಧನವೆಂಬುದು ಸ್ಪಷ್ಟವಾಗಿ ತಿಳಿವಳಿಕೆಗೆ ಬಾರದಾಗಿದೆ ಎಂದರೆ—

**ಆನಂದಂ ಬ್ರಹ್ಮಣೋ ವಿದ್ವಾನ್ನ ಬಿಭೇತಿ ಕುತಶ್ಚನ ।**
**ಏತಮೇವ ತಪೇನ್ನೈಷಾ ಚಿಂತಾ ಕರ್ಮಾಗ್ನಿಸಂಭೃತಾ ॥೫॥**

ಬ್ರಹ್ಮಸ್ವರೂಪವಾದ ಆನಂದವನ್ನು ಅನುಭವಕ್ಕೆ ತಂದುಕೊಂಡವನು, ಯಾವದೇ ಕಾರಣದಿಂದ ಭಯಗೊಳ್ಳುವದಿಲ್ಲ. ಕರ್ಮರೂಪವಾದ ಬೆಂಕಿಯಿಂದ ಹುಟ್ಟುವ ಚಿಂತೆಯು ಅವನಿಗೆ ತಾಪವನ್ನು ಕೊಡುವದಿಲ್ಲ.

(ರೋಗ-ರುಜಿನ ಮೊದಲಾದವು ಐಹಿಕ–ಪಾಪ ಮೊದಲಾದವು ಪಾರಲೌಕಿಕ ಭಯಕ್ಕೆ ಕಾರಣಗಳು.)

ಪುಣ್ಯ–ಪಾಪಗಳು ಅಂತ್ಯಕಾಲದಲ್ಲಿ ಜ್ಞಾನಿಗೆ ತಾಪಕೊಡುವದಿಲ್ಲವೆಂದು ಶ್ರುತಿಯ ಆಧಾರದಿಂದ ತಿಳಿಸುತ್ತಾರೆ.

**ಏವಂ ವಿದ್ವಾನ್‌ಕರ್ಮಣೀ ದ್ವೇ ಹಿತ್ವಾಽತ್ಮಾನಂ ಸ್ಮರೇತ್-ಸದಾ ।**
**ಕೃತೇ ಚ ಕರ್ಮಣೀ ಸ್ವಾತ್ಮರೂಪೇಣೈವೈಷ ಪಶ್ಯತಿ ॥೬॥**

ಯಾವನು ಈ ರೀತಿಯಾಗಿ ಬ್ರಹ್ಮಾತ್ಮೈಕ್ಯವನ್ನು ತಿಳಿದು ವರ್ತಿಸುವನೋ ಅವನು ಪುಣ್ಯ ಪಾಪವೆಂಬ ಎರಡೂ ಬಗೆಯ ಕರ್ಮಗಳನ್ನು ತ್ಯಾಗ ಮಾಡಿ ಯಾವಾಗಲೂ ಬ್ರಹ್ಮವೇ ತನ್ನಲ್ಲಿರುವ ಆತ್ಮವೆಂದು ನೆನೆಯುತ್ತಿರುವನು. ಇದಕ್ಕಾಗಿಯೇ ಅವನು ಮಾಡಿದ ಪುಣ್ಯ-ಪಾಪರೂಪದ ಕರ್ಮಗಳನ್ನು ತನ್ನ ಆತ್ಮವಾದ ಬ್ರಹ್ಮರೂಪವಾಗಿಯೇ ನೋಡುತ್ತಿರುವನು.

—ಫಲವನ್ನು ಕೊಡದೇ ಕರ್ಮವು ನಾಶವಾಗುವದಿಲ್ಲ ಎಂಬ ಶಾಸ್ತ್ರ ವಚನವಿರುವದರಿಂದ ಅನಾದಿಯಾದ ಸಂಸಾರದಲ್ಲಿ ಲೆಕ್ಕಕ್ಕೆ ಹತ್ತದಷ್ಟು ಕರ್ಮಗಳಿರುವ ಸಂಭವವುಂಟು. ಅವುಗಳನ್ನೆಲ್ಲ ಆತ್ಮರೂಪವಾಗಿ ನೋಡುವದು ಶಕ್ಯವಿಲ್ಲ. ಎಂದಮೇಲೆ ಅವುಗಳ ವಿಷಯದ ಚಿಂತೆಯು ಇಲ್ಲದಂತಾಗುವದು ಹೇಗೆ ? ಎಂದರೆ ಇದೋ ಮುಂಡಕೋಪನಿಷತ್ತಿನ ವಾಕ್ಯ.

**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।**
**ಕ್ಷೀಯಂತೇ ಚಾಸ್ಯಕರ್ಮಾಣಿ ತಸ್ಮಿನ್‌ದೃಷ್ಟೇ ಪರಾವರೇ ॥೭॥**

ಹಿರಣ್ಯಗರ್ಭನೆಂಬ ಬ್ರಹ್ಮನಿಗಿಂತಲೂ ಶ್ರೇಷ್ಠನಾದ ಆ ಪರಮಾತ್ಮನ ಸಾಕ್ಷಾತ್ಕಾರವಾಗಲು ಬುದ್ಧಿಗೂ ಆತ್ಮನಿಗೂ ಬಿದ್ದಿರುವ ಕಗ್ಗಂಟು ಬಿಚ್ಚಿ

ಹೋಗುವದು. ಸರ್ವಸಂಶಯಗಳು ನಾಶವಾಗುವವು. ಪುಣ್ಯ–ಪಾಪರೂಪವಾದ ಸಂಚಿತ ಕರ್ಮಗಳು ಇಲ್ಲದಂತಾಗುವವು.

ಕೆಲವು ಶ್ರುತಿಗಳಲ್ಲಿ ಕರ್ಮದಿಂದ, ಕೆಲವುಗಡೆಗೆ ಜ್ಞಾನ–ಕರ್ಮಗಳ ಸಮುಚ್ಚಯದಿಂದ ಮೋಕ್ಷವೆಂದು ಹೇಳಿದೆಯಲ್ಲ ಎಂದರೆ ಶ್ವೇತಾಶ್ವತರ ವಾಕ್ಯದ ಅರ್ಥವನ್ನು ಹೇಳಿ ಉತ್ತರ ಕೊಡುತ್ತಾರೆ.

**ತಮೇವ ವಿದ್ವಾನತ್ಯೇತಿ ಮೃತ್ಯುಂ ಪಂಥಾ ನ ಚೇತರಃ ।**
**ಜ್ಞಾತ್ವಾ ದೇವಂ ಪಾಶಹಾನಿಃ ಕ್ಷೀಣೈಃ ಕ್ಲೇಶೈರ್ನ ಜನ್ಮಭಾಕ್ ॥೮॥**

ಆ ಆತ್ಮವನ್ನು ತಿಳಿದವನೇ ಸಂಸಾರವನ್ನು ದಾಟುತ್ತಾನೆ. ಜ್ಞಾನದ ಹೊರತು ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲ. ತನ್ನ ಬೆಳಕಿನಿಂದ ಬೆಳಗುವ ಆತ್ಮವನ್ನು ತಿಳಿಯುವದರಿಂದ ರಾಗ–ದ್ವೇಷಾದಿಗಳ ಪಾಶಗಳು ನಾಶವಾಗುವವು. ಹೀಗೆ ದುಃಖವು ನಾಶವಾಗಲು ಅವನು ಮತ್ತೆ ಹುಟ್ಟುವದಿಲ್ಲ.

—ಜ್ಞಾನಿಯು ಶೋಕವನ್ನು ದಾಟುತ್ತಾನೆ, ಎಂಬ ಶ್ರುತಿ ವಾಕ್ಯವನ್ನು ಬರಿ ಕೇಳುತ್ತೇವೆ. ಆದರೆ ಅದರಂತೆ ಅನುಭವಕ್ಕೆ ಬರುವದಿಲ್ಲ. ಆದುದರಿಂದ ಜ್ಞಾನಿಯಾದವನು ಕೂಡ ಬೇಕಾದುದನ್ನು ಪಡೆಯುವದಕ್ಕೆ (ಇಷ್ಟಪ್ರಾಪ್ತಿ) ಬೇಡವಾದುದನ್ನು ದೂರಮಾಡುವದಕ್ಕೆ (ಅನಿಷ್ಟ ನಿವೃತ್ತಿ) ಯತ್ನ ಮಾಡುತ್ತಲೇ ಇರುತ್ತಾನೆ.

**ದೇವಂ ಮತ್ವಾ ಹರ್ಷಶೋಕೌ ಜಹಾತ್ಯತ್ರೈವ ಧೈರ್ಯವಾನ್ ।**
**ನೈನಂ ಕೃತಾಕೃತೇ ಪುಣ್ಯಪಾಪೇ ತಾಪಯತಃ ಕ್ವಚಿತ್ ॥೯॥**

ಬ್ರಹ್ಮಚರ್ಯವೇ ಮೊದಲಾದ ಸಾಧನ ಸಂಪನ್ನನಾದ ಮುಮುಕ್ಷುವು ಚಿದಾನಂದರೂಪನಾದ ದೇವನನ್ನು ತಿಳಿದು ಇದೇ ಜನ್ಮದಲ್ಲಿ ಸಂತೋಷ ಮತ್ತು ದುಃಖಗಳನ್ನು ನೀಗುವನು. ಮತ್ತು ಮೊದಲು ಮಾಡಿದ ಮತ್ತು ಮಾಡದಿರುವ ಪುಣ್ಯ ಪಾಪಗಳು ಜ್ಞಾನಿಯನ್ನು ಎಂದೂ ಸಂತಾಪಗೊಳಿಸಲಾರವು.

(ಯಾಕಂದರೆ ಆತ್ಮನು ಯಾತರಿಂದಲೂ ಬದಲಾಗದ ಬ್ರಹ್ಮರೂಪನೆಂದು ಅವನು ತಿಳಿದಿರುತ್ತಾನೆ.)

**ಇತ್ಯಾದಿ ಶ್ರುತಯೋ ಬಹ್ವ್ಯಃ ಪುರಾಣೈಃ ಸ್ಮೃತಿಭಿಃ ಸಹ ।**
**ಬ್ರಹ್ಮಜ್ಞಾನೇಽನರ್ಥಹಾನಿಮಾನಂದಂ ಚಾಪ್ಯ-**
**ಘೋಷಯನ್ ॥೧೦॥**

ಹೀಗೆ ಅನೇಕ ಶ್ರುತಿಗಳು–ಪುರಾಣಗಳು-ಸ್ಮೃತಿಗಳು ಬ್ರಹ್ಮಜ್ಞಾನದಿಂದ ಸಂಸಾರರೂಪ ಅನರ್ಥ ನಾಶವಾಗಿ ಆನಂದವು ದೊರೆಯುವದೆಂದು ಡಂಗುರ ಸಾರುತ್ತವೆ.

—ಬ್ರಹ್ಮಾನಂದವೆಂಬ ಮಾತಿನಲ್ಲಿ ಆನಂದವೆಂಬ ಪದಕ್ಕೆ ಬ್ರಹ್ಮವೆಂಬುದು ವಿಶೇಷಣವಾಗಿದೆ. ಆದುದರಿಂದ ಮತ್ತೊಂದು ಆನಂದವೂ ಇರಬೇಕೆಂದು ಧ್ವನಿತವಾಗುತ್ತದೆ. ಹಾಗಾದರೆ ಆನಂದದಲ್ಲಿ ಎಷ್ಟು ಪ್ರಕಾರಗಳು ?

**ಆನಂದಸ್ತ್ರಿವಿಧೋ ಬ್ರಹ್ಮಾನಂದೋ ವಿದ್ಯಾ ಸುಖಂ ಯಥಾ ।**
**ವಿಷಯಾನಂದ ಇತ್ಯಾದೌ ಬ್ರಹ್ಮಾನಂದೋ**
**ವಿವಿಚ್ಯತೇ ॥೧೧॥**

ಬ್ರಹ್ಮಾನಂದ-ವಿದ್ಯಾನಂದ ಮತ್ತು ವಿಷಯಾನಂದಗಳೆಂದು ಆನಂದವು ಮೂರು ವಿಧವಾಗಿದೆ. ಆದರೆ ಅವುಗಳಲ್ಲಿ ಮೊದಲು ಬ್ರಹ್ಮಾನಂದವನ್ನು ತಿಳಿಸುತ್ತೇವೆ.

—ತೈತ್ತರೀಯ ಶ್ರುತಿಯಲ್ಲಿ ಬ್ರಹ್ಮವು ಆನಂದರೂಪವೆಂದು ಹೇಳಿದೆ. ಆ ಭೃಗುವಲ್ಲಿಯ ವಾಕ್ಯಾರ್ಥವನ್ನು ಸಂಕ್ಷೇಪವಾಗಿ ಹೇಳುತ್ತಾರೆ.

**ಭೃಗುಃ ಪುತ್ರಃ ಪಿತುಃ ಶ್ರುತ್ವಾ ವರುಣಾದ್ಬ್ರಹ್ಮಲಕ್ಷಣಮ್ ।**
**ಅನ್ನಪ್ರಾಣಮನೋಬುದ್ಧೀಸ್ತ್ಯಕ್ತ್ವಾಽಽನಂದಂ**
**ವಿಜಜ್ಞಿವಾನ್ ॥೧೨॥**

ಭೃಗುವೆಂಬ ಮಗನು ವರುಣನೆಂಬ ತಂದೆಯ ಮುಖದಿಂದ ಬ್ರಹ್ಮದ ಲಕ್ಷಣಗಳನ್ನು ಕೇಳಿಕೊಂಡು ಅನ್ನ–ಪ್ರಾಣ–ಮನ–ಬುದ್ಧಿಗಳ ಕೋಶಗಳನ್ನು ಬ್ರಹ್ಮಲಕ್ಷಣಗಳಿಲ್ಲದ್ದರಿಂದ ತ್ಯಜಿಸಿ ಆನಂದವನ್ನು ತಿಳಿದನು.

—ಆನಂದಮಯ ಕೋಶದ ಪುಚ್ಛವಾಗಿ ಶ್ರುತಿಯಲ್ಲಿ ಹೇಳಿದ ಆನಂದಕ್ಕೆ ಬ್ರಹ್ಮಲಕ್ಷಣಗಳನ್ನು ಅವನು ಹೇಗೆ ಹೊಂದಿಸಿಕೊಂಡನು?

**ಆನಂದಾದೇವಭೂತಾನಿ ಜಾಯಂತೇ ತೇನ ಜೀವನಮ್ ।**
**ತೇಷಾಂಲಯಶ್ಚ ತತ್ರಾತೋ ಬ್ರಹ್ಮಾನಂದೋ ನ**
**ಶಂಶಯಃ ॥೧೩॥**

ಸ್ತ್ರೀ ಮತ್ತು ಪುರುಷರ ಸಂಯೋಗಜನ್ಯವಾದ ಆನಂದದಿಂದಲೇ ಪ್ರಾಣಿಗಳ ಶರೀರಗಳು ಹುಟ್ಟುತ್ತವೆ. ವಿಷಯೋಪಭೋಗಜನ್ಯ ಆನಂದದಿಂದಲೇ ಬದುಕುವವು. ಗಾಢನಿದ್ರೆಯಲ್ಲಿ ಸ್ವರೂಪಭೂತವಾದ ಆನಂದದಲ್ಲಿಯೇ ಅವೆಲ್ಲ ಅಡಗುವವು. ಆದುದರಿಂದ ಅದು ಬ್ರಹ್ಮಾನಂದವೇ ಎಂಬಲ್ಲಿ ಸಂಶಯವಿಲ್ಲ.

ತೈತ್ತರೀಯದಿಂದ ಬ್ರಹ್ಮನ ಆನಂದ ರೂಪತ್ವವನ್ನು ಸಿದ್ಧವಾಡಿ ಛಾಂದೋಗ್ಯದಲ್ಲಿಯೂ ಹಾಗೇ ಸಿದ್ಧವಾಗುವದೆಂದು ಹೇಳುತ್ತಾರೆ.

**ಭೂತೋತ್ಪತ್ತೇಃ ಪುರಾ ಭೂಮಾ ತ್ರಿಪುಟೀದ್ವೈತವರ್ಜನಾತ್।**
**ಜ್ಞಾತೃ ಜ್ಞಾನ ಜ್ಞೇಯರೂಪಾ ತ್ರಿಪುಟೀಪ್ರಲಯೇ**
**ಹಿ ನೋ ॥೧೪॥**

ಆಕಾಶವೇ ಮೊದಲಾದ ಭೂತಗಳು ಹುಟ್ಟುವದಕ್ಕಿಂತ ಮೊದಲು ಮತ್ತು ಅವುಗಳ ಕಾರ್ಯಗಳೆನಿಸಿದ ಜರಾಯುಜ-ಅಂಡಜ ಮುಂ. ಪ್ರಾಣಿಗಳು ಕಾಣುವದಕ್ಕೆ ಮೊದಲು ತಿಳಿಯುವವನು (ಜ್ಞಾತೃ) ತಿಳಿಯಬರತಕ್ಕವು (ಜ್ಞೇಯ) ತಿಳಿವು (ಜ್ಞಾನ) ಇವುಗಳ ತ್ರಿಪುಟೀ ರೂಪ ದ್ವೈತವು ಇಲ್ಲದಿರುವಾಗ ಭೂಮಾ ನಾಮಕ ಪರಮಾತ್ಮನಿದ್ದನು. ಪ್ರಲಯ ಕಾಲದಲ್ಲಿ ಜ್ಞಾತಾ-ಜ್ಞೇಯ-ಜ್ಞಾನ ರೂಪ ತ್ರಿಪುಟಿಯು ಇರುವದಿಲ್ಲವೆಂಬುದು ಎಲ್ಲ ವೇದಾಂತಗಳಿಗೂ ಒಪ್ಪಿಗೆಯಾದುದು.

(ಭೂಮಾ ಎಂದರೆ ದೇಶ-ಕಾಲ-ವಸ್ತುಗಳಿಂದ ಪರಿಚ್ಛಿನ್ನನಾಗದ ಪರಮಾತ್ಮನು)

ಈಗ ಜ್ಞಾತಾ-ಜ್ಞಾನ-ಜ್ಞೇಯಗಳ ಸ್ವರೂಪ ತಿಳಿಸುತ್ತಾರೆ.

**ವಿಜ್ಞಾನಮಯ ಉತ್ಪನ್ನೋ ಜ್ಞಾತಾ ಜ್ಞಾನಂ ಮನೋಮಯಃ।**
**ಜ್ಞೇಯಾಃ ಶಬ್ದಾದಯೋ ನೈತತ್ತ್ರಯಮುತ್ಪತ್ತಿತಃ**
**ಪುರಾ ॥೧೫॥**

ಪರಮಾತ್ಮನಿಂದ ಹುಟ್ಟಿ ಬುದ್ಧಿಯೆಂಬ ಉಪಾಧಿಯನ್ನು ಹೊಂದಿದ ವಿಜ್ಞಾನಮಯ ಜೀವನು ಎಲ್ಲವನ್ನು ತಿಳಿಯುವವನು. ಹೊರಗಿನ ವಸ್ತುಗಳನ್ನು ತಿಳಿಯುವದಕ್ಕೆ ಸಾಧನವಾದ ಮನೋಮಯವೆಂಬ ಹೆಸರುಳ್ಳ ಚೈತನ್ಯವೇ ತಿಳಿವು ಎಂದರೆ ಜ್ಞಾನ. ಶಬ್ದ–ಸ್ಪರ್ಶಾದಿಗಳು ತಿಳಿದು ಬರತಕ್ಕ ವಿಷಯಗಳು. ಈ ಮೂರೂ ಕಾರ್ಯಗಳೆನಿಸುವದರಿಂದ ತಮ್ಮ ಹುಟ್ಟಿಗೆ ಮುಂಚೆ ಆ ಒಂದು ಕಾರಣಕ್ಕಿಂತ ಬೇರೆಯಾಗಿರಲಿಲ್ಲ.

**ತ್ರಯಾ ಭಾವೇತು ನಿರ್ದ್ವೈತಃ ಪೂರ್ಣ ಏವಾನುಭೂಯತೇ ।**
**ಸಮಾಧಿಸುಪ್ತಿಮೂರ್ಛಾಸು ಪೂರ್ಣಃ ಸೃಷ್ಟೇಃ ಪುರಾ ಯಥಾ ॥೧೭॥**

ಈ ತ್ರಿಪುಟಿ ಇಲ್ಲದ ಕಾಲದಲ್ಲಿ ಸಮಾಧಿ (ವಿದ್ವಾಂಸರಿಗೆ ಮಾತ್ರ ಈ ಅವಸ್ಥೆಯುಂಟು) ಗಾಢ ನಿದ್ರೆ ಮತ್ತು ಮೂರ್ಛೆಯಲ್ಲಿ ಎಲ್ಲರಿಗೆ ಎರಡನೆಯದಿಲ್ಲದ (ದ್ವೈತಶೂನ್ಯ) ಅಖಂಡವಾದ ಆತ್ಮನು ಅನುಭವಕ್ಕೆ ಬರುತ್ತಾನೆ. ಅದರಂತೆಯೇ ಅವನು ಸೃಷ್ಟಿಯ ಪೂರ್ವದಲ್ಲಿಯೂ ಪೂರ್ಣವಾಗಿದ್ದನು.

ಪೂರ್ಣನೆಂಬುದನ್ನು ಒಪ್ಪೋಣ. ಆನಂದರೂಪನೆಂಬುದು ಹೇಗೆ ? ಎಂದರೆ ಛಾಂದೋಗ್ಯದ ಪ್ರಮಾಣ.

**ಯೋಭೂಮಾ ಸ ಸುಖಂ ನಾಲ್ಪೇ ಸುಖಂ ತ್ರೇಧಾ ವಿಭೇದಿನಿ ।**
**ಸನತ್ಕುಮಾರಃ ಪ್ರಾಹೈವಂ ನಾರದಾಯಾತಿಶೋಕಿನೇ ॥೧೭॥**

'ಭೂಮಾ' ಎನಿಸಿಕೊಳ್ಳುವ ಪರಮಾತ್ಮನೇ ಸುಖರೂಪನು. ಮೂರು ವಿಧವಾದ ಭೇದವನ್ನು ಹೊಂದಿರುವ ಅಲ್ಪವಾದ ದ್ವೈತದಲ್ಲಿ ಸುಖವೆಂಬುದಿಲ್ಲ. ಎಂದು ಸನತ್ಕುಮಾರನು ಅತಿಶಯ ವ್ಯಥೆಗೊಂಡ ನಾರದನಿಗೆ ಹೇಳಿದ್ದಾನೆ.

—ನಾರದನ ಆ ವ್ಯಥೆಯ ಕಾರಣ ಶ್ರುತಿಯಲ್ಲಿ ಏನು ಬಂದಿದೆ ?

**ಸ ಪುರಾಣಾನ್ ಪಂಚವೇದಾನ್ ಶಾಸ್ತ್ರಾಣಿ ವಿವಿಧಾನಿಚ ।**
**ಜ್ಞಾತ್ವಾಪ್ಯನಾತ್ಮವಿತ್ವೇನ ನಾರದೋಽತಿಶುಶೋಚ ಹ ॥೧೮॥**

ಹದಿನೆಂಟು ಪುರಾಣಗಳನ್ನು ಭಾರತಸಹಿತವಾದ . ಐದು ವೇದಗಳನ್ನು ಹಲವು ಬಗೆಯ ಶಾಸ್ತ್ರಗಳನ್ನು ವೇದಾಂಗಗಳನ್ನು ತಿಳಿದವನಾದರೂ ಆತ್ಮಸ್ವರೂಪದ ಅರಿವು ಇಲ್ಲದ್ದರಿಂದ ನಾರದನು ಅತಿಶಯ ಶೋಕಗೊಂಡನು.

—ಆದರೆ ವೇದ-ಶಾಸ್ತ್ರಗಳ ಜ್ಞಾನವು ಶೋಕವನ್ನು ಕಳೆಯುವಂಥದು. ಹೀಗಿರಲು ಅವನಿಗೆ ಶೋಕವೆಂತಾಯಿತು ?

**ವೇದಾಭ್ಯಾಸಾತ್ ಪುರಾ ತಾಪತ್ರಯಮಾತ್ರೇಣ ಶೋಕಿತಾ ।**
**ಪಶ್ಚಾತ್ತ್ವಭ್ಯಾಸ ವಿಸ್ಮಾರಭಂಗಗರ್ವೈಶ್ಚ ಶೋಕಿತಾ ॥೧೯॥**

ವೇದಾಭ್ಯಾಸ ಮಾಡುವದಕ್ಕಿಂತ ಮೊದಲು ಆಧ್ಯಾತ್ಮಿಕ–ಆದಿಭೌತಿಕ–ಆಧಿ ದೈವಿಕಗಳೆಂಬ ತ್ರಿತಾಪಗಳಿಂದ ಅವನಿಗೆ ದುಃಖವಾಯಿತು. ಅಭ್ಯಾಸದನಂತರ ಅವುಗಳು ನೆನಪು ಉಳಿಯುವದಕ್ಕೆ ಮತ್ತೆ ಅಭ್ಯಾಸ ಮಾಡುವದು. ಅಭ್ಯಾಸ ಮಾಡಿದ್ದು ಮರೆತು ಹೋಗುವದು. ಅವನಿಗಿಂತ ಹೆಚ್ಚಿನ ವಿದ್ವಾಂಸನಿಂದ ಅಪಮಾನ ಪಡೆಯುವದು. ತನಗಿಂತ ಕಡಿಮೆ ಕಲಿತವನನ್ನು ಕಂಡು ಗರ್ವ ತಾಳುವದು. ಇತ್ಯಾದಿ ಕಾರಣಗಳಿಂದ ಹೆಚ್ಚಿನ ದುಃಖವಾಯಿತು.

**ಸೋಽಹಂ ವಿದ್ವನ್ ಪ್ರಶೋಚಾಮಿ ಶೋಕಪಾರಂ ನಯಾ-**
**ತ್ರಮಾಂ ।**
**ಇತ್ಯುಕ್ತಃ ಸುಖಮೇವಾಸ್ಯ ಪಾರಮಿತ್ಯಭ್ಯಧಾದೃಷಿಃ ॥೨೦॥**

ಎಲೈ ವಿದ್ವಾಸಂನೇ, ನಾನು ಬಹಳ ದುಃಖಿತನಾಗಿದ್ದೇನೆ. ಇದರಿಂದ ನನ್ನನ್ನು ಕಡೆಹಾಯಿಸು. ಹೀಗೆ ನಾರದನು ಅನ್ನಲು ಆ ಋಷಿಯು–ಸುಖವೆಂಬುದೇ ಇದರ ಆಚೆಯದಂಡೆ ಎಂದು ಹೇಳಿದನು.

—ಅನೇಕ ವಿಷಯಗಳಿಂದ ದೊರೆಯುವ ಅನೇಕ ಬಗೆಯ ಸುಖಗಳುಂಟು. ಹೀಗಿರುವಾಗ 'ನಾಲ್ಪೆ ಸುಖ ಮಸ್ತಿ, ಎನ್ನುವ ಅಭಿಪ್ರಾಯವು ಸರಿಯಲ್ಲ ಎಂದರೆ– ವಿಷಯ ಸುಖಗಳು ದುಃಖಮಿಶ್ರಿತವಾದವುಗಳಾದುದರಿಂದ ವಿಷದಿಂದ ಕೂಡಿದ ಅನ್ನಕ್ಕೆ ಹೇಗೆ ವಿಷ ಅನ್ನುವರೋ ಆದರಂತೆ ಆ ಸುಖಗಳೆನ್ನೆಲ್ಲ ಜ್ಞಾನಿಯಾದವನು ದುಃಖವೆಂದೇ ತಿಳಿಯುತ್ತಾನೆ.

**ಸುಖಂ ವೈಷಯಿಕಂ ಶೋಕ ಸಹಸ್ರೇಣಾವೃತತ್ವತಃ ।**
**ದುಃಖಮೇವೇತಿ ಮತ್ವಾಽಽಹ ನಾಲ್ಪೇಽಸ್ತಿ ಸುಖಮಿತ್ಯಸೌ॥೨೧॥**

ವಿಷಯಗಳಿಂದ ದೊರೆಯುವ ಸುಖವು ಸಾವಿರಾರು ದುಃಖಗಳಿಂದ ತುಂಬಿಕೊಂಡಿರುವುದರಿಂದ ಅದು ದುಃಖವೇ ಎಂದು ತಿಳಿದು ಅಲ್ಪವಾದ ದ್ವೈತದಲ್ಲಿ ಸುಖವಿಲ್ಲವೆಂದು ಮುನಿಯು ಹೇಳಿದನು.

—ಒಳ್ಳೇದು. ಆದರಂತೆ ಅದ್ವೈತದಲ್ಲಿಯೂ ಸುಖವಿಲ್ಲ ಎಂದರೆ–

**ನನುದ್ವೈತೇ ಸುಖಂ ಮಾ ಭೂದದ್ವೈತೇಪ್ಯಸ್ತಿ ನೋ ಸುಖಮ್ |**
**ಅಸ್ತಿ ಚೇದುಪಲಭ್ಯೇತ ತಥಾಚ ತ್ರಿಪುಟೀ ಭವೇತ್ ||೨೨||**

ದ್ವೈತದಲ್ಲಿ ಎಂದರೆ ಪ್ರಪಂಚದಲ್ಲಿ ಸುಖವಿರದಿದ್ದರೆ ಹೋಗಲಿ. ಆದರೆ ಅದ್ವೈತದಲ್ಲಿಯೂ ಅದಿಲ್ಲ. ಇದ್ದರೆ ಅನುಭವಕ್ಕೆ ಬರುತ್ತಿದ್ದಿತು. ಆದರೆ ಅಲ್ಲಿ ತ್ರಿಪುಟಿಯುಂಟಾಗುವದು.

(ಅದ್ವೈತದಲ್ಲಿ ಸುಖವಿರುವದೆಂದರೆ ತ್ರಿಪುಟಿಯುಂಟಾಗಿ ಅದ್ವೈತಕ್ಕೆ ಹಾನಿ. ಆದುದರಿಂದ ಅಲ್ಲಿ ಸುಖವು ಇಲ್ಲವೆನ್ನಬೇಕಾಗುವದು.)

—ಅದ್ವೈತದಲ್ಲಿ ಸುಖವಿಲ್ಲ ಎಂಬುದನ್ನು ಒಪ್ಪೋಣ ಎಂದರೆ ಅದ್ವೈತದ ಆಧಾರದ ಮೇಲೆ ಸುಖವೆಂಬುದೊಂದು ಬೇರೆ ಅನುಭವಕ್ಕೆ ಬರುವುದಿಲ್ಲವೆಂಬುದನ್ನು ಸಿದ್ಧಾಂತಿಯು ಒಪ್ಪುತ್ತಾನೆ.

**ಮಾಸ್ತ್ವದ್ವೈತೇ ಸುಖಂ ಕಿಂ ತು ಸುಖಮದ್ವೈತಮೇವ ಹಿ |**
**ಕಿಂ ಮಾನಮಿತಿ ಚೇನ್ನಾಸ್ತಿ ಮಾನಾಕಾಂಕ್ಷಾ ಸ್ವಯಂ ಪ್ರಭೇ ||೨೩||**

ಅದ್ವೈತದಲ್ಲಿ ಸುಖವಿರಬೇಡ ಅದು ಇಲ್ಲವೆಂದು ನಾವೂ ಒಪ್ಪುತ್ತೇವೆ. ಆದರೆ ಅದ್ವೈತವೆ ಸುಖವಾಗಿದೆ. ಆದುದರಿಂದ ಸುಖದ ಆಶ್ರಯಸ್ಥಾನವಾಗಲಾರದು. ಆದರೆ ಅದ್ವೈತವು ಸುಖವೆಂಬುದಕ್ಕೇನು ಪ್ರಮಾಣ? ಎಂದರೆ–ತನ್ನಷ್ಟಕ್ಕೆ ತಾನೇ ಬೆಳಗುವ ವಸ್ತುವಿಗೆ ಪ್ರಮಾಣದ ಅಪೇಕ್ಷೆ ಇಲ್ಲ.

—ಅದ್ವೈತ ವಸ್ತುವು ತನ್ನ ಬೆಳಕಿನಿಂದ ತಾನೇ ಬೆಳಗುತ್ತದೆಂಬುದಕ್ಕೆ ಏನು ಪ್ರಮಾಣ? ಎಂದರೆ ನಿನ್ನ ಮಾತೇ ಅದಕ್ಕೆ ಪ್ರಮಾಣವೆಂದು ಸಿದ್ಧಾಂತಿಯ ಉತ್ತರ.

**ಸ್ವಪ್ರಭತ್ವೇ ಭವದ್ವಾಕ್ಯಂ ಮಾನಂ ಯಸ್ಮಾದ್ಭವಾನಿದಂ |**
**ಅದ್ವೈತಮಭ್ಯುಪೇತ್ಯಾಸ್ಮಿನ್ ಸುಖಂ ನಾಸ್ತೀತಿ ಭಾಷತೇ||೨೪||**

ನೀನು ಈಗ ಅದ್ವೈತವನ್ನೊಪ್ಪಿ ಇದರಲ್ಲಿ ಸುಖವೆಂಬುದು ಇಲ್ಲವೆನ್ನುತ್ತಿಯೇ, ಆದುದರಿಂದ ಆತ್ಮನು ಸ್ವಯಂಪ್ರಕಾಶಕನೆಂದು ಹೇಳುವದಕ್ಕೆ ನಿನ್ನ ಮಾತೇ ಪ್ರಮಾಣವಾಗಿದೆ.

—ನಾನು ಅದ್ವೈತವನ್ನೊಪ್ಪಿಲ್ಲ. ಕೇವಲ ದೂಷಣೆ ಮಾಡುತ್ತಿರುವೆನು ಎಂದ ಮೇಲೆ ಅದ್ವೈತದ ಸ್ವಪ್ರಕಾಶತ್ವವು ನನ್ನ ಮಾತಿನಲ್ಲಿ ಸಿದ್ಧವಾಗಲಿಲ್ಲ ಎಂದರೆ ನೀನು ಅದ್ವೈತವನ್ನು ಒಪ್ಪದಿರುವುದು ಯೋಗ್ಯವಲ್ಲ ಎನ್ನುತ್ತಾರೆ. ?

**ನಾಭ್ಯುಪೈಮ್ಯಹಮದ್ವೈತಂ ತ್ವದ್ವಚೋಽನೂದ್ಯದೂ-**
**ಷಣಮ್ ।**
**ವಚ್ಮೀತಿ ಚೇತ್ತದಾ ಬ್ರೂಹಿ ಕಿಮಾಸೀದ್‍ದ್ವೈತತಃ ಪುರಾ॥೨೫॥**

ನಾನು ಅದ್ವೈತವನ್ನು ಒಪ್ಪುವದಿಲ್ಲ. ಕೇವಲ ನಿನ್ನ ಮಾತಿನ ಅನುವಾದ ಮಾಡಿ ಆದರ ಮೇಲೆ ದೂಷಣೆಯನ್ನು ಹೊರಿಸುತ್ತೇನೆ ಎಂದುಹೇಳುವೆಯಾದರೆ ದ್ವೈತದಪೂರ್ವದಲ್ಲಿ ಏನಿತ್ತು ಹೇಳು.

**ಕಿಮದ್ವೈತಮುತ ದ್ವೈತಮನ್ಯೋ ವಾ ಕೋಽಪಿರಂತಿಮಃ ।**
**ಅಪ್ರಸಿದ್ಧೋ ನ ದ್ವಿತೀಯೋಽನುತ್ಪತ್ತೇಃ ಶಿಷ್ಯತೇಽ-**
**ಗ್ರಿಮಃ ॥೨೬॥**

ದ್ವೈತದ ಪೂರ್ವದಲ್ಲಿ ಅದ್ವೈತವಿದ್ದಿತೋ, ದ್ವೈತವಿದ್ದಿತೋ ಅಥವಾ ಮತ್ತೇನಾದರೂ ಇದ್ದಿತೋ? (ಇವುಗಳಲ್ಲಿ ಮೂರನೇ ಪಕ್ಷದ ಅಲ್ಲಗಳೆಯುವಿಕೆ) ಮತ್ತೇನಾದರೂ ಇದ್ದಿತೆಂದು ಹೇಳುವದಾದಲ್ಲಿ ಅದು ಕೇವಲ ಅಪ್ರಸಿದ್ಧ ಯಾಕಂದರೆ ದ್ವೈತ–ಅಥವಾ ಅದ್ವೈತಗಳಿಗಿಂತ ವಿಲಕ್ಷಣವಾದುದು ಜಗತ್ತಿನಲ್ಲಿಯೇ ಇಲ್ಲ. (ಇನ್ನು ಎರಡನೇ ಪಕ್ಷದ ಅಲ್ಲಗಳೆಯುವಿಕೆ) ದ್ವೈತವಿದ್ದಿತು ಎಂದು ಹೇಳುವದಾದಲ್ಲಿ ಎರಡನೆ ವಸ್ತುಗಳು ಹುಟ್ಟುವದಕ್ಕಿಂತ ಮೊದಲು ಎರಡನೆಯ ವಸ್ತುಗಳಿದ್ದವೆಂದು ಅನ್ನುವದು ಸಮಂಜಸವಲ್ಲ. ಆದುದರಿಂದ ಮೊದಲು ಅದ್ವೈತವಿದ್ದಿತು ಎಂಬ ಮೊದಲಿನ ಪಕ್ಷವೊಂದು ಉಳಿಯುತ್ತದೆ.

ಯುಕ್ತಿಯಿಂದ ಅದ್ವೈತ ಸಿದ್ಧವಾಯಿತು. ಅನುಭವದಿಂದ ಆಗುವದಿಲ್ಲ

**ಅದ್ವೈತಸಿದ್ಧಿರ್ಯುಕ್ತ್ಯೈವ ನಾನುಭೂತ್ಯೇತಿ ಚೇದ್ವದ ।**
**ನಿರ್ದೃಷ್ಟಾಂತಾ ಸದೃಷ್ಟಾಂತಾ ವಾ ಕೋಟ್ಯಂತರ**
**ಮತ್ರ ನೋ ॥೨೭॥**

ಅದ್ವೈತದ ಸಿದ್ಧಿಯು ಯುಕ್ತಿಯಿಂದ ಮಾತ್ರ ಆಗುವದು. ಅನುಭವದಿಂದ ಆಗುವದಿಲ್ಲ ಎಂದು ಅನ್ನುವದಾದರೆ ಆ ಯುಕ್ತಿಯು ದೃಷ್ಟಾಂತವಿಲ್ಲದುದೋ? ದೃಷ್ಟಾಂತವುಳ್ಳದುದೋ? ಹೇಳು. ಇಲ್ಲಿ ಇದಕ್ಕಿಂತ ಬೇರೆ ವಿಕಲ್ಪವಿಲ್ಲವಲ್ಲ.

—ಅದ್ವೈತವನ್ನು ಸಿದ್ಧ ಮಾಡುವ ನಿಮ್ಮ ಯುಕ್ತಿಯು ದೃಷ್ಟಾಂತವಲ್ಲದುದು.

**ನಾನುಭೂತಿರ್ನ ದೃಷ್ಟಾಂತ ಇತಿ ಯುಕ್ತಿಸ್ತು ಶೋಭತೇ ।**
**ಸದೃಷ್ಟಾಂತತ್ವಪಕ್ಷೇ ತು ದೃಷ್ಟಾಂತಂ ವದ ನೋ ಮತಮ್॥೨೮॥**

ಅನುಭವವೂ, ದೃಷ್ಟಾಂತವೂ ಇಲ್ಲದ ಯುಕ್ತಿಯು ಸಮಂಜಸವೆನಿಸುವದಿಲ್ಲ. ಒಳ್ಳೇದು. ಯುಕ್ತಿಯು ದೃಷ್ಟಾಂತವುಳ್ಳದುದಾಗಿದೆ. ಎಂದು ಎರಡನೇ ಪಕ್ಷವನ್ನು ನೀನು ಸ್ವೀಕರಿಸುವದಾದರೆ ನಮ್ಮಿಬ್ಬರಿಗೂ ಒಪ್ಪಿಗೆಯಾಗುವಂಥ ದೃಷ್ಟಾಂತವನ್ನು ಹೇಳು. ನೋಡೋಣ.

—ನಾನು ದೃಷ್ಟಾಂತದಿಂದಲೇ ಅದ್ವೈತವನ್ನು ಸಿದ್ಧಮಾಡುತ್ತೇನೆ.

**ಅದ್ವೈತಃ ಪ್ರಲಯೋ ದ್ವೈತಾನುಪಲಂಭೇನ ಸುಪ್ತಿವತ್ ।**
**ಇತಿ ಚೇತ್ಸುಪ್ತಿರದ್ವೈತೇತ್ಯತ್ರ ದೃಷ್ಟಾಂತ ಈರಯ ॥೨೯॥**

ಪ್ರಳಯ ಕಾಲವು ದ್ವೈತ ಶೂನ್ಯವಾಗಿದೆ. ಯಾಕಂದರೆ ಆಗ ದ್ವೈತವಿರುವದು ಶಕ್ಯವಲ್ಲ. ಗಾಢನಿದ್ರೆಯುಲ್ಲಿರುವಂತೆ ಅಲ್ಲಿ. ಹೀಗೆಂದು ಅನುಮಾನ ಮಾಡಿ ಹೇಳುವದಾದರೆ ಸುಷುಪ್ತಿಯು ದ್ವೈತ ಶೂನ್ಯವಾಗಿದೆ ಎಂಬ ವಿಷಯದಲ್ಲಿ ದೃಷ್ಟಾಂತವನ್ನು ಕೊಡು.

(ನೀನು ಹೇಳುವ ಸುಷುಪ್ತಿಯು ಯಾರದು? ನಿನ್ನದೋ ಬೇರೆಯವರದೋ? ನಿನ್ನದನ್ನೇ ಹೇಳುವೆಯಾದರೆ ಅದು ಬೇರೆಯವರ ಅನುಭವಕ್ಕೆ ಬರುವದಿಲ್ಲವಾದುದರಿಂದ ನೀನು ಯುಕ್ತಿಯಿಂದಲೇ ಸಿದ್ಧಗೊಳಿಸಬೇಕಾಗುವದು. ಒಳ್ಳೇದು. ಈಗ ಆಯುಕ್ತಿಗಾಗಿ ಯಾವ ದೃಷ್ಟಾಂತವನ್ನು ಕೊಡುವೆಯೋ ಹೇಳು.)

—ಬೇರೆಯವರ ಗಾಢ ನಿದ್ರೆಯದೇ ದೃಷ್ಟಾಂತ ಎಂದು ವಾದಿಯು ಹೇಳಿದರೆ ಸಿದ್ಧಾಂತಿಯು ಅವನ ಉಪಹಾಸ ಮಾಡುತ್ತಾನೆ.

**ದೃಷ್ಟಾಂತಃ ಪರಸುಪ್ತಿಶ್ಚೇದಹೋ ತೇ ಕೌಶಲಂ ಮಹತ್।**
**ಯಃ ಸ್ವಸುಪ್ತಿಂ ನ ವೇತ್ತ್ಯಸ್ಯ ಪರಸುಪ್ತೌತು ಕಾ ಕಥಾ ॥೩೦॥**

ಬೇರೆಯವರ ಗಾಢನಿದ್ರೆಯೇ ದೃಷ್ಟಾಂತವಾಗಿದೆ ಎಂದು ಅನ್ನುವೆಯಾದರೆ–ನಿನ್ನ ಚಾತುರ್ಯವು ದೊಡ್ಡದು. ಯಾವನು ತನ್ನ ಗಾಢನಿದ್ರೆಯನ್ನೇ ಅರಿತಿರುವದಿಲ್ಲವೋ, ಅವನು ಬೇರೆಯವರ ಗಾಢನಿದ್ರೆಯ ವಿಷಯವನ್ನು ಏನೆಂದು ಹೇಳಬಲ್ಲನು?

—ಅನುಮಾನದಿಂದ ಬೇರೆಯವರ ಗಾಢನಿದ್ರೆಯ ಸಿದ್ಧಿಯಾಗುವದು.

**ನಿಶ್ಚೇಷ್ಟತ್ವಾತ್ಪರಃ ಸುಪ್ತೋ ಯಥಾಽಹಮಿತಿ ಚೇತ್ತದಾ ।**
**ಉದಾಹರ್ತುಃ ಸುಷುಪ್ತೇಸ್ತೇ ಸ್ವಪ್ರಭಾವತ್ವಂ ಬಲಾದ್-**
**ಭವೇತ್ ॥೩೧॥**

ನನ್ನಂತೆಯೇ ಅಲುಗಾಟವಿಲ್ಲದೇ ಇನ್ನೊಬ್ಬನೂ ಮಲಗಿರುವನು ಎಂದು ನೀನು ಅನುಮಾನ ಮಾಡತೊಡಗಿದರೆ, ಉದಾಹರಣೆಯಾಗಿ ಕೊಡುವನಿನ್ನ ಗಾಢನಿದ್ರೆಯು ತನ್ನ ಬೆಳಕಿನಿಂದಲೇ ಬೆಳಗುವಂಥದೆಂದು ಬಲಾತ್ಕಾರದಿಂದ ತಾನೇ ಸಿದ್ಧವಾಗುವದು.

(ಇಲ್ಲಿ ಬೇರೆ ಮನುಷ್ಯನೊಬ್ಬನು ನಿದ್ದೆಮಾಡುತ್ತಿದ್ದಾನೆ. ಅವನಿಗೆ ಪ್ರಾಣವಿದ್ದರೂ ಅಲುಗಾಟವಿಲ್ಲದಿರುವನು. ಹೀಗೆ ಪ್ರಾಣಾದಿಗಳು ಇದ್ದರೂ ಯಾವನು ಅಲುಗಾಟ ವಿಲ್ಲದೇ ಬಿದ್ದಿರುವನೋ ಅವನು ಮಲಗಿದ್ದಾನೆ. ನಾನು ಹೇಗೋಹಾಗೆ ಎಂಬ ಅನುಮಾನದಿಂದ ಬೇರೆಯವರ ಗಾಢನಿದ್ರೆಯ ಸಿದ್ಧಿಯಾಗುವದು ಎಂದು ಹೇಳುವದಾದರೆ–ಸುಷುಪ್ತಿಯ ದೃಷ್ಟಾಂತ ಕೊಡುವ ನಿನ್ನ ಸುಷುಪ್ತಿಯ ಸ್ವಪ್ರಕಾಶತ್ವವು ದೃಷ್ಟಾಂತವನ್ನು ಕೊಡುವದರಮೇಲಿಂದಲೇ ಸಿದ್ಧವಾಗುವದು) —ಅದು ಹೇಗೆ?

**ನೇಂದ್ರಿಯಾಣಿ ನ ದೃಷ್ಟಾಂತಸ್ತಥಾಽಪ್ಯಂಗೀ ಕರೋಷಿತಾಮ್ ।**
**ಇದಮೇವ ಸ್ವಪ್ರಭತ್ವಂ ಯದ್ಭಾನಂ ಸಾಧನೈರ್ವಿನಾ ॥೩೨॥**

ಅಲ್ಲಿ ಎಂದರೆ ತಿಳಿಯಬಲ್ಲ ಇಂದ್ರಿಯಗಳಿಲ್ಲ. ಯೋಗ್ಯವಾದ ದೃಷ್ಟಾಂತವಿಲ್ಲ. ಆದರೂ ನೀನು ಸುಷುಪ್ತಿಯನ್ನು ಒಪ್ಪಿಕೊಳ್ಳುವೆ. ಹೀಗೆ ಸಾಧನಗಳಿಲ್ಲದೇ ಗೊತ್ತಾದದ್ದೇ ತನ್ನ ಬೆಳಕಿನಿಂದ ಬೆಳಗಿದುದು ಎಂದು ತಿಳಿಯಬೇಕು.

**ಸ್ತಾಮದ್ವೈತಸ್ವಪ್ರಭತ್ವೇ ವದಸುಪ್ತೌ ಸುಖಂ ಕಥಮ್ ।**
**ಶೃಣು ದುಃಖಂ ತದಾ ನಾಸ್ತಿ ತತಸ್ತೇ ಶಿಷ್ಯತೇ**
**ಸುಖಮ್ ॥೩೩॥**

ಅದ್ವೈತವೆಂಬುದೂ ಅದು ತನ್ನ ಬೆಳಕಿನಿಂದ ಬೆಳಗುವದೆಂಬುದೂ ಇರಲಿ. ಗಾಢನಿದ್ರೆಯಲ್ಲಿ ಸುಖವು ಹೇಗಿರುತ್ತದೆ? ಹೇಳು. ಕೇಳು. ಆಗದುಃಖವೇ ಇರುವದಿಲ್ಲ. ಆದುದರಿಂದ ನಿನಗೆ ಸುಖವು ಮಾತ್ರ ಉಳಿದಿರುತ್ತದೆ.

—ಗಾಢನಿದ್ರೆಯಲ್ಲಿ ದುಃಖವಿರುವದಿಲ್ಲವೆಂಬುದಕ್ಕೆ ಪ್ರಮಾಣವೇನು? ಎಂದರೆ.

**ಅಂಧಃಸನ್ನಪ್ಯನಂಧಃ ಸ್ಯಾದ್ವಿದ್ಧೋಽವಿದ್ಧೋಽಥ ರೋಗ್ಯಪಿ।**
**ಅರೋಗೀತಿ ಶ್ರುತಿಃ ಪ್ರಾಹ ತಚ್ಚ ಸರ್ವೇ ಜನಾ ವಿದುಃ ॥೩೪॥**

ಆಗ ದೇಹಾತ್ಮ ಬುದ್ಧಿಯು ಇರುವದಿಲ್ಲವಾದುದರಿಂದ ಕುರುಡನು ಕುರುಡನಲ್ಲದವನಾಗುವನು. ಘಾಯವಾದವನು ಘಾಯವಿಲ್ಲದವನಾಗುವನು. ರೋಗಿಯು ರೋಗ ವಿಲ್ಲದವನಾಗುವನು ಎಂದು (ಛಾಂದೋಗ್ಯ) ಶ್ರುತಿಯು ಹೇಳುವದು. ಅದನ್ನೇ ಎಲ್ಲಜನರು ತಮ್ಮ ಅನುಭವದಿಂದ ತಿಳಿಯುವರು.

— ಆದರೆ ದುಃಖವಿಲ್ಲದಲ್ಲಿ ಸುಖವು ಇದ್ದೇ ಇರಬೇಕೆಂದು ನಿಯಮ ವೇನೂ ಇಲ್ಲ.

**ನ ದುಃಖಾಭಾವ ಮಾತ್ರೇಣ ಸುಖಂ ಲೋಷ್ಟ-ಶಿಲಾದಿಷು ।**
**ದ್ವಯಾಭಾವಸ್ಯ ದೃಷ್ಟತ್ವಾದಿತಿ ಚೇದ್ವಿಷಮಂ ವಚಃ ॥೩೫॥**

ಮಣ್ಣು ಹೆಂಟೆ. ಕಲ್ಲು ಮೊದಲಾದವುಗಳಲ್ಲಿ ಸುಖ–ದುಃಖಗಳೆರಡೂ ಇಲ್ಲವೆಂಬುದು ಕಂಡುಬರುತ್ತದೆ. ಗಾಢ ನಿದ್ರೆಯಲ್ಲಿ ಕೇವಲ ದುಃಖದ ಅಭಾವ ಮಾತ್ರ ವಿರುತ್ತದೆ. ಎಂದಮಾತ್ರಕ್ಕೆ ಅಲ್ಲಿ ಸುಖವೇನೂ ಸಿದ್ಧವಾಗ ಲಿಲ್ಲ. ಎನ್ನುವೆಯಾದರೆ ನಿನ್ನ ಮಾತು ಸರಿಯಲ್ಲ.

—ಯಾಕೆಂದರೆ–

**ಮುಖದೈನ್ಯವಿಕಾಸಾಭ್ಯಾಂ ಪರದುಃಖಸುಖೋಹನಮ್ ।**
**ದೈನ್ಯಾದ್ಯಭಾವತೋ ಲೋಷ್ಟೇ ದುಃಖಾದ್ಯೂಹೋ ನ**
**ಸಂಭವೇತ್ ॥೩೬॥**

ಮುಖಬಾಡಿರುವದರಿಂದ ಅಥವಾ ಮುಖವು ಅರಳಿರುವದರಿಂದ ಮತ್ತೊಬ್ಬರ ದುಃಖ–ಸುಖಗಳನ್ನು ಊಹಿಸ ಬಹುದು. ಆದರೆ ಮಣ್ಣು ಹೆಂಟಿ ಮುಂತಾದವುಗಳಲ್ಲಿ ಬಾಡುವಿಕೆಯೂ ಇಲ್ಲ. ಅರಳುವಿಕೆಯೂ ಇಲ್ಲ. ಎಂದ ಮೇಲೆ ಅವುಗಳಲ್ಲಿ ದುಃಖ–ಸುಖಗಳನ್ನು ಊಹಿಸುವದುಹೇಗೆ?

—ಮತ್ತೊಬ್ಬರ ಸುಖದುಃಖದ ಮಾತಿರಲಿ. ಸ್ವಂತದಸುಖ–ದುಃಖ ನೋಡು

**ಸ್ವಕೀಯೇ ಸುಖ–ದುಃಖೇ ತು ನೋಹನೀಯೇ ತತಸ್ತಯೋಃ|**
**ಭಾವೋ ವೇದ್ಯೋಽನುಭೂತ್ಯೈವ ತದಭಾವೋಽಪಿ**
**ನಾನ್ಯತಃ ||೩೭||**

ತನ್ನ ಸುಖದುಃಖದ ವಿಷಯದಲ್ಲಿ ಊಹಿಸುವದೇನೂ ಇರುವದಿಲ್ಲ. ಅವುಗಳನ್ನು ಅನುಭವದಿಂದಲೇ ತಿಳಿಯುವಂತಿದೆ. ಇವುಗಳು ಇಲ್ಲವೆಂಬು ದನ್ನು ಕೂಡ ಅನುಭವದ ಹೊರತು ಮತ್ತೊಂದರಿಂದ ತಿಳಿಯಲಾಗುವದಿಲ್ಲ.

**ತಥಾ ಸತಿ ಸ್ವಸುಪ್ತೌ ಚ ದುಃಖಾಭಾವೋಽನುಭೂತಿತಃ |**
**ವಿರೋಧಿ ದುಃಖರಾಹಿತ್ಯಾತ್ಸುಖಂ ನಿರ್ವಿಘ್ನಮಿಷ್ಯ–**
**ತಾಮ್ ||೩೮||**

ಹೀಗೆ ತನ್ನ ಸುಖ–ದುಃಖಗಳು ಅನುಭವದಿಂದ ತಿಳಿಯಬೇಕಾದವು ಗಳು ಎಂದು ಸಿದ್ಧವಾದಬಳಿಕ ತನ್ನ ಗಾಢನಿದ್ರೆಯಲ್ಲಿರುವ ದುಃಖದ ಅಭಾ ವವು ಕೂಡ ಅನುಭವದಿಂದಲೇ ಸಿದ್ಧವಾಗುವದು. ಆದುದರಿಂದ ಗಾಢ ನಿದ್ರೆಯಲ್ಲಿ ಸುಖವಿರೋಧಿಯಾದ ದುಃಖವು ಇಲ್ಲವೆಂದಾದ ಮೇಲೆ ನಿಸ್ಸಂದೇಹ ವಾಗಿ ಸುಖವಿರುವದೆಂದು ತಿಳಿಯಬೇಕು.

**ಮಹತ್ತರ ಪ್ರಯಾಸೇನ ಮೃದುಶಯ್ಯಾದಿಸಾಧನಮ್ |**
**ಕುತಃ ಸಂಪಾದ್ಯತೇ ಸುಪ್ತೌ ಸುಖಂ ಚೇತ್ತತ್ರ ನೋ**
**ಭವೇತ್ ||೩೯||**

ಗಾಢನಿದ್ರೆಯಲ್ಲಿ ಒಂದು ವೇಳೆ ಸುಖವಿಲ್ಲವೆಂದಾದರೆ ಬಹಳ ಕಷ್ಟಬಟ್ಟು ಗಳಿಸಿದ ಹಣದಿಂದ ಮೆತ್ತನ್ನ ಹಾಸಿಗೆ ಮುಂತಾದ ಮಲಗುವ ಸಾಧನ ಗಳನ್ನು ಜನರು ಯಾಕೆ ಸಂಗ್ರಹಿಸುವರು?

**ದುಃಖನಾಶಾರ್ಥಮೇವೈತದಿತಿ ಚೇದ್ರೋಗಿಣಸ್ತಥಾ ।**
**ಭವತ್ವರೋಗಿಣಸ್ತ್ವೇತತ್ಸುಖಾಯೈವೇತಿ ನಿಶ್ಚಿನು ॥೪೦॥**

ಈ ಶಯ್ಯಾದಿ ಸಾಧನಗಳನ್ನು ಸಂಪಾದಿಸುವದು ದುಃಖವನ್ನು ಕಳೆದುಕೊಳ್ಳಲಿಕ್ಕೆ ಎಂದು ಅನ್ನುವದಾದರೆ ರೋಗಿಗಳ ವಿಷಯದಲ್ಲಿ ಹಾಗಾಗಬಹುದು. ಯಾಕಂದರೆ ಅವನಿಗೆ ರೋಗದಿಂದ ದುಃಖವಿರುವದು. ಆದರೆ ರೋಗಿಗಳಲ್ಲದವರು ಕೂಡ ಶಯ್ಯಾದಿಸಾಧನಗಳನ್ನು ಸಂಪಾದಿಸುತ್ತಾರೆ ಆದುದರಿಂದ ಅವು ಸುಖಕ್ಕಾಗಿಯೇ ಎಂದು ನಿಶ್ಚಯವಾಗಿ ತಿಳಿ.

—ಹೀಗಂದರೆ ಗಾಢನಿದ್ರೆಯಲ್ಲಿಯ ಸುಖವು ಹಾಸಿಕೆ ದಿಂಬು ಮುಂತಾದ ಸಾಧನಳಿಂದ ಹುಟ್ಟುವದೆಂದಂತಾಯಿತು. ಎಂದ ಮೇಲೆ ಅದನ್ನು ಆತ್ಮಸ್ವರೂಪ ಸುಖವೆಂದು ಅನ್ನಲು ಬರಲಾರದು.

**ತರ್ಹಿ ಸಾಧನಜನ್ಯತ್ವಾತ್ಸುಖಂ ವೈಷಯಿಕಂ ಭವೇತ್ ।**
**ಭವತ್ವೇವಾತ್ರ ನಿದ್ರಾಯಾಃ ಪೂರ್ವಂ ಶಯ್ಯಾಸನಾ-**
**ದಿಜಮ್ ॥೪೧॥**

ಎಂದಮೇಲೆ ಸಾಧನಗಳಿಂದ ಹುಟ್ಟುವದೆಂದು ಆಗದು. ಇದು ವಿಷಯ ಸಂಬಂಧಿಕ ಸುಖವೆನಿಸುವದು. ನಿದ್ರೆಗಿಂತ ಮೊದಲು ಹಾಸಿಕೆ-ದಿಂಬು ಮೊದಲಾದವುಗಳಿಂದ ಆಗುವ ಸುಖವು ಬೇಕಾದಂತೆ ವಿಷಯ ಸಂಬಂಧಿಕವಾಗಲಿ.

(ನಿದ್ರೆ ಹತ್ತಿದ ಮೇಲೆ ಉಂಟಾಗುವ ಸುಖವು ಯಾವ ವಿಷಯ ಜನ್ಯವೂ ಅಲ್ಲ–ಎಂದು ಪ್ರಸಿದ್ಧ)

**ನಿದ್ರಾಯಾಂ ತು ಸುಖಂ ಯತ್ತಜ್ಜನ್ಯತೇ ಕೇನಹೇತುನಾ ।**
**ಸುಖಾಭಿಮುಖಧೀರಾದೌ ಪಶ್ಚಾನ್ಮಜ್ಜೇತ್ಸ್ವರೇ ಸುಖೇ ॥೪೨॥**

ಆದರೆ ನಿದ್ರೆಯಲ್ಲಿ ಸುಖವಾಗುವದಲ್ಲ. ಅದು ಯಾವ ಸಾಧನಗಳಿಂದ ಹುಟ್ಟಿದುದು? ಯಾಕಂದರೆ ನಿದ್ರೆಯಲ್ಲಿ ಮೆತ್ತನ್ನ ಹಾಸಿಕೆ ಮುಂ.ಗಳ ನೆನಪಿರುವದಿಲ್ಲ. ಆದುದರಿಂದ ಅದು ಹಾಸಿಕೆ ಮೊದಲಾದ ಸಾಧನಗಳಿಂದ ಹುಟ್ಟಿದುದು ಎಂದು ಹೇಳಲು ಬರುವದಿಲ್ಲ. ಒಳ್ಳೇದು, ನಿದ್ರೆಯಲ್ಲಿ ಯಾವ ಸಾಧನಗಳಿಂದಲೂ ಹುಟ್ಟದ ಸ್ವರೂಪಭೂತ ಸುಖವಿರುವದಾದರೆ ಅದರ

ಅನುಭವವೇಕೆ ಉಂಟಾಗುವದಿಲ್ಲ ? ಎಂದರೆ ನಿದ್ದೆ ಹತ್ತುವದಕ್ಕಿಂತ ಮೊದಲು ಹಾಸಿಗೆ ಮೊದಲಾದ ಸಾಧನಗಳಿಂದ ದೊರೆಯುವ ಸುಖದ ಸವಿ ನೋಡುತ್ತ ಬುದ್ಧಿಯು ಆಮೇಲೆ ನಿದ್ರೆಯ ಕಾಲದಲ್ಲಿ ಬಹು ಹೆಚ್ಚಿನ ಸ್ವರೂಪ ಸುಖದಲ್ಲಿ ಮುಳುಗುವದು.

—ಇದಕ್ಕಿಂತ ಸ್ಪಷ್ಟವಾಗಿ ಹೇಳುವರು.

**ಜಾಗ್ರದ್ವ್ಯಾಪೃತಿಭಿಃ ಶ್ರಾಂತೋ ವಿಶ್ರಾಮ್ಯಾಥ ವಿರೋಧಿನಿ ।**
**ಅಪನೀತೇ ಸ್ವಸ್ಥಚಿತ್ತೋಽನುಭವೇದ್ವಿಷಯೇ ಸುಖಮ್ ॥೪೩॥**

ಜೀವನು ಎಚ್ಚರ ಕಾಲದಲ್ಲಿ ಮನ–ಮೈ–ಮಾತುಗಳಿಂದ ಅನೇಕ ಕಾರ್ಯಗಳನ್ನು ಮಾಡಿ ದಣಿದು ಮೆತ್ತನ್ನ ಹಾಸಿಗೆಯ ಮೇಲೆ ಮಲಗುತ್ತಾನೆ. ತರುವಾಯ ತನ್ನ ಸ್ವರೂಪಭೂತಕ್ಕೆ ವಿರೋಧಿಯಾದ ದುಃಖವು ಹಿಂದಾಗಲು ಸ್ವಸ್ಥವಾಗಿ ಹಾಸಿಗೆಯೇ ಮೊದಲಾದ ವಿಷಯಜನ್ಯ ಸುಖವನ್ನು ಅನುಭವಿಸುತ್ತಾನೆ.

—ವಿಷಯ ಸುಖವು ಎಂಥದು ?

**ಆತ್ಮಾಭಿಮುಖಧೀವೃತ್ತೌ ಸ್ವಾನಂದಃ ಪ್ರತಿಬಿಂಬತಿ ।**
**ಅನುಭೂಯೈನಮತ್ರಾಪಿ ತ್ರಿಪುಟ್ಯಾ ಶ್ರಾಂತಿಮಾಪ್ನು-**
**ಯಾತ್ ॥೪೪॥**

ಹೀಗೆ ಬುದ್ಧಿವೃತ್ತಿಯು ಒಳಮುಖವಾದಾಗ ತನ್ನ ಸ್ವರೂಪಭೂತವಾದ ಆನಂದವು ಬುದ್ಧಿಯಲ್ಲಿ ಪ್ರತಿಬಿಂಬಿಸುವದು. ಹೀಗೆ ವಿಷಯಾನಂದದ ಅನುಭವವನ್ನು ಪಡೆದರೂಅಲ್ಲಿರುವ ಅನುಭವಿಸುವವ-ಅನುಭವ-ಅನುಭವಿಸಲ್ಪಡುವದು ಎಂಬ ತ್ರಿಪುಟಿಯಿಂದ ಅವನಿಗೆ ಶ್ರಮವಾಗುವದು.

—ತರುವಾಯ.

**ತತ್ಶ್ರಮಸ್ಯಾಪನುತ್ತ್ಯರ್ಥಂ ಜೀವೋ ಧಾವೇತ್ಪರಾತ್ಮನಿ ।**
**ತೇನೈಕ್ಯಂ ಪ್ರಾಪ್ಯ ತತ್ರತ್ಯೋ ಬ್ರಹ್ಮಾನಂದಃ ಸ್ವಯಂ-**
**ಭವೇತ್ ॥೪೫॥**

ಈ ಶ್ರಮವನ್ನು ಕಳೆದುಕೊಳ್ಳುವದಕ್ಕಾಗಿ ಜೀವನು ಆನಂದರೂಪ ಬ್ರಹ್ಮನ ಕಡೆಗೆ ಧಾವಿಸುವನು. ಮತ್ತು "ಸತಾ ಸೋಮ್ಯ ತದಾ ಸಂಪನ್ನೋ

ಭವತಿ” ಛಾಂದೋಗ್ಯ ಎಂಬ ಶ್ರುತಿಯಲ್ಲಿ ಹೇಳಿದಂತೆ ಆ ಬ್ರಹ್ಮನೊಡನೆ ಒಂದಾಗಿ ಆ ಗಾಢನಿದ್ರೆಯಲ್ಲಿರುವ ಬ್ರಹ್ಮಾನಂದವೇ ಆಗುವನು.

ಈ ಗಾಢನಿದ್ರೆಯ ಆನಂದದ ವಿಷಯವಾಗಿ ಶ್ರುತಿಯು ಪಕ್ಷಿ ಮೊದಲಾದವುಗಳ ದೃಷ್ಟಾಂತಗಳನ್ನು ಹೇಳಿರುವದು ಎನ್ನುತ್ತಾರೆ.

**ದೃಷ್ಟಾಂತಾಃ ಶಕುನಿಃ ಶ್ಯೇನಃ ಕುಮಾರಶ್ಚ ಮಹಾನೃಪಃ ।**
**ಮಹಾಬ್ರಾಹ್ಮಣ ಇತ್ಯೇತೇ ಸುಪ್ತ್ಯಾನಂದೇ ಶ್ರುತೀರಿತಾಃ ॥೪೭॥**

ಗಾಢನಿದ್ರೆಯ ಆನಂದದ ವಿಷಯದಲ್ಲಿ ಪಕ್ಷಿ–ಗಿಡಗ–ಹುಡುಗ–ಚಕ್ರವರ್ತಿ ಮತ್ತು ಬ್ರಾಹ್ಮಣ ಈ ಐವರ ದೃಷ್ಟಾಂತವನ್ನು ಹೇಳಿರುವದು.

–ಮೊದಲು ಪಕ್ಷಿಯ ದೃಷ್ಟಾಂತ. ದಾರ್ಷ್ಟಾಂತಿಕದಲ್ಲಿ ಅದರಯೋಜನೆ.

**ಶಕುನಿಃ ಸೂತ್ರಬದ್ಧಃ ಸನ್ ದಿಕ್ಷು ವ್ಯಾಪೃತ್ಯ ವಿಶ್ರಮಮ್ ।**
**ಅಲಬ್ಧ್ವಾ ಬಂಧನಸ್ಥಾನಂ ಹಸ್ತ-ಸ್ತಂಭಾದ್ಯುಪಾಶ್ರ-**
**ಯೇತ್ ॥೪೭॥**

**ಜೀವೋಪಾಧಿ ಮನಸ್ತದ್ವದ್ಧರ್ಮಾಧರ್ಮ ಫಲಾಪ್ತಯೇ ।**
**ಸ್ವಪ್ನೇ-ಜಾಗ್ರತಿ ಚ ಭ್ರಾಂತ್ವಾ ಕ್ಷೀಣೇ ಕರ್ಮಣಿ ಲೀಯತೇ॥೪೮॥**

ಕೈಗಾಗಲಿ–ಕಂಬಕ್ಕಾಗಲಿ ಒಂದು ಆಧಾರದಿಂದ ಕಟ್ಟಲ್ಪಟ್ಟ ಹಕ್ಕಿಯು ಹತ್ತು ದಿಕ್ಕುಗಳಲ್ಲಿಯೂ ಹಾರಾಡಿ ಅಲ್ಲಿ ಎಲ್ಲಿಯೂ ಕುಳಿತುಕೊಳ್ಳುವದಕ್ಕೆ ಆಧಾರವನ್ನು ಕಾಣದೇ ಕೈಯನ್ನಾಗಲೀ, ಕಂಬವನ್ನಾಗಲೀ ಆಶ್ರಯಿಸುವದು. ಅದರಂತೆ ಜೀವನ ಉಪಾಧಿಯಾದ ಮನಸ್ಸು ತಾನು ಮಾಡಿದ ಪುಣ್ಯ–ಪಾಪಗಳ ಫಲಗಳಾದ ಸುಖ–ದುಃಖಗಳನ್ನು ಅನುಭವಿಸುವದಕ್ಕಾಗಿ ಕನಸಿನಲ್ಲಿ–ಎಚ್ಚರದಲ್ಲಿ ತಿರುಗಾಡಿ ಆ ಸುಖ-ದುಃಖಗಳನ್ನು ಕೊಡುವ ಕರ್ಮಗಳು ತೀರಲು ತನ್ನ ಆಶ್ರಯವಾದ ಅಜ್ಞಾನದಲ್ಲಿ ಅಡಗುವದು, ಆ ಅಜ್ಞಾನವು ಲಯವಾಗಲು ಆ ಉಪಾಧಿ ಹೊಂದಿದ ಜೀವನು ಪರಮಾತ್ಮನೇ ಆಗುವನು.

—ಇನ್ನು ಬೃಹದಾರಣ್ಯಕದ ಗಿಡಗದ ದೃಷ್ಟಾಂತ.

**ಶ್ಯೇನೋ ವೇಗೇನ ನೀಡೈಕಲಂಪಟಃ ಶಯಿತುಂ ವ್ರಜೇತ್ ।**
**ಜೀವಃ ಸುಪ್ತ್ಯೈ ತಥಾ ಧಾವೇದ್ ಬ್ರಹ್ಮಾನಂದೈಕ–**
**ಲಂಪಟಃ ॥೪೯॥**

ಗಿಡಗವು ಆಕಾಶದಲ್ಲಿ ವೇಗದಿಂದ ಹಾರಿ-ಹಾರಿ ದಣಿದು ವಿಶ್ರಾಂತಿ ಗೋಸ್ಕರ ಮಲಗಲೆಂದು ತನ್ನ ಗೂಡನ್ನು ಬಯಸಿ ಭರದಿಂದ ಎರಗುವದು. ಅದರಂತೆ ಮನಸ್ಸೆಂಬ ಉಪಾಧಿಯಿಂದ ಕೂಡಿದ ಜೀವನು ತಾನು ಮಾಡಿದ ಪುಣ್ಯ–ಪಾಪಗಳ ಫಲವನ್ನು ಅನುಭವಿಸುವದಕ್ಕೆ ಎಲ್ಲ ಕಡೆಗೆ ಪರಿದಾಡಿ ದಣಿದು ಬ್ರಹ್ಮಾನಂದವನ್ನು ಅಪೇಕ್ಷಿಸಿ ಮಲಗುವದಕ್ಕಾಗಿ ಹೃದಯಾಕಾಶದ ಕಡೆಗೆ ನುಗ್ಗುವನು.

—ಹುಡುಗನ ದೃಷ್ಟಾಂತ.

**ಅತಿಬಾಲಃ ಸ್ತನಂ ಪೀತ್ವಾ ಮೃದುಶಯ್ಯಾಗತೋ ಹಸನ್ ।**
**ರಾಗದ್ವೇಷಾದ್ಯನುತ್ಪತ್ತೇರಾನಂದೈಕಸ್ವಭಾವಭಾಕ್ ॥೩೦॥**

ಎಳೆಯ ಮಗುವು ತಾಯಿಯ ಮೊಲೆ ಕುಡಿದು ಮೆತ್ತನ್ನ ಹಾಸಿಗೆಯ ಮೇಲೆ ಮಲಗಿ ಇವರು ನನ್ನವರು ಇವರು ಪರರು ಎಂಬ ಭಾವನೆ ಇಲ್ಲದೆ ರಾಗ-ದ್ವೇಷರಹಿತವಾಗಿ ನಗುತ್ತ ಆನಂದವೇ ರೂಪಗೊಂಡಂತೆ ಇರುವದು.

**ಮಹಾರಾಜಃ ಸಾರ್ವಭೌಮಃ ಸಂತೃಪ್ತಃ ಸರ್ವಭೋಗತಃ ।**
**ಮಾನುಷಾನಂದ ಸೀಮಾನಂ ಪ್ರಾಪ್ಯಾನಂದೈಕ ಮೂರ್ತಿ-**
**ಭಾಕ್ ॥೩೧॥**

ಎಲ್ಲ ಭೋಗಗಳನ್ನು ಅನುಭವಿಸಿ ಪೂರ್ಣತೃಪ್ತನಾದ ಸಾರ್ವಭೌಮ ಮಹಾರಾಜನು ಮೃತ್ಯುಲೋಕದಲ್ಲಿ ದೊರೆಯಬಹುದಾದ ಆನಂದದ ಪರಕಾಷ್ಠೆಯನ್ನುಮುಟ್ಟಿ ಇನ್ನು ಭೋಗಿಸತಕ್ಕವುಗಳೇನೂ ಇಲ್ಲದ್ದರಿಂದ ರಾಗ-ದ್ವೇಷರಹಿತನಾಗಿ ಕೇವಲ ಆನಂದವೇ ರೂಪಗೊಂಡಂತೆ ಇರುವನು.

**ಮಹಾವಿಪ್ರೋ ಬ್ರಹ್ಮವೇದೀ ಕೃತಕೃತ್ಯತ್ವ ಲಕ್ಷಣಾಮ್ ।**
**ವಿದ್ಯಾನಂದಸ್ಯಪರಮಾಂ ಕಾಷ್ಠಾಂ ಪ್ರಾಪ್ಯಾವತಿಷ್ಠತೇ ॥೩೨॥**

ಮಹಾಬ್ರಾಹ್ಮಣನೂ ಬ್ರಹ್ಮಸಾಕ್ಷಾತ್ಕಾರ ಪಡೆದವನೂ ಆಗಿ ನಾನು ಮಾಡಬೇಕಾದುದನ್ನೆಲ್ಲ ಮಾಡಿದ್ದಾಯಿತೆಂಬ ವಿದ್ಯಾನಂದದ ಶಿಖರವನ್ನೇರಿ ಪರಮಾನಂದರೂಪನಾಗಿರುತ್ತಾನೆ. ಈ ದೃಷ್ಟಾಂತಗಳಂತೆ ಗಾಢನಿದ್ರೆಯನ್ನು ಹೊಂದಿದವನು ಆನಂದರೂಪನಾಗಿರುತ್ತಾನೆ.

(ಮೇಲಿನ ಮೂರು ದೃಷ್ಟಾಂತಗಳು ಬಾಲಾಕಿ ಬ್ರಾಹ್ಮಣ ಶ್ರುತಿಗಳೊಳಗಿನವು)

—ಈ ಮೂರರ ಹೊರತು ಬೇರೆ ದೃಷ್ಟಾಂತಗಳನ್ನೇಕೆ ಕೊಡಲಿಲ್ಲ ? ಎಂದರೆ

**ಮುಗ್ಧ ಬುದ್ಧ್ಯಾತಿ ಬುದ್ಧಾನಾಂ ಲೋಕೇ ಸಿದ್ಧಾ ಸುಖಾತ್ಮತಾ ।**
**ಉದಾಹೃತಾನಾಮನ್ಯೇ ತು ದುಃಖಿನೋ ನ ಸುಖಾತ್ಮಕಾಃ ॥೫೩॥**

ಲೋಕದಲ್ಲಿರುವ ಜನರಲ್ಲಿ ಮೂರು ಗುಂಪು ಎಂದರೆ ಅವಿವೇಕಿ–ವಿವೇಕಿ–ಅತಿ ವಿವೇಕಿ ಎಂದು ಮಾಡಬಹುದು. ಆದರೆ ಇವರೆಲ್ಲರೂ ಸುಖಿಗಳಲ್ಲ. ಅವಿವೇಕಿಗಳಲ್ಲಿ ಮುಗ್ಧನೆನಿಸುವ ಎಳೆಯ ಮಗು. ವಿವೇಕಿಗಳಲ್ಲಿ ಮಹಾ ರಾಜನು. ಅತಿ ವಿವೇಕಿಗಳಲ್ಲಿ ಆತ್ಮ ಸಾಕ್ಷಾತ್ಕಾರವುಳ್ಳವನು. ಹೀಗೆ ಮೂವರು ಸುಖಿಗಳೆಂದು ಪ್ರಸಿದ್ಧ. ಇನ್ನು ಉಳಿದವರು ದುಃಖಿಗಳೇ ಹೊರತು ಸುಖಿಗಳಲ್ಲ.

(ಇತರರು ಯಾವಾಗಲೂ ರಾಗದ್ವೇಷಾದಿಗಳಿಂದ ಕೂಡಿ ದುಃಖಿಗಳೇ ಆಗಿರುವದರಿಂದ ಅವರ ದೃಷ್ಟಾಂತ ಕೊಡಲಿಲ್ಲ.)

—ದಾರ್ಷ್ಟಾಂತಿಕ ಶ್ರುತಿವಾಕ್ಯದ ತಾತ್ಪರ್ಯ.

**ಕುಮಾರಾದಿವದೇವಾಯಂ ಬ್ರಹ್ಮಾನಂದೈಕತತ್ಪರಃ ।**
**ಸ್ತ್ರೀಪರಿಷ್ವಕ್ತವದ್ವೇದ ನ ಬಾಹ್ಯಂ ನಾಪಿ ಚಾಂತರಮ್ ॥೫೪॥**

ಕುಮಾರನೇ ಮೊದಲಾದವರಂತೆ ಬ್ರಹ್ಮಾನಂದದಲ್ಲಿ ತತ್ಪರನಾಗಿರುವವನು, ಪ್ರಿಯಳಾದ ಪತ್ನಿಯು ಬಂದು ಅಪ್ಪಿಕೊಂಡವನಂತೆ ಹೊರಗಿನದನ್ನು ಮತ್ತು ಒಳಗಿನದನ್ನು ಯಾವುದನ್ನೂ ಅರಿಯದೇ ಇರುವನು.

( 'ತದ್ಯಥಾ ಪ್ರಿಯಯಾ ಸ್ತ್ರೀಯಾಂ, ಎಂದು ಜ್ಯೋತಿಬ್ರಾಹ್ಮಣ ಶ್ರುತಿಯಲ್ಲಿ ಹೇಳಿದೆ )

—ಈಗ ದಾರ್ಷ್ಟಾಂತಿಕದಲ್ಲಿ ಹೊರಗಿನ ಮತ್ತು ಒಳಗಿನ ಎಂಬ ಶಬ್ದಗಳ ಅರ್ಥ.)

**ಬಾಹ್ಯಂ ರಥ್ಯಾದಿಕಂ ವೃತ್ತಂ ಗೃಹಕೃತ್ಯಂ ಯಥಾಂತರಮ್ ।**
**ತಥಾ ಜಾಗರಣಂ ಬಾಹ್ಯಂ ನಾಡೀಸ್ಥಃ ಸ್ವಪ್ನ ಆಂತರಃ ॥೫೫॥**

ಬೀದಿ–ಕುದುರೆ–ರಥ ಮುಂ ಹೊರಗಿನ ವಿಷಯಗಳು. ಮನೆಯ ವಾರ್ತೆಯು ಒಳಗಿನದು ಹೇಗೋ ಹಾಗೆ ಎಚ್ಚರದಲ್ಲಿ ತೋರುವ ಜಗತ್ತು

ಹೊರಗಿನ ವಿಷಯ. ನಾಡಿಯಲ್ಲಿ ತೋರುವ ಕನಸಿನ ಜಗತ್ತು ಒಳಗಿನ ವಿಷಯ.

ಜೀವ ಧರ್ಮಗಳನ್ನೆಲ್ಲ ನೀಗಿ ಗಾಢನಿದ್ರೆಯಲ್ಲಿ ಜೀವನು ಬ್ರಹ್ಮಾನಂದ ರೂಪನಾಗಿರುವನೆಂಬುದಕ್ಕೆ ಶ್ರುತಿಪ್ರಮಾಣ- "ಅತ್ರಪಿತಾ ಅಪಿತಾಭವತಿ".

**ಪಿತಾಪಿ ಸುಪ್ತಾವಪಿತೇತ್ಯಾದೌ ಜೀವತ್ವವಾರಣಾತ್ ।**
**ಸುಪ್ತೌ ಬ್ರಹ್ಮೈವ ನೋ ಜೀವಃ ಸಂಸಾರಿತ್ವಾ ಸಮೀಕ್ಷ-**
**ಣಾತ್ ॥೫೬॥**

ಗಾಢನಿದ್ರೆಯಲ್ಲಿ ತಂದೆಯು ತಂದೆ ಎನಿಸುವದಿಲ್ಲ, ತಾಯಿಯು ತಾಯಿ ಎನಿಸುವದಿಲ್ಲ. ಜಗತ್ತು ಜಗತ್ತೆನಿಸುವದಿಲ್ಲ. ಇತ್ಯಾದಿ ಬ್ರಹ್ಮಾರಣ್ಯಕ ಶ್ರುತಿಯಲ್ಲಿ ಪಿತೃತ್ವವೇ ಮೊದಲಾದ ಆರೋಪಿಸಿದ ಜೀವಧರ್ಮಗಳನ್ನು ಹೊರತು ಮಾಡಿರುವದು. ಹೀಗೆ ಗಾಢನಿದ್ರೆಯಲ್ಲಿ ಜೀವತ್ವವು ಕಾಣಬರುವದಿಲ್ಲವಾದುದರಿಂದ ಅವನು ಬ್ರಹ್ಮವೇ ಹೊರತು ಜೀವನಲ್ಲ.

—ಆಗ ಪಿತೃತ್ವವೇ ಮುಂ. ಅಭಿಮಾನವಿಲ್ಲದೆ ಹೋಗಲಿ. ಸುಖಿತ್ವವೇ ಮುಂ. ಸಂಸಾರವೇಕಿರಬಾರದು ? ಎಂದರೆ

**ಪಿತೃತ್ವಾದ್ಯಭಿಮಾನೋ ಯಃ ಸುಖ-ದುಃಖಾಕರಃ ಸಹಿ ।**
**ತಸ್ಮಿನ್ನಪಗತೇ ತೀರ್ಣಃ ಸರ್ವಾನ್ ಶೋಕಾನ್**
**ಭವತ್ಯಯುವ್ ॥೫೭॥**

ಪಿತೃತ್ವವೇ ಮೊದಲಾದ ದೇಹ ಸಂಬಂಧಿಕವಾದ ಅಭಿಮಾನವೇ ಸುಖ-ದುಃಖಗಳ ಖನಿ ಎನಿಸುವದು. ಆದುದರಿಂದ ಅಭಿಮಾನವು ಇಲ್ಲದಂತಾದರೆ ಅವನು ಎಲ್ಲ ಬಗೆಯ ದುಃಖಗಳನ್ನು ದಾಟಿದವನಾಗುವನು.

—ಹಿಂದೆ ಹೇಳಿದ ಶ್ರುತಿಯು ಸುಷುಪ್ತಿಯಲ್ಲಿ ಸುಖಪ್ರಾಪ್ತಿಯಾಗುತ್ತದೆ ಎಂದು ಸ್ಪಷ್ಟ ಶಬ್ದಗಳಿಂದ ವ್ಯಕ್ತಮಾಡಿದಂತೆ ಕಾಣುವದಿಲ್ಲ.

**ಸುಷುಪ್ತಿಕಾಲೇ ಸಕಲೇ ವಿಲೀನೇ ತಮಸಾಽವೃತಃ ।**
**ಸುಖರೂಪಮುಪೈತೀತಿ ಬ್ರೂತೇ ಹ್ಯಾಥರ್ವಣೀಶ್ರುತಿಃ ॥೫೮॥**

ಗಾಢನಿದ್ರೆಯಲ್ಲಿ ಎಚ್ಚರದ ಕನಸಿನ ಎಲ್ಲ ಜಗತ್ತು ಹಾಗೂ ಮನಸ್ಸು ಮತ್ತು ಇಂದ್ರಿಯಗಳು ತಮ್ಮ ಉಪಾದಾನಭೂತ ಇಂದ್ರಿಯ ಎಂದರೆ ಕಾರಣ

ವಾದ ತಮಃಪ್ರಧಾನ ಪ್ರಕೃತಿಯಲ್ಲಿ ಲಯವಾಗುತ್ತಿರಲು, ಅದೇ ತಮಃ ಪ್ರಧಾನ ಪ್ರಕೃತಿಯಿಂದ ಮುಚ್ಚಿ ಹಾಕಿದ ಜೀವನು ಸುಖರೂಪನಾದ ಬ್ರಹ್ಮನನ್ನು ಹೊಂದುವನೆಂದು ಅಥರ್ವಣ ಶ್ರುತಿಯು ಹೇಳುವದು.

—ಇದು ಬರಿ ಶ್ರುತಿಯಿಂದ ಪಸಿದ್ಧವಾದ ಮಾತಲ್ಲ, ಎಲ್ಲರ ಅನುಭವದಿಂದಲೂ ಸಿದ್ಧವಾದ ಮಾತಾಗಿದೆ ಎನ್ನುತ್ತಾರೆ.

**ಸುಖಮಸ್ವಾಪ್ಸಮತ್ರಾಹಂ ನ ವೈಕಿಂಚಿದವೇದಿಷಮ್ ।**
**ಇತಿ ಸುಪ್ತೇ ಸುಖಾಜ್ಞಾನೇ ಪರಾಮೃಶ್ಯತಿ**
**ಚೋತ್ಥಿತಃ ॥೫೯॥**

ಗಾಢನಿದ್ರೆಯಿಂದ ಎಚ್ಚರಗೊಂಡವನು "ಈ ಹೊತ್ತಿನವರೆಗೆ ನಾನು ಸುಖದಿಂದ ಮಲಗಿಕೊಂಡಿದ್ದೆನು" ನನಗೆ ಯಾವದೂ ತಿಳಿಯುತ್ತಿದ್ದಿಲ್ಲ ಎಂದು ನಿದ್ರೆಯಲ್ಲಿಯ ಸುಖವನ್ನು ಮತ್ತು ಅಜ್ಞಾನವನ್ನು ನೆನಪಿಗೆ ತಂದು ಕೊಳ್ಳುತ್ತಾನೆ.

(ಇದರಿಂದ ಗಾಢನಿದ್ರೆಯಲ್ಲಿ ಸುಖವಿರುವದೆಂಬುದು ಸಿದ್ಧವಾಗುತ್ತದೆ.)

—ಆದರೆ ನೆನಪು ಅಂಥ ಬಲವಾದ ಪ್ರಮಾಣವೆನ್ನಿಸುವದಿಲ್ಲ. ಅಷ್ಟರಿಂದ ಅಲ್ಲಿ ಸುಖವಿತ್ತೆಂಬುದು ಸಿದ್ಧವಾಗುವದಿಲ್ಲ ಎಂದರೆ ಅವನಿಗೆ ಸುಖದ ಅನುಭವವಾಗದಿದ್ದರೆ ನೆನಪಿಗೆ ಬರುವದಕ್ಕೆ ಕಾರಣವಿಲ್ಲ. ಆದುದರಿಂದ ಅನುಭವ ಬಲದಿಂದ ಸಿದ್ಧಿಯಾಗುತ್ತದೆ.

**ಪರಾಮರ್ಶೋಽನುಭೂತೇಽಸ್ತೀತ್ಯಾಸೀದನುಭವಸ್ತದಾ ।**
**ಚಿದಾತ್ಮತ್ವಾತ್‌ಸ್ವತೋ ಭಾತಿ ಸುಖಮಜ್ಞಾನಧೀಸ್ತತಃ ॥೬೦॥**

ಅನುಭವಿಸಿದ ಪದಾರ್ಥಗಳ ಬಗೆಗೆ ಮಾತ್ರ ನೆನಪು ಉಂಟಾಗುವದು. ಅನುಭವಕ್ಕೆ ಬಾರದ ಪದಾರ್ಥಗಳ ನೆನಪು ಆಗುವದಿಲ್ಲ. ಆದುದರಿಂದ ಗಾಢ ನಿದ್ರೆಯಲ್ಲಿ ಅವುಗಳ ಅನುಭವವಿತ್ತು. ಆದರೆ ಆಗ ಮನಸ್ಸು ಎಲ್ಲ ಇಂದ್ರಿಯಗಳೊಡನೆ ಲಯವಾಗಿರುತ್ತದೆ. ಅಂದಮೇಲೆ ಅನುಭವ ಬರುವದು ಹೇಗೆ ? ಎಂದರೆ ಸುಖಾನುಭವದ ಸಾಧನಗಳಿಲ್ಲವೆಂದು ಅರ್ಥವೋ ? ಅಥವಾ ಅಜ್ಞಾನುಭವದ್ದೋ ? ಮೊದಲಿನ ಶಂಕೆಗೆ ಉತ್ತರ. ಸುಖವು ತನ್ನಷ್ಟಕ್ಕೆ ತಾನು ಬೆಳಗುವಂಥದು. ಅದಕ್ಕೆ ಬೇರೆ ಸಾಧನಗಳ ಅಪೇಕ್ಷೆಯಿಲ್ಲ. ಎರಡ

ನೆಯದಕ್ಕೆ ತನ್ನಷ್ಟಕ್ಕೆ ತಾನು ಬೆಳಗುವ ಸುಖದ ಬಲದಿಂದ ಅದನ್ನು ಮುಚ್ಚಿ ಹಾಕಿದ ಅಜ್ಞಾನವು ಕೂಡ ಬೆಳಗುವದು.

—ಗಾಢನಿದ್ರೆಯಲ್ಲಿ ಸುಖವು ತನ್ನಷ್ಟಕ್ಕೆ ತಾನು ಬೆಳಗುವಂಥದೆಂದರೂ ಅದು ಬ್ರಹ್ಮಾನಂದವೇ ಆಗಿದೆ ಎಂಬುದಕ್ಕೇನು ಪ್ರಮಾಣ ?

**ಬ್ರಹ್ಮವಿಜ್ಞಾನಮಾನಂದಮಿತಿ ವಾಜಸನೇಯಿನಃ ।**
**ಪಠಂತ್ಯತಃ ಸ್ವಪ್ರಕಾಶಸಂ ಸುಖಂ ಬ್ರಹ್ಮೈವ ನೇತರತ್ ॥೬೦॥**

ಬ್ರಹ್ಮವು ವಿಜ್ಞಾನರೂಪವೂ, ಆನಂದರೂಪವೂ ಆಗಿರುವದೆಂದು ವಾಜಸನೇಯಿ ಶಾಖೆಯವರು ಹೇಳುತ್ತಾರೆ. ಆದುದರಿಂದ ತನ್ನ ಬೆಳಕಿ ನಿಂದಲೇ ಬೆಳಗುವಂಥ ಸುಖರೂಪವು ಬ್ರಹ್ಮವೇ. ಬೇರೆ ಮತ್ತಾವದೂ ಅಲ್ಲ.

—ಈ ಅನುಭವವು ಜೀವನಿಗೇ ಸರಿ, ಎಂದರೆ ಅಲ್ಲ. ಯಾಕಂದರೆ ಅವನ ಸಾಧನಗಳಾದ ಬುದ್ಧಿ-ಮನಸ್ಸುಗಳು ಆಗ ಅಜ್ಞಾನದಲ್ಲಿ ಅಡಗಿಹೋಗಿ ರುವವು. ಆದುದರಿಂದ ವಿಜ್ಞಾನಮಯನಾದ ಜೀವನಿಗೆ ಸುಖಾನುಭವವಿಲ್ಲ ವೆನ್ನಬೇಕಾಗುವದು.

**ಯದಜ್ಞಾನಂ ತತ್ರ ಲೀನೌ ತೌ ವಿಜ್ಞಾನಮನೋಮಯೌ ।**
**ತಯೋರ್ಹಿ ವಿಲಯಾವಸ್ಥಾ ನಿದ್ರಾಽಜ್ಞಾನಂ ಚ ಸೈವ ಹಿ॥೬೨॥**

ಗಾಢನಿದ್ರೆಯಿಂದ ಎಚ್ಚರಗೊಂಡಮೇಲಿನ ನೆನಪಿನಿಂದ ಸಿದ್ಧವಾಗುವ ಅಜ್ಞಾನದಲ್ಲಿ ವಿಜ್ಞಾನಮಯ, ಮನೋಮಯ ಕೋಶಗಳು ಲೀನವಾಗು ತ್ತವೆ. ಅವು ಹೀಗೆ ಲೀನವಾಗುವದೇ ನಿದ್ರೆ ಎನಿಸುವದು ಮತ್ತು ಅಜ್ಞಾನ ವೆಂದೂ ಅದಕ್ಕೇ ಅನ್ನುವರು.

("ವಿಜ್ಞಾನ ವಿರತಿಃ ಸುಪ್ತಿಃ" ಎಂದು ಕೋಶ. ವಿಶೇಷ ಜ್ಞಾನವು ಇಲ್ಲದಂತಾಗುವದೇ ನಿದ್ರೆ.)

—ಹಾಗಾದರೆ ಗಾಢನಿದ್ರೆಯಲ್ಲಿ ಸುಖಾದಿಗಳನ್ನು ಅನುಭವಿಸಲು ವಿಜ್ಞಾನಮಯ ಜೀವನಿಲ್ಲವೆಂದು ಆದಮೇಲೆ ಎಚ್ಚತ್ತಾಗ ಅವುಗಳ ನೆನಪು ಬರುವದು ಹೇಗೆ ? ಎಂದರೆ ಆ ಸಮಯದಲ್ಲಿ ಜೀವನ ಸ್ವರೂಪವೇನೂ ನಾಶವಾಗಿರುವದಿಲ್ಲ. ಆಗ ಸುಖ-ದುಃಖ ಕೊಡುವ ಕರ್ಮಗಳು ತೀರಿದ್ದರಿಂದ ಆಗ ಮನಸ್ಸು ಕರಗಿದಂತಾಗಿರುತ್ತದೆ. ಈ ಸ್ಥಿತಿಗೆ ಆನಂದಮಯನೆಂದು

ಹೆಸರು. ಮತ್ತೆ ಸುಖ-ದುಃಖಗಳನ್ನು ಕೊಡುವ ಕರ್ಮಗಳು ಎದ್ದ ಕೂಡಲೆ ಜೀವನು ಎಚ್ಚತ್ತು ವಿಜ್ಞಾನಮಯನೆನಿಸುತ್ತಾನೆ.

**ವಿಲೀನಘೃತವತ್ ಪಶ್ಚಾತ್ ಸ್ಯಾದ್ವಿಜ್ಞಾನಮಯೋ ಘನಃ ।**
**ವಿಲೀನಾವಸ್ಥ ಆನಂದಮಯಶಬ್ದೇನ ಕಥ್ಯತೇ ॥೬೩॥**

ಬಿಸಿಯಿಂದ ಕರಗಿದ ತುಪ್ಪವು ಆರಿತೆಂದರೆ ಘಟ್ಟಿಯಾಗುವಂತೆ, ಎಚ್ಚರ ಕನಸು ಈ ಅವಸ್ಥೆಗಳಲ್ಲಿ ಸುಖ-ದುಃಖವನ್ನು ಕೊಡುವ ಕರ್ಮಗಳು ಇಲ್ಲದಂತಾಗಲು ನಿದ್ದೆಯ ರೂಪವಾಗಿ ಕರಗಿದ ಅಂತಃಕರಣವು ಮತ್ತೆ ಭೋಗವನ್ನು ಕೊಡುವ ಕರ್ಮಗಳು ಮೇಲೆದ್ದ ಕೂಡಲೇ ಆತ್ಮನು ವಿಜ್ಞಾನಮಯಘನನೆನಿಸುವನು. ಆದುದರಿಂದ ಆ ಉಪಾಧಿಯನ್ನು ಸ್ವೀಕರಿಸಿದ ಆತ್ಮನು ವಿಜ್ಞಾನಮಯಘನನಾಗುವನು. ಅದೇ ಆತ್ಮ ಕರಗಿದ ಅವಸ್ಥೆಯಲ್ಲಿ ಆನಂದಮಯನೆಂದು ಹೆಸರು ಪಡೆಯುವನು.

—ಇದರದೇ ಸ್ಪಷ್ಟೀಕರಣ.

**ಸುಪ್ತಿಪೂರ್ವಕ್ಷಣೇ ಬುದ್ಧಿವೃತ್ತಿರ್ಯಾ ಸುಖಬಿಂಬಿತಾ ।**
**ಸೈವ ತದ್ಬಿಂಬಸಹಿತಾ ಲೀನಾನಂದಮಯಸ್ತತಃ ॥೬೪॥**

ಗಾಢನಿದ್ರೆ ಹತ್ತುವ ಮೊದಲಿನ ಕ್ಷಣಗಳಲ್ಲಿ ಬುದ್ಧಿಯ ವೃತ್ತಿಯು ಅಂತರ್ಮುಖವಾಗಲು ಅದರಲ್ಲಿ ತನ್ನ ಸ್ವರೂಪಭೂತ ಸುಖವು ಪ್ರತಿಬಿಂಬಿಸುವದು. ಆಮೇಲೆ ಆ ಬಿಂಬದೊಡನೆ ಕೂಡಿದ ಮನೋವೃತ್ತಿಯು ನಿದ್ರೆಯ ರೂಪವಾಗಿ ಕರಗಲು ಅದಕ್ಕೇ ಆನಂದಮಯವೆನ್ನುವರು.

—ಆಗಿನ ಅವನ ಸುಖಾನುಭವ.

**ಅಂತರ್ಮುಖೋ ಯ ಆನಂದಮಯೋ ಬ್ರಹ್ಮಸುಖಂ ತದಾ ।**
**ಭುಂಕ್ತೇ ಚಿದ್ಬಿಂಬಯುಕ್ತಾಭಿರಜ್ಞಾನೋತ್ಪನ್ನ-**
**ವೃತ್ತಿಭಿಃ ॥೬೫॥**

ಸುಖ ಪ್ರತಿಬಿಂಬದಿಂದ ಕೂಡಿಕೊಂಡು ಅಂತರ್ಮುಖವಾದ ಬುದ್ಧಿವೃತ್ತಿಯು ಅಜ್ಞಾನವೆಂಬ ಉಪಾಧಿಯನ್ನು ಸ್ವೀಕರಿಸಿ ಆನಂದಮಯನೆನಿಸಿ ಗಾಢನಿದ್ರೆಯಲ್ಲಿ ಅಜ್ಞಾನದಿಂದ ಹುಟ್ಟಿದ ವೃತ್ತಿಗಳ ಸಹಾಯದಿಂದ ಬ್ರಹ್ಮಾನಂದವನ್ನು ಅನುಭವಿಸುವನು.

(ಹೀಗಿರುವದೆಂದು ಅವನು ಆಗ ಅನುಭವಿಸಿದ ಸುಖವನ್ನು ಎಚ್ಚರದಲ್ಲಿ ನೆನಪು ಮಾಡಿಕೊಳ್ಳುವನು.

—ಹೀಗಿದ್ದಮೇಲೆ ಎಚ್ಚರಕಾಲದಂತೆ 'ನಾನು ಸುಖವನ್ನು ಅನುಭವಿಸುತ್ತಿದ್ದೇನೆ.' ಎಂಬ ಅಭಿಮಾನವೇಕೆ ಉಂಟಾಗುವದಿಲ್ಲ? ಎಂದರೆ ಅಂತಃಕರಣ ವೃತ್ತಿಗಳಂತೆ ಅಜ್ಞಾನವೃತ್ತಿಗಳು ಸ್ಪಷ್ಟವಾಗಿರುವದಿಲ್ಲವಾದುದರಿಂದ ಎನ್ನುತ್ತಾರೆ.

**ಅಜ್ಞಾನವೃತ್ತಯಃ ಸೂಕ್ಷ್ಮಾ ವಿಸ್ಪಷ್ಟಾ ಬುದ್ಧಿವೃತ್ತಯಃ ।**
**ಇತಿ ವೇದಾಂತಸಿದ್ಧಾಂತ ಪಾರಗಾಃ ಪ್ರವದಂತಿ ಹಿ ॥೬೬॥**

ಅಜ್ಞಾನದ ವೃತ್ತಿಗಳು ಬಹು ಸೂಕ್ಷ್ಮವಾದವುಗಳು. ಬುದ್ಧಿವೃತ್ತಿಗಳು ಸ್ಪಷ್ಟವಾದವುಗಳು ಎಂದು ವೇದಾಂತ ಸಿದ್ಧಾಂತದಲ್ಲಿ ಪಾರಂಗತರಾದವರು ಹೇಳುತ್ತಾರೆ.

—ಆದರೆ ಆನಂದಮಯನು ಅಷ್ಟು ಸೂಕ್ಷ್ಮ ಅಜ್ಞಾನ ವೃತ್ತಿಗಳ ಸಹಾಯದಿಂದ ಬ್ರಹ್ಮಾನಂದವನ್ನು ಭೋಗಿಸುತ್ತಾನೆ ಎಂಬುದಕ್ಕೆ ಪ್ರಮಾಣವೇನು?

**ಮಾಂಡೂಕ್ಯತಾಪನೀಯಾದಿ ಶ್ರುತಿಷ್ವೇತದತಿ ಸ್ಫುಟಮ್ ।**
**ಆನಂದಮಯ ಭೋಕ್ತೃತ್ವಂ ಬ್ರಹ್ಮಾನಂದೇಚ ಭೋಗ್ಯತಾ ॥೬೭॥**

ಹೀಗೆ ಆನಂದಮಯನು ಅನುಭವಿಸುವವನೆಂದೂ, ಗಾಢನಿದ್ರೆಯಲ್ಲಿ ಬ್ರಹ್ಮಾನಂದವು ಅನುಭವಕ್ಕೆ ಬರುವದೆಂದೂ ಮಾಂಡೂಕ್ಯ-ರಾಮತಾಪನೀಯ ಮೊದಲಾದ ಶ್ರುತಿಗಳು ಸ್ಪಷ್ಟವಾಗಿ ಹೇಳುವವು.

—ಈಗ ಮಾಂಡೂಕ್ಯದ "ಸುಷುಪ್ತಸ್ಥಾನ ಏಕೀಭೂತಃ, ಎಂಬುದರ ಅರ್ಥ.

**ಏಕೀಭೂತಃ ಸುಷುಪ್ತಸ್ಥಃ ಪ್ರಜ್ಞಾನ ಘನತಾಂ ಗತಃ ।**
**ಆನಂದಮಯ ಆನಂದಭುಕ್ ಚೇತೋಮಯವೃತ್ತಿಭಿಃ ॥೬೮॥**

ಗಾಢನಿದ್ರೆಯಲ್ಲಿ ಮನಸ್ಸು-ಬುದ್ಧಿ ಮೊದಲಾದ ಯಾವ ಉಪಾಧಿಗಳೂ ಇಲ್ಲದ್ದರಿಂದ ಏಕರೂಪನಾಗಿ, ನಾನೇ ಸುಷುಪ್ತಿಯನ್ನು ಪಡೆದವನು ಎಂಬ

ಅಭಿಮಾನವನ್ನು ಧರಿಸುವವನು ಮತ್ತು ಜ್ಞಾನದ ಘಟ್ಟಿಯಾದ ಆನಂದ ಮಯನು ಚೈತನ್ಯದ ಬೆಳಕಿನಿಂದ ಕೂಡಿದ ಅವಿದ್ಯೆಯ ವೃತ್ತಿಗಳಿಂದ ತನ್ನ ಸ್ವರೂಪವಾದ ಆನಂದವನ್ನು ಅನುಭವಿಸುವನು.

ಈ ವಾಕ್ಯದಲ್ಲಿ ಬಂದ ಏಕರೂಪ, ಎಂಬುದರ ಅರ್ಥ.

**ವಿಜ್ಞಾನಮಯ ಮುಖ್ಯೈರ್ಯೋ ರೂಪೈರ್ಯುಕ್ತಃ ಪುರಾಧುನಾ ।**
**ಸ ಲಯೇನೈಕತಾಂ ಪ್ರಾಪ್ತೋ ಬಹುತಂದುಲಪಿಷ್ಟವತ್ ॥೬೯॥**

ಯಾವನು ಎಚ್ಚರವೆಂಬ ಅವಸ್ಥೆಯಲ್ಲಿ ವಿಜ್ಞಾನಮಯ–ಪ್ರಾಣಮಯ-ಮನೋಮಯ–ಚ ಕ್ಷು ಮ ರ್ಯ--ಶ್ರೋತ್ರಮಯ–ಪೃಥ್ವೀಮಯ–ಆಪೋ ಮಯ–ವಾಯುಮಯ (ಬೃಹದಾರಣ್ಯಕ) ಇತ್ಯಾದಿ ಆಕಾರಗಳಿಂದ ಯುಕ್ತ ನಾದವನು ಈಗ ವಿಜ್ಞಾನ-ಮನ ಇತ್ಯಾದಿಗಳ ಲಯವಾದುದರಿಂದ ಅಕ್ಕಿಯ ಹಿಟ್ಟನ್ನು ಕಲಿಸಿದಂತೆ ಒಂದು ಮುದ್ದೆಯಾಗಿದ್ದಾನೆ.

—'ಪ್ರಜ್ಞಾನಘನ' ವೆಂಬುದರ ಅರ್ಥವು.

**ಪ್ರಜ್ಞಾನಾನಿ ಪುರಾ ಬುದ್ಧಿವೃತ್ತಯೋಽಥ ಘನೋಽಭವತ್ ।**
**ಘನತ್ವಂ ಹಿಮಬಿಂದೂನಾಮುದಗ್ದೇಶೇ ಯಥಾ ತಥಾ ॥೭೦॥**

ಉತ್ತರ ದೇಶದಲ್ಲಿಯ ಮಂಜಿನ ಹನಿಗಳು ಗಡ್ಡೆಗಟ್ಟುವಂತೆ, ಎಚ್ಚರ ಮೊದಲಾದ ಸಮಯಗಳಲ್ಲಿ "ಪ್ರಜ್ಞಾನ" ವೆನಿಸಿಕೊಳ್ಳುವ ಘಟ–ಪಟ ಮುಂತಾದವನ್ನು ಅರಿಯುವ ಬುದ್ಧಿವೃತ್ತಿಗಳು ಗಾಢ ನಿದ್ರೆಯಲ್ಲಿ ಘಟ-ಪಟಾ ದಿಗಳು ಇಲ್ಲದ್ದರಿಂದ ಚಿದ್ರೂಪದೊಡನೆ ಒಂದಾಗಿ ಪ್ರಜ್ಞಾನ ಘನವೆನಿಸಿದವು.

**ತದ್‌ಘನತ್ವಂ ಸಾಕ್ಷಿಭಾವಂ ದುಃಖಭಾವಂ ಪ್ರಚಕ್ಷತೇ ।**
**ಲೌಕಿಕಾಸ್ತಾರ್ಕಿಕಾ ಯಾವದ್‌ದುಃಖವೃತ್ತಿ ವಿಲೋ–ಪನಾತ್ ॥೭೧॥**

ಈ ಸಾಕ್ಷಿ ಎನಿಸುವ ಪ್ರಜ್ಞಾನಘನರೂಪಕ್ಕೆ ಶಾಸ್ತ್ರ ಪರಿಚಯವಿಲ್ಲದ ಸಾಮಾನ್ಯರು. ಮತ್ತು ವೈಶೇಷಿಕರೇ ಮೊದಲಾದ ತರ್ಕವಾದಿಗಳು ದುಃಖಾ ಭಾವ ಸ್ಥಿತಿ ಎಂದು ತಿಳಿಯುತ್ತಾರೆ. ಯಾಕಂದರೆ ಎಲ್ಲ ದುಃಖರೂಪ ವೃತ್ತಿ ಗಳೂ ಆ ಅವಸ್ಥೆಯಲ್ಲಿ ಅಡಗಿಹೋಗಿರುತ್ತವೆ.

-ಹಿಂದಿನ ಶ್ರುತಿಯಲ್ಲಿ ಬಂದ 'ಚೇತೋಮುಖ' ಶಬ್ದದ ಅರ್ಥ ಹೇಳುತ್ತಾರೆ.

**ಅಜ್ಞಾನಬಿಂಬಿತಾ ಚಿತ್‌ಸ್ಯಾನ್ಮುಖಮಾನಂದಭೋಜನೇ ।**
**ಭುಕ್ತ್ವಾ ಬ್ರಹ್ಮಸುಖಂ ತ್ಯಕ್ತ್ವಾ ಬಹಿರ್ಯಾತ್ಯಥ ಕರ್ಮಣಾ ॥೭೨॥**

ಗಾಢನಿದ್ರೆಯಲ್ಲಿ ಬ್ರಹ್ಮಾನಂದವನ್ನು ಅನುಭವಿಸುವದಕ್ಕೆ ಅವಿದ್ಯೆಯ ವೃತ್ತಿಯಲ್ಲಿ ಪ್ರತಿಬಂಬಿಸಿರುವ ಚೈತನ್ಯವೇ ಮುಖ. ಈ ರೀತಿ ದೊರೆಯುವ ಬ್ರಹ್ಮಾನಂದವನ್ನು ಬಿಟ್ಟು ಕರ್ಮಕ್ಕೆ ವಶನಾದ ಜೀವನು ಹೊರಬಿದ್ದು ಕರ್ಮದಿಂದ ದೊರೆಯುವ ಸುಖ-ದುಃಖಗಳನ್ನು ಭೋಗಿಸುವನು.

—'ಪುನಶ್ಚ ಜನ್ಮಾಂತರ ಕರ್ಮಯೋಗಾತ್‌ಸ ಏವ ಜೀವ ಸ್ವಪಿತಿ ಪ್ರಬುದ್ಧಃ' ಎಂಬ ಕೈವಲ್ಯ ಶ್ರುತಿಯಿಂದ ಹಾಗೆ ತಿಳಿದು ಬರುವದು.

**ಕರ್ಮ ಜನ್ಮಾಂತರೇಽಭೂದ್ಯತ್ತದ್ಯೋಗಾದ್ ಬುದ್ಧ್ಯತೇ ಪುನಃ ।**
**ಇತಿ ಕೈವಲ್ಯಶಾಖಾಯಾಂ ಕರ್ಮಜೋಬೋಧ ಈರಿತಃ॥೭೩॥**

ಪೂರ್ವಜನ್ಮದಲ್ಲಿ ಘಟಿಸಿದ ಕರ್ಮವಶದಿಂದ ಜೀವನು ಪುನಃ ಎಚ್ಚರಗೊಳ್ಳುತ್ತಾನೆ. ಕೈವಲ್ಯ ಶ್ರುತಿಯು ಕರ್ಮಗಳ ಪ್ರೇರಣೆಯಿಂದ ಎಚ್ಚರವೆಂದು ಹೇಳಿದೆ.

**ಕಂಚಿತ್‌ಕಾಲಂ ಪ್ರಬುದ್ಧಸ್ಯ ಬ್ರಹ್ಮಾನಂದಸ್ಯ ವಾಸನಾ ।**
**ಅನುಗಚ್ಛೇದ್ಯತಸ್ತೂಷ್ಣೀ ಮಾಸ್ತೇ ನಿರ್ವಿಷಯಃ ಸುಖೀ॥೭೪॥**

ಎಚ್ಚರಗೊಂಡವನಿಗೆ ಬ್ರಹ್ಮಾನಂದದ ನೆನಪು ಕೆಲವೇಳೆ ತೋರುತ್ತಿರುವದು. ಹೀಗೆ ಆ ವೇಳೆಯಲ್ಲಿ ಅವನು ಯಾವ ವಿಷಯವಿರದಿದ್ದರೂ ಸುಖಿಯಾಗಿ ಸುಮ್ಮನಿರುವನು.

ತರುವಾಯದಲ್ಲಿ ಅವನಿಗೆ ಅದೇ ಸ್ಥಿತಿ ಯಾಕೆ ಉಳಿಯುವದಿಲ್ಲ ?

**ಕರ್ಮಭಿಃ ಪ್ರೇರಿತಃ ಪಶ್ಚಾನ್ನಾನಾದುಃಖಾನಿ ಭಾವಯನ್ ।**
**ಶನೈರ್ವಿಸ್ಮರತಿ ಬ್ರಹ್ಮಾನಂದಮೇಷೋಽಖಿಲೋ ಜನಃ ॥೭೫॥**

ಹೀಗಿರುವಾಗ ಕರ್ಮಗಳಿಂದ ಪ್ರೇರಿತನಾಗಿ ಅವನು ಮತ್ತು ಎಲ್ಲ ಜನರು ಅನೇಕ ದುಃಖಗಳ ಭಾವನೆಯಿಂದ ಕೂಡಿ ಬ್ರಹ್ಮಾನಂದವನ್ನು ಮೆಲ್ಲ-ಮೆಲ್ಲನೆ ಮರೆತುಬಿಡುತ್ತಾನೆ.

**ಪ್ರಾಗೂರ್ಧ್ವಮಪಿ ನಿದ್ರಾಯಾಃ ಪಕ್ಷಪಾತೋ ದಿನೇ ದಿನೇ ।**
**ಬ್ರಹ್ಮಾನಂದೇ ನೃಣಾಂ ತೇನ ಪ್ರಾಜ್ಞೋಽಸ್ಮಿನ್ ವಿವ-**
**ದೇತ ಕಃ ॥೭೬॥**

ಮನುಷ್ಯನಿಗೆ ಪ್ರತಿದಿನ ನಿದ್ರೆಯ ಆರಂಭದಲ್ಲಿ ಮತ್ತು ಕೊನೆಯಲ್ಲಿ ಬ್ರಹ್ಮಾನಂದದ ವಿಷಯಕ್ಕೆ ಪ್ರೀತಿಯು ಇದ್ದೇ ಇರುತ್ತದೆ. (ಇದಕ್ಕೆ ಅನುಭವವೇ ಪ್ರಮಾಣವಾಗಿದೆ.) ಹೀಗಿರುವಾಗ ಯಾವ ಬುದ್ಧಿವಂತನು ಈ ಆನಂದದ ಬಗೆಗೆ ವಾದ ಮಾಡುತ್ತ ಕೂಡುವನು ?

—ಇಷ್ಟಾದರೂ ವಾದಿಯು,

**ನನು ತೂಷ್ಣೀಂ ಸ್ಥಿತೌ ಬ್ರಹ್ಮಾನಂದಶ್ಚೇದ್ಭಾತಿ ಲೌಕಿಕಾಃ ।**
**ಅಲಸಾಶ್ಚರಿತಾರ್ಥಾಃ ಸ್ಯುಃ ಶಾಸ್ತ್ರೇಣ ಗುರುಣಾತ್ರ ಕಿಮ್॥೭೭॥**

ಗುರುಶುಶ್ರೂಷೆ-ಶ್ರವಣ ಮನನಾದಿಗಳಿಂದ ದೊರೆಯಬಹುದಾದ ಬ್ರಹ್ಮಾನಂದವು ಕೇವಲ ಸುಮ್ಮನಿರುವದರಿಂದಲೇ ದೊರೆಯಬಲ್ಲದಾದರೆ ಆಲಸಿಗಳಾದ ನಾವಾನ್ಯರು ಕೂಡ ಕೃತಾರ್ಥರಾಗಬಹುದು. ಅಂದಮೇಲೆ ಶಾಸ್ತ್ರಗಳಿಂದ-ಗುರುಗಳಿಂದ ಪ್ರಯೋಜನವೇನು ?

**ಬಾಢಂ ಬ್ರಹ್ಮೇತಿ ವಿದ್ಯುಶ್ಚೇತ್ ಕೃತಾರ್ಥಾಸ್ತಾವತೈವ ತೇ ।**
**ಗುರುಶಾಸ್ತ್ರೇ ವಿನಾತ್ಯಂತಂ ಗಂಭೀರಂ ಬ್ರಹ್ಮವೇತ್ತಿ ಕಃ॥೭೮॥**

ನಿಜ. ಆ ಸುಖವೇ ಬ್ರಹ್ಮವೆಂದು ಅವರು ತಿಳಿದುಕೊಂಡುಬಿಟ್ಟರೆ ಅವರು ಕೃತಾರ್ಥರು. ಆದರೆ ಗುರು ಮತ್ತು ಶಾಸ್ತ್ರಗಳ ಸಹಾಯವಿಲ್ಲದೇ ಅತ್ಯಂತ ಗಹನವಾದ ಬ್ರಹ್ಮವನ್ನು ಯಾರು ತಿಳಿಯಬಲ್ಲರು ?

**ಜಾನಾಮ್ಯಹಂ ತ್ವದುಕ್ತ್ಯಾದ್ಯ ಕುತೋ ಮೇ ನ ಕೃತಾರ್ಥತಾ ।**
**ಶೃಣ್ವತ್ರ ತ್ವಾದೃಶೋ ವೃತ್ತಂ ಪ್ರಾಜ್ಞಂಮನ್ಯಸ್ಯ**
**ಕಸ್ಯಚಿತ್ ॥೭೯॥**

ನಾನು ನಿಮ್ಮ ಮಾತುಗಳಿಂದ ಬ್ರಹ್ಮಾನಂದವನ್ನು ತಿಳಿದಿರುತ್ತೇನೆ. ಆದರೆ ನನಗೇಕೆ ಕೃತಾರ್ಥತೆ ಎನಿಸಿಲ್ಲ ? ಎಂದರೆ ಈ ವಿಷಯದಲ್ಲಿ ನಿನ್ನಂತೆಯೇ ಬಹು ಬುದ್ಧಿವಂತನೆಂದು ತಿಳಿದುಕೊಂಡವನೊಬ್ಬನ ಕಥೆ ಕೇಳು.

**ಚತುರ್ವೇದ ವಿದೇದೇಯಮಿತಿ ಶ್ರುಣ್ವನ್ನವೋಚತ ।**
**ವೇದಾಶ್ಚತ್ವಾರ ಇತ್ಯೇವಂ ವೇದ್ಮಿ ಮೇ ದೀಯತಾಂ ಧನವ್** ॥೮೦॥

ಈ ಎಲ್ಲ ದ್ರವ್ಯವನ್ನು ನಾಲ್ಕೂ ವೇದಗಳನ್ನು ಬಲ್ಲವನಿಗೆ ಕೊಡಬೇಕು. ಎಂಬ ಮಾತನ್ನು ಕೇಳಿದ ಒಬ್ಬನು 'ವೇದಗಳು ನಾಲ್ಕು' ಎಂಬುದನ್ನು ನಾನು ನಿಮ್ಮ ಮಾತುಗಳಿಂದಲೇ ಬಲ್ಲೆನು. ಆದುದರಿಂದ ನನಗೇ ಈ ದ್ರವ್ಯವನ್ನು ಕೊಟ್ಟುಬಿಡಿರಿ ಎಂದು ಹೇಗೆ ಹೇಳಿದನೋ ಅದರಂತೆಯೇ ಇದೆ ನಿನ್ನ ಮಾತು.

**ಸಂಖ್ಯಾಮೇವೈಷ ಜಾನಾತಿ ನ ತು ವೇದಾನಶೇಷತಃ ।**
**ಯದಿ ತರ್ಹಿ ತ್ವಮಪ್ಯೇವಂ ನಾಶೇಷಂ ಬ್ರಹ್ಮ ವೇತ್ಸಿ ಹಿ** ॥೮೧॥

ಇವನು ಸಂಖ್ಯೆಯನ್ನು ಮಾತ್ರ ತಿಳಿಯುತ್ತಾನೆ. ವೇದಗಳನ್ನು ಸಂಪೂರ್ಣವಾಗಿ ತಿಳಿಯುವದಿಲ್ಲ ಎನ್ನುವದಾದರೆ ಅವನಂತೆ ನೀನೂ ಬ್ರಹ್ಮವನ್ನು ಪೂರ್ಣವಾಗಿ ತಿಳಿಯುವದಿಲ್ಲ.

—ಆನಂದರೂಪವಾದ ಬ್ರಹ್ಮದಲ್ಲಿ ಅಜ್ಞಾತವಾದ ಅಂಶವು ಇಲ್ಲವಾದುದರಿಂದ 'ನನಗೆ ಪೂರ್ಣ ಬ್ರಹ್ಮದ ಜ್ಞಾನವಿಲ್ಲ' ಎನ್ನುವದು ಯೋಗ್ಯವಲ್ಲ.

**ಅಖಂಡೈಕರಸಾನಂದೇ ಮಾಯಾತತ್ಕಾರ್ಯ ವರ್ಜಿತೇ ।**
**ಅಶೇಷತ್ವಸಶೇಷತ್ವೆ ವಾರ್ತಾವಸರ ಏವ ಕಃ** ॥೮೨॥

ಮಾಯೆಯೂ, ಅದರ ಕಾರ್ಯವಾದ ಜಗತ್ತೂ ಇಲ್ಲದ ಅಖಂಡವೂ-ಏಕವೂ-ರಸಾನಂದವೂ ಆದ ಬ್ರಹ್ಮದಲ್ಲಿ ಪೂರ್ಣ (ಅಶೇಷತ್ವ) ಮತ್ತು ಭಾಗವೆಂಬ ಶಬ್ದಗಳಿಗೆ ಆಸ್ಪದವೆಲ್ಲಿ ?

ಬ್ರಹ್ಮಜ್ಞಾನದಲ್ಲಿಯೂ ಅಶೇಷತ್ವ ಮುಂ. ವನ್ನು ತೋರಿಸುವದಕ್ಕೆ "ನಾನು ಬ್ರಹ್ಮವನ್ನು ತಿಳಿಯುತ್ತೇನೆ.' ಎನ್ನುವ ವಾದಿಗೆ ಪ್ರಶ್ನೆ ಮಾಡುತ್ತಾರೆ.

**ಶಬ್ದಾನೇನ ಪಠಸ್ಯಾಹೋ ತೇಷಾಮರ್ಥಂ ಚ ಪಶ್ಯಸಿ ।**
**ಶಬ್ದಪಾಠೇಽರ್ಥಬೋಧಸ್ತೇ ಸಂಪಾದ್ಯತ್ವೇನ ಶಿಷ್ಯತೇ** ॥೮೩॥

ಬ್ರಹ್ಮವು ಅಖಂಡೈಕರಸ–ಅದ್ವಿತೀಯ–ಸಚ್ಚಿದಾನಂದರೂಪ ಇತ್ಯಾದಿ ಶಬ್ದಗಳನ್ನು ಮಾತ್ರ ಪಠಿಸುವೆಯೋ ಅಥವಾ ಬ್ರಹ್ಮವು ಸ್ವಗತಾದಿ ಭೇದ ಶೂನ್ಯವಾಗಿದೆ ಎಂಬ ಅರ್ಥವನ್ನೇನಾದರೂ ಲಕ್ಷಿಸುವೆಯೋ ? ಕೇವಲ

ಶಬ್ದಗಳನ್ನು ಮಾತ್ರ ಪಠಿಸುವೆನೆಂದು ಅಂದರೆ ಅರ್ಥವನ್ನು ತಿಳಿದುಕೊಳ್ಳುವ ಕಾರ್ಯವು ಉಳಿದಂತಾಯಿತು.

**ಅರ್ಥೇ ವ್ಯಾಕರಣಾದ್ ಬುದ್ಧೇ ಸಾಕ್ಷಾತ್ಕಾರೋಽವಶಿಷ್ಯತೇ।**
**ಸ್ವಾತ್ಯತಾರ್ಥಸ್ತ್ವಧೀರ್ಯಾವತ್ ತಾವದ್ಗುರುಮುಪಾ-**
**ಸ್ವಭೋಃ ॥೮೪॥**

ವ್ಯಾಕರಣದಿಂದ ಅರ್ಥ ಜ್ಞಾನವಾಗಿದ್ದರೆ ಸಾಕ್ಷಾತ್ಕಾರವು ಉಳಿದುಕೊಂಡಿತು. ಆದುದರಿಂದ ಕೃತಾರ್ಥತೆಯು ತಲೆದೋರುವವರೆಗೆ ನೀನು ಗುರುಸೇವೆಯನ್ನು ಮಾಡು.

**ಆಸ್ತಾಮೇತದ್ಯತ್ರ ಯತ್ರ ಸುಖಂ ಸ್ಯಾದ್ವಿಷಯೈರ್ವಿನಾ।**
**ತತ್ರ ಸರ್ವತ್ರ ವಿದ್ಧ್ಯೇತಾಂ ಬ್ರಹ್ಮಾನಂದಸ್ಯ ವಾಸನಾಮ್॥೮೫॥**

ಇದಿರಲಿ. ಯಾವ ಯಾವ ಸಮಯದಲ್ಲಿ ವಿಷಯಗಳ ಸಂಬಂಧ ವಿಲ್ಲದೇ ಸುಖವೆನಿಸುವದೋ ಆಯಾ ಸಮಯದಲ್ಲಿ ಅದು ಬ್ರಹ್ಮಾನಂದದ ವಾಸನೆ ಎಂದು ತಿಳಿ.

—ಆನಂದವು ಮೂರು ಬಗೆಯಾಗಿದೆ ಎಂದು ನಿಯಮ ಮಾಡುವ ದಕ್ಕೋಸ್ಕರ ಹಿಂದೆ ೪೪ ನೇ ಶ್ಲೋ. ಹೇಳಿದ ವಿಷಯಾನಂದವನ್ನು ಅನುವಾದ ಮಾಡುತ್ತಾರೆ.

**ವಿಷಯೇಷ್ವಭಿಲಬ್ಧೇಷು ತದಿಚ್ಛೋಪರಮೇಸತಿ।**
**ಅಂತರ್ಮುಖಮನೋವೃತ್ತಾವಾನಂದಃ ಪ್ರತಿಬಿಂಬತಿ ॥೮೬॥**

ಯಾವಾಗ ಹೂ ಗಂಧ–ಸ್ತ್ರೀ ಮುಂತಾದ ವಿಷಯಗಳು ದೊರೆಯುವವೋ ಆಗ ಮನಸ್ಸು ಅಂತರ್ಮುಖವಾಗುವದು. ಮತ್ತು ಹಾಗೆ ಅಂತರ್ಮುಖವಾದ ಮನೋವೃತ್ತಿಯಲ್ಲಿ ಸ್ವಾತ್ಮಾನಂದವು ಪ್ರತಿಬಿಂಬಿತವಾಗುವದು. ಇದಕ್ಕೇ ವಿಷಯಾನಂದವೆನ್ನುವರು.

**ಬ್ರಹ್ಮಾನಂದೋ ವಾಸನಾ ಚ ಪ್ರತಿಬಿಂಬ ಇತಿತ್ರಯಮ್।**
**ಅಂತರೇಣ ಜಗತ್ಯಸ್ಮಿನ್ನಾನಂದೋ ನಾಸ್ತಿ ಕಶ್ಚನ ॥೮೭॥**

ಬ್ರಹ್ಮಾನಂದ–ವಾಸನಾನಂದ–ಮತ್ತು ವಿಷಯಾನಂದ ಈ ಮೂರು ಆನಂದಗಳನ್ನು ಬಿಟ್ಟರೆ ಜಗತ್ತಿನಲ್ಲಿ ಮತ್ತೆ ಬೇರೆ ಆನಂದಗಳಿಲ್ಲ.

(ಹಿಂದಿನ ಪ್ರಕರಣಗಳಲ್ಲಿ ಹಾಗೂ ಮುಂದಿನ ಪ್ರಕರಣಗಳಲ್ಲಿ ಆನಂದದ ಬೇರೆ ಬೇರೆ ಪ್ರಕಾರಗಳನ್ನು ಹೇಳಿದ್ದು ಇಲ್ಲಿಮಾತ್ರ ಹೀಗೆ ಹೇಳಿರುವುದು ಚಮತ್ಕಾರಿಕವೆನಿಸಬಹುದು. ಆದರೆ ಮೇಲೆ ಹೇಳಿದ ಮುಖ್ಯ ಮೂರು ಪ್ರಕಾರಗಳನ್ನರಿತರೆ ಉಳಿದ ವಿಭಾಗಗಳೆಲ್ಲ ಇವುಗಳಲ್ಲಿಯೇ ಅಂತರ್ಭೂತ ವಾಗುತ್ತವೆ ಎಂದು ಕಂಡುಬರುವದು.)

—ಈ ಅಧ್ಯಾಯದಲ್ಲಿ ಬ್ರಾಹ್ಮನಂದದ ವಿವೇಚನೆನಡೆದಿದ್ದು ಬೇರೆ ಆನಂದಗಳ ವಿಷಯವನ್ನು ಹೇಳುವುದೆಂದರೆ ವಿಷಯಾಂತರವಾಗುವದು. ಎಂದರೆ ಈ ಎರಡು ಆನಂದಗಳು ಬ್ರಹ್ಮಾನಂದದಿಂದಲೇ ಹುಟ್ಟಿದವು ಆದುದ ರಿಂದ ಇವುಗಳ ವಿವೇಚನೆಯು ಬ್ರಹ್ಮಾನಂದದ ಜ್ಞಾನಕ್ಕೆ ಉಪಯುಕ್ತ ವಾಗಿರುವದು.

**ತಥಾ ಚ ವಿಷಯಾನಂದೋ ವಾಸನಾನಂದ ಇತ್ಯಮೂ ।**
**ಆನಂದೌ ಜನಯನ್ನಾಸ್ತೇ ಬ್ರಹ್ಮಾನಂದಃ ಸ್ವಯಂಪ್ರಭಃ॥೮೮॥**

ಯಾವ ಸ್ವಯಂ ಪ್ರಕಾಶವಾದ ಆನಂದವು ವಿಷಯಾನಂದವನ್ನು ಮತ್ತು ವಾಸನಾನಂದವನ್ನು ಹುಟ್ಟಿಸುತ್ತಿರುವುದೋ ಅದು ಬ್ರಹ್ಮಾನಂದವು.

—ಹಿಂದೆ ಹೇಳಿರುವುದನ್ನು ಅನುವಾದ ಮಾಡಿ ಮುಂದಿನದನ್ನು ಆರಂಭಿಸುತ್ತಾರೆ.

**ಶ್ರುತಿಯುಕ್ತ್ಯನುಭೂತಿಭ್ಯಃ ಸ್ವಪ್ರಕಾಶಚಿದಾತ್ಮಕೇ ।**
**ಬ್ರಹ್ಮಾನಂದೇ ಸುಪ್ತಿಕಾಲೇ ಸಿದ್ಧೇ ಸತ್ಯನ್ಯದಾ ಶ್ರುಣು ॥೮೯॥**

ಹಿಂದೆ ಹೇಳಿದ ಶ್ರುತಿ–ಯುಕ್ತಿ ಮತ್ತು ಅನುಭವಳಿಂದ ಗಾಢನಿದ್ರೆಯಲ್ಲಿ ತನ್ನನ್ನುತಾನೇ ಬೆಳಗುವಚೈತನ್ಯರೂಪ ಬ್ರಹ್ಮಾನಂದದ ಸಿದ್ಧಿಯಾಗಲು ಎಚ್ಚರ ಕಾಲದಲ್ಲಿ ಬ್ರಹ್ಮಾನಂದ ದೊರೆಯುವದಕ್ಕೆ ಹೇಳುವ ಉಪಾಯಗಳನ್ನು ಕೇಳು.

**ಯ ಆನಂದಮಯಃ ಸುಪ್ತೌ ಸ ವಿಜ್ಞಾನಮಯಾತ್ಮತಾಮ್ ।**
**ಗತ್ವಾ ಸ್ವಪ್ನಂ ಪ್ರಬೋಧಂ ವಾ ಪ್ರಾಪ್ನೋತಿ ಸ್ಥಾನ ಭೇದತಃ॥೯೦॥**

ಗಾಢನಿದ್ರೆಯಲ್ಲಿ ಆನಂದಮಯನಾದ ಜೀವನು ಬುದ್ಧಿಯ ಉಪಾಧಿ ಯನ್ನು ಹೊಂದಿ ಬೇರೆ ಬೇರೆ ಸ್ಥಳಗಳಸಂಬಂಧದಿಂದ ಕನಸನ್ನಾಗಲೀ, ಎಚ್ಚರವನ್ನಾಗಲೀ ಕರ್ಮಾನುಸಾರವಾಗಿ ಪಡೆಯುವನು.

**ನೇತ್ರೇಜಾಗರಣಂ ಕಂಠೇ ಸ್ವಪ್ನಃಸುಪ್ತಿಹೃದಂಬುಜೇ ।**
**ಆಪಾದಮಸ್ತಕಂ ದೇಹಂ ವ್ಯಾಪ್ಯ ಜಾಗರ್ತಿಚೇತನಃ ॥೯೧॥**

ಕಣ್ಣಿನಸ್ಥಾನದಲ್ಲಿದ್ದು ಎಚ್ಚರ, ಕಂಠದಲ್ಲಿದ್ದು ಕನಸು, ಹೃದಯಕಮಲದಲ್ಲಿ ಗಾಢ ನಿದ್ದೆಯು ಉಂಟಾಗುವದು. ಅದರಂತೆ ಕಾಲ್ಬೆರಳಿನಿಂದ ಹಿಡಿದು ತಲೆಯವರೆಗೆ ವ್ಯಾಪಿಸಿ ಎಚ್ಚರ ಪಡೆಯುತ್ತಾನೆ.

—ವ್ಯಾಪಿಸಿ, ಎಂಬುದರ ಅರ್ಥವನ್ನು ದೃಷ್ಟಾಂತದಿಂದ ತಿಳಿಸುತ್ತಾರೆ

**ದೇಹಾತಾದಾತ್ಮ್ಯಮಾಪನ್ನಸ್ತಪ್ತಾಯಃ ಪಿಂಡವತ್ತತಃ ।**
**ಅಹಂ ಮನುಷ್ಯ ಇತ್ಯೇವಂನಿಶ್ಚಿತ್ಯೈವಾವತಿಷ್ಠತೇ ॥೯೨॥**

ಕಾದಕಬ್ಬಿಣದ ಗುಂಡು ಕೆಂಡದೊಡನೆ ಒಂದಾದಂತೆ ಜೀವನು ದೇಹದೊಡನೆ ಒಂದಾಗಿ ಆದೇಹ ಧರ್ಮಗಳಾದಮನುಷ್ಯತ್ವವೇ ಮೊದಲಾದವನ್ನು ಮೈಮೇಲೆ ಹಾಕಿಕೊಂಡು ನಿಜವಾಗಿ ನಾನು ಮನುಷ್ಯನು ಎಂದು ಸಂಶಯವಿಲ್ಲದೇ ಇರುವನು.

—ಹೀಗೆ ದೇಹತಾದಾತ್ಮ್ಯವನ್ನು ಹೊಂದಿದ್ದರಿಂದ ಉಂಟಾಗುವ ಬೇರೆ ಅವಸ್ಥೆಗಳು.

**ಉದಾಸೀನಃ ಸುಖೀದುಃಖೀತ್ಯವಸ್ಥಾತ್ರಯಮೇತ್ಯಸೌ ।**
**ಸುಖದುಃಖೇ ಕರ್ಮಕಾರ್ಯೆ ತ್ವೌದಾಸೀನ್ಯಂ ಸ್ವಭಾವತಃ ॥೯೩॥**

ಅವನು ಉದಾಸೀನ–ಸುಖಿ–ದುಃಖಿ ಎಂಬ ಮೂರು ಅವಸ್ಥೆಗಳನ್ನು ಹೊಂದುವನು. ಇದರಲ್ಲಿಯ ಸುಖ–ದುಃಖಗಳು ಪುಣ್ಯ–ಪಾಪರೂಪೀಕರ್ಮದ ಫಲಗಳು. ಔದಾಸೀನ್ಯವು ಸ್ವಾಭಾವಿಕವಾದದು.

—ಈ ಸುಖ–ದುಃಖ ಮೊದಲಾದವುಗಳ ವಿವರವಾದ ವಿವೇಚನೆ.

**ಬಾಹ್ಯಭೋಗಾನ್ಮನೋರಾಜ್ಯಾತ್ ಸುಖ-ದುಃಖೇದ್ವಿಧಾಮತೇ।**
**ಸುಖ-ದುಃಖಾಂತರಾಲೇಷು ಭವೇತ್ತೂಷ್ಣೀಮವಸ್ಥಿತಿಃ ॥೯೪॥**

ಹೊರಗಿನ ವಿಷಯಗಳಿಂದ ದೊರೆಯುವಂಥವು. ಮನೋರಾಜ್ಯದಲ್ಲಿ ದೊರೆಯುವಂಥವು–ಹೀಗೆ ಸುಖ–ದುಃಖಗಳು ಎರಡು ಬಗೆಯವೆಂದು ತಿಳಿಯುವರು. ಈ ಹೊರಗಿನ ಅನುಭವ

ಗಳಿಗೂ ಒಳಗಿನ ಅನುಭವಗಳಿಗೂ ನಡುವಿನದು ಉದಾಸೀನವೆಂಬ ಅವಸ್ಥೆ ಅಥವಾ ಸುಮ್ಮನಿರುವಿಕೆ ಎಂಬಸ್ಥಿತಿ.

—ಯಾವ ಆನಂದವನ್ನು ಹೇಳುವುದಕ್ಕೆ ಇಷ್ಟೆಲ್ಲ ಹೇಳಿದರೋ ಅದನ್ನು ತಿಳಿಸುತ್ತಾರೆ.

**ನ ಕಾಪಿ ಚಿಂತಾ ಮೇಽಸ್ತ್ಯದ್ಯ ಸುಖಮಾಸ ಇತಿ ಬ್ರುವನ್ ।**
**ಔದಾಸೀನ್ಯೇ ನಿಜಾನಂದಭಾನಂ ವಕ್ತ್ಯಖಿಲೋ ಜನಃ ॥೯೫॥**

ಈಗ ನನಗೆ ಯಾವ ಚಿಂತೆಯೂ ಇಲ್ಲ, ನಾನು ಸುಖವಾಗಿ ಕುಳಿತಿದ್ದೇನೆ, ಎಂದು ಹೇಳುವ ಜನರೆಲ್ಲರು ಉದಾಸೀನತೆಯಲ್ಲಿ ನಿಜಾನಂದದ ಸ್ಫುರಣವುಂಟೆಂದು ಹೇಳುವರು.

—ಉದಾಸೀನ ಅವಸ್ಥೆಯಲ್ಲಿರುವ ಆನಂದಕ್ಕೆ ನಿಜಾನಂದವೆಂದುಬಿಟ್ಟರೆ ಅದು ಬ್ರಹ್ಮಾನಂದವೇ ಆದಂತಾಯಿತು. ಈಗ ಹಿಂದೆ ಹೇಳಿದ ವಾಸನಾನಂದವೆಲ್ಲಿ ಹೋಯಿತು ?

**ಅಹಮಸ್ಮೀತ್ಯಹಂಕಾರ ಸಾಮಾನ್ಯಾಚ್ಛಾದಿತತ್ವತಃ ।**
**ನಿಜಾನಂದೋ ನ ಮುಖ್ಯೋಽಯಂ ಕಿಂತ್ವಸೌ ತಸ್ಯ ವಾಸನಾ ॥೯೬॥**

ಅದು ಮುಖ್ಯವಾದ ನಿಜಾನಂದವಲ್ಲ. ಯಾಕೆಂದರೆ ಆಗ ನಾನು ಇಂಥವನೆಂಬ ವಿಶೇಷಾಕಾರದ್ದಲ್ಲದಿದ್ದರೂ "ನಾನು ಇದ್ದೇನೆ" ಎಂಬ ಸಾಮಾನ್ಯವಾದ ಅಹಂಕಾರದಿಂದ ಅದು ಮುಚ್ಚಿ ಹಾಕಿರುವದರಿಂದ ಇದು ಮುಖ್ಯವಾದ ಆನಂದವಲ್ಲ, ಅಂದರೆ ಅದು ನಿಜಾನಂದದ ವಾಸನೆಯು.

—ಇದಕ್ಕೆ ದೃಷ್ಟಾಂತ.

**ನೀರಪೂರಿತಭಾಂಡಸ್ಯ ಬಾಹ್ಯೇಶೈತ್ಯಂ ನ ತಜ್ಜಲಮ್ ।**
**ಕಿಂತು ನೀರಗುಣಸ್ತೇನ ನೀರಸತ್ತಾನುಮೀಯತೇ ॥೯೭॥**

ನೀರು ತುಂಬಿದ ಪಾತ್ರೆಯನ್ನು ಹೊರಗಿನಿಂದ ಮುಟ್ಟಿದರೆ ಅನುಭವಕ್ಕೆ ಬರುವ ಶೈತ್ಯವು ಪ್ರತ್ಯಕ್ಷವಾದ ನೀರಲ್ಲ. ಆದರೆ ಅದು ನೀರಿನ ಗುಣ. ಅದರ ಮೇಲಿಂದ ನೀರು ಇರುವದೆಂದು ಊಹಿಸಲು ಬರುತ್ತದೆ.

**ಯಥಾಯಥಾಪಹಂಕಾರೋ ವಿಸ್ಮೃತೋಽಭ್ಯಾಸಯೋಗತಃ ।**
**ತಾವತ್ತಾವತ್ ಸೂಕ್ಷ್ಮದೃಷ್ಟೇರ್ನಿಜಾನಂದೋಽನು-**
**ಮೀಯತೇ ॥೯೮॥**

ಅಭ್ಯಾಸದಿಂದ ಹೇಗೆ ಹೇಗೆ ಅಹಂಕಾರವು ಮರೆಯುವದೋ, ಅಷ್ಟು ಮಟ್ಟಿಗೆ ಸೂಕ್ಷ್ಮದೃಷ್ಟಿಯುಂಟಾಗುವದರಿಂದ ನಿಜಾನಂದದ ಅನುಮಾನವನ್ನು ಮಾಡಬಹುದು.

—ಈ ಬುದ್ಧಿ ಸೂಕ್ಷ್ಮತೆಯ ಸೀಮೆ ಯಾವುದು ? ಸಾಕ್ಷಾತ್ಕಾರವೇ ಎಂದು ಉತ್ತರ.

**ಸರ್ವಾತ್ಮನಾ ವಿಸ್ಮೃತಃ ಸನ್ಸೂಕ್ಷ್ಮತಾಂ ಪರಮಾಂ ವ್ರಜೇತ್ ।**
**ಅಲೀನತ್ವಾನ್ನ ನಿದ್ರೈಷಾ ತತೋ ದೇಹೋಽಪಿ ನೋಪತೇತ್ ॥೯೯॥**

ಅಹಂಕಾರವು ಎಂದರೆ ನಾನು-ನೀನು ಎಂಬ ವೃತ್ತಿಗಳು ಎಷ್ಟು ಮಟ್ಟಿಗೆ ಮರೆತು ಹೋಗುವವೋ ಅಷ್ಟುಮಟ್ಟಿಗೆ ಅಹಂಕಾರವು ಸೂಕ್ಷ್ಮತೆಯನ್ನು ಮುಟ್ಟುವದು. ಅಂದರೆ ಅದು ನಿದ್ರೆಯೇ ? ಅಲ್ಲ. ಆಗ ಎಲ್ಲ ವೃತ್ತಿಗಳು ಲಯವಾಗಿದ್ದರೂ ಅಂತಃಕರಣವು ಲಯವಾಗಿರುವದಿಲ್ಲ. ಆದುದರಿಂದ ಅದು ನಿದ್ರೆಯಲ್ಲ. ಬುದ್ಧಿಯು ಕಾರಣಸ್ವರೂಪದಿಂದ ಇರುವದೇ ನಿದ್ರೆ ಎಂದು ಆಚಾರ್ಯರು ಹೇಳಿರುವರು. ಆಗ ಅಂತಃಕರಣವು ಲಯವಾಗಿರುವದಿಲ್ಲ ಎಂಬುದಕ್ಕೆ ಗುರುತೇನು ? ಎಂದರೆ ದೇಹವು ನೆಲಕ್ಕೆ ಉರುಳಿಕೊಂಡಿರುವದಿಲ್ಲವೆಂಬುದೇ ಗುರುತು.

**ನ ದ್ವೈತಂ ಭಾಸತೇ ನಾಪಿ ನಿದ್ರಾ ತತ್ರಾಸ್ತಿ ಯತ್ಸುಖಮ್ ।**
**ಸ ಬ್ರಹ್ಮಾನಂದ ಇತ್ಯಾಹ ಭಗವಾನರ್ಜುನಂ ಪ್ರತಿ ॥೧೦೦॥**

ಯಾವಾಗ ತನಗೆ ಎರಡನೆಯದಾದ ಜಗತ್ತು ತೋರುವದಿಲ್ಲವೋ, ನಿದ್ರೆಯು ಬಂದಿರುವದಿಲ್ಲವೋ, ಆಗ ದೊರೆಯುವ ಸುಖವು ಬ್ರಹ್ಮಾನಂದವೆಂದು ಶ್ರೀ ಕೃಷ್ಣನು ಅರ್ಜುನನಿಗೆ ಗೀತೆಯಲ್ಲಿ ಹೇಳಿರುವನು.

—ಗೀತೆಯ ಆ ಶ್ಲೋಕವು ಇದು.

**ಶನೈಃ ಶನೈರುಪರಮೇದ್ ಬುದ್ಧ್ಯಾಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥೧೦೧॥**

ಮೆಲ್ಲ ಮೆಗಗೆ ಧೈರ್ಯದಿಂದ ಕೂಡಿದ ಬುದ್ಧಿಯಿಂದ ಎಂದರೆ ಸಾಧನ ಸೋಪಾನಗಳನ್ನೇರುತ್ತ ಸಾವಕಾಶವಾಗಿ ಬುದ್ಧಿ ನಿಶ್ಚಯವನ್ನು ಹೊಂದಿ ಮನಸ್ಸನ್ನು ಕದಲದಂತೆ ಮಾಡಬೇಕು. ಆಮೇಲೆ ಆತ್ಮನಲ್ಲಿ ಮನಸ್ಸನು ನೆಲೆಗೊಳಿಸಿ ಯಾವುದನ್ನೂ ಚಿಂತಿಸದಿರಬೇಕು.

—ಇಲ್ಲಿ ಮೊದಲಿನ ಕರ್ತವ್ಯವೇನು ? ಭಗವಂತನೇ ಹೇಳುತ್ತಾನೆ.

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥೧೦೨॥**

ಸ್ವಾಭಾವಿಕವಾಗಿಯೇ ಮನಸ್ಸು ಚಂಚಲವೂ ಅಸ್ಥಿರವೂ ಆಗಿದೆ. ಹಾಗೆ ಹರಿದಾಡುತ್ತ ಅದು ಎಲ್ಲೆಲ್ಲಿ ಹೋಗುವದೋ ಆ ವಿಷಯದಿಂದ ಅದನ್ನು ತಿರುಗಿಸಿ ವೈರಾಗ್ಯ ಭಾವನೆಯಿಂದ ಆತ್ಮದ ಸ್ವಾಧೀನ ಮಾಡಬೇಕು.

—ಮನಸ್ಸು ಶಾಂತವಾದರೆ ಏನಾಗುವದೆಂಬುದನ್ನು ಹೇಳುತ್ತಾರೆ.

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥೧೦೩॥**

ಈ ರೀತಿ ಆತ್ಮನಲ್ಲಿರುವ ಮನಸ್ಸನ್ನು ನೆಲೆಗೊಳಿಸಿದವನಿಗೆ ರಾಗ-ದ್ವೇಷ ಮುಂತಾದ ರಜೋಗುಣದ ದೋಷಗಳೆಲ್ಲ ಹೋಗಿ ಅತ್ಯಂತ ಶಾಂತ ಮನಸ್ಕನಾದ ಯೋಗಿಗೆ ಪಾಪಾರಹಿತವೂ, ಅತ್ಯಂತ ಶ್ರೇಷ್ಠವೂ ಆದ ಸುಖವು ದೊರೆಯುವದು.

—ಇದರ ವಿವರಣಯುಕ್ತ ಶ್ಲೋಕಗಳು.

**ಯತ್ರೋಪರಮತೇಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೧೦೪॥**

**ಸುಖಮಾತ್ಯಂತಿಕಂ ಯತ್ತದ್‌ಬುದ್ಧಿಗ್ರಾಹ್ಯಮತೀಂದ್ರಿಯಮ್ ।**
**ವೇತ್ತಿಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ವತಃ ॥೧೦೫॥**

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್‌ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥೧೦೬॥**

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗ ಸಂಜ್ಞಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋऽನಿರ್ವಿಣ್ಣ ಚೇತಸಾ ॥೧೦೭॥**

ದೃಢವಾದ ಯೋಗಾಭ್ಯಾಸದಿಂದ ಏಕಾಗ್ರವಾದ ಮನಸ್ಸು ಆತ್ಮನಲ್ಲಿ ಸಮಾಧಾನ ಪಡೆಯುವುದು. ಮತ್ತು ಅಲ್ಲಿ ಸತ್ವಪ್ರಧಾನವಾದ ಶುದ್ಧಾಂತಃ ಕರಣದಿಂದ ಆತ್ಮನನ್ನು ನೋಡುತ್ತ ತನ್ನಲ್ಲಿಯೇ ತಾನು ಸಂತೋಷ ಗೊಳ್ಳುವದು.

ಆ ಸುಖವು ಎಲ್ಲ ಸುಖಗಳಿಗೂ ಕೊನೆಯದು ಮತ್ತು ಯಾವ ಇಂದ್ರಿಯಗಳ ನೆರವೂ ಇಲ್ಲದೇ ಬುದ್ಧಿಯಿಂದ ಗ್ರಹಿಸುವಂಥದು. ಇದನ್ನರಿತ ಸಾಧಕನು ಒಮ್ಮೆ ಅಲ್ಲಿ ನೆಲೆಯಾದ ಸಾಧಕನು ಆತ್ಮತತ್ವದಿಂದ ಕದಲುವದಿಲ್ಲ.

ಹೀಗೆ ಆತ್ಮಲಾಭ ಮಾಡಿ ಕೊಂಡವನು ಅದಕ್ಕಿಂತ ಬೇರಾವುದನ್ನೂ ಹೆಚ್ಚಿನ ಲಾಭವೆಂದು ಎಣಿಸುವುದಿಲ್ಲ. ಮತ್ತು ಬೇಕಾದಂಥ ದೊಡ್ಡ ದುಃಖವು ಬಂದರೂ ಚಂಚಲನಾಗುವದಿಲ್ಲ.

ಸಾಂಸಾರಿಕ ದುಃಖಗಳು ಇಲ್ಲದಿರುವ ಸ್ಥಿತಿಯೇ ಯೋಗವೆಂದು ತಿಳಿಯಬೇಕು. ಬೇಸರವಿಲ್ಲದ ಘಟ್ಟಿ ಮನಸ್ಸಿನಿಂದ ಈ ಯೋಗವನ್ನು ಪಡೆಯಬೇಕು.

—ಹೀಗೆ ಹೇಳಿದ್ದರ ಉಪಸಂಹಾರ

**ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥೧೦೮॥**

ಹೀಗೆ ಯಾವಾಗಲೂ ಯೋಗವನ್ನು ಸಾಧಿಸುತ್ತಿರುವ ಯೋಗಿಯು ಪಾಪಗಳನ್ನೆಲ್ಲ ಕಳೆದುಕೊಂಡು ಸುಲಭವಾಗಿ ನಿರತಿಶಯ ಸುಖವೆನಿಸುವ ಬ್ರಹ್ಮದೊಡನೆ ಒಂದುಗೂಡುತ್ತಾನೆ.

—ಬೇಸರವಿಲ್ಲದೇ ಯೋಗಾಭ್ಯಾಸ ಮಾಡಿದರೆ ಅವಶ್ಯ ಫಲ ದೊರೆಯುತ್ತದೆ ಎಂದು ದೃಷ್ಟಾಂತಪೂರ್ವಕ ಹೇಳುತ್ತಾರೆ.

**ಉತ್ಸೇಕ ಉದಧೇರ್ಯದ್ವತ್ ಕುಶಾಗ್ರೇಣೈಕಬಿಂದುನಾ ।**
**ಮನಸೋ ನಿಗ್ರಹಸ್ತದ್ವದ್ಭವೇದಪರಿ ಖೇದತಃ ॥೧೦೯॥**

ದರ್ಭದ ತುದಿಯಿಂದ ಒಂದೊಂದೇ ಹನಿಯಂತೆ ಸಮುದ್ರದ ನೀರನ್ನು ಬೇಸರಿಯದೇ ಹೊರಚಲ್ಲುತ್ತ ಬಂದರೆ ಕಾಲಾಂತರದಲ್ಲಿ ಸಮುದ್ರವು ಒಣಗುತ್ತದೆ. ಅದರಂತೆ ಬೇಸರಗೊಳ್ಳದೇ ಮನಸ್ಸನ್ನು ನಿಗ್ರಹಿಸುತ್ತ ಬರಲು ಕಾಲಾಂತರದಲ್ಲಿ ಅದು ಸಿದ್ಧವಾಗುವದು.

( ಸಮುದ್ರದ ತೆರೆಗಳಿಂದ ತನ್ನ ತತ್ತಿಗಳನ್ನು ಮುಳಗಿಸಿಕೊಂಡ ಒಂದು ಟಿಟ್ಟಿಭವು ಸಮುದ್ರನ ಕೃತಿಗೆ ಕಸಲಿ ತನ್ನ ಚುಂಚಿನಿಂದ ಸಮುದ್ರದ ನೀರನ್ನು ಹೊರಚಲ್ಲ ಹತ್ತಿತು. ಅದನ್ನು ಕಂಡ ನಾರದರು ಗರುಡನ ಬಳಿಗೆ ಬಂದು ಪಕ್ಷಿಕುಲದ ಮರ್ಯಾದೆ ಉಳಿಸು ಎನ್ನಲು ಗರುಡನು ತನ್ನ ರೆಕ್ಕೆಬೀಸಿ ಸಮುದ್ರವನ್ನು ಅಲ್ಲೋಲ ಕಲ್ಲೋಲ ಮಾಡಿದನು. ಅಗ ಸಮುದ್ರನು ಗಾಬರಿಯಾಗಿ ಆ ಟಿಟ್ಟಿಭದ ತತ್ತಿಗಳನ್ನು ಮರಳಿಕೊಟ್ಟನು ಎಂಬ ಕಥೆಯು ಕೂಡ ಇಲ್ಲಿ ದೃಷ್ಟಾಂತವಾಗುವಂತಿದೆ. )

— ಮನಃಶಾಂತಿಯಿಂದ ಬ್ರಹ್ಮಸುಖವು ದೊರೆಯುತ್ತದೆಂದು ಬರಿ ಗೀತೆಯಲ್ಲಷ್ಟೇ ಅಲ್ಲ ಮೈತ್ರಾಯಣೀ ಉಪನಿಷತ್ತಿನಲ್ಲಿಯೂ ಹೇಳಿದ್ದಾರೆ ಎನ್ನುವರು.

**ಬೃಹದ್ರಥಸ್ಯ ರಾಜರ್ಷೇಃ ಶಾಕಾಯನ್ಯೋ ಮುನಿಃ ಸುಖಮ್।**
**ಪ್ರಾಹ ಮೈತ್ರಾಖ್ಯಶಾಖಾಯಾಂ ಸಮಾಧ್ಯುಕ್ತಿಪುರಃ**
**ಸರಮ್ ॥೧೧೦॥**

ಮೈತ್ರಾಯಣೀಯನೆಂಬ ಉಪನಿಷತ್ತಿನಲ್ಲಿ ಶಾಕಾಯನ್ಯನೆಂಬ ಋಷಿಯು ಶಿಷ್ಯಭಾವದಿಂದ ಶರಣುಬಂದ ಬ್ರಹದ್ರಥನೆಂಬ ರಾಜರ್ಷಿಗೆ ಮನಸ್ಸು ಬಿಗಿಹಿಡಿಯಬೇಕೆಂದು ತಿಳಿಸಿ ಆನಂತರ ಬ್ರಹ್ಮಾನಂದವನ್ನು ಹೇಳಿದನು.

**ಯಥಾ ನಿರಿಂಧನೋ ವಹ್ನಿಃ ಸ್ವಯೋನಾವುಪಶಾಮ್ಯತಿ ।**
**ತಥಾ ವೃತ್ತಿಕ್ಷಯಾಚ್ಚಿತ್ತಂ ಸ್ವಯೋನಾವುಪಶಾಮ್ಯತಿ ॥೧೧೧॥**

ಕಟ್ಟಿಗೆಯನ್ನು ಸುಟ್ಟು ಮುಗಿಸಿದಮೇಲೆ ಬೆಂಕಿಯು ತನ್ನ ಕಾರಣವೆನಿಸಿದ ಮೂಲ ತೇಜೋರೂಪದಲ್ಲಿ ಲೀನವಾಗುತ್ತದೆ. ಅಂದರೆ ಉರಿ ಹೊಗೆ ಮುಂತಾದ ವಿಶೇಷಾಕಾರಗಳನ್ನು ಬಿಟ್ಟು ಸಾಮಾನ್ಯ ತೇಜೋರೂಪವಾಗಿ ಉಳಿಯುತ್ತದೆ. ಅದರಂತೆ ಮನಸ್ಸು ನಿರೋಧ ಸಮಾಧಿಯ ಅಭ್ಯಾಸದಿಂದ

ವೃತ್ತಿಗಳೆಲ್ಲ ಶಾಂತವಾಗಲು ತನ್ನ ಕಾರಣವಾದ ಸತ್ವಗುಣದಲ್ಲಿ ಅವಿದ್ಯಾ ಮಾತ್ರವಾಗಿ ಉಳಿಯುತ್ತದೆ.

**ಸ್ವಯೋನಾವುಪಶಾಂತಸ್ಯ ಮನಸಃ ಸತ್ಯಕಾಮಿನಃ ।**
**ಇಂದ್ರಿಯಾರ್ಥವಿಮೂಢಸ್ಯಾನೃತಾಃ ಕರ್ಮವಶಾನುಗಾಃ॥೧೧೨॥**

ಸತ್ಯಸ್ವರೂಪನಾದ ಬ್ರಹ್ಮನನ್ನು ಬಯಸುವ ತನ್ನ ಕಾರಣದಲ್ಲಿ ಲೀನ ವಾದ ಅಂದರೆ ವಿಷಯವಿಮುಖವಾದ ಮನಸ್ಸಿಗೆ ಅದರ ಪುಣ್ಯ-ಪಾಪರೂಪ ಕರ್ಮಕ್ಕೆ ತಕ್ಕಹಾಗೆ ಬರುವ ಸುಖದುಃಖಗಳು ಮತ್ತು ವಿಷಯಗಳು ಸುಳ್ಳು ಎನಿಸುವವು.

—ಮನಸ್ಸು ಶಾಂತವಾಗುವದರಿಂದ ಜಗತ್ತು ಮಿಥ್ಯೆ ಎನಿಸುತ್ತದೆ ಎಂಬುದು ಸರಿಯಲ್ಲ. ಯಾಕಂದರೆ ಮನಸ್ಸು ಜಗತ್ತಿನ ಉಪಾದಾನ ಕಾರಣವಲ್ಲ.

**ಚಿತ್ತಮೇವ ಹಿ ಸಂಸಾರಸ್ತತ್ಪ್ರಯತ್ನೇನ ಶೋಧಯೇತ್ ।**
**ಯಚ್ಚಿತ್ತಸ್ತನ್ಮಯೋ ಮರ್ತ್ಯೋ ಗುಹ್ಯಮೇತತ್-**
**ಸನಾತನಮ್ ॥೧೧೩॥**

ಚಿತ್ತ ಅಂದರೆ ಮನಸ್ಸೇ ಸಂಸಾರವು. ಅಂದರೆ ಸಂಸಾರದ ಸುಖ-ದುಃಖಗಳಿಗೆ ಕಾರಣವಾಗಿದೆ. ಆದುದರಿಂದ ಅದನ್ನು ವೈರಾಗ್ಯಾದಿಗಳ ಅಭ್ಯಾಸದಿಂದ ಏಕಾಗ್ರಗೊಳಿಸಬೇಕು. ಮನಸ್ಸು ಯಾವದರಲ್ಲಿ ಆಸಕ್ತಿ ತಾಳುವದೋ ಮನುಷ್ಯನು ಕೂಡ ತದ್ರೂಪನಾಗುತ್ತಾನೆ. ಇದೊಂದು ನಿಜವಾದ ರಹಸ್ಯವಾಗಿದೆ. ಅನಾದಿಯಾದ ಮಾತೆನಿಸಿದೆ.

—ಅನಾದಿ ಕಾಲದಿಂದ ನಡೆದ ಅನೇಕ ಜನ್ಮಗಳಲ್ಲಿ ಘಟಿಸಿದ ಪುಣ್ಯ-ಪಾಪರೂಪವಾದ ಸುಖ-ದುಃಖಗಳನ್ನು ಕೊಡುವ ಕರ್ಮಗಳಿರುವವರೆಗೆ ಚಿತ್ತ ಶುದ್ಧಿಯಾದರೇನಾಯಿತು ? ಅದರಿಂದ ಸಂಸಾರ ನಿವೃತ್ತಿ ಇಲ್ಲ ಎಂದರೆ ಪ್ರಸನ್ನ ಚಿತ್ತದಿಂದ ಮಾಡುವ ಬ್ರಹ್ಮಾನುಸಂಧಾನವು ಎಲ್ಲ ಕರ್ಮಗಳನ್ನೂ ನಾಶಮಾಡುವದು.

**ಚಿತ್ತಸ್ಯ ಹಿ ಪ್ರಸಾದೇನ ಹಂತಿ ಕರ್ಮ ಶುಭಾಶುಭಮ್ ।**
**ಪ್ರಸನ್ನಾತ್ಮಾಽಽತ್ಮನಿ ಸ್ಥಿತ್ವಾ ಸುಖಮಕ್ಷಯ್ಯಮಶ್ನುತೇ ॥೧೧೪॥**

ಸಾಧಕನು ಪ್ರಸನ್ನಚಿತ್ತನಾಗುವದರಿಂದಲೇ ಶುಭಾಶುಭ ಕರ್ಮಗಳನ್ನು ನಾಶಗೊಳಿಸುತ್ತಾನೆ. ಹೀಗಾದವನು ತನ್ನ ಸ್ವರೂಪವಾದ ಬ್ರಹ್ಮದಲ್ಲಿ ನೆಲೆಗೊಂಡು ಎಂದಿಗೂ ತೀರದ ಸ್ವರೂಪಾನಂದವನ್ನು ಅನುಭವಿಸುತ್ತಾನೆ.

(ಚಿತ್ತಸ್ಯ ಹಿ ಎಂಬಲ್ಲಿಯ ಹಿ ಶಬ್ದದಿಂದ "ತದ್ಯಥಾ ಈಷಿಕಾತೂಲಮಗ್ನೌ ಪ್ರೋತ ಎಂದರೆ ಮುಂಜ ಅಥವಾ ಮೆದೆಹುಲ್ಲು ಇದರ ತೆನೆಯೊಳಗಿರುವ ಹತ್ತಿಯನ್ನು ಬೆಂಕಿಯಲ್ಲಿ ಹಾಕಿದರೆ ಹೇಗೆ ಸುಟ್ಟುಹೋಗುವದೋ ಎಂಬ ಶ್ರುತಿ. ಉಪಪಾತಕೇಷು ಸರ್ವೇಷು ಪಾತಕೇಷು ಮಹತ್ಸುಚ। ಪ್ರವಿಶ್ಯ ರಜನೀಪಾದಂ ಬ್ರಹ್ಮಧ್ಯಾನಂ ಸಮಾಚರೇತ್॥ ಎಂದರೆ ಪಂಚ ಮಹಾ ಪಾತಕಗಳ ಹೊರತು ಬೇರೆ ಪಾತಕಗಳು ಹಾಗು ಪಂಚ ಮಹಾ ಪಾತಕಗಳು ಇವು ನಾಶವಾಗುವದಕ್ಕೆ ರಾತ್ರಿಯ ಕೊನೆಯಭಾಗದಲ್ಲಿ ಬ್ರಹ್ಮನನ್ನು ಧ್ಯಾನಿಸಬೇಕು ಎಂಬ ಶ್ರುತಿ ಇವುಗಳನ್ನು ಲಕ್ಷಿಸಬೇಕು.)

—ದೃಷ್ಟಾಂತಪೂರ್ವಕ ಮೇಲಿನದರ ಅರ್ಥವಿವರಣೆ.

**ಸಮಾಸಕ್ತಂ ಯಥಾ ಚಿತ್ತಂ ಜಂತೋರ್ವಿಷಯಗೋಚರೇ।**
**ಯದ್ಯೇವಂ ಬ್ರಹ್ಮಣಿ ಸ್ಯಾತ್ತತ್ಕೋ ನ ಮುಚ್ಯೇತ**
**ಬಂಧನಾತ್ ॥೧೧೫॥**

ಎಲ್ಲರ ಚಿತ್ತಗಳು ಇಂದ್ರಿಯಗಳಿಗೆ ಕಾಣುವ ವಿಷಯಗಳಲ್ಲಿ ಹೇಗೆ ಆಸಕ್ತಿಯನ್ನು ತಾಳುವವೋ ಹಾಗೆ ತಮ್ಮ ಆತ್ಮವಾದ ಬ್ರಹ್ಮನಲ್ಲಿ ಆಸಕ್ತವಾದರೆ ಸಂಸಾರ ಬಂಧನದಿಂದ ಯಾರು ಬಿಡುಗಡೆಯಾಗಲಿಕ್ಕಿಲ್ಲ ? ಎಲ್ಲರೂ ಆಗುತ್ತಾರೆಂದು ಅರ್ಥ.

—ಮನಸ್ಸಿನ ಅವಾಂತರ ಭೇದಗಳು.

**ಮನೋ ಹಿ ದ್ವಿವಿಧಂ ಪ್ರೋಕ್ತಂ ಶುದ್ಧಂ ಚಾಶುದ್ಧಮೇವಚ।**
**ಅಶುದ್ಧಂಕಾಮಸಂಪರ್ಕಾಚ್ಛುದ್ಧಂಕಾಮವಿವರ್ಜಿತಮ್॥೧೧೬॥**

ಶುದ್ಧವೆಂದು ಅಶುದ್ಧವೆಂದು ಮನಸ್ಸು ಎರಡುಬಗೆ ಎಂದು ಹೇಳಲಾಗಿದೆ. ಬಯಕೆಗಳ ಸಹವಾಸ ಬೆಳೆಸಿದ್ದು ಅಶುದ್ಧ, ಬಯಕೆಗಳ ಸಹವಾಸವಿಲ್ಲದ್ದು ಶುದ್ಧ.

—ಹೀಗೆ ಎರಡು ಬಗೆಯ ಮನಸ್ಸೇ ಸಂಸಾರ ಮತ್ತು ಮೋಕ್ಷಕ್ಕೆ ಕಾರಣವೆಂದು ಹೇಳುತ್ತಾರೆ.

**ಮನ ಏವ ಮನುಷ್ಯಾಣಾಂ ಕಾರಣಂ ಬಂಧ-ಮೋಕ್ಷಯೋಃ।**
**ಬಂಧಾಯ ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಂ**
**ಸ್ಮೃತಮ್ ॥೧೧೭॥**

ಮನುಷ್ಯರ ಬಂಧ ಮತ್ತು ಮೋಕ್ಷಗಳಿಗೆ ಮನಸ್ಸೇ ಕಾರಣವಾಗಿದೆ. ಅದು ವಿಷಯಗಳಲ್ಲಿ ಪ್ರೀತಿಯುಳ್ಳದುದಾದರೆ ಬಂಧನಕ್ಕೆ, ಇಲ್ಲವಾದರೆ ಮೋಕ್ಷಕ್ಕೆ ಕಾರಣವೆನಿಸುವದು.

—ಈ ವಿಷಯದಲ್ಲಿ ಶ್ರುತಿ ಪ್ರಮಾಣ.

**ಸಮಾಧಿ ನಿರ್ಧೂತಮಲಸ್ಯ ಚೇತಸೋ ನಿವೇಶಿತಸ್ಯಾತ್ಮನಿ**
**ಯತ್ಸುಖಂ ಭವೇತ್ ।**
**ನ ಶಕ್ಯತೇ ವರ್ಣಯಿತುಂ ಗಿರಾ ತದಾ ಸ್ವಯಂ**
**ತದಂತಃಕರಣೇನ ಗೃಹ್ಯತೇ ॥೧೧೮॥**

ಆತ್ಮನಲ್ಲಿ ನೆಲೆಗೊಳಿಸುವಿಕೆಯಿಂದ ಹಾಗೂ ಆತ್ಮ ಮತ್ತು ಬ್ರಹ್ಮರು ಒಂದು ಎಂಬ ಏಕತ್ವ ವಿಷಯದ ವೃತ್ತಿಯನ್ನು ಮೇಲಿಂದಮೇಲೆ ಆವೃತ್ತಿಗೊಳಿಸುವದರಿಂದ ರಜ–ತಮ ಗುಣಗಳ ಮಲವನ್ನು ತೊಳೆದುಕೊಂಡು ಆತ್ಮಸ್ವರೂಪದಲ್ಲಿ ನಿಂತ ಮನಸ್ಸಿಗೆ ಆಗುವ ಸುಖವನ್ನು ಮಾತಿನಿಂದ ವರ್ಣಿಸುವದು ಅಶಕ್ಯ. ಅದನ್ನು ಆ ಅಂತಃಕರಣವೇ ಗ್ರಹಿಸಬಲ್ಲದು.

—ದುರ್ಲಭವಾದ ಈ ಸಮಾಧಿ ಯೋಗದಿಂದ ಬ್ರಹ್ಮಾನಂದದ ನಿಶ್ಚಯ ಮಾಡುವದು ಹೇಗೆ ?

**ಯದ್ಯಪ್ಯಸೌ ಚಿರಂ ಕಾಲಂ ಸಮಾಧಿದುರ್ಲಭೋ ನೃಣಾಮ್।**
**ತಥಾಪಿ ಕ್ಷಣಿಕೋ ಬ್ರಹ್ಮಾನಂದಂ ನಿಶ್ಚಾಯಯತ್ಯಸೌ ॥೧೧೯॥**

ಒಂದು ವೇಳೆ ಈ ಸಮಾಧಿಯು ಬಹಳ ಕಾಲ ದೊರೆಯುವದು ಮನುಷ್ಯರಿಗೆ ದುರ್ಲಭ. ಕ್ಷಣ ಕಾಲವೇ ದೊರೆತದ್ದಾದರೂ ಬ್ರಹ್ಮಾನಂದದ ನಿಶ್ಚಯವನ್ನು ಮಾಡಿಕೊಡುತ್ತದೆ.

—ಆತ್ಮದರ್ಶನ ಮಾಡಿಕೊಳ್ಳಬೇಕೆಂದು ಶ್ರವಣಾದಿಸಾಧನ ಮಾಡುತ್ತಿರುವವರಲ್ಲಿ ಕೆಲವರು ಆತ್ಮನಲ್ಲಿ ಆನಂದವಿದೆ ಎಂದು ನಂಬಿಗೆ ತಾಳಿರುವದಿಲ್ಲ. ಅಲ್ಲದೇ ಯಾವಾಗಲೂ ಬಹಿರ್ಮುಖರಾಗಿಯೇ ಇರುತ್ತಾರೆ ಎಂದರೆ

ಶ್ರದ್ಧೆ ಇಲ್ಲದವರಿಗೆ ಹಾಗಿರುವದು. ಶ್ರದ್ಧಾವಂತರಿಗೆ ಆತ್ಮನು ಆನಂದರೂಪ ನೆಂದು ತಿಳಿದೇತಿಳಿಯುತ್ತಾರೆ.

**ಶ್ರದ್ಧಾಲುರ್ವ್ಯಸನೀ ಯೋऽತ್ರ ನಿಶ್ಚಿನೋತ್ಯೇವ ಸರ್ವಥಾ ।**
**ನಿಶ್ಚಿತೇ ತು ಸಕೃತ್ತಸ್ಮಿನ್ ವಿಶ್ವಸಿತ್ಯನ್ಯದಾಪ್ಯಯಮ್ ॥೧೨೦॥**

ಶ್ರದ್ಧಾಲುವೂ, ಸಮಾಧಿಯನ್ನು ಪಡೆದೇತೀರುವೆನೆಂಬ ಶಿಶ್ಚಯವುಳ್ಳ ವನೂ ಆದಿವನು ಅವಶ್ಯವಾಗಿ ಅದರ ನೆಲೆಯನ್ನು ಅರಿತುಕೊಳ್ಳುವನು. ಮತ್ತು ಬ್ರಹ್ಮಾನಂದದ ನಿಶ್ಚಯವು ಕ್ಷಣಿಕವಾದ ಸಮಾಧಿಯಲ್ಲಿಯೇ ಆಗಲಿ ಹಾಗೆ ಆನಂದಾನುಭವವನ್ನು ಪಡೆದ ಯೋಗಿಯು ಬೇರೆ ಕಾಲದಲ್ಲಿ ಕೂಡ ಅದನ್ನೇ ನೆನೆಯುತ್ತಿರುವನು.

**ತಾದೃಕ್ ಪುಮಾನುದಾಸೀನಕಾಲೇಽಪ್ಯಾನಂದ ವಾಸನಾಮ್ ।**
**ಉಪೇಕ್ಷ್ಯಮುಖ್ಯಮಾನಂದಂ ಭಾವಯತ್ಯೇವ ತತ್ಪರಃ॥೧೨೧॥**

ಅಂಥವನು ಸುಮ್ಮನಿದ್ದ ಕಾಲದಲ್ಲಿಕೂಡ ದೊರೆಯುವ ಆನಂದದ ವಾಸನೆಯನ್ನು ಉಪೇಕ್ಷೆ ಮಾಡಿ ತಾನು ಅನುಭವಿಸಿದ ಮುಖ್ಯಾನಂದದಲ್ಲಿ ಆಸಕ್ತಿತಾಳಿ ಆನಂದದ ಭಾವನೆಯನ್ನೇ ತಂದುಕೊಳ್ಳುತ್ತಿರುವನು.

—ಹೀಗೆ ವ್ಯವಹಾರಕಾಲದಲ್ಲಿ ಕೂಡ ನಿಜಾನಂದದ ಭಾವನೆತಂದು ಕೊಳ್ಳುತ್ತಿರುವನು ಎಂಬ ವಿಷಯದಲ್ಲಿ ೯ನೇ ಪ್ರಕರಣದಲ್ಲಿ ಹೇಳಿದ ದೃಷ್ಟಾಂತ ವನ್ನು ಅದನ್ನು ದಾಷ್ಟಾರ್ಂತಿಕದಲ್ಲಿ ಯೋಚಿಸುತ್ತಾರೆ.

**ಪರವ್ಯಸನಿನೀ ನಾರೀ ವ್ಯಗ್ರಾಪಿ ಗೃಹಕರ್ಮಣಿ ।**
**ತದೇವಾಸ್ವಾದಯತ್ಯಂತಃ ಪರಸಂಗ ರಸಾಯನಮ್ ॥೧೨೨॥**
**ಏವಂ ತತ್ವೇ ಪರೇಶುದ್ಧೇ ಧೀರೋ ವಿಶ್ರಾಂತಿಮಾಗತಃ ।**
**ತದೇವಾಸ್ವಾದಯತ್ಯಂತರ್ಬಹಿರ್ವ್ಯವಹರನ್ನಪಿ ॥೧೨೩॥**

ಪರಪುರುಷನಲ್ಲಿ ಮನವಿಟ್ಟುಕೊಂಡ ಹೆಂಗಸು ಮನೆವಾರ್ತೆಯಲ್ಲಿ ತೊಡಗಿಕೊಂಡಿದ್ದರೂ ಆ ಬೇರೆಯವನ ಸಹವಾಸದ ಸುಖವನ್ನೇ ಮನದಲ್ಲಿ ಚಪ್ಪರಿಸುತ್ತಿರುವಳು.

ಆದರಂತೆ ಶ್ರೇಷ್ಠವೂ, ಶುದ್ಧವೂ ಆದ ತನ್ನ ಸ್ವರೂಪದಲ್ಲಿ ನೆಲೆಗೊಂಡ ಬುದ್ಧಿಶಾಲಿಯು ಹೊರಗೆ ಬೇಕಾದಷ್ಟು ಕೆಲಸದಲ್ಲಿ ತೊಡಗಿದ್ದರೂ ಒಳಗೆ ಸ್ವರೂಪಾನಂದವನ್ನೇ ಭಾವಿಸುತ್ತಿರುವನು.

—ಧೀರಶಬ್ದದ ಅರ್ಥ.

**ಧೀರತ್ವಮಕ್ಷಪ್ರಾಬಲ್ಯೇಽಪ್ಯಾನಂದಾಸ್ವಾದವಾಂಛಯಾ ।**
**ತಿರಸ್ಕೃತ್ಯಾಖಿಲಾಕ್ಷಾಣಿ ತಚ್ಚಿಂತಾಯಾಂ ಪ್ರವರ್ತ-**
**ನಮ್ ||೧೨೪||**

ಇಂದ್ರಿಯಗಳು ತನ್ನನ್ನು ವಿಷಯಗಳತ್ತ ಎಳೆಯುವ ಶಕ್ತಿಯುಳ್ಳವುಗಳಾಗಿದ್ದರೂ ಆನಂದಾನುಭವ ಪಡೆಯಬೇಕೆಂಬ ಇಚ್ಛೆಯಿಂದ ಇಂದ್ರಿಯ ಸುಖಗಳನ್ನು ತಿರಸ್ಕರಿಸಿ ಸ್ವರೂಪಾನಂದದ ಅನುಸಂಧಾನದಲ್ಲಿರುವುದೇ ಧೀರತ್ವದ ಲಕ್ಷಣ. ಹಾಗಿದ್ದವನೇ ಧೀರ.

—೨೩ ನೇ ಶ್ಲೋಕದಲ್ಲಿ ಬಂದ ವಿಶ್ರಾಂತಿ, ಶಬ್ದದ ವಿಶಿಷ್ಟ ಅರ್ಥ.

**ಭಾರವಾಹೀ ಶಿರೋಭಾರಂ ಮುಕ್ತ್ವಾಽಸ್ತೇ ವಿಶ್ರಮಂ ಗತಃ ।**
**ಸಂಸಾರವ್ಯಾಪೃತಿತ್ಯಾಗೇತಾದೃಕ್‌ಬುದ್ಧಿಸ್ತು**
**ವಿಶ್ರಮಃ ||೧೨೫||**

ಭಾರವನ್ನು ಹೊರುವವನು ತನ್ನ ತಲೆ ಹೊರೆಯನ್ನು ಕೆಳಗಿಳಿಸಿ ಹೇಗೆ ವಿಶ್ರಾಂತಿ ಹೊಂದುವನೋ, ಅದರಂತೆ ಯೋಗಿಯಾದವನು ಸಂಸಾರದ ಗೊಂದಲಗಳನ್ನೆಲ್ಲ ಬಿಟ್ಟು ಈಗ ನನ್ನ ಶ್ರಮವಿಳಿಯಿತು ಎಂದು ಭಾವಿಸುವ ಬುದ್ಧಿಸ್ಥಿತಿಯೇ ವಿಶ್ರಾಂತಿಯು.

**ವಿಶ್ರಾಂತಿಂ ಪರಮಾಂ ಪ್ರಾಪ್ತಸ್ತ್ವೌದಾಸೀನ್ಯೇ ಯಥಾ ತಥಾ|**
**ಸುಖದುಃಖ ದಶಾಯಾಂಚ ತದಾನಂದೈಕ ತತ್ಪರಃ ||೧೨೬||**

ಇಂಥ ನಿರತಿಶಯ ವಿಶ್ರಾಂತಿಯನ್ನು ಪಡೆದ ಪುರುಷನು ತಾನು ಸುಮ್ಮನಿರುವಾಗ ಕೂಡ ಹೇಗೆ ಆನಂದಾನುಭವದಲ್ಲಿ ತತ್ಪರನಾಗಿರುವನೋ, ಅದರಂತೆ ಸುಖವಾಗಲೀ, ದುಃಖವಾಗಲೀ ಸ್ವರೂಪಾನಂದದಲ್ಲಿಯೇ ಮಗ್ನನಾಗಿ ಸುಖ ದುಃಖಗಳಗೋಜಿಗೇ ಹೋಗದಿರುವನು.

—ದುಃಖವು ಪ್ರತಿಕೂಲವಾದುದರಿಂದ ಅದರ ಅನುಸಂಧಾನವಿಲ್ಲದೆ ಹೋಗಲಿ. ವಿಷಯಗಳಿಂದ ದೊರೆಯುವ ಸುಖವು ಅನುಕೂಲವಾದುದರಿಂದ ಅದರ ಅನುಸಂಧಾನವೇಕಾಗ ಬಾರದು? ಎಂದರೆ ವಿಷಯ ಸಂಪಾದನೆಯಾಗ ಬೇಕಾದರೆ ಮನಸ್ಸು ಅತ್ಯಂತ ಬಹಿರ್ಮುಖವಾಗಬೇಕಾಗುತ್ತದೆ. ಆದುದ

ರಿಂದ ಅದು ಕೂಡ ಸ್ವರೂಪಾನುಸಂಧಾನಕ್ಕೆ ವಿರೋಧಿಯೇ. ಹೀಗಿರುವದರಿಂದ ವಿವೇಕಿಯು ವಿಷಯಗಳನ್ನು ಇಚ್ಛಿಸುವದಿಲ್ಲ. ದೃಷ್ಟಾಂತ.

**ಅಗ್ನಿಪ್ರವೇಶಹೇತೌ ಧೀಃ ಶೃಂಗಾರೇ ಯಾದೃಶೀ ತಥಾ ।**
**ಧೀರಸ್ಯೋದೇತಿ ವಿಷಯೇಽನುಸಂಧಾನ ವಿರೋಧಿನಿ ॥೧೨೭॥**

ಬೆಂಕಿಯಲ್ಲಿ ಬಿದ್ದು ಸುಟ್ಟುಕೊಂಡು ಸಾಯಬೇಕೆಂಬ ಬುದ್ಧಿಯು ಬಲವಾದಾಗ ಅದಕ್ಕೆ ವಿಲಂಬವನ್ನು ಮಾಡುವ ಅಲಂಕಾರ ಮಾಡಿಕೊಳ್ಳುವಿಕೆಯಲ್ಲಿ ಹೇಗೆ ವಿರಕ್ತಿಯು ತಲೆದೋರುವದೋ ಅದರಂತೆ ಬ್ರಹ್ಮಾನುಸಂಧಾನಕ್ಕೆ ವಿರೋಧಿಯಾದ ವಿಷಯ ಸುಖದಲ್ಲಿಯೂ ವಿರಕ್ತಿಯುಂಟಾಗುವದು.

—ಅನಾಯಾಸವಾಗಿ ದೊರೆತ, ಅದರಂತೆ ಮನಸ್ಸನ್ನು ಹೊರಗೆಡಹಬೇಕಾದ ಪ್ರಸಂಗವಿಲ್ಲದ ವಿಷಯಗಳ ಇಚ್ಛೆಯು ಯಾಕಾಗಬಾರದು?

**ಅವಿರೋಧಿಸುಖೇ ಬುದ್ಧಿಃ ಸ್ವಾನಂದೇಚ ಗಮಾಗಮೌ ।**
**ಕುರ್ವಂತ್ಯಾಸ್ತೇ ಕ್ರಮಾದೇಷಾ ಕಾಕಾಕ್ಷಿವದಿತಸ್ತತಃ ॥೧೨೮॥**

ವಿವೇಕಿಯಾದ ಪುರುಷನ ಬುದ್ಧಿಯು ನಿಜಾನುಸಂಧಾನಕ್ಕೆ ವಿರುದ್ಧವೆನಿಸದ ಸುಖದಕಡೆಗೊಮ್ಮೆ, ಆತ್ಮಾನಂದದಕಡೆಗೊಮ್ಮೆ ಕಾಗೆಯ ಕಣ್ಣಿನಂತೆ ತಿರಗುತ್ತ ಇರಬೇಕಾಗುವದು.

—ದೃಷ್ಟಾಂತದ ವಿವರಣೆ.

**ಏಕೈವ ದೃಷ್ಟಿಃ ಕಾಕಸ್ಯ ವಾಮದಕ್ಷಿಣ ನೇತ್ರಯೋಃ ।**
**ಯಾತ್ಯಾಯಾತ್ಯೇವಮಾನಂದದ್ವಯೇ ತತ್ವವಿದೋ ಮತಿಃ ॥೧೨೯॥**

ಕಾಗೆಗಿರುವ ಒಂದೇ ಒಂದು ದೃಷ್ಟಿಯು ಎಡದ ಮತ್ತು ಬಲದ ನೇತ್ರಗೋಲಕದಲ್ಲಿ ಹೋಗುತ್ತ-ಬರುತ್ತ ಇರುವದು. ಅದರಂತೆ ಯೋಗಿಯ ಬುದ್ಧಿಯಾದರೂ ಇರಬೇಕಾಗುವದು.

**ಭುಂಜಾನೋವಿಷಯಾನಂದಂ ಬ್ರಹ್ಮಾನಂದಂ ಚ ತತ್ವವಿತ್ ।**
**ದ್ವಿಭಾಷಾಭಿಜ್ಞವದ್ವಿದ್ಯಾದುಭೌ ಲೌಕಿಕವೈದಿಕೌ ॥೧೩೦॥**

ತತ್ವವನ್ನು ತಿಳಿದವನು ಪ್ರಾರಬ್ಧವು ಒದಗಿಸಿದ ವಿಷಯಗಳನ್ನು ಭೋಗಿಸುತ್ತ ವಿಷಯಾನಂದವನ್ನೂ, ಉಪನಿಷತ್ತಿನಿಂದ ಅರಿತ ಬ್ರಹ್ಮಾನಂದ

ವನ್ನೂ ಹೀಗೆ ಲೌಕಿಕ–ವೈದಿಕ ಎರಡೂ ಆನಂದಗಳನ್ನು ಎರಡು ಭಾಷೆಗಳನ್ನು ತಿಳಿದವನಂತೆ ತಿಳಿಯುತ್ತಾನೆ.

ಆದರೆ ದುಃಖಾನುಭವ ಕಾಲದಲ್ಲಿ ಮನಸ್ಸು ಉದ್ವೇಗಗೊಂಡಿರುತ್ತದೆ. ಆಗ ನಿಜಾನಂದದ ಅನುಭವ ಬರುವದು ಹೇಗೆ?

**ದುಃಖಪ್ರಾಪ್ತೌ ನ ಚೋದ್ವೇಗೋ ಯಥಾಪೂರ್ವಂ ಯತೋದ್ವಿದೃಕ್ ।**
**ಗಂಗಾಮಗ್ನಾರ್ಧ ಕಾಯಸ್ಯ ಪುಂಸಃ ಶೀತೋಷ್ಣಧೀ–ರ್ಯಥಾ ॥೧೩೦॥**

ಈ ವಿವೇಕಿಯು ಎರಡೂ ದೃಷ್ಟಿಯುಳ್ಳವನು ಎಂದರೆ ಲೌಕಿಕ–ವೈದಿಕಗಳು ಗೊತ್ತು ಆದುದರಿಂದ ಗಂಗೆಯಲ್ಲಿ ಅರ್ಧ ಮುಳುಗಿದವನಿಗೆ ಶೀತ–ಉಷ್ಣಗಳೆರಡೂ ಅನುಭವಕ್ಕೆ ಬರುವಂತೆ ಒಂದು ವೇಳೆ ಇವನಿಗೆ ದುಃಖವು ಬಂದರೂ ಅಜ್ಞಾನ ದಶೆಯಂತೆ ಉದ್ವೇಗವು ಆಗಲಾರದು.

(ಈ ಸಂದರ್ಭದಲ್ಲಿ ಅವನನ್ನು ವಿವೇಕವು ಎಚ್ಚರಿಸುತ್ತದೆ. ಆದುದರಿಂದ ದುಃಖಾನು ಭವಕಾಲದಲ್ಲಿಯೂ ನಿಜಾನುಸಂಧಾನವಿರುತ್ತದೆ.)

**ಇತ್ಥಂ ಜಾಗರಣೇ ತತ್ವವಿದೋ ಬ್ರಹ್ಮಸುಖಂ ಸದಾ ।**
**ಭಾತಿ ತದ್ವಾಸನಾಜನ್ಯೇ ಸ್ವಪ್ನೇ ತದ್ಭಾಸತೇ ತಥಾ ॥೧೩೧॥**

ಹೀಗೆ ತತ್ವಜ್ಞಾನಿಗೆ ಎಚ್ಚರ ಸಮಯದಲ್ಲಿ ಯಾವಾಗಲೂ ಎಂದರೆ ಸುಖ–ದುಃಖಾನುಭವ ಸಮಯದಲ್ಲಿ ಮತ್ತು ಸುಮ್ಮನಿರುವ ಸಮಯದಲ್ಲಿ ಬ್ರಹ್ಮಸುಖವು ತೋರುತ್ತಿರುವುದು. ಎಚ್ಚರದ ವಾಸನೆಗಳಿಂದಲೇ ಕನಸುಗಳು ಉಂಟಾಗುತ್ತಿರುವುದರಿಂದ ಕನಸಿನಲ್ಲಿಯೂ ಆ ಬ್ರಹ್ಮಸುಖವು ಎಚ್ಚರಕಾಲದಂತೆಯೇ ತೋರುವುದು.

—ಕನಸು ಆನಂದಾನುಭವದ ವಾಸನಾ ಜನ್ಯವೆನ್ನುವದಾದರೆ ಅಲ್ಲಿ ಆನಂದವೇ ತೋರಬೇಕು. ದುಃಖವು ತೋರಬಾರದು.

**ಅವಿದ್ಯಾವಾಸನಾಪ್ಯಸ್ತೀತ್ಯತಸ್ತದ್ವಾಸನೋತ್ಥಿತೇ ।**
**ಸ್ವಪ್ನೇ ಮೂರ್ಖವದೇವೈಷ ಸುಖಂ ದುಃಖ ಚ ವೀಕ್ಷ್ಯತೇ ॥೧೩೩॥**

ಕನಸು ಬರಿ ಆನಂದ ವಾಸನಾಬಲದಿಂದಲೇ ಉಂಟಾಗುವದಿಲ್ಲ. ಅಲ್ಲಿ ಅವಿದ್ಯೆಯ ವಾಸನೆಯು ಇರುತ್ತದೆ. ಆದುದರಿಂದ ಆ ಅವಿದ್ಯ ವಾಸನಾ ಬಲದಿಂದ ಉಂಟಾದ ಕನಸಿನಲ್ಲಿ ವಿವೇಕಿಯು ಮೂಢನಂತೆ ಸುಖ-ದುಃಖಾದಿಗಳನ್ನು ಕಾಣಬೇಕಾಗುವುದು.

—ಇನ್ನು ಉಪಸಂಹಾರ.

**ಬ್ರಹ್ಮಾನಂದಾಭಿದೇ ಗ್ರಂಥೇ ಬ್ರಹ್ಮಾನಂದಪ್ರಕಾಶಕಮ್ |**
**ಯೋಗಿಪ್ರತ್ಯಕ್ಷಮಧ್ಯಾಯೋ ಪ್ರಥಮೋऽಸ್ಮಿನ್ನುದೀ-**
**ರಿತಮ್ ||೧೩೪||**

ಬ್ರಹ್ಮಾನಂದವೆಂಬ ಐದು ಅಧ್ಯಾಯಗಳುಳ್ಳ ಗ್ರಂಥದಲ್ಲಿಯ ಈ ಮೊದಲನೆಯ ಅಧ್ಯಾಯದಲ್ಲಿ ಗಾಢನಿದ್ರೆಯಲ್ಲಿ-ಸುಮ್ಮನಿರುವ ಸಮಯದಲ್ಲಿ ಸಮಾಧಿಕಾಲದಲ್ಲಿ ಸುಖ-ದುಃಖಗಳು ಬಂದ ವೇಳೆಯಲ್ಲಿ ತನ್ನಷ್ಟಕ್ಕೆ ತಾನು ಬೆಳಗುವ ಬ್ರಹ್ಮಾನಂದವನ್ನು ತೋರಿಸುವ ಯೋಗಿಗಳ ಅನುಭವದ ವಿಷಯವು ಹೇಳಲಾಯಿತು.

## ಯೋಗಾನಂದ ಪ್ರಕರಣದ ಸಾರಾಂಶ.

ಬ್ರಹ್ಮದ ಆನಂದತ್ವ ಮೊದಲಾದವುಗಳು. ಆನಂದ ಸ್ವರೂಪದ ವಿಚಾರ ಮತ್ತು ಆನಂದದ ವಿಚಾರ.

....O....

# ೧೨ ಆತ್ಮಾನಂದ

ಈಗ ಮೂಢರಾದ ಜಿಜ್ಞಾಸುಗಳಿಗೆ ಆತ್ಮಾನಂದವೆಂಬ ಹೆಸರುಳ್ಳ 'ತ್ವಂ, (ನೀನು) ಎಂಬುದರ ವಿವೇಚನೆ ಮಾಡಿ ಅದರ ಮುಖಾಂತರ ಬ್ರಹ್ಮಾನಂದಾನುಭವವನ್ನು ತೋರಿಸುವುದಕ್ಕೆ ಶಿಷ್ಯನಿಂದ ಪ್ರಶ್ನವನ್ನು ನಿರೀಕ್ಷಿಸುತ್ತಾರೆ.

**ನನ್ವೇವಂ ವಾಸನಾನಂದಾದ್ ಬ್ರಹ್ಮಾನಂದಾದಪೀತರಮ್ ।**
**ವೇತ್ತು ಯೋಗೀ ನಿಜಾನಂದಂ ಮೂಢಸ್ಯಾತ್ರಾಸ್ತಿ**
**ಕಾಗತಿಃ ॥೧॥**

ನೀವು ಹೇಳಿದಂತೆಯೇ ಯೋಗಿಯು ವಾಸನಾನಂದ ಮತ್ತು ಗಾಢ ನಿದ್ರಾವಸ್ಥೆಯ ಬ್ರಹ್ಮಾನಂದಕ್ಕಿಂತ ಬೇರೆಯಾಗಿ ನಿಜಾನಂದವನ್ನು ತಿಳಿಯಲಿ. ಆದರೆ ಇಲ್ಲಿ ಮೂಢನಿಗೆ ಯಾವಗತಿಯುಂಟು. ?

—ಅತಿ ಮೂಢನಾದವನಿಗೆ ವಿದ್ಯೆಯ ಅಧಿಕಾರವಿಲ್ಲವೆನ್ನುತ್ತಾರೆ.

**ಧರ್ಮಾಧರ್ಮವಶಾದೇಷ ಜಾಯತಾಂ ಮ್ರಿಯತಾಮಪಿ ।**
**ಪುನಃ ಪುನರ್ದೇಹಲಕ್ಷೈಃ ಕಿಂ ನೋ ದಾಕ್ಷಿಣ್ಯತೋ ವದ ॥೨॥**

ಅತಿ ಮೂಢನಾದವನು ಅನಾದಿಯಾದ ಸಂಸಾರದಲ್ಲಿ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯ-ಪಾಪರೂಪವಾದ ಕರ್ಮಕ್ಕನುಸಾರವಾಗಿ ನಾನಾ ಬಗೆಯ ಅಸಂಖ್ಯ ದೇಹಗಳನ್ನು ತಾಳಿ ಹುಟ್ಟಿಬರಲಿ ಅಥವಾ ಸಾಯಲಿ. ಅವನ ಭಿಡೆಯಿಂದ ನಮಗೆ ಆಗಬೇಕಾದುದೇನು ?

—ಎಲ್ಲರ ಉದ್ಧಾರವಾಗುವಂತೆ ಮಾಡುವುದು ಆಚಾರ್ಯ ಪುರುಷರ ಕರ್ತವ್ಯ. ಆದುದರಿಂದ ಅವನಿಗೋಸ್ಕರವಾಗಿಯೂ ಏನಾದರೂ ಉಪಾಯವನ್ನು ಹೇಳಬೇಕು.

**ಅಸ್ತಿ ವೋಽನುಜಿಘೃಕ್ಷುತ್ವಾದ್ದಾಕ್ಷಿಣ್ಯೇನ ಪ್ರಯೋಜನಮ್ ।**
**ತರ್ಹಿ ಬ್ರೂಹಿ ಸಮೂಢಃ ಕಿಂ ಜಿಜ್ಞಾಸುರ್ವಾ**
**ಪರಾಙ್ಮುಖಃ ॥೩॥**

ನಿನ್ನನ್ನು ಅನುಗ್ರಹಿಸಬೇಕಾಗಿದೆ. ನೀನು ಎಲ್ಲ ಶಿಷ್ಯರ ಉದ್ಧಾರವಾಗಬೇಕು ಎನ್ನುವೆ. ನಿನ್ನ ಭಿಡೆಯಿಂದ ಶಿಷ್ಯರ ಉದ್ಧಾರರೂಪ ಪ್ರಯೋಜನವಾದರೆ ಆಗಲಿ. ಒಳ್ಳೇದು. ಆ ಮೂಢನು ಜಿಜ್ಞಾಸುವೋ? ಆತ್ಮನನ್ನು ತಿಳಿಯಲು ಇಚ್ಛೆ ಇಲ್ಲದವನೋ ? ಹೇಳು.

—ಅವನು ವಿಷಯಾಸಕ್ತನಾದರೆ ಕರ್ಮವನ್ನು ಹೇಳಬೇಕು. ಬ್ರಹ್ಮಲೋಕದ ಸುಖವನ್ನು ಬಯಸುವವನಾದರೆ ಉಪಾಸನಾದಿಗಳನ್ನು ಹೇಳಬೇಕು.

**ಉಪಾಸ್ತಿಂ ಕರ್ಮ ವಾ ಬ್ರೂಯಾದ್ವಿಮುಖಾಯ ಯಥೋಚಿತಮ್ ।**
**ಮಂದಪ್ರಜ್ಞಂ ತು ಜಿಜ್ಞಾಸುಮಾತ್ಮಾನಂದೇನ ಬೋಧಯೇತ್ ॥೪॥**

ತತ್ವಜ್ಞಾನವನ್ನು ತಿಳಿಯಲಿಚ್ಛಿಸದೇ ಹೊರಮುಖನಾಗಿ ವಿಷಯಗಳನ್ನು ಬಯಸುವವನಿಗೆ ಕರ್ಮವನ್ನಾಗಲೀ-ಉಪಾಸನೆಯನ್ನಾಗಲೀ ಹೇಳಬೇಕು. ಇನ್ನು ಬ್ರಹ್ಮಲೋಕದ ಸುಖವನ್ನು ಬಯಸುತ್ತಿದ್ದರೆ ಅವನಿಗೆ ಉಪಾಸನೆಯನ್ನು ಹೇಳಬೇಕು. ಸ್ವರ್ಗಾದಿಗಳ ಇಚ್ಛೆಯಿದ್ದರೆ ಕರ್ಮವನ್ನು ಹೇಳಬೇಕು. ಅಥವಾ ಮಂದ ಬುದ್ಧಿಯ ಜಿಜ್ಞಾಸುವಿದ್ದರೆ ಅವನಿಗೆ ಆತ್ಮಾನಂದದ ವಿವೇಚನೆಯಿಂದ ಬೋಧಿಸಬೇಕು.

—ಹಿಂದೆ ಯಾರು ಯಾರಿಗೆ ಈ ರೀತಿ ಬೋಧಿಸಿದರೆಂಬುದನ್ನು ಹೇಳುತ್ತಾರೆ.

**ಬೋಧಯಾಮಾಸ ಮೈತ್ರೇಯೀಂ ಯಾಜ್ಞವಲ್ಕ್ಯೋ ನಿಜಪ್ರಿಯಾಮ್ ।**
**ನ ವಾ ಅರೆ ಪತ್ಯುರರ್ಥೇ ಪತಿಃ ಪ್ರಿಯ ಇತೀರಯನ್ ॥೫॥**

ಸತಿಗೆ ಪತಿಯ ಮೇಲಿನ ಪ್ರೀತಿಯು ಪತಿಗೆ ತಾನು ಬೇಕಾಗಿರುವಳೆಂದಲ್ಲ. ತನಗೆ ಪತಿಯು ಬೇಕಾಗಿರುವನೆಂದು. ಹೀಗೆ ಹೇಳುತ್ತ ಯಾಜ್ಞವಲ್ಕ್ಯನು ತನ್ನ ಹೆಂಡತಿಯಾದ ಮೈತ್ರೇಯಿಗೆ ಬೋಧಮಾಡಿದ್ದಾನೆ.

( ಯಾಜ್ಞವಲ್ಕ್ಯ ಋಷಿಗಳು ಶುಕ್ಲಯಜುರ್ವೇದದ ವಾಜಸನೇಯೀ ಶಾಖೆಯ ಪ್ರವರ್ತಕರು. ಅವರು ತಮ್ಮ ಪ್ರಿಯ ಪತ್ನಿಗೆ ಮೇಲಿನಂತೆ ಉಪದೇಶಿಸಿ ಆತ್ಮಾನುಭವ ಮಾಡಿಸಿದ್ದಾರೆ. )

ಆತ್ಮನು ಪರಮ ಪ್ರೇಮಾಸ್ಪದನೆಂದು ತೋರಿಸಲು ಮೇಲಿನ ವಾಕ್ಯವಿರುತ್ತದೆ ಎಂದು ಬಗೆದು ಆ ಪ್ರಕರಣದಲ್ಲಿಯ ಎಲ್ಲ ವಾಕ್ಯಗಳ ತಾತ್ಪರ್ಯವನ್ನು ಹೇಳುತ್ತಾರೆ.

**ಪತಿರ್ಜಾಯಾ ಪುತ್ರವಿತ್ತೇ ಪಶುಬ್ರಾಹ್ಮಣಬಾಹುಜಾಃ ।**
**ಲೋಕಾ ದೇವಾ ವೇದಭೂತೇ ಸರ್ವಂ ಚಾತ್ಮಾರ್ಥತಃ ಪ್ರಿಯಮ್ ॥೬॥**

ಗಂಡ–ಹೆಂಡತಿ–ಮಗ–ಹಣ–ಪಶು–ಬ್ರಾಹ್ಮಣ-ಕ್ಷತ್ರಿಯ-ಲೋಕ---–ದೇವತೆಗಳು–ವೇದ–ಪಂಚಭೂತಗಳು ಆತ್ಮನಿಗೋಸ್ಕರ ಎಂದರೆ ತನಗೆ ಬೇಕಾಗಿರುವವನೆಂದು ಪ್ರಿಯವಾಗಿವೆ. ಅವೇ ಸ್ವತಃ ಪ್ರಿಯವಾದವುಗಳಲ್ಲ.

—ಮೇಲೆ ಹೇಳಿದ 'ನವಾ ಅರೇ ಪತ್ಯುಃ, ಎಂಬವಾಕ್ಯದ ತಾತ್ಪರ್ಯಾರ್ಥ.

**ಪತ್ಯಾವಿಚ್ಛಾ ಯದಾ ಪತ್ನ್ಯಾಸ್ತದಾ ಪ್ರೀತಿಂ ಕರೋತಿ ಸಾ ।**
**ಕ್ಷುದನುಷ್ಠಾನರೋಗಾದ್ಯೈಸ್ತದಾ ನೇಚ್ಛತಿ ತತ್ಪತಿಃ ॥೭॥**

ಹೆಂಡತಿಯು ತನಗೆ ಗಂಡನ ಬಯಕೆ ಯಾವಾಗ ಉಂಟಾಗುವದೋ ಆಗ ಅವನ ಮೇಲೆ ಪ್ರೀತಿಮಾಡುತ್ತಾಳೆ. ಒಂದು ವೇಳೆ ಅವಳ ಗಂಡನು ಹಸಿವೆ-ಅನುಷ್ಠಾನ-ರೋಗಾದಿಗಳಿಂದ ತನ್ನ ಬಯಕೆಯನ್ನು ಪೂರ್ಣಮಾಡಲಾರದವನಾದರೆ ಅವಳು ಅವನನ್ನು ಇಚ್ಛಿಸುವದಿಲ್ಲ.

—ಇದರಿಂದ ಸಿದ್ಧವಾಗುವದೇನಂದರೆ–

**ನ ಪತ್ಯುರರ್ಥೇ ಸಾ ಪ್ರೀತಿಃ ಸ್ವಾರ್ಥ ಏವ ಕರೋತಿತಾಮ್ ।**
**ಪತಿಶ್ಚಾತ್ಮನ ಏವಾರ್ಥೇ ನ ಜಾಯಾರ್ಥೇ ಕದಾಚನ ॥೮॥**

ಆ ಪ್ರೀತಿಯು ಗಂಡನ ಸಲುವಾಗಿ ಅಲ್ಲ. ಅದನ್ನು ಅವಳು ತನ್ನ ಸಲುವಾಗಿಯೇ ಮಾಡುತ್ತಾಳೆ. ಅದರಂತೆ ಪತಿಯು ಕೂಡ ತನಗೋಸ್ಕರವಾಗಿಯೇ ಹೆಂಡತಿಯನ್ನು ಪ್ರೀತಿಸುತ್ತಾನೆ. ಹೆಂಡತಿಗೋಸ್ಕರ ಎಂದಿಗೂ ಅಲ್ಲ.

ಒಬ್ಬೊಬ್ಬರಿಗೇ ಇಚ್ಛೆಯಾಗಿ ಪ್ರೀತಿಹರಿದರೆ ಅದಕ್ಕೆ ಸ್ವಾರ್ಥಮೂಲಕವಾದ ಪ್ರೀತಿ ಎನ್ನಬಹುದು. ಆದರೆ ಗಂಡ-ಹೆಂಡತಿ ಇಬ್ಬರಿಗೂ ಒಂದೇ ಕಾಲದಲ್ಲಿ ಸುಖೇಚ್ಛೆಯಾಗಿ ಪ್ರೀತಿ ಹರಿದರೆ ಅದು ಇಬ್ಬರದೂ ಪ್ರೀತಿಯಾಗಿದೆ ಎನ್ನಬಹುದಲ್ಲ.

**ಅನ್ಯೋನ್ಯಪ್ರೇರಣೇಽಪ್ಯೇವಂ ಸ್ವೇಚ್ಛೇಯೈವ ಪ್ರವ–**
**ರ್ತನಮ್ ॥೯॥**

ಆ ಪ್ರೀತಿಯು ಒಬ್ಬರೊಬ್ಬರನ್ನು ಯಾವಾಗ ಪ್ರೇರಿಸುವದೋ ಆಗ ಕೂಡ ತಂತಮ್ಮ ಇಚ್ಛೆಯನ್ನು ಪೂರ್ಣಮಾಡಿಕೊಳ್ಳುವದಕ್ಕೇ ಅದರ ವೃತ್ತಿ ಇರುವದು.

—ಸ್ವೇಚ್ಛೆಯಿಂದಲೇ ಪ್ರೀತಿಹರಿಯುವದೆಂದು ಉದಾಹರಿಸುತ್ತಾರೆ.

**ಶ್ಮಶ್ರುಕಂಟಕವೇಧೇನ ಬಾಲೇರುದತಿ ತತ್ಪಿತಾ ।**
**ಚುಂಬತ್ಯೇವ ನ ಸಾ ಪ್ರೀತಿರ್ಬಾಲಾರ್ಥೇ ಸ್ವಾರ್ಥ ಏವ ಸಾ॥೧೦॥**

ಗಡ್ಡ-ಮೀಸೆಗಳ ಕೂದಲು ಚುಚ್ಚಿ ಮಗು ಅಳುತ್ತಿದ್ದರೂ ತಂದೆಯು ಅದನ್ನು ಮುದ್ದಿಸುತ್ತಾನೆ. ಆ ಪ್ರೀತಿಯು ಹುಡುಗನ ಸಲುವಾಗಿ ಅಲ್ಲ. ಅದು ತನ್ನ ಸಲುವಾಗಿಯೇ ಸರಿ.

—ಹೆಂಡತಿ-ಮಗ ಇತ್ಯಾದಿ ಪದಾರ್ಥಗಳು ಸಚೇತನವಾದುದರಿಂದ 'ಹಾಗಾದರೆ ಪ್ರೀತಿಯು ಯಾರ ಸಲುವಾಗಿ ?' ಎಂದು ಸಂದೇಹ ತಾಳಲು ಆಸ್ಪದವಿದೆ. ಆದರೆ ಜಡ ಪದಾರ್ಥಗಳ ವಿಷಯದಲ್ಲಿ ಅಂಥ ಸಂದೇಹಕ್ಕೆ ಆಸ್ಪದವಿಲ್ಲ ಎಂದು ಈಗ ದ್ರವ್ಯದ ದೃಷ್ಟಾಂತ.

**ನಿರಿಚ್ಛಮಪಿ ರತ್ನಾದಿವಿತ್ತಂ ಯತ್ನೇನ ಪಾಲಯನ್ ।**
**ಪ್ರೀತಿಂ ಕರೋತಿ ಸ ಸ್ವಾರ್ಥೇ ವಿತ್ತಾರ್ಥತ್ವಂ ನ ಶಂಕಿತಮ್ ॥೧೧॥**

ಸ್ವತಃ ಜಡ ಪದಾರ್ಥಗಳಾದ ಕಾರಣ ಇಚ್ಛಾದಿಗಳು ಇಲ್ಲದೇ ಇರುವ ರತ್ನ ಮೊದಲಾದ ದ್ರವ್ಯವನ್ನು ಪ್ರಯತ್ನ ಪೂರ್ವಕವಾಗಿ ರಕ್ಷಿಸುತ್ತಿರುವ ಪುರುಷನು, ತನ್ನ ಸಲುವಾಗಿಯೇ ಆ ದ್ರವ್ಯವನ್ನು ಪ್ರೀತಿಸುತ್ತಾನೆ. ದ್ರವ್ಯದ ಸಲುವಾಗಿ ಪ್ರೀತಿಸುತ್ತಾನೆ ಎಂಬ ಸಂದೇಹವೇ ಅಲ್ಲಿ ಬರುವಂತಿಲ್ಲ.

—ಪಶುವಿನ ದೃಷ್ಟಾಂತ ಕೊಟ್ಟು ಅದೇ ಮಾತನ್ನು ಸಮರ್ಥಿಸುತ್ತಾರೆ.

**ಅನಿಚ್ಛತಿ ಬಲೀವರ್ದೇ ವಿವಾಹಯಿಷತೇ ಬಲಾತ್ ।**
**ಪ್ರೀತಿಃ ಸಾ ವಣಿಗರ್ಥೈವ ಬಲೀವರ್ದಾರ್ಥತಾ ಕುತಃ ॥೧೨॥**

ಎತ್ತು ಇಚ್ಛಿಸದಿದ್ದರೂ ಮನುಷ್ಯನು ಅದಕ್ಕೆ ಭಾರ ಹೊರಿಸುವದನ್ನು ಆಕ್ಷೇಪಿಸುತ್ತಾನೆ. ಆ ಪ್ರೀತಿಯು ವ್ಯಾಪಾರಿಯ ಸಲುವಾಗಿ ಮಾತ್ರ. ಎತ್ತಿನ ಸಲುವಾಗಿ ಎಲ್ಲಿಯ ಪ್ರೀತಿ ?

—ಬ್ರಾಹ್ಮಣನ ದೃಷ್ಟಾಂತ.

**ಬ್ರಾಹ್ಮಣ್ಯಂಮೇಽಸ್ತಿ ಪೂಜ್ಯೋಽಹಮಿತಿ ತುಷ್ಯತಿ ಪೂಜಯಾ ।**
**ಅಚೇತನಾಯಾ ಜಾತೇರ್ನೋ ಸಂತುಷ್ಟಿಃ ಪುಂಸ ಏವ ಸಾ ॥೧೩॥**

ನನಗೆ ಬ್ರಾಹ್ಮಣತ್ವವಿದೆ. ಆದುದರಿಂದ ನಾನು ಪೂಜ್ಯನು ಎಂದು ಕೊಂಡವನು ಪೂಜೆಯಿಂದ ಸಂತೋಷಗೊಳ್ಳುವನು. ಆಗ ಜಡವಾದ ಜಾತಿಯ ಸಂತೋಷವು ಇದಲ್ಲ. ಅದು ಪುರುಷನಿಗೇ ಸರಿ.

—ನ ವಾ ಅರೇ ಕ್ಷತ್ರಸ್ಯಂ ಎಂಬ ವಾಕ್ಯದ ತಾತ್ಪರ್ಯ.

**ಕ್ಷತ್ರಿಯೋಽಹಂ ತೇನರಾಜ್ಯಂ ಕರೋಮೀತ್ಯತ್ರ ರಾಜಿತಾ ।**
**ನ ಜಾತೇ ರ್ವೈಶ್ಯಜಾತ್ಯಾದೌ ಯೋಜನಾಯೇದ-**
**ಮೀರಿತಮ್ ॥೧೪॥**

ನಾನು ಕ್ಷತ್ರಿಯನು. ಆದುದರಿಂದ ರಾಜ್ಯವಾಳುತ್ತೇನೆ. ಈ ಅರಸುತನದ ಹೆಮ್ಮೆಯ ಸುಖವು ಕ್ಷತ್ರಿಯನಾದ ಚೇತನನಿಗೇ ಹೊರತು ಜಡವಾದ ಕ್ಷತ್ರಿಯ ಜಾತಿಗಲ್ಲ. ಇದರಂತೇ ವೈಶ್ಯ ಮೊದಲಾದ ಜಾತಿಗಳ ಬಗೆಗೆ ಯೋಜಿಸಿಕೊಳ್ಳಲು ಹೇಳಿದ್ದಾರೆ.

—ನ ವಾ ಅರೇ ಲೋಕಾನಾಂ ಕಾಮಾಯ ಎಂಬುದರ ತಾತ್ಪರ್ಯ.

**ಸ್ವರ್ಗಲೋಕ ಬ್ರಹ್ಮಲೋಕೌ ಸ್ತಾಂ ಮಮೇತ್ಯಭಿವಾಂಛನಮ್।**
**ಲೋಕಯೋರ್ನೋಪಕಾರಾಯ ಸ್ವಭೋಗಾಯೈವ**
**ಕೇವಲಮ್ ॥೧೫॥**

ನನಗೆ ಸ್ವರ್ಗಲೋಕ–ಬ್ರಹ್ಮಲೋಕಗಳು ಸಿಗಲಿ ಎಂದು ಬಲವಾದ ಅಪೇಕ್ಷೆ ಇರುವದಷ್ಟೇ ? ಅದು ಲೋಕಗಳ ಉಪಕಾರಕ್ಕಾಗಿಯಲ್ಲ. ಕೇವಲ ತನ್ನ ಭೋಗಕ್ಕೆ.

(ಇಲ್ಲಿ ಎರಡೇ ಲೋಕಗಳನ್ನು ಉಲ್ಲೇಖಿಸಿದ್ದಾರೆ. ಆದರೂ ಕರ್ಮ ಮತ್ತು ಉಪಾಸನೆಗಳಿಂದ ದೊರೆಯುವ ಎಲ್ಲ ಲೋಕಗಳನ್ನು ಸೂಚಿಸುವದಕ್ಕೆ ಹೀಗೆ ಹೇಳಲಾಗಿದೆ.) —ಇದರಂತೆ.

**ಈಶ ವಿಷ್ಣ್ವಾದಯೋದೇವಾಃ ಪೂಜ್ಯತೇ ಪಾಪನಷ್ಟಯೇ ।**
**ನ ತನ್ನಿಷ್ಪಾಪದೇವಾರ್ಥಂ ತತ್ತು ಸ್ವಾರ್ಥಂ ಪ್ರಯುಜ್ಯತೇ॥೧೬॥**

ಶಂಕರ–ವಿಷ್ಣು ಮೊದಲಾದ ದೇವತೆಗಳನ್ನು ಪಾಪನಾಶಕ್ಕಾಗಿ ಪೂಜಿಸಲಾಗುವದು. ಆದರೆ ಹಾಗೆ ಪೂಜಿಸುವದು ಪಾಪರಹಿತರಾದ ದೇವರಿಗೋಸ್ಕರವಲ್ಲ. ಪೂಜಿಸುವವನ ಪ್ರಯೋಜನಕ್ಕಾಗಿ.

**ಋಗಾದಯೋ ಹ್ಯಧೀಯಂತೇ ದುರ್ಬ್ರಾಹ್ಮಣ್ಯನಾಪ್ತಯೇ।**
**ನ ತತ್ಪ್ರಸಕ್ತಂ ವೇದೇಷು ಮನುಷ್ಯೇಷು ಪ್ರಸಜ್ಜತೇ ॥೧೭॥**

ತನ್ನ ಬ್ರಾಹ್ಮಣ್ಯಕ್ಕೆ ಕುಂದು ಬಾರದೇ ಇರಬೇಕೆಂದು ಋಗ್ವೇದ ಮೊದಲಾದವನ್ನು ಅಧ್ಯಯನ ಮಾಡುತ್ತಾರೆ. ಆ ಬ್ರಾಹ್ಮಣ್ಯದ ಕುಂದು ವೇದಗಳಿಗೇನೂ ಬರುವದಿಲ್ಲ. ಮನುಷ್ಯರಿಗೆ ಮಾತ್ರ ಉಂಟು.

**ಭೂಮ್ಯಾದಿಪಂಚಭೂತಾನಿ ಸ್ಥಾನ-ತೃಟ್-ಪಾಕ-ಶೋಷಣೈಃ।**
**ಹೇತುಭಿಶ್ಚಾವಕಾಶೇನ ವಾಂಛಂತ್ಯೇಷಾಂ ನ ಹೇತವಃ ॥೧೮॥**

ಎಲ್ಲ ಪ್ರಾಣಿಗಳು ತಮ್ಮ ವಾಸಕ್ಕೆ ಭೂಮಿಯು ಸ್ಥಳವನ್ನು ಕೊಡಲಿ. ಜಲವು ನೀರಡಿಕೆಯನ್ನು ಕಳೆಯಲಿ. ಬೆಂಕಿಯು ಅಡಿಗೆ ಬೇಯಿಸಲಿ. ಘಾಳಿಯು ಹಸಿಯನ್ನಾರಿಸಲಿ. ಆಕಾಶವು ಅವಕಾಶವನ್ನು ಕೊಡಲಿ. ಎಂಬ ನಿಮಿತ್ತಗಳಿಂದ ಪೃಥಿವಿಯೇ ಮೊದಲಾದ ಭೂತಗಳನ್ನು ಅಪೇಕ್ಷಿಸುತ್ತಾರೆ. ಆದರೆ ಆ ಭೂತಗಳಿಗೆ ಯಾವದೇ ಇಚ್ಛೆ ಇಲ್ಲ.

—ಇನ್ನು 'ನ ವಾ ಅರೇ ಸರ್ವಸ್ಯಕಾಮಾಯ.' ಎಂಬುದರ ತಾತ್ಪರ್ಯ.

**ಸ್ವಾಮಿಭೃತ್ಯಾದಿಕಂ ಸರ್ವಂ ಸ್ವೋಪಕಾರಾಯ ವಾಂಛತಿ ।**
**ತತ್ತತ್ಕೃತೋಪಕಾರಸ್ತು ತಸ್ಯ ತಸ್ಯ ನ ವಿದ್ಯತೇ ॥೧೯॥**

ಲೋಕದಲ್ಲಿ ಆಳು ಅರಸನನ್ನು ಬಯಸುವದೂ, ಅರಸು ಆಳನ್ನು ಬಯಸುವದೂ ಇದೆಲ್ಲ ತಂತಮ್ಮ ಪ್ರಯೋಜನಕ್ಕಾಗಿಯೇ. ಅವರವರು ಮಾಡಬಲ್ಲ ಉಪಕಾರವೆಂಬುದು ಹೆರವರಿಗಲ್ಲ. ತಮ್ಮಸಲುವಾಗಿಯೇ.

—ಒಳ್ಳೇದು, ಶ್ರುತಿಯಲ್ಲಿ ಇಂಥ ಅನೇಕ ಉದಾಹರಣೆಗಳನ್ನು ಹೇಳಿರುವುದೇಕೆ ?

**ಸರ್ವ ವ್ಯವಹೃತಿಷ್ವೇವಮನುಸಂಧಾತುಮೀದೃಶಮ್ ।**
**ಉದಾಹರಣಬಾಹುಲ್ಯಂ ತೇನ ಸ್ವಾಂ ವಾಸಯೇನ್ಮತಿಮ್॥೨೦॥**

ಹೀಗೆ ತಾವು ಅಪೇಕ್ಷೆಪಟ್ಟು ಮಾಡುವ ಊಟ-ಉಡಿಗೆ ಮೊದಲಾದವುಗಳಲ್ಲಿ 'ತನ್ನ ಸುಖಕ್ಕಾಗಿಯೇ ಎಲ್ಲವೂ ಪ್ರಿಯವಾಗುವದು.' ಎಂದು ಕಂಡುಕೊಳ್ಳಲು ಬರಬೇಕೆಂಬುದಕ್ಕೇ ಬಹಳ ಉದಾಹರಣೆಗಳನ್ನು ಹೇಳಿದುದಾಗಿದೆ. ಈ ಕಾರಣದಿಂದ ಆತ್ಮ ವಿಷಯದಲ್ಲಿ ಬುದ್ಧಿಯನ್ನು ನೆಲೆಗೊಳಿಸಬೇಕು.

(ಆತ್ಮನು ಎಲ್ಲಕ್ಕಿಂತ ಪ್ರಿಯನು ಎಂದು ತಿಳಿಯಬೇಕೆಂದು ತಾತ್ಪರ್ಯ.)

—ಹಾಗಾದರೆ ಆ ಪ್ರೀತಿಯ ಸ್ವರೂಪವು ಯಾವದು ?

**ಅಥ ಕೇಯಂ ಭವೇತ್ ಪ್ರೀತಿಃ ಶ್ರೂಯತೇ ಯಾ ನಿಜಾತ್ಮನಿ ।**
**ರಾಗೋ ವಧ್ವಾದಿ ವಿಷಯೇ ಶ್ರದ್ಧಾ ಯಾಗಾದಿ ಕರ್ಮಣಿ ।**
**ಭಕ್ತಿಃ ಸಾದ್ಗುರುದೇವಾದಾವಿಚ್ಛಾ ತ್ವಪ್ರಾಪ್ತವಸ್ತುನಿ ॥೨೧॥**

ಆತ್ಮನಲ್ಲಿ ಪ್ರೀತಿ ಎಂದು ಕೇಳಬರುವದಲ್ಲ. ಅದು ಯಾವಬಗೆಯದು? ಹೆಂಡತಿ–ಮಕ್ಕಳು ಮೊದಲಾದವರಲ್ಲಿರುವಂಥ ಪ್ರೀತಿಯೇ ? ಅಥವಾ ಯಜ್ಞ–ಯಾಗಾದಿ ಕರ್ಮಗಳಲ್ಲಿರುವಂಥ ಶ್ರದ್ಧೆಯೇ ? ಅಥವಾ ಗುರು-ದೇವ ಮುಂತಾದವರಲ್ಲಿ ಇಡುವಂಥ ಭಕ್ತಿಯೇ ? ಅಲ್ಲವಾದರೆ ದೊರೆಯದ ವಸ್ತುವಿನಲ್ಲಿ ಹುಟ್ಟುವ ಬಯಕೆಯೇ ?

—ಈ ನಾಲ್ಕೂ ಅಲ್ಲ. ಅದು ಬೇರೆ.

**ತದ್ಧ್ಯರ್ಸ್ತು ಸಾತ್ವಿಕೀ ವೃತ್ತಿಃ ಸುಖ ಮಾತ್ರಾನುವರ್ತಿನೀ ।**
**ಪ್ರಾಪ್ತೇ ನಷ್ಟೇಽಪಿ ಸದ್ಭಾವಾದಿಚ್ಛಾತೋ ವ್ಯತಿರಿಚ್ಯತೇ ॥೨೨॥**

ಸುಖದ ಅನುಭವದಿಂದ ಮಾತ್ರ ತಿಳಿದು ಬರುವ, ಸತ್ವಗುಣದ ಪರಿಣಾಮವಾದ ಅಂತಃಕರಣದ ವೃತ್ತಿಯೇ ಆತ್ಮಸಂಬಂಧವಾದ ಪ್ರೀತಿ. ಆದರೆ ಅದು ಇಚ್ಛೆಯಲ್ಲ. ಯಾಕಂದರೆ ದೊರೆತ ಸುಖಾದಿಗಳು ಒಂದುವೇಳೆ ನಾಶವಾದರೂ ಅವುಗಳ ವಿಷಯಕ್ಕೆ ಪ್ರೀತಿ ಇದ್ದೇ ಇರುವದು. ಆದುದರಿಂದ ಈ ಪ್ರೀತಿಯು ಇಚ್ಛೆಗಿಂತ ಬೇರೆ.

(ಇಚ್ಛೆಯು ದೊರೆಯದಿರುವ ಸುಖಾದಿಗಳ ವಿಷಯದಲ್ಲಿ ಮಾತ್ರವಿರುವದು. ಆದರೆ ನಾವು ಹೇಳಿದ ಪ್ರೀತಿಯು ಎಲ್ಲವುಗಳ ವಿಷಯದಲ್ಲಿ. ಯಾಕಂದರೆ ಎಲ್ಲ ವಸ್ತುಗಳು ಆತ್ಮನಿಗೆ ಬೇಕಾದವುಗಳು.)

—ಸುಖಕ್ಕೆ ಕಾರಣವೆನಿಸುವ ಅನ್ನ ಮೊದಲಾದವುಗಳಲ್ಲಿಯಂತೆ ಆತ್ಮನಲ್ಲಿರುವ ಪ್ರೀತಿಯೂ ತೋರುವದು. ಆದುದರಿಂದ ಆತ್ಮನು ಕೂಡ ಅನ್ನಾದಿಗಳಂತೆ ಸುಖಸಾಧನವಾಗುವನು.

**ಸುಖ ಸಾಧನತೋಪಾಧೇ ರನ್ನ ಪಾನಾದಯಃ ಪ್ರಿಯಾಃ॥೨೩॥**

**ಆತ್ಮಾನುಕೂಲ್ಯಾದನ್ನಾದಿ ಸಮುಶ್ಚೇದಮುನಾತ್ರ ಕಃ ।**
**ಅನುಕೂಲಯಿತವ್ಯಃ ಸ್ಯಾನ್ನೈಕಸ್ಮಿನ್ ಕರ್ಮಕರ್ತೃತಾ ॥೨೪॥**

ಅನ್ನ ಪಾನಾದಿಗಳು ಸುಖಕ್ಕೆ ಸಾಧನವೆನಿಸುವದರಿಂದ ಹೇಗೆ ಪ್ರಿಯ ವೆನಿಸುವವೋ ಹಾಗೆ ಆತ್ಮನು ಕೂಡ ಪ್ರಿಯನುವೆನಿಸುವದರಿಂದ ಅವನೂ ಅನ್ನ ಮೊದಲಾದವುಗಳಂತೆ, ಎನ್ನುವದಾದರೆ— ಆತ್ಮನೆಂಬ ಸುಖಸಾಧನದಿಂದ ಸುಖವನ್ನು ಪಡೆಯುವ ಮತ್ತೊಬ್ಬ ಭೋಕ್ತಾರನು ಯಾರು ? ಯಾರೂ ಇಲ್ಲ. ಆದುದರಿಂದ ಆತ್ಮನು ಸುಖಸಾಧನವಲ್ಲ. ತಾನೇ ತನಗೆ ಅನುಕೂಲ ಮಾಡಿಕೊಳ್ಳಬಹುದು ಎಂದರೆ ಒಬ್ಬನೇ ಒಬ್ಬನಾದ ಆತ್ಮನಲ್ಲಿ ಒಂದೇವೇಳೆಗೆ ಭೋಗತ್ವ ಮತ್ತು ಭೋಕ್ತೃತ್ವಗಳು ಸಂಭವಿಸಲಾರವು.

—ಆತ್ಮನು ನಿರತಿಶಯ ಪ್ರೇಮಾಸ್ಪದನು ಎನ್ನುತ್ತಾರೆ.

**ಸುಖೇ ವೈಷಯಿಕೇ ಪ್ರೀತಿಮಾತ್ರಮಾತ್ಮಾ ತ್ವತಿಪ್ರಿಯಃ ।**
**ಸುಖೇ ವ್ಯಭಿಚಾರತ್ಯೇಷಾ ನಾತ್ಮನಿ ವ್ಯಭಿಚಾರಿಣೀ ॥೨೫॥**

ವಿಷಯಗಳಿಂದ ಹುಟ್ಟುವ ಸುಖದಲ್ಲಿ ಸಾಮಾನ್ಯ ಪ್ರೀತಿ ಇರುತ್ತದೆ. ಆತ್ಮನು ಅತಿಶಯ ಪ್ರಿಯನು. ನಿರತಿಶಯ ಪ್ರೇಮ ವಿಷಯನು. ಆದುದ ರಿಂದ ವಿಷಯಗಳಿಂದ ಹುಟ್ಟುವ ಸುಖದಂತೆ ಅಲ್ಲ. ವಿಷಯ ಸುಖದಲ್ಲಿಯ ಪ್ರೀತಿಯು ಅದನ್ನು ಬಿಟ್ಟು ಮತ್ತೊಂದು ಕಡೆಗೆ ಹರಿಯಬಹುದು. ಆದರೆ ಆತ್ಮನಲ್ಲಿರುವ ಪ್ರೀತಿಯು ಅವನನ್ನು ಬಿಟ್ಟು ಹೋಗುವದಿಲ್ಲ.

(ವೈಷಯಿಕ ಸುಖದ ಪ್ರೀತಿಯು ಕೆಲವು ಸಾರೆ ಬೇರೆ ಸುಖದತ್ತ ಹರಿ ಯುವದು. ಅದರಲ್ಲಿಯೇ ನೆಲೆಯಾಗಿ ನಿಲ್ಲಲಾರದು. ಆದರೆ ಆತ್ಮನಲ್ಲಿರುವ ಪ್ರೀತಿಯು ಹೀಗೆ ಚಾಂಚಲ್ಯ ಹೊಂದುವದಿಲ್ಲ. ಆದುದರಿಂದ ಅದು ನಿರತಿ ಶಯ ಪ್ರೀತಿ.)

— ವೈಷಯಿಕ ಸುಖಗಳಲ್ಲಿರುವ ಪ್ರೀತಿಯು ವ್ಯಭಿಚಾರು.

**ಏಕಂ ತ್ಯಕ್ತ್ವಾಽನ್ಯದಾದತ್ತೇ ಸುಖಂ ವೈಷಯಿಕಂ ಸದಾ ।**
**ನಾತ್ಮಾ ತ್ಯಾಜ್ಯೋ ನ ಚಾದೇಯಸ್ತಸ್ಮಿನ್ ವ್ಯಭಿಚರೇತ್ ಕಥಮ್ ॥೨೬॥**

ಒಂದು ವೈಷಯಿಕ ಸುಖವನ್ನು ಬಿಟ್ಟು ಮನುಷ್ಯನು ಬೇರೊಂದನ್ನು ಸ್ವೀಕರಿಸುತ್ತಾನೆ. ಆದರೆ ಆತ್ಮನು ಬಿಡುವಂಥವನೂ ಅಲ್ಲ. ಹಿಡಿಯುವಂಥವನೂ ಅಲ್ಲ. ಎಂದಮೇಲೆ ಅಂಥವನಲ್ಲಿರುವ ಪ್ರೀತಿಯು ಕದಲುವದು ಹೇಗೆ ?

—ಆಗಲಿ. ಹುಲ್ಲು ಮೊದಲಾದವುಗಳಂತೆ ಅವನು ಉಪೇಕ್ಷೆಗೆ ಗುರಿಯಾಗಬಾರದು ?

**ಹಾನಾದಾನ ವಿಹೀನೇಽಸ್ಮಿನ್ನುಪೇಕ್ಷಾ ಚೇತ್ತೃಣಾದಿವತ್ ।**
**ಉಪೇಕ್ಷಿತುಃ ಸ್ವರೂಪತ್ವಾನ್ನೋಪೇಕ್ಷ್ಯತ್ವಂ ನಿಜಾತ್ಮನಃ॥೨೭॥**

ಬಿಡುವದಕ್ಕೆ ಮತ್ತು ಹಿಡಿಯುವದಕ್ಕೆ ಆಗದ ಆತ್ಮನ ವಿಷಯದಲ್ಲಿ ಕ್ಷುದ್ರವಾದ ಹುಲ್ಲು ಮೊದಲಾದವುಗಳಂತೆ ಉಪೇಕ್ಷೆಯಾಗಬಹುದು. ಎಂದರೆ ಆತ್ಮನು ಉಪೇಕ್ಷೆ ಮಾಡುವವನ ಸ್ವರೂಪವೇ ಇರುವದರಿಂದ ತನ್ನನ್ನು ತಾನೇ ಉಪೇಕ್ಷಿಸುವದು ಸಾಧ್ಯವಿಲ್ಲ.

(ಆತ್ಮನು ಒಬ್ಬನೇ ಒಬ್ಬನು. ಆದುದರಿಂದ ಪರಿತ್ಯಾಗದ ವಿಷಯನಲ್ಲ. ಮತ್ತು ತೃಣಾದಿಗಳಂತೆ ಭಿನ್ನ ಪದಾರ್ಥನೂ ಅಲ್ಲ.)

ಆತ್ಮನಲ್ಲಿ ಬೇಸರ–ದ್ವೇಷಗಳುಂಟಾದಾಗ ಅವನನ್ನು ತೊರೆಯಲು ಬರುವದೆಂಬ ಅನುಭವವಿದೆ.

**ರೋಗ ಕ್ರೋಧಾಭಿಭೂತಾನಾಂ ಮುಮೂರ್ಷಾ**
**ವೀಕ್ಷ್ಯತೇ ಕ್ವಚಿತ್ ।**
**ತತೋ ದ್ವೇಷಾದ್ಭವೇ ತ್ಯಾಜ್ಯ ಆತ್ಮೇತಿ ಯದಿ ತನ್ನ ಹಿ ॥೨೮॥**

ಬೇನೆ–ಸಿಟ್ಟು ಮೊದಲಾದವುಗಳಿಂದ ವ್ಯಾಕುಲರಾದವರಲ್ಲಿ ಒಂದೊಂದು ಸಾರೆ ಸಾಯಬೇಕೆಂಬ ಇಚ್ಛೆಯಾಗುವದು ಕಂಡುಬರುತ್ತದೆ. ಅದನ್ನು ಕಂಡು ದ್ವೇಷಾದಿಗಳಿಂದ ಆತ್ಮನನ್ನು ತೊರೆಯಲು ಸಾಧ್ಯ ಎನ್ನುವದಾದರೆ ಅದು ಯೋಗ್ಯವಲ್ಲ. —ಈಗ ಸಮಾಧಾನ.

**ತ್ಯಕ್ತುಂ ಯೋಗ್ಯಸ್ಯ ದೇಹಸ್ಯ ನಾತ್ಮತಾ ತ್ಯಕ್ತುರೇವ ಸಾ ।**
**ನ ತ್ಯಕ್ತ್ರೈರ್ಯಸ್ತಿ ಸ ದ್ವೇಷಸ್ತ್ಯಾಜ್ಯೇ ದ್ವೇಷೇ ತು ಕಾ**
**ಕ್ಷತಿಃ ॥೨೯॥**

ತೊರೆಯಲು ಯೋಗ್ಯವಾದ ದೇಹಕ್ಕೆ ಆತ್ಮತ್ವವಿಲ್ಲ. ಆದರೆ ಆತ್ಮತ್ವವು ತೊರೆಯಲು ಸಿದ್ಧನಾಗಿರುವ ದೇಹದಿಂದ ಬೇರೆ ಎನಿಸುವ ಜೀವನಿಗೆ ಮಾತ್ರ ಇದೆ. ಆದುದರಿಂದ ಆ ದ್ವೇಷವು ತೊರೆಯಬಲ್ಲವನಾದ ಆತ್ಮನ ವಿಷಯದಲ್ಲಿ ಅಲ್ಲ. ತೊರೆಯಲು ಬರುವಂಥ ದೇಹದ ವಿಷಯದಲ್ಲಿ ದ್ವೇಷವು ಕಂಡು ಬಂದರೆ ಏನು ಹಾನಿ ?

ಹೀಗೆ ಶ್ರುತಿವಿವೇಚನೆಯಿಂದ ಆತ್ಮನು ಅತಿ ಪ್ರಿಯನೆಂದು ತೋರಿಸಿ ಯುಕ್ತಿಗಳಿಂದ ಕೂಡ ಅದನ್ನೇ ಸಮರ್ಥಿಸುತ್ತಾರೆ.

**ಆತ್ಮಾರ್ಥತ್ವೇನ ಸರ್ವಸ್ಯ ಪ್ರೀತೇಶ್ಚಾತ್ಮಾಹ್ಯತಿಪ್ರಿಯಃ ।**
**ಸಿದ್ಧೋ ಯಥಾ ಪುತ್ರಮಿತ್ರಾತ್ ಪುತ್ರಃ ಪ್ರಿಯತರಸ್ತಥಾ ॥೩೦॥**

ಮಗನ ಗೆಳೆಯನಿಗಿಂತಲೂ ಮಗನು ಅತಿಶಯ ಪ್ರಿಯನು. ಇದರಂತೆ ಗಂಡ–ಹೆಂಡತಿ–ಮಗ ಮೊದಲಾದವುಗಳು ತನಗೆ ಬೇಕಾದವುಗಳಾದುದರಿಂದ ಪ್ರಿಯವೆನಿಸುವವು. ಆದುದರಿಂದ ತನ್ನ ಸ್ವರೂಪವೇ ಆದ ಆತ್ಮನು ಅತಿ ಪ್ರಿಯನು ಎಂದು ಸಿದ್ಧವಾಯಿತು.

(ಭೋಗ್ಯ ಪದಾರ್ಥಗಳಮೇಲಿನ ಪ್ರೀತಿಯೆಲ್ಲ ಅವು ಆತ್ಮನಿಗೆ ಉಪಕಾರಿಯಾಗಿವೆ ಎಂದು. ಆದುದರಿಂದ ಅವುಗಳ ಮೇಲಿನ ಪ್ರೀತಿ ಮುಖ್ಯವಲ್ಲ. ಆತ್ಮನಮೇಲಿನ ಪ್ರೀತಿ ಮುಖ್ಯ. ಹಾಗೆಂದು ಆತ್ಮನು ಅತಿಪ್ರಿಯ.)

—ಶ್ರುತಿ-ಯುಕ್ತಿಗಳಿಂದ ಹೇಳಿದಂತೆ ಸ್ವಾನುಭವವೂ ಇದೆ.

**ಮಾ ನ ಭೂವಮಹಂ ಕಿಂತು ಭೂಯಾಸಂ ಸರ್ವದೇತ್ಯಸೌ ।**
**ಆಶೀಃ ಸರ್ವಸ್ಯ ದೃಷ್ಟೇತಿ ಪ್ರತ್ಯಕ್ಷಾ ಪ್ರೀತಿರಾತ್ಮನಿ ॥೩೧॥**

ನಾನು ಇಲ್ಲದಂತಾಗಬಾರದು. ಮತ್ತು ಯಾವಾಗಲೂ ಇರಬೇಕು. ಹೀಗೆ ಈ ಆಶೆಯು ಎಲ್ಲರಿಗೂ ಇರುತ್ತದೆ. ಇದರಿಂದ ಆತ್ಮನ ವಿಷಯದಲ್ಲಿ ನಿರತಿಶಯ ಪ್ರೀತಿಯು ಪ್ರತ್ಯಕ್ಷ ಸಿದ್ಧವಾಗಿದೆ.

**ಇತ್ಯಾದಿಭಿಸ್ತ್ರಿಭಿಃ ಪ್ರೀತೌ ಸಿದ್ಧಾಯಾಮೇವಮಾತ್ಮನಿ ।**
**ಪುತ್ರ–ಭಾರ್ಯಾದಿ ಶೇಷತ್ವಮಾತ್ಮನಃ ಕೈಶ್ಚಿದೀರಿತಮ್ ॥೩೨॥**

ಅನುಭವ, ಯುಕ್ತಿ ಮತ್ತು ಶ್ರುತಿಗಳೆಂಬ ಮೂರು ಪ್ರಮಾಣಗಳಿಂದ ಆತ್ಮನಲ್ಲಿರುವ ಪ್ರೀತಿಯು ಸಿದ್ಧವಾಗಿರಲು, ಶ್ರುತಿ ಮೊದಲಾದವುಗಳ ತಾತ್ಪ

ರ್ಯವನ್ನರಿಯದವರು ಆತ್ಮವು ಪುತ್ರ–ಭಾರ್ಯೆ ಮೊದಲಾದ ಭೋಗಸಾಧನಗಳ ಶೇಷ ಎಂದರೆ ಅವುಗಳ ಭೋಗ ಸಾಧನವೆಂದು ಹೇಳುತ್ತಾರೆ.

—ಅದುಹೇಗೆ?

**ಏತದ್ವಿವಕ್ಷಯಾ ಪುತ್ರೇ ಮುಖ್ಯಾತ್ಮತ್ವಂ ಶ್ರುತೀರಿತಮ್ ।**
**ಆತ್ಮಾವೈ ಪುತ್ರನಾಮೇತಿ ತಚ್ಚೋಪನಿಷದಿ ಸ್ಫುಟಮ್ ॥೩೩॥**

ಇದನ್ನು ತೋರಿಸುವದರ ಸಲುವಾಗಿಯೇ 'ಆತ್ಮನೇ ಪುತ್ರನಾಗಿದ್ದಾನೆ, ಎಂಬ ಅರ್ಥದ ಶ್ರುತಿಯು ಪುತ್ರನೇ ಮುಖ್ಯವಾದ ಆತ್ಮವೆಂದು ಹೇಳಿರುವದು ಹಾಗೆ ಮಗನ ಮುಖ್ಯ ಆತ್ಮತ್ವವನ್ನು ಐತರೇಯಾದಿ ಉಪನಿಷತ್ತುಗಳಲ್ಲಿ ಕಂಡು ಕೊಳ್ಳಬಹುದು.

—ಅದು ಯಾವವಾಕ್ಯದಿಂದ? ಎಂದರೆ-

**ಸೋಽಸ್ಯಾಯ ಮಾತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇ ।**
**ಅಥಾಸ್ಯೇತರ ಆತ್ಮಾಯಂ ಕೃತಕೃತ್ಯಃ ಪ್ರಮೀಯತೇ ॥೩೪॥**

ಇವನ ಆ ಆತ್ಮನು (ಮಗನು) ಪುಣ್ಯಕರ್ಮಾದಿಗಳನ್ನು ಮಾಡುವದಕ್ಕೆ ಪ್ರತಿನಿಧಿ ಎಂದು ನಿಯಾಮಕನಾಗುತ್ತಾನೆ. ಆ ಮೇಲೆ ಇವನಲ್ಲಿ ಬೇರೆ ಎಂದು ತೋರುವ ಪಿತ್ರಾತ್ಮನು ಎಂದರೆ ತಾನು ಕೃತಕೃತ್ಯನೆಂದು ತಿಳಿಯುತ್ತಾನೆ.

(ಮಗನು ಹುಟ್ಟಿದ ಕೂಡಲೇ ತಂದೆಯು ತಾನು ಪಿತೃಋಣದಿಂದ ಮುಕ್ತನಾದೆನೆಂದು ಭಾವಿಸುವನು. ತರುವಾಯ ಬೆಳೆದ ಮಗನು ತಂದೆಯು ಮಾಡಬೇಕಾಗಿದ್ದ ಪುಣ್ಯ ಕರ್ಮಗಳಲ್ಲಿ ಪ್ರತಿನಿಧಿ ಎಂದು ನಿಯಾಮಕನಾಗುವನು. ನಂತರ ಪ್ರತ್ಯಕ್ಷರೂಪನಾದ ಪುತ್ರನಿಗಿಂತ ಭಿನ್ನನಾದ ವೃದ್ಧನಾದ ಪಿತೃರೂಪಾತ್ಮನು ತಾನು ಕೃತಕೃತ್ಯನಾದೆನೆಂದು ನೆನೆಯುವನು. ಇದರಿಂದ ಪುತ್ರನಿಗೆ ಮುಖ್ಯ ಆತ್ಮತ್ವವೂ ತಂದೆಗೆ ಅಮುಖ್ಯಾತ್ಮವೂ ತೋರುವದು ಎಂದು ತಾತ್ಪರ್ಯ.)

—ಇದನ್ನು ದೃಢಪಡಿಸುವದಕ್ಕೋಸ್ಕರ 'ನಾಪುತ್ರಸ್ಯ ಲೋಕೋಽಸ್ತಿ' ಮಗನಿಲ್ಲದವನಿಗೆ ಪರಲೋಕವಿಲ್ಲ ಎಂದು ಹೇಳುವ ಬೇರೊಂದು ವಾಕ್ಯದ ಅರ್ಥದ ನಿರ್ದೇಶ.

**ಸತ್ಯಪ್ಯಾತ್ಮನಿ ಲೋಕೋಽಸ್ತಿ ನಾ ಪುತ್ರಸ್ಯಾತ ಏವ ಹಿ ।**
**ಅನುಶಿಷ್ಟಂ ಪುತ್ರಮೇವ ಲೋಕ್ಯಮಾಹುರ್ಮನೀಷಿಣಃ ॥೩೫॥**

ಹೀಗೆ ಮಗನೇ ಮುಖ್ಯವಾದ ಆತ್ಮನಾದುದರಿಂದ ತಾನು ಪ್ರತ್ಯೇಕ್ಷವಾಗಿ ಇದ್ದರೂ ಪುತ್ರನಿಲ್ಲದವನಿಗೆ ಪಿತೃಲೋಕವು ದೊರೆಯುವುದಿಲ್ಲ ಎಂದು ಪುರಾಣಾದಿಗಳು ಹೇಳುವವು. ಮತ್ತು 'ನೀನು ಬ್ರಹ್ಮ' ಇತ್ಯಾದಿ ಮಂತ್ರಗಳ ಮುಖಾಂತರ ಮಗನಿಗೆ ಉಪದೇಶ ಮಾಡಿರುವದರಿಂದ ಮಗನೇ ಪರಲೋಕಸಾಧನವೆಂದು ಪಂಡಿತರು ಹೇಳುವರು.

ಇನ್ನು ಐಹಿಕ ಸುಖವು ಕೂಡ ಮಗನಿಂದಲೇ ಮುಂತಾದ ಅರ್ಧ ಕೊಡುವ ಶ್ರುತಿಯ ಅನುವಾದ.

**ಮನುಷ್ಯಲೋಕೋ ಜಯ್ಯಃ ಸ್ಯಾತ್ ಪುತ್ರೇಣೈವೇತರೇಣ ನೋ।**
**ಮುಮೂರ್ಷುರ್ಮಂತ್ರಯೇತ್ಪುತ್ರಂ ತ್ವಂ ಬ್ರಹ್ಮೇತ್ಯಾದಿ ಮಂತ್ರಕೈಃ ॥೩೬॥**

ಮನುಷ್ಯಲೋಕದ ಸುಖವನ್ನು ಪುತ್ರನಿಂದಲೇ ಸಂಪಾದಿಸುವದು ಸಾಧ್ಯ. ಬೇರೆ ಕರ್ಮಾದಿ ಸಾಧನಗಳಿಂದಲ್ಲ. ಮರಣಾಸನ್ನನಾದ ತಂದೆಯು– ನೀನು ಯಜ್ಞವಾಗಿರುವೆ, ನೀನು ಲೋಕವಾಗಿರುವೆ, ನೀನು ಬ್ರಹ್ಮವಾಗಿರುವೆ, ಎಂಬ ಮೂರು ಮಂತ್ರಗಳಿಂದ ಮಗನಿಗೆ ಉಪದೇಶ ಕೊಡುವನು.

**ಇತ್ಯಾದಿ ಶ್ರುತಯಃ ಪ್ರಾಹುಃ ಪುತ್ರಭಾರ್ಯಾದಿಶೇಷತಾಮ್।**
**ಲೌಕಿಕಾ ಅಪಿ ಪುತ್ರಸ್ಯ ಪ್ರಾಧಾನ್ಯಮನುಮನ್ವತೇ ॥೩೭॥**

ಇವೇ ಮೊದಲಾದ ಶ್ರುತಿಗಳು ಆತ್ಮನು ಪುತ್ರ–ಭಾರ್ಯೆ ಮೊದಲಾದವರ ಶೇಷ ಎಂದರೆ ಭೋಗ ಸಾಧನವೆಂದು ಹೇಳುತ್ತವೆ. ಲೋಕದ ಜನರಾದರೂ ಮಗನೇ ಮುಖ್ಯನೆಂದು ತಿಳಿಯುವರು.

**ಸ್ವಸ್ಮಿನ್ ಮೃತೇಽಪಿ ಪುತ್ರಾದಿರ್ಜೀವೇದ್ವಿತ್ತಾದಿನಾ ಯಥಾ ।**
**ತಥೈವ ಯತ್ನಂ ಕುರುತೇ ಮುಖ್ಯಾಃ ಪುತ್ರಾದಯಸ್ತತಃ ॥೩೮॥**

ತಾವು ಸತ್ತ ಮೇಲೆ ಕೂಡ ಪುತ್ರ–ಭಾರ್ಯೆ ಮೊದಲಾದವರು ಹಣ–ಹೊಲ–ಮನೆಗಳಿಂದ ಸುಖದಿಂದ ಜೀವಿಸಲೆಂದು ಹಣ ಮುಂತಾದವನ್ನು ಕೂಡಿ ಹಾಕುತ್ತಾರೆ. ಆದುದರಿಂದ ಪುತ್ರಾದಿಗಳು ಮುಖ್ಯಾತ್ಮ

—ಇಷ್ಟಾದರೂ ಆತ್ಮನು ಅವರಿಗಾಗಿ ಎಂದು ಸಿದ್ಧವಾಗುವದಿಲ್ಲ ವೆನ್ನುತ್ತಾರೆ.

**ಬಾಢ ಮೇತಾವತಾ ನಾತ್ಮಾ ಶೇಷೋ ಭವತಿ ಕಸ್ಯಚಿತ್ |**
**ಗೌಣಮಿಥ್ಯಾಮುಖ್ಯಭೇದೈರಾತ್ಮಾಯಂ ಭವತಿ ತ್ರಿಧಾ ||೩೯||**

ನೀವು ಹೇಳುವದೆಲ್ಲಸರಿ. ಆದರೆ ಪುತ್ರಾದಿಗಳಿಗೆ ಕೆಲವು ಪ್ರಸಂಗಗಳಲ್ಲಿ ಮುಖ್ಯತ್ವವಿರುವದೆಂದು ಆತ್ಮನು ಅವರಿಗಾಗಿ ಇರುವನು ಎಂದು ಸಿದ್ಧ ವಾಗುವದಿಲ್ಲ. ಪ್ರಮಾಣಗಳು ಮತ್ತು ಯುಕ್ತಿಗಳು ಇವುಗಳಿಂದ ಅರ್ಥಸಿದ್ಧಿ ಯಾಗುತ್ತದೆ. ಈಗ ಯಾವ ವ್ಯವಹಾರದಲ್ಲಿ ಯಾರು ಮುಖ್ಯ ಎಂಬುವನ್ನು ತಿಳಿಸುತ್ತಾರೆ. ಈ ಆತ್ಮನು ಗೌಣ-ಮಿಥ್ಯೆ ಮತ್ತು ಮುಖ್ಯವೆಂದು ಮೂರುಬಗೆ.

(ಶ್ರುತಿ-ಸ್ಮೃತಿ—ಪುರಾಣಗಳಲ್ಲಿ ಪುತ್ರ-ಭಾರ್ಯೆ ಇತ್ಯಾದಿ ಪದಾರ್ಥ ಗಳನ್ನು ಆತ್ಮನೆಂಬ ಸಂಜ್ಞೆಯಿಂದ ಗೌರವಿಸಿದುದುಂಟು. ಆದರೆ ಅಷ್ಟರಿಂದ ಆತ್ಮನು ಅವರಿಗಾಗಿ ಎನ್ನಲಾಗದು.)

ಪುತ್ರನೇ ಮೊದಲಾದ ಆತ್ಮರು ಗೌಣವೆಂದು ತಿಳಿಯಬೇಕು ಎನ್ನು ವದಕ್ಕೆ ಲೌಕಿಕ ಗೌಣ ಪ್ರಯೋಗವನ್ನು ಉದಾಹರಿಸಿ ಪುತ್ರಾದಿಗಳಿಗೆ ಅದನ್ನು ಜೋಡಿಸುತ್ತಾರೆ.

**ದೇವದತ್ತಸ್ತು ಸಿಂಹೋಽಯಮಿತ್ಯೈಕ್ಯಂ**
**ಗೌಣಮೇತಯೋಃ |**
**ಭೇದಸ್ಯ ಭಾಸಮಾನತ್ವಾತ್ಪುತ್ರಾದೇರಾತ್ಮತಾ ತಥಾ ||೪೦||**

'ಈ ದೇವದತ್ತನು ಸಿಂಹವು' ಎಂಬಲ್ಲಿ ದೇವದತ್ತ-ಮತ್ತು ಸಿಂಹಗಳಿಗೆ ಐಕ್ಯವನ್ನು ಹೇಳಿದೆ. ಆದರೆ ಅವೆರಡೂ ಪದಾರ್ಥಗಳಿಗೆ ಭೇದವಿರುವದು ಸ್ಪಷ್ಟ ವಾಗಿದೆ. ಎಂದಮೇಲೆ ಹೀಗೆ ಹೇಳುವದು ಗೌಣವೆಂದು ತಿಳಿಯಬೇಕು. ಅದರಂತೆ ಪುತ್ರಾದಿಗಳ ಆತ್ಮವೂ ಗೌಣವಾಗಿದೆ.

(ನಿಜವಾಗಿ ದೇವದತ್ತನು ಸಿಂಹವಲ್ಲ. ಸಿಂಹದಂತೆ ಪರಾಕ್ರಮಿ. ಹೀಗೆ ಒಂದು ಗುಣ ವಿಷಯದಲ್ಲಿ ಸಿಂಹ-ದೇವದತ್ತರಿಗೆ ಸಾಮ್ಯವಿದೆ. ಆದುದರಿಂದ ಹಾಗೆ ಹೇಳಬೇಕಾಯಿತು. ವಸ್ತುತಃ ಎರಡೂ ಪದಾರ್ಥಗಳಲ್ಲಿ ಅನೇಕ ಭೇದಗಳುಂಟು.)

—ಈಗ ಮಿಥ್ಯಾತ್ಮನನ್ನು ಹೇಳುತ್ತಾರೆ.

**ಭೇದೋऽಸ್ತಿ ಪಂಚಕೋಶೇಷು ಸಾಕ್ಷಿಣೋ ನ ತು ಭಾತ್ಯಸೌ।**
**ಮಿಥ್ಯಾತ್ಮತಾऽತಃ ಕೋಶಾನಾಂ ಸ್ಥಾಣೋಶ್ಚೋರಾತ್ಮತಾ ತಥಾ ॥೪೧॥**

ಆನಂದಮಯದಿಂದ ಹಿಡಿದು ಅನ್ನಮಯ ಕೋಶದ ವರೆಗೆ ಐದು ಕೋಶಗಳು. ಇವುಗಳಿಗೂ ಇವುಗಳ ಸಾಕ್ಷಿಯಾದ ಆ ಆತ್ಮನಿಗೂ ಇರುವ ಭೇದವು ಸ್ಪಷ್ಟವಾಗದೇ ಸ್ಥೂಲದೇಹವೇ ನಾನೆಂದು ಭಾವಿಸಿ ಹೇಳುವ ಆತ್ಮವು ಮಿಥ್ಯಾತ್ಮ. ಹೇಗಂದರೆ ಮೋಟುಮರವು ಕಳ್ಳನೆಂದು ಭಾಸವಾದುದು ಹೇಗೆ ಮಿಥ್ಯೆಯೋ ಹಾಗೆ ಕೋಶಗಳು ಆತ್ಮವೆಂದು ತಿಳಿಯುವದು ಮಿಥ್ಯೆ.

—ಇನ್ನು ಮುಖ್ಯಾತ್ಮ.

**ನ ಭಾತಿ ಭೇದೋ ನಾಪ್ಯಸ್ತಿ ಸಾಕ್ಷಿಣೋऽಪ್ರತಿಯೋಗಿನಃ।**
**ಸರ್ವಾಂತರತ್ವಾತ್ತಸ್ಯೈವ ಮುಖ್ಯಮಾತ್ಮತ್ವಮಿಷ್ಯತೇ ॥೪೨॥**

ಎದುರಾಳಿಯೇ ಇಲ್ಲದ ಸಾಕ್ಷಿಯಾದ ಆತ್ಮನಲ್ಲಿ ಭೋಗಗಳು ಇಲ್ಲವೇ ಇಲ್ಲ. ಮತ್ತು ತೋರುವುದೂ ಇಲ್ಲ. ಪುತ್ರ-ಭಾರ್ಯೆ ಮುಂತಾದ ಎಲ್ಲ ಪದಾರ್ಥಗಳಲ್ಲಿಯೂ ಅವನು ಇರತಕ್ಕವನಾದುದರಿಂದ ಅವನೇ ಮುಖ್ಯಾತ್ಮನು.

**ಸತ್ಯೇವಂ ವ್ಯವಹಾರೇಷು ಯೇಷು ಯಸ್ಯಾತ್ಮತೋಚಿತಾ।**
**ತೇಷು ತಸ್ಯೈವ ಶೇಷಿತ್ವಂ ಸರ್ವಸ್ಯಾನ್ಯಸ್ಯ ಶೇಷತಾ ॥೪೩॥**

ಹೀಗೆ ಆತ್ಮನಲ್ಲಿ ಮೂರು ಬಗೆ ಎಂದು ಸಿದ್ಧವಾದುದರಿಂದ ಲೌಕಿಕವಾದ ಮತ್ತು-ವೈದಿಕವಾದ ವ್ಯವಹಾರಗಳಲ್ಲಿ ಎಂದರೆ ಪಾಲನ-ಪೋಷಣ-ಬ್ರಹ್ಮತತ್ವ ಇತ್ಯಾದಿ ವ್ಯವಹಾರಗಳಲ್ಲಿ ಪುತ್ರ ಮುಂ.ಗೆ ದೇಹಮೊದಲಾಂಗೆ, ಅಥವಾ ಸಾಕ್ಷಿಗೆ ಆತ್ಮತ್ವವು ಯೋಗ್ಯವಾಗಿದೆಯೋ, ಆ ವ್ಯವಹಾರದಲ್ಲಿ ಅವರು ಮುಖ್ಯಾತ್ಮರು. ಉಳಿದವರೆಲ್ಲ ಗೌಣಾತ್ಮಎಂದರೆ ಸುಖಸಾಧನರು.

—ಇದನ್ನೇ ಐದು ಶ್ಲೋಕಗಳಿಂದ ವಿವರಿಸುತ್ತಾರೆ.

**ಮುಮೂರ್ಷೋರ್ಗೃಹರಕ್ಷಾದೌ ಗೌಣಾತ್ಮೈವೋಪಯುಜ್ಯತೇ।**
**ನ ಮುಖ್ಯಾತ್ಮಾ ನ ಮಿಥ್ಯಾತ್ಮಾ ಪುತ್ರಶೇಷೀ ಭವತ್ಯತಃ॥೪೪॥**

ಸಾಯಲಾದ ತಂದೆಯ ಹೊಲ-ಮನೆ ಮುಂತಾದವುಗಳನ್ನು ಕಾಪಾಡುವ ಹೊಣೆಯು ಗೌಣಾತ್ಮರಾದ ಹೆಂಡತಿ-ಮಕ್ಕಳ ಮೇಲೆಯೇ ಬೀಳುತ್ತದೆ. ಅಲ್ಲಿ ನಿರ್ವಿಕಾರನಾದ ಮುಖ್ಯಾತ್ಮನು ಎಂದರೆ ಸಾಕ್ಷಿಯು ಉಪಯುಕ್ತನಲ್ಲ. ಇನ್ನು ಮಿಥ್ಯಾತ್ಮಎಂದರೆ ದೇಹವು ಸಾವು ಪಡೆಯುವದು. ಇದರ ಉಪಯೋಗವೂ ಇಲ್ಲ. ಆದುದರಿಂದ ಇಲ್ಲಿ ಮಗನು ಮುಖ್ಯಾತ್ಮ.

ತಾನಿದ್ದರೂ ಗ್ರಹಾದಿಗಳ ರಕ್ಷಣೆಯ ವಿಷಯದಲ್ಲಿ ಮಗನೇಕೆ? ಎಂದರೆ ದೃಷ್ಟಾಂತ.

**ಅಧ್ಯೇತಾ ವಹ್ನಿರಿತ್ಯತ್ರ ಸನ್ನಪ್ಯಗ್ನಿರ್ನ ಗೃಹ್ಯತೇ ।**
**ಅಯೋಗ್ಯತ್ವೇನ ಯೋಗ್ಯತ್ವಾದ್ಬಟುರೇವಾತ್ರ ಗೃಹ್ಯತೇ ॥೪೫॥**

'ಈ ವೇದಪಾಠಕನು ಬೆಂಕಿ, ಎಂಬಲ್ಲಿ ಅಗ್ನಿಯು ಎದುರಿಗಿದ್ದರೂ ಅದು ವೇದಪಾಠ ಮಾಡಲಾರದಾದುದರಿಂದ ಅಗ್ನಿ ಎಂಬ ಶಬ್ದದಿಂದ ಅದನ್ನು ತೆಗೆದುಕೊಳ್ಳುವುದಿಲ್ಲ. ಇಂಥ ಪ್ರಸಂಗದಲ್ಲಿ ವೇದಪಾಠಕ್ಕೆ ಯೋಗ್ಯನೆನಿಸುವ ಬ್ರಹ್ಮಚಾರಿಯನ್ನೇ ಸ್ವೀಕರಿಸಲಾಗುವುದು.

—ಹೀಗೆ ಗೌಣಾತ್ಮನನ್ನು ಮುಖ್ಯಾತ್ಮನೆಂದು ಯಾವಾಗ ಗ್ರಹಿಸಬೇಕು? ಎಂಬುದನ್ನು ತಿಳಿಸಿ ಈಗ ಮಿಥ್ಯಾತ್ಮನ ಪ್ರಾಧಾನ್ಯವನ್ನು ಹೇಳುವರು.

**ಕೃಶೋಽಹಂ ಪುಷ್ಟಿಮಾಪ್ಸ್ಯಾಮೀತ್ಯಾದೌ ದೇಹಾತ್ಮತೋಚಿತಾ ।**
**ನ ಪುತ್ರಂ ವಿನಿಯುಂಕ್ತೇಽತ್ರ ಪುಷ್ಟಿಹೇತ್ವನ್ನಭಕ್ಷಣೇ ॥೪೬॥**

'ನಾನು ಸೊರಗಿದ್ದೇನೆ. ಪುಷ್ಟಿಕರ ಅನ್ನ ಮುಂತಾದವನ್ನುಂಡು ಮೈದುಂಬುತ್ತೇನೆ. ಇತ್ಯಾದಿ ವ್ಯವಹಾರದಲ್ಲಿ ಮಿಥ್ಯಾತ್ಮನಾದ ದೇಹವನ್ನೇ ಮುಖ್ಯಾತ್ಮವೆನ್ನ ಬೇಕಾಗುವುದು. ಅದೇ ಯೋಗ್ಯ. ಈ ಸಂದರ್ಭದಲ್ಲಿ ಪುಷ್ಟಿಕರವಾದ ಅನ್ನವನ್ನುಣ್ಣಲು ಗೌಣಾತ್ಮನಾದ ಮಗನಿಗೆ ಯಾರೂ ಹೇಳುವುದಿಲ್ಲ.

—ಆದರಂತೆ

**ತಪಸಾ ಸ್ವರ್ಗಮೇಷ್ಯಾಮೀತ್ಯಾದೌ ಕರ್ತ್ರಾತ್ಮತೋಚಿತಾ ।**
**ಅನಪೇಕ್ಷ್ಯ ವಪುರ್ಭೋಗಂ ಚರೇತ್ ಕೃಚ್ಛ್ರಾದಿಕಂ ತತಃ ॥೪೭॥**

'ತಪಸ್ಸನ್ನು ಮಾಡಿ ನಾನು ಸ್ವರ್ಗಕ್ಕೆ ಹೋಗುತ್ತೇನೆ, ಎಂಬಲ್ಲಿ ಕರ್ತನೆಂದು ಅಭಿಮಾನ ಪಡುವ ಜೀವಾತ್ಮನನ್ನು ಹೇಳುವುದೇ ಯೋಗ್ಯ. ದೇಹ ಮೊದಲಾದವುಗಳಲ್ಲ ಹಾಗೆಂದು ದೇಹದ ಸೌಖ್ಯವನ್ನು ಅಪೇಕ್ಷಿಸದೇ ದಂಡನಾರೂಪವಾದ ಕೃಚ್ಛ್ರ-ಚಾಂದ್ರಾಯಣಾದಿ ತಪಸ್ಸನ್ನು ಮಾಡುತ್ತಾನೆ.

**ಮೋಕ್ಷ್ಯೇಽಹಮಿತ್ಯತ್ರ ಯುಕ್ತಂ ಚಿದಾತ್ಮತ್ವಂ ತದಾ ಪುಮಾನ್ ।**
**ತದ್ವೇತ್ತಿ ಗುರುಶಾಸ್ತ್ರಾಭ್ಯಾಂ ನ ತು ಕಿಂಚಿಚ್ಚಿಕೀರ್ಷತಿ ॥೪೮॥**

'ನಾನು ಮುಕ್ತಿಯನ್ನು ಪಡೆಯುತ್ತೇನೆ; ಎಂಬಲ್ಲಿ ಜ್ಞಾನರೂಪನಾದ ಆತ್ಮನೇ ಮುಖ್ಯ. ಯಾಕೆಂದರೆ ಆಗ ಅವನು ಆಚಾರ್ಯೋಪದೇಶ ಮತ್ತು ವಾಕ್ಯಾರ್ಥ ವಿಚಾರಗಳಿಂದ ನಾನು ಗೌಣಾತ್ಮನಲ್ಲ.ಮಿಥ್ಯಾತ್ಮನಲ್ಲ. ನಾನು ಸಚ್ಚಿದಾನಂದ ಬ್ರಹ್ಮವು ಎಂದು ಚಿದಾತ್ಮನನ್ನು ತಿಳಿಯುತ್ತಾನೆ. ಅಲ್ಲದೆ ಮತ್ತೇನನ್ನೂ ಮಾಡಲು ಇಚ್ಛಿಸುವದಿಲ್ಲ.

ಹೀಗೆ ಬೇರೆ ಬೇರೆ ವ್ಯವಹಾರಗಳಲ್ಲಿ ತ್ರಿವಿಧಾತ್ಮರ ಪ್ರಾಧಾನ್ಯವುಂಟು ಎಂಬುದಕ್ಕೆ ದೃಷ್ಟಾಂತ.

**ವಿಪ್ರಕ್ಷತ್ರಾದಯೋ ಯದ್ವದ್ ಬ್ರಹಸ್ಪತಿ ಸವಾದಿಷು ।**
**ವ್ಯವಸ್ಥಿತಾಸ್ತಥಾ ಗೌಣಮಿಥ್ಯಾಮುಖ್ಯಾ ಯಥೋಚಿತಮ್ ॥೪೯॥**

ಬೃಹಸ್ಪತಿಸವ ಮೊದಲಾದ ಯಜ್ಞಗಳಲ್ಲಿ ಬ್ರಾಹ್ಮಣ-ಕ್ಷತ್ರಿಯಾದಿಗಳು ಹೇಗೆ ಹೇಗೆ ಅಧಿಕಾರಿಗಳೆನಿಸುವರೋ, ಅದರಂತೆ ಗೌಣಾತ್ಮ-ಮಿಥ್ಯಾತ್ಮ-ಮುಖ್ಯಾತ್ಮರು ತಂತಮ್ಮ ಯೋಗ್ಯತೆಯಂತೆ ಪ್ರಾಧಾನ್ಯ ಪಡೆಯುವರು.

( ಬ್ರಾಹ್ಮಣೋ ಬ್ರಹಸ್ಪತಿಸವೇನ ಯಜೇತ. ರಾಜಾರಾಜಸೂಯೇನಂ ವೈಶ್ಯೋವೈಶ್ಯಸ್ತೋಮೇನಂ ಎಂಬ ವಾಕ್ಯಗಳ ಮೇಲಿಂದ ಯಜ್ಞಮಾಡಲು ಅಲ್ಲಿ ಹೇಳಿದವರೇ ತಕ್ಕವರು. ಉಳಿದವರಲ್ಲ ಎಂದು ವ್ಯವಸ್ಥೆಯು ಕಂಡು ಬರುವುದು. ಇದರಂತೆಯೇ ಆತ್ಮರ ಬಗೆಗೆ. )

**ತತ್ರ ತತ್ರೋಚಿತೇ ಪ್ರೀತಿರಾತ್ಮನ್ಯೇವಾತಿಶಾಯಿನೀ ।**
**ಅನಾತ್ಮನಿ ತು ತಚ್ಛೇಷೇ ಪ್ರೀತಿರನ್ಯತ್ರ ನೋಭಯಮ್ ॥೫೦॥**

ಯಾವ ಯಾವ ವ್ಯವಹಾರದಲ್ಲಿ ಯಾವ ಯಾವ ಆತ್ಮನು ಮುಖ್ಯವೋ ಆಯಾ ವ್ಯವಹಾರದಲ್ಲಿ ಅವನ ಮೇಲೆಯೇ ಅತಿಶಯವಾದ ಪ್ರೀತಿಯು ಇರುವುದು. ಮತ್ತು ಆತ್ಮ-ಮತ್ತು ಆತ್ಮಶೇಷ ಇವರನ್ನು ಬಿಟ್ಟು ಉಳಿದ ಪದಾರ್ಥಗಳಲ್ಲಿ ಅತಿ ಪ್ರೀತಿಯೂ ಇಲ್ಲ. ಸಾಮಾನ್ಯ ಪ್ರೀತಿಯೂ ಇಲ್ಲ.

—ಮೇಲಿನ ಶ್ಲೋಕದ 'ಅನ್ಯತ್ರ, ಎಂಬ ಶಬ್ದಾರ್ಥದ ಒಳಭೇದಗಳನ್ನು ಹೇಳುತ್ತಾರೆ.

**ಉಪೇಕ್ಷ್ಯಂ ದ್ವೇಷ್ಯಮಿತ್ಯನ್ಯದ್ದ್ವೇಧಾ ಮಾರ್ಗ-**
**ತೃಣಾದಿಕಮ್ ।**
**ಉಪೇಕ್ಷ್ಯಂ ವ್ಯಾಘ್ರಸರ್ಪಾದಿ ದ್ವೇಷ್ಯಮೇವಂಚತುರ್ವಿ-**
**ಧಮ್ ॥೩೧॥**

ಉಪೇಕ್ಷೆ ಮಾಡತಕ್ಕಂಥವು. ದ್ವೇಶಮಾಡತಕ್ಕಂಥವು. ಎಂದು ಆ ಅನ್ಯತ್ ಎಂದರೆ ಬೇರೆ ಪದಾರ್ಥಗಳು ಎರಡು ವಿಧ. ಬೀದಿಯಲ್ಲಿ ಬಿದ್ದ ಹುಲ್ಲು-ಕಸ ಮುಂತಾದವು ಉಪೇಕ್ಷಿಸತಕ್ಕಂಥವು. ಹುಲಿ-ಹಾವು ಮುಂತಾದವುಗಳು ದ್ವೇಷಮಾಡತಕ್ಕಂಥವುಗಳು. ಹೀಗೆ ಒಟ್ಟು ಪದಾರ್ಥಗಳು ನಾಲ್ಕು ವಿಧ.

—ಹಾಗಂದರೆ ?

**ಆತ್ಮಾಶೇಷ ಉಪೇಕ್ಷ್ಯಂ ಚ ದ್ವೇಷ್ಯಂ ಚೇತಿ ಚತುಷ್ವಪಿ ।**
**ನ ವ್ಯಕ್ತಿನಿಯಮಃ ಕಿಂತು ತತ್ತತ್ಕಾರ್ಯಾತ್ತಥಾ ತಥಾ ॥೩೨॥**

ಹೀಗೆ ಅತಿಪ್ರೀತಿಗೆ ಪಾತ್ರನಾದ ಮುಖ್ಯಾತ್ಮ. ಸಾಮಾನ್ಯ ಪ್ರೀತಿಗೆ ಪಾತ್ರರಾದ ಅವನ ಸಹಕಾರಿಗಳು. ಉಪೇಕ್ಷಿಸತಕ್ಕ ಹುಲ್ಲು ಮೊದಲಾದವುಗಳು. ದ್ವೇಷಿಸತಕ್ಕ ಹುಲಿ ಮೊದಲಾದವುಗಳು. ಎಂದು ವಸ್ತುಗಳು ನಾಲ್ಕುಬಗೆ. ಈ ನಾಲ್ಕೂ ಬಗೆಯ ಪದಾರ್ಥಗಳಲ್ಲಿ ಪ್ರೀತಿ ಪಾತ್ರವಾಗುವಿಕೆ ಮುಂತಾದವುಗಳ ಬಗೆಗೆ ನಿಯಮವಿಲ್ಲ. ಆಯಾ ವಸ್ತುಗಳ ಕಾರ್ಯಾನುಗುಣವಾಗಿ ಅತಿ ಪ್ರೀತಿ ಮೊದಲಾದವುಗಳು ಉಂಟಾಗುವವು.

—ಹೀಗಿರುವ ನಿಯಮರಾಹಿತ್ಯವನ್ನು ಉದಾಹರಣೆಯಿಂದ ತೋರಿಸುತ್ತಾರೆ.

**ಸ್ಯಾದ್ವ್ಯಾಘ್ರಃ ಸಂಮುಖೋ ದ್ವೇಷ್ಯೋ ಹ್ಯುಪೇಕ್ಷ್ಯಸ್ತು ಪರಾಙ್ಮುಖಃ ।**
**ಲಾಲನಾದನುಕೂಲಶ್ಚೇದ್ ವಿನೋದಾಯೇತಿ ಶೇಷತಾಮ್ ॥೫೩॥**

ಹುಲಿಯು ಮುರಿದು ತಿನ್ನುವದಕ್ಕೆಂದು ಮೈಮೇಲೆ ಬಂದರೆ ದ್ವೇಷಿಸಲು ತಕ್ಕದ್ದಾಗುವದು. ಆದರೆ ಅದೇ ಮತ್ತೊಂದು ಕಡೆಗೆ ಎಲ್ಲಿಯೋ ಹಾಯ್ದು ಹೋಗುತ್ತಿದ್ದರೆ ಉಪೇಕ್ಷಿಸತಕ್ಕದ್ದಾಗುವದು. ಚಿಕ್ಕಂದಿನಿಂದ ಸಾಕಿ ಪ್ರೀತಿಯಿಂದ ಬೆಳೆಸಿದ್ದಾದರೆ ಅನುಕೂಲವಾಗಿ ಆಟ-ವಾಟಗಳಿಂದ ವಿನೋದಕ್ಕೆ ಕಾರಣವಾಗುವದು. ಆದರಿಂದ ಅದು ಉಪಕಾರಿ ಎನಿಸುವದರಿಂದ ಪ್ರೀತಿಗೆ ಪಾತ್ರವಾಗುವದು.

ಒಂದೇ ವಸ್ತುವಿಗೆ ಪ್ರಿಯತ್ವವೇ ಮೊದಲಾದ ಮೂರು ಧರ್ಮಗಳುಂಟು. ಎಂದರೆ ಜಗತ್ತಿನ ವ್ಯವಸ್ಥೆಯ ಗತಿ ಏನು ?

**ವ್ಯಕ್ತೀನಾಂ ನಿಯಮೋ ಮಾ ಭೂಲ್ಲಕ್ಷಣಾತ್ತು ವ್ಯವಸ್ಥಿತಿಃ ।**
**ಆನುಕೂಲ್ಯಂ ಪ್ರಾತಿಕೂಲ್ಯಂ ದ್ವಯಾಭಾವಶ್ಚ ಲಕ್ಷಣಮ್ ॥೫೪॥**

ಪ್ರತಿಯೊಂದು ವ್ಯಕ್ತಿಗಳ ಬಗೆಗೆ ನಿಯಮವಿಲ್ಲದೇ ಹೋಗಲಿ. ಆದರೆ ಲಕ್ಷಣದಿಂದ ವ್ಯವಸ್ಥೆಯಾಗುತ್ತದೆ. ಅನುಕೂಲತೆ-ಪ್ರತಿಕೂಲತೆ ಇವೆರಡೂ ಇಲ್ಲದಿರುವಿಕೆ ಎಂಬವು ಲಕ್ಷಣಗಳು.

(ಅನುಕೂಲತೆ ಕಂಡುಬಂದಾಗ ಪ್ರೀತಿ, ಪ್ರತಿಕೂಲತೆ ಎನಿಸಿದಾಗ ದ್ವೇಷ. ಇವೆರಡೂ ಇಲ್ಲದಿರುವಾಗ ಉಪೇಕ್ಷೆ.)

—ಈವರೆಗೆ ಹೇಳಿದ್ದರ ಅರ್ಥವನ್ನು ಸಂಕ್ಷೇಪವಾಗಿ ಹೇಳುತ್ತಾರೆ.

**ಆತ್ಮಾ ಪ್ರೇಯಾನ್ ಪ್ರಿಯಃ ಶೇಷೋ ದ್ವೇಷೋಪೇಕ್ಷೆ ತದನ್ಯಯೋಃ ।**
**ಇತಿ ವ್ಯವಸ್ಥಿತೋ ಲೋಕೋ ಯಾಜ್ಞವಲ್ಕ್ಯಮತಂ ಚ ತತ್ ॥೫೫॥**

ಆತ್ಮನು ಅತಿಪ್ರಿಯನು. ಅವನಿಗೆ ಉಪಕಾರವಾದವು ಪ್ರಿಯ. ಇವುಗಳಿಂದ ಬೇರೆಯಾದ ಹುಲಿ ಮೊದಲಾದವು ದ್ವೇಷಿಸತಕ್ಕವು. ಹುಲ್ಲು ಮೊದ

ಲಾದವುಗಳು ಉಪೇಕ್ಷಿಸತಕ್ಕವು. ಹೀಗೆ ಲೋಕದಲ್ಲಿ ವ್ಯವಸ್ಥೆಯುಂಟು. ಇದು ಬೃಹದಾರಣ್ಯಕದ ಯಾಜ್ಞವಲ್ಕ್ಯರ ಅಭಿಪ್ರಾಯವಾಗಿದೆ.

—ಆತ್ಮನ ಪ್ರಿಯತಮತ್ವವನ್ನು ಬೃಹದಾರಣ್ಯಕದ ಮೈತ್ರೇಯೀ ಬ್ರಾಹ್ಮಣದಲ್ಲಿ ಅಷ್ಟೇ ಅಲ್ಲ ಪುರುಷವಿಧ ಬ್ರಾಹ್ಮಣದಲ್ಲಿಯೂ ಹೇಳಿದೆ ಎಂದು ಅಲ್ಲಿಯ ವಾಕ್ಯಾರ್ಥವನ್ನು ಸಂಗ್ರಹಿಸಿ ಹೇಳುತ್ತಾರೆ.

**ಅನ್ಯತ್ರಾಪಿ ಶ್ರುತಿಃ ಪ್ರಾಹ ಪುತ್ರಾದ್ವಿತ್ತಾತ್ತಥಾನ್ಯತಃ ।**
**ಸರ್ವಸ್ಮಾದಾಂತರಂ ತತ್ವಂ ತದೇತತ್ಪ್ರೇಯ ಇಷ್ಯತಾಮ್ ॥೫೭॥**

"ತದೇ ತತ್ ಪ್ರೇಯಃ ಪುತ್ರಾತ್ ಪ್ರೇಯಃ ವಿತ್ತಾತ್ ಪ್ರೇಯಃ (ಬೃಹದಾರಣ್ಯಕ) ಎಂಬ ವಾಕ್ಯದಿಂದ ಮಗನಿಗಿಂತ, ದ್ರವ್ಯಕ್ಕಿಂತ ಅದರಂತೆ ಬೇರೆ ಯಾವುದೇ ಪದಾರ್ಥಗಳಿಗಿಂತ ಒಳಗಿರುವ ಆತ್ಮತತ್ವವು ಅತಿ ಪ್ರಿಯವಾಗಿದೆ. ಹೀಗೆ ಬೇರೆ ಕಡೆಗೂ ಶ್ರುತಿ ಹೇಳುತ್ತದೆ.

**ಶ್ರೌತ್ಯಾ ವಿಚಾರದೃಷ್ಟ್ಯಾಯಂ ಸಾಕ್ಷ್ಯೇವಾತ್ಮಾ ನ ಚೇತರಃ ।**
**ಕೋಶಾನ್ ಪಂಚ ವಿವಿಚ್ಯಾಂತರ್ವಸ್ತುದೃಷ್ಟಿರ್ವಿಚಾರಣಾ ॥೫೮॥**

ಹೀಗೆ ಶ್ರುತಿಗಳು ತೋರುವ ವಿಚಾರ ದೃಷ್ಟಿಯಿಂದ ಈ ಸಾಕ್ಷಿಯೇ ಮುಖ್ಯಾತ್ಮ. ಮಗ ಮುಂತಾದವರು ಯಾರೂ ಅಲ್ಲ. ಆ ವಿಚಾರ ದೃಷ್ಟಿಯ ಸ್ವರೂಪ:— ಅನ್ನಮಯವೇ ಮೊದಲಾದ ಐದು ಕೋಶಗಳನ್ನು ಆತ್ಮನಿಂದ ಬೇರೆಮಾಡಿ ಅವೆಲ್ಲವುಗಳ ಒಳಗೆ ಇರುವ ಆತ್ಮನ ಅನುಭವವನ್ನು ಪಡೆಯುವದೇ ವಿಚಾರ.

—ಆ ಒಳಗೆ ಇರುವ ವಸ್ತುವಿನ ದರ್ಶನ ಪ್ರಕಾರ.

**ಜಾಗರಸ್ವಪ್ನಸುಪ್ತೀನಾಮಾಗಮಾಪಾಯಭಾಸನಮ್ ।**
**ಯತೋ ಭವತ್ಯಸಾವಾತ್ಮಾ ಸ್ವಪ್ರಕಾಶಚಿದಾತ್ಮಕಃ ॥೫೯॥**

ಎಚ್ಚರ-ಕನಸು-ನಿದ್ರೆಗಳೆಂಬ ಅವಸ್ಥೆಗಳ ಹುಟ್ಟುವಿಕೆ ಮತ್ತು ನಾಶ ಇವುಗಳು ಯಾವುದರಿಂದ ಗೊತ್ತಾಗುವದೋ ಅದು ತನ್ನ ಬೆಳಕಿನಿಂದಲೇ ಬೆಳಗುವ ಜ್ಞಾನಸ್ವರೂಪವು. ಅರ್ಥಾತ್ ಆತ್ಮನು.

—ಇದನ್ನೇ ವಿಸ್ತರಿಸುತ್ತಾರೆ.

**ಶೇಷಾಃ ಪ್ರಾಣಾದಿವಿತ್ತಾಂತಾ ಆಸನ್ನಾಸ್ತಾರತಮ್ಯತಃ ।**
**ಪ್ರೀತಿಸ್ತಥಾ ತಾರತಮ್ಯಾತ್ತೇಷು ಸರ್ವೇಷು ವೀಕ್ಷ್ಯತೇ ॥೬೦॥**

ಸಾಕ್ಷಿಯನ್ನು ಹೊರತುಪಡಿಸಿ ಪ್ರಾಣವನ್ನು ಮೊದಲು ಮಾಡಿ ದ್ರವ್ಯದ ವರೆಗಿನ ಶೇಷ ಎಂದರೆ ಆತ್ಮೋಪಕಾರಕ ಪದಾರ್ಥಗಳು ಹೆಚ್ಚುಕಡಿಮೆ ಪ್ರಮಾಣದಿಂದ ಆತ್ಮನ ಹತ್ತಿರದವುಗಳಾಗುತ್ತವೆ. ಅವು ಎಷ್ಟೆಷ್ಟು ಹತ್ತಿರ ದವುಗಳೋ ಆ ತಾಗತಮ್ಯದಿಂದ ಅವುಗಳಲ್ಲಿ ಹೆಚ್ಚುಕಡಿಮೆ ಪ್ರೀತಿ.

—ಪ್ರೀತಿಯ ತಾರತಮ್ಯದಿಂದ ಬರುವ ಅನುಭವದ ಬಗೆ ?

**ವಿತ್ತಾತ್ ಪುತ್ರಃ ಪ್ರಿಯಃ ಪುತ್ರಾತ್ ಪಿಂಡಃ ಪಿಂಡಾತ್ ತಥೇಂದ್ರಿಯಮ್ ।**
**ಇಂದ್ರಿಯಾಚ್ಚ ಪ್ರಿಯಃ ಪ್ರಾಣಃ ಪ್ರಾಣಾದಾತ್ಮಾ ಪ್ರಿಯಃ ಪರಃ ॥೬೦॥**

ದ್ರವ್ಯಕ್ಕಿಂತ ಮಗನು ಪ್ರಿಯ. ಮಗನಿಗಿಂತ ದೇಹವು ಪ್ರಿಯ. ದೇಹಕ್ಕಿಂತ ಇಂದ್ರಿಯಗಳು. ಇಂದ್ರಿಯಗಳಿಗಿಂತ ಪ್ರಾಣ. ಪ್ರಾಣಕ್ಕಿಂತ ಶ್ರೇಷ್ಠ ಆತ್ಮನು ಪ್ರಿಯನು.

—ಹೀಗೆ ಆತ್ಮನ ಪ್ರಿಯತಮತ್ವವು ಪ್ರಮಾಣಸಿದ್ಧವಾಗಿದ್ದರೂ ಜ್ಞಾನಿ ಮತ್ತು ಅಜ್ಞಾನಿಗಳು ಬೇರೆ ಬೇರೆಯಾಗಿ ತಿಳಿದುಕೊಂಡಿರುವರು. ಅವರ ಈ ಮತಭೇದವನ್ನು ನಿವಾರಿಸುವದಕ್ಕೆ ಮೊದಲು ಆ ಮತಭೇದವನ್ನು ಶ್ರುತಿಯು ಹೇಳುತ್ತದೆ ಎನ್ನುತ್ತಾರೆ.

**ಏವಂ ಸ್ಥಿತೇ ವಿವಾದೋಽತ್ರ ಪ್ರತಿಬುದ್ಧವಿಮೂಢಯೋಃ ।**
**ಶ್ರುತ್ಯೋದಾಹಾರಿ ತತ್ರಾತ್ಮಾ ಪ್ರೇಯಾನಿತ್ಯೇವ ನಿರ್ಣಯಃ॥೬೧॥**

ಹೀಗೆ ಆತ್ಮನ ಅತಿ ಪ್ರಿಯತ್ವವು ಪ್ರಮಾಣ ಸಿದ್ಧವಾಗಿದ್ದರೂ ಜ್ಞಾನಿ ಮತ್ತು ಅಜ್ಞಾನಿಗಳಲ್ಲಿರುವ ವಾದವನ್ನು ಶ್ರುತಿಯು ತೋರಿಸುತ್ತದೆ. ಆದರೆ ಅಲ್ಲಿ ಆತ್ಮನು ಅತಿ ಪ್ರಿಯನೆಂಬುದೇ ನಿರ್ಣಯವಾಗಿದೆ.

—ಈಗ ಜ್ಞಾನಿ ಮತ್ತು ಅಜ್ಞಾನಿಗಳಲ್ಲಿರುವ ವಿರೋಧವನ್ನು ತೋರಿಸುತ್ತಾರೆ.

**ಸಾಕ್ಷ್ಯೇವ ದೃಶ್ಯಾದನ್ಯಸ್ಮಾತ್ ಪ್ರೇಯಾನಿತ್ಯಾಹ ತತ್ವವಿತ್ ।**
**ಪ್ರೇಯಾನ್ ಪುತ್ರಾದಿರೇವೇಮಂ ಭೋಕ್ತುಂ ಸಾಕ್ಷೀತಿ ಮೂಢಧೀಃ ॥೬೨॥**

ಹೊರಗಿನ ಜಡವಸ್ತುಗಳಿಗಿಂತ ಸಾಕ್ಷಿಯಾದ ಸಚ್ಚಿದಾನಂದ ರೂಪವೇ ಅತಿ ಪ್ರಿಯವೆಂದು ಜ್ಞಾನಿಯ ಅಭಿಪ್ರಾಯ. ಪುತ್ರ ಮೊದಲಾದವುಗಳು ಅತಿಪ್ರಿಯವೆಂದೂ ಸಾಕ್ಷಿಯು ಅವುಗಳನ್ನು ಅನುಭವಿಸುವವನೆಂದೂ ಅಜ್ಞಾನಿಯ ಅಭಿಪ್ರಾಯ.

—ಆತ್ಮನಿಂದ ಭಿನ್ನವಾದ ವಸ್ತುಗಳೇ ಪ್ರಿಯವಾದವುಗಳೆಂದು ಅನ್ನುವ ವಾದಿಗಳಿಬ್ಬರನ್ನೂ ತೋರಿಸುತ್ತಾರೆ.

**ಆತ್ಮನೋಽನ್ಯಂ ಪ್ರಿಯಂ ಬ್ರೂತೇ ಶಿಷ್ಯಶ್ಚ ಪ್ರತಿವಾದ್ಯಪಿ ।**
**ತಯೋರುತ್ತರಂ ವಚೋ ಬೋಧಶಾಪೌ ಕುರ್ಯಾತ್ತಯೋಃ**
**ಕ್ರಮಾತ್ ॥೬೩॥**

ಶಿಷ್ಯನೊಬ್ಬನು ಮತ್ತು ಪ್ರತಿವಾದಿಯೊಬ್ಬನು ಆತ್ಮನಿಂದ ಬೇರೆ ಎನಿಸುವ ಪದಾರ್ಥಗಳೇ ಪ್ರಿಯವಾದವುಗಳೆಂದು ಅನ್ನುತ್ತಾರೆ. ಅವರಿಬ್ಬರಿಗೂ ಕೊಡುವ ಉತ್ತರವು ಶಿಷ್ಯನಿಗೆ ತಿಳಿವಳಿಕೆಯನ್ನುಂಟು ಮಾಡುವಂತೆಯೂ, ವಾದಿಗೆ ಶಾಪವೆನಿಸುವಂತೆಯೂ ಕ್ರಮವಾಗಿ ಇರಬೇಕು.

(ಯಾಕಂದರೆ ಶಿಷ್ಯನು ವಾದಿಸುವದು ನಿಜವನ್ನು ತಿಳಿಯಬೇಕೆಂದು. ವಾದಿಯು ತನ್ನ ಮತವನ್ನು ಹಟದಿಂದಲಾದರೂ ಸಾಧಿಸಬೇಕೆಂದು.)

—"ಸ ಯೋಽನ್ಯಮಾತ್ಮನಃ ಪ್ರಿಯಂ ಬ್ರುವಾಣಂ ಬ್ರೂಯಾತ್ ಪ್ರಿಯಂ ತ್ವಾಂ ರೋತ್ಸ್ಯತಿ" ಎಂಬ ವಾಕ್ಯದ ಅರ್ಥವನ್ನು ಸಂಗ್ರಹಿಸಿ ಹೇಳುತ್ತಾರೆ.

**ಪ್ರಿಯಂ ತ್ವಾಂ ರೋತ್ಸ್ಯತೀತ್ಯೇವಮುತ್ತರಂ ವಕ್ತಿ ತತ್ವವಿತ್ ।**
**ಸ್ವೋಕ್ತಪ್ರಿಯಸ್ಯ ದುಷ್ಟತ್ವಂ ಶಿಷ್ಯೋ ವೇತ್ತಿ ವಿವೇಕತಃ॥೬೪॥**

ಜ್ಞಾನಿಯು ಆತ್ಮನಿಂದ ಭಿನ್ನವೆನಿಸುವ ವಸ್ತುಗಳು ಅತಿ ಪ್ರಿಯವೆನ್ನುವವನಿಗೆ— "ಎಲೈ ವಾದಿಯೇ, ನಿನಗೆ ಪ್ರಿಯವಾದ ಪುತ್ರನೇ ಮೊದಲಾದ ವಸ್ತುಗಳು ತಾವು ನಾಶ ಹೊಂದುವದರಿಂದ ನಿನ್ನನ್ನು ಅಳಿಸುತ್ತವೆ ಎಂದು ಅನ್ನುತ್ತಾನೆ. ಇದರಿಂದ ಶಿಷ್ಯನು ತಾನು ಹೇಳಿದ ಪುತ್ರನೇ ಮೊದಲಾದ ವಸ್ತುಗಳು ದುಷ್ಟ ವಸ್ತುಗಳೆಂದು ತನ್ನ ವಿವೇಕದಿಂದ ತಿಳಿಯುವನು.

—ಆ ಪ್ರಿಯ ವಸ್ತುಗಳಲ್ಲಿದ್ದ ದೋಷಗಳ ವಿಚಾರ.

**ಅಲಭ್ಯಮಾನಸ್ತನಯಃ ಪಿತರೌ ಕ್ಲೇಶಯೇಚ್ಚಿರಂ ।**
**ಲಬ್ಧೋಽಪಿ ಗರ್ಭಪಾತೇನ ಪ್ರಸವೇನ ಚ ಬಾಧತೇ ॥೬೫॥**
**ಜಾತಸ್ಯ ಗ್ರಹರೋಗಾದಿಃ ಕುಮಾರಸ್ಯ ಚ ಮೂರ್ಖತಾ ।**
**ಉಪನೀತೇಽಪ್ಯವಿದ್ಯತ್ವಮನುದ್ವಾಹಶ್ಚ ಪಂಡಿತೇ ॥೬೬॥**
**ಯೂನಶ್ಚ ಪರದಾರಾದಿ ದಾರಿದ್ರ್ಯಂಚ ಕುಟುಂಬಿಕಃ ।**
**ಪಿತ್ರೋರ್ದುಃಖಸ್ಯ ನಾಸ್ತ್ಯಂತೋ ಧನೀ ಚೇನ್ಮ್ರಿಯತೇ ತದಾ ॥೬೭॥**

ಹುಟ್ಟದೆ ಇದ್ದ ಕಾಲ್ಪನಿಕ ಮಗನು ತಾಯ್ತಂದೆಗಳನ್ನು ಬಹಳ ಕಾಲದ ವರೆಗೆ ದುಃಖಪಡಿಸುವನು. ಹುಟ್ಟಬೇಕೆಂದವನು ಗರ್ಭಪಾತ ಇಲ್ಲವೇ ಪ್ರಸವ ಕಾಲದ ದುಃಖವನ್ನು ಕೊಡುವನು. ಹುಟ್ಟಿದವನಿಗೆ ಇರುವ ಗ್ರಹ ಬಾಧೆ-ರೋಗ–ಮೂರ್ಖತ್ವ ಮುಂತಾದವುಗಳಿಂದಲೂ ದುಃಖವಾಗುತ್ತದೆ. ವಿದ್ಯಾಭ್ಯಾಸಕ್ಕೆ ಯೋಗ್ಯನಾಗಲೆಂದು ಉಪನಯನ ಮಾಡಿದಮೇಲೆ ಆ ಮಗನು ದಡ್ಡನಾಗಿಯೇ ಉಳಿದರೆ ದುಃಖ. ವಿದ್ಯಾವಂತನಾದಮೇಲೆ ಲಗ್ನ ವಾಗದೇ ಉಳಿದರೊಂದು ದುಃಖ. ತಾರುಣ್ಯದಲ್ಲಿ ಪರಸ್ತ್ರೀಯರಲ್ಲಿರತನಾದರೂ ದುಃಖ. ಕುಟುಂಬಿಯಾದ ನಂತರ ದರಿದ್ರನಾಗಿ ಉಳಿದರೆ ದುಃಖ. ಧನ ವಂತನಾಗಿದ್ದವನು ಒಮ್ಮೆಲೇ ಸತ್ತುಹೋದರೆ ದುಃಖ. ಹೀಗೆ ಮಗನಿಂದ ತಾಯ್ತಂದೆಗಳಿಗೊದಗುವ ದುಃಖಕ್ಕೆ ಅಂತಪಾರವೇ ಇಲ್ಲ.

—ಪುತ್ರನಲ್ಲಿರುವ ಈ ದೋಷಗಳ ವರ್ಣನೆಯನ್ನು ಸ್ತ್ರೀ ಮೊದಲಾದ ಪದಾರ್ಥಗಳಿಗೆಲ್ಲ ಅನ್ವಯಿಸಿಕೊಂಡು ನೋಡಿಕೊಳ್ಳಬಹುದು ಎನ್ನುತ್ತಾರೆ.

**ಏವಂ ವಿವಿಚ್ಯ ಪುತ್ರಾದೌ ಪ್ರೀತಿಂ ತ್ಯಕ್ತ್ವಾ ನಿಜಾತ್ಮನಿ ।**
**ನಿಶ್ಚಿತ್ಯ ಪರಮಾಂ ಪ್ರೀತಿಂ ವೀಕ್ಷತೇ ತಮಹರ್ನಿಶಮ್ ॥೬೮॥**

ಹೀಗೆ ಪುತ್ರ-ಸ್ತ್ರೀ ಮೊದಲಾದ ಎಲ್ಲ ವಿಷಯಗಳ ಬಗೆಗೆ ವಿಚಾರಮಾಡಿ ಕೊಂಡು ಅವುಗಳಲ್ಲಿರುವ ದೋಷಗಳನ್ನು ತಿಳಿದುಕೊಂಡು, ಆ ವಿಷಯಗಳ ಪ್ರೀತಿಯನ್ನು ಬಿಟ್ಟು ತನ್ನ ಆತ್ಮನಲ್ಲಿ ನಿರತಿಶಯ ಪ್ರೀತಿಯನ್ನು ನಿಶ್ಚಯ ಮಾಡಿಕೊಂಡು ಯಾವಾಗಲೂ ಅವನನ್ನೇ ಅನುಸಂಧಾನ ಮಾಡುವನು.

—ಈಗ ಹಿಂದೆ ಹೇಳಿದ ಉತ್ತರವು ಹಟವಾದಿಗೆ ಶಾಪವಾಗಿ ಹೇಗೆ ಪರಿಣಮಿಸುವದೆಂದು ಹೇಳುತ್ತಾರೆ.

**ಆಗ್ರಹಾದ್ ಬ್ರಹ್ಮವಿದ್‌ದ್ವೇಷಾದಪಿ ಪಕ್ಷಮಮುಂಚತಃ ।**
**ವಾದಿನೋ ನರಕಃ ಪ್ರೋಕ್ತೋ ದೋಷಶ್ಚ ಬಹು-**
**ಯೋನಿಷು ॥೬೯॥**

ನಾನು ನುಡಿದ ಪುತ್ರಾದಿ ಪದಾರ್ಥಗಳಲ್ಲಿ ಪ್ರಿಯತ್ವವನ್ನು ಎಂದಿಗೂ ಬಿಡಲಾರೆನು" ಎಂಬ ಹಟದಿಂದಲೂ "ಈ ಜ್ಞಾನಿಯು ಹೇಳಿದ ಸಿದ್ಧಾಂತ ವನ್ನು ನಾನು ಖಂಡಿಸುವೆನು." ಎಂಬ ಜ್ಞಾನಿಯ ದ್ವೇಷದಿಂದಲೂ ತನ್ನ ಹಟವನ್ನು ಬಿಡದಿರುವ ವಾದಿಗೆ ನರಕವೂ, ಪಶು-ಪಕ್ಷಿಗಳ ಜನ್ಮವೂ, ಮನು ಷ್ಯನಾಗಿ ಜನಿಸಿದಲ್ಲಿ ಇಷ್ಟ ವಿಯೋಗ–ಅನಿಷ್ಟ ಪ್ರಾಪ್ತಿಯೂ ಆಗುವದೆಂದು ಜ್ಞಾನಿಯು ಹೇಳುತ್ತಾನೆ.

—ಇರಲಿ. ಒಂದೇ ಮಾತಿನಿಂದ ಶಿಷ್ಯನಲ್ಲಿ ಹಾಗೂ ವಾದಿಯಲ್ಲಿ ಪರ ಸ್ಪರವಿರುದ್ಧವೆನಿಸುವ ಪರಿಣಾಮಗಳಾಗುವದು ಹೇಗೆ ಶಕ್ಯ ?

**ಬ್ರಹ್ಮವಿದ್ಬ್ರಹ್ಮರೂಪತ್ವಾದೀಶ್ವರಸ್ತೇನ ವರ್ಣಿತಮ್ ।**
**ಯದ್ಯತ್ತತ್ತತ್ತಥೈವ ಸ್ಯಾತ್ತಚ್ಛಿಷ್ಯಪ್ರತಿವಾದಿನೋಃ ॥೭೦॥**

ಬ್ರಹ್ಮವನ್ನರಿತವನು ಬ್ರಹ್ಮರೂಪನೇ ಆದ ಈಶ್ವರನು. ಆದುದರಿಂದ ಅವನು ಹೇಗೆ ಹೇಗೆ ಮಾತಾಡಿದನೋ ಅದರಂತೆ ಅವನ ಶಿಷ್ಯ ಮತ್ತು ಪ್ರತಿ ವಾದಿಗೆ ಫಲಕಂಡಿತು.

"ಆತ್ಮಾನಮೇವ ಪ್ರಿಯಮುಪಾಸೀತ" ಎಂಬ ವಾಕ್ಯದ ಅರ್ಥ ಸಂಗ್ರ ಹಿಸುತ್ತಾರೆ.

**ಯಸ್ತು ಸಾಕ್ಷಿಣಮಾತ್ಮಾನಂ ಸೇವತೇ ಪ್ರಿಯಮುತ್ತಮಮ್ ।**
**ತಸ್ಯ ಪ್ರೇಯಾನಸಾವಾತ್ಮಾ ನ ನಶ್ಯತಿ ಕದಾಚನ ॥೭೦॥**

ಅನಾತ್ಮ ವಸ್ತುಗಳು ಪ್ರಿಯವೆಂದು ಅನ್ನುವ ವಾದಿಗಿಂತ ಬೇರೆ ಪ್ರಕಾರ ದವನಾದ ಶಿಷ್ಯನು ಸಾಕ್ಷಿಯಾದ ಆತ್ಮನೇ ನಿರತಿಶಯ ಪ್ರೇಮಾಸ್ಪದನೆಂದು ತಿಳಿದು ಅವನ ಸೇವೆ– ಅವನ ಸ್ಮರಣವನ್ನು ಮಾಡುತ್ತಾನೆ. ಅವನು ಸೇವಿ ಸುವ ಅತಿಶಯ ಪ್ರಿಯನಾದ ಆತ್ಮನು ಎಂದಿಗೂ ನಾಶ ಹೊಂದತಕ್ಕವನಲ್ಲ.

ಹೀಗೆ ಅನೇಕ ಪ್ರಮಾಣಗಳಿಂದ ಆತ್ಮನು ಪರಮ ಪ್ರೇಮಾಸ್ಪದನೆಂದು ಸಿದ್ಧ ಮಾಡಿ ತೋರಿಸಿ ಅದರ ಫಲವನ್ನು ಹೇಳುತ್ತಾರೆ.

**ಪರ ಪ್ರೇಮಾಸ್ಪದತ್ವೇನ ಪರಮಾನಂದರೂಪತಾ ।**
**ಸುಖವೃದ್ಧಿಃ ಪ್ರೀತಿವೃದ್ಧ್ಯಾ ಸಾರ್ವಭೌಮಾದಿಷು ಶ್ರುತಾ ॥೭೨॥**

ಆತ್ಮನು ಪರಮ ಪ್ರೇಮಾಸ್ಪದನಾಗಿರುವದರಿಂದ ಅವನ ಪರಮಾನಂದತ್ವವು ಸಿದ್ಧವಾಗುತ್ತದೆ. ಚಕ್ರವರ್ತಿ–ಮನುಷ್ಯ–ಗಂಧರ್ವ–ದೇವಗಂಧರ್ವ ಮೊದಲಾದವುಗಳಲ್ಲಿ ಎಲ್ಲೆಲ್ಲಿ ಪ್ರೀತಿ ಬೆಳೆಯುವದೋ ಅಲ್ಲಲ್ಲಿ ಸುಖವೂ ಹೆಚ್ಚಾಗುವದು ಎಂದು ಶ್ರುತಿಯು ಹೇಳುಪದು.

—ಆತ್ಮನ ಪರಮಾನಂದತ್ವದ ವಿಷಯದಲ್ಲಿ ವಾದಿಯು ಶಂಕೆಯನ್ನು ತೆಗೆಯುತ್ತಾನೆ.

**ಚೈತನ್ಯವತ್‌ಸುಖಂ ಚಾಸ್ಯ ಸ್ವಭಾವಶ್ಚೇಚ್ಚಿದಾತ್ಮನಃ ।**
**ಧೀವೃತ್ತಿಷ್ವನುವರ್ತೇತ ಸರ್ವಾಸ್ವಪಿ ಚಿತಿರ್ಯಥಾ ॥೭೩॥**

ಈ ಆತ್ಮನು ಚೈತನ್ಯದಂತೆ ಆನಂದರೂಪನೂ ಆಗಿರುವ ಪಕ್ಷದಲ್ಲಿ ಚೈತನ್ಯದಂತೆ ಆ ಆನಂದವು ಕೂಡ ಎಲ್ಲ ಬುದ್ಧಿವೃತ್ತಿಗಳಲ್ಲಿಯೂ ಕಾಣಿಸಿಕೊಳ್ಳಬೇಕಾಗಿತ್ತು. ಆದರೆ ಹಾಗೆ ಆಗುವದಿಲ್ಲ. ಆದುದರಿಂದ ಆತ್ಮನು ಆನಂದರೂಪನಲ್ಲ.

(ರಾಜಸ-ತಾಮಸ ವೃತ್ತಿಗಳನ್ನು ಬಿಟ್ಟು ಸಾತ್ವಿಕ ವೃತ್ತಿಗಳಲ್ಲಿ ಮಾತ್ರ ಆನಂದವು ಕಾಣಿಸುತ್ತದೆ. ಜ್ಞಾನವು ಮಾತ್ರ ಎಲ್ಲ ವೃತ್ತಿಗಳಲ್ಲಿ ಕಾಣುತ್ತದೆ.)

—ಜ್ಞಾನ–ಮತ್ತು ಆನಂದ ಇವೆರಡಕ್ಕೆ ಆತ್ಮರೂಪತ್ವವಿದ್ದರೂ ವೃತ್ತಿಗಳಲ್ಲಿ ಜ್ಞಾನವೊಂದೇ ತೋರುವದು. ಆನಂದವು ತೋರುವುದಿಲ್ಲ. ಎಂದು ದೃಷ್ಟಾಂತಕೊಟ್ಟು ಹೇಳುತ್ತಾರೆ.

**ಮೈವಮುಷ್ಣಪ್ರಕಾಶಾತ್ಮಾ ದೀಪಸ್ತಸ್ಯ ಪ್ರಭಾ ಗೃಹೇ ।**
**ವ್ಯಾಪ್ನೋತಿ ನೋಷ್ಣತಾ ತದ್ವಚ್ಚಿತೇರೇವಾನುವ-**
**ರ್ತನಮ್ ॥೭೪॥**

ಹಾಗಲ್ಲ. ದೀಪವು ಬಿಸಿ–ಮತ್ತು ಬೆಳಕಿನಿಂದ ಕೂಡಿದ್ದರೂ ಮನೆಯಲ್ಲಿ ಅದರ ಬೆಳಕು ಮಾತ್ರ ಪಸರಿಸುತ್ತದೆ. ಬಿಸಿಯು ಪಸರಿಸುವದಿಲ್ಲ. ಅದರಂತೆ ಜ್ಞಾನವು ಎಲ್ಲ ವೃತ್ತಿಗಳಲ್ಲಿ ಕಂಡರೂ ಆನಂದವು ಕಾಣುವುದಿಲ್ಲ.

— ಚಿತ್ ಮತ್ತು ಆನಂದಗಳು ಬೇರೆಬೇರೆ ಅಲ್ಲ. ಆದುದರಿಂದ ಚಿತ್-ಕಂಡ ಕಡೆಗೆಲ್ಲ ಆನಂದವೂ ಕಾಣಬೇಕು. ಎಂದರೆ 'ಹಾಗೇನೂ ನಿಯಮವಿಲ್ಲ' ಎಂದು ದೃಷ್ಟಾಂತ ಹೇಳುತ್ತಾರೆ.

**ಗಂಧ-ರೂಪ-ರಸ-ಸ್ಪರ್ಶೇಷ್ವಪಿ ಸತ್ಸು ಯಥಾ ಪೃಥಕ್ ।**
**ಏಕಾಕ್ಷೇಣೈಕ ಏವಾರ್ಥೋ ಗೃಹ್ಯತೇ ನೇತರಸ್ತಥಾ ॥೭೫॥**

ಒಂದು ವಸ್ತುವಿನಲ್ಲಿ ಗಂಧ-ರೂಪ-ರಸ ಸ್ಪರ್ಶಗಳೆಂಬ ನಾಲ್ಕು ಗುಣಗಳಿದ್ದರೂ ಮೂಗುಮೊದಲಾದ ಒಂದೊಂದು ಇಂದ್ರಿಯದಿಂದ ಅದರಲ್ಲಿಯ ಒಂದೊಂದೇ ಗುಣಗಳು ತಿಳಿದು ಬರುವವು. ಮತ್ತೊಂದು ತಿಳಿದುಬರುವದಿಲ್ಲ. ಅದರಂತೆ ತಿಳಿಯಬೇಕು.

—ನಿಮ್ಮ ದೃಷ್ಟಾಂತ ಮತ್ತು ದಾರ್ಷ್ಟಾಂತಿಕದಲ್ಲಿ ಸಾಮ್ಯವಿಲ್ಲ.

**ಚಿದಾನಂದೌ ನೈವ ಭಿನ್ನೌ ಗಂಧಾದ್ಯಾಸ್ತು ವಿಲಕ್ಷಣಾಃ ।**
**ಇತಿ ಚೇತ್ತದಭೇದೋಽಪಿ ಸಾಕ್ಷಿಣ್ಯನ್ಯತ್ರ ವಾ ವದ ॥೭೬॥**

ಜ್ಞಾನ ಮತ್ತು ಆನಂದಗಳು ಬೇರೆಯಲ್ಲ. ಆದರೆ ಗಂಧಾದಿ ಗುಣಗಳು ಬೇರೆ ಲಕ್ಷಣಗಳುಳ್ಳವು. ಎಂದರೆ ಆ ಜ್ಞಾನ ಮತ್ತು ಆನಂದಗಳು ಒಂದೇ ಎಂಬುದು ಸಾಕ್ಷಿಯಾದಆತ್ಮರೂಪದಲ್ಲಿಯೋ, ಅದರ ಉಪಾಧಿ ಎನಿಸಿದ ಬುದ್ಧಿವೃತ್ತಿಗಳಲ್ಲಿಯೋ? ಹೇಳು.

—ಮೊದಲಿನ ಪಕ್ಷ ಸ್ವೀಕರಿಸಿದರೆ ದೃಷ್ಟಾಂತ-ದಾರ್ಷ್ಟಾಂತಿಕದಲ್ಲಿ ಸಾಮ್ಯವಿದೆ ಎನ್ನುತ್ತಾರೆ.

**ಆದ್ಯೇ ಗಂಧಾದಯೋ ಪ್ಯೇವಮಭಿನ್ನಾಃ ಪುಷ್ಪವರ್ತಿನಃ ।**
**ಅಕ್ಷಭೇದೇನ ತದ್ಭೇದೇ ವೃತ್ತಿಭೇದಾತ್ತಯೋರ್ಭಿದಾ ॥೭೭॥**

ಜ್ಞಾನ ಮತ್ತು ಆನಂದಗಳು ಬೇರೆಯಲ್ಲ ಎಂಬ ಮೊದಲಿನ ಪಕ್ಷವನ್ನು ಸ್ವೀಕರಿಸುವುದಾದರೆ ಪುಷ್ಪದಲ್ಲಿರುವ ಗಂಧಾದಿ ಗುಣಗಳು ಕೂಡ ಚಿದಾನಂದದಂತೆ ಒಂದಕ್ಕೊಂದು ಅಭಿನ್ನವಾಗಿವೆ. ಇನ್ನು ಎರಡನೆಯ ಪಕ್ಷ ಗಂಧಾದಿಗಳು ಹೂವಿನಲ್ಲಿ ಒಂದಾಗಿದ್ದು ಬೇರೆಬೇರೆ ಇಂದ್ರಿಯಗಳಿಂದ ಅರಿಯಲಾಗುವದರಿಂದ ಭೇದವೆನಿಸುವದು. ಅದರಂತೆ ಚಿತ್ ಮತ್ತು ಆನಂದಗಳು ತೋರುವದಕ್ಕೆ ಕಾರಣವೆನಿಸುವ ರಾಜಸ-ತಾಮಸ ವೃತ್ತಿಭೇದದಿಂದ ಬೇರೆ-ಬೇರೆಯಾಗಿ ತೋರುವವು.

**ಸತ್ವವೃತ್ತೌ ಚಿತ್ಸುಖೈಕ್ಯಂ ತದ್ವೃತ್ತೇರ್ನಿರ್ಮಲಾತ್ಮನಃ ।**
**ರಜೋವೃತ್ತೇಸ್ತು ಮಾಲಿನ್ಯಾತ್ ಸುಖಾಂಶೋಽತ್ರ ತಿರಸ್ಕೃತಃ ॥೭೮॥**

ಪುಣ್ಯವನ್ನು ಮಾಡಿದ್ದರಿಂದ ಮೇಲೆದ್ದ ಸತ್ವಗುಣದ ಪರಿಣಾಮ ರೂಪ ಬುದ್ಧಿ ವೃತ್ತಿಯಲ್ಲಿ ಜ್ಞಾನ ಮತ್ತು ಆನಂದಗಳ ಐಕ್ಯವು ತೋರುವುದು. ಯಾಕೆಂದರೆ ಆ ವೃತ್ತಿಯಲ್ಲಿ ನಿರ್ಮಲತ್ವವಿರುವದು-ಹಾಗಾದರೆ ಭೇದಕಾಣುವ ಕಾರಣ? ರಜೋಗುಣದ ಪರಿಣಾಮವಾದ ಬುದ್ಧಿ ವೃತ್ತಿಯಲ್ಲಿ ಮಾಲಿನ್ಯವು ಇರುವದರಿಂದ ಅದರಲ್ಲಿ ಸುಖಾಂಶ ತೋರಲು ಅಡ್ಡಿಯುಂಟಾಗುವುದು.

ಹಾಗೆ ಆಗಲು ಕಾರಣ?

**ತಿಂತಿಣೀಫಲಮತ್ಯಮ್ಲಂ ಲವಣೇನಯುತಂ ತದಾ ।**
**ತದಾಮ್ಲಸ್ಯ ತಿರಸ್ಕಾರಾದೀಷದಮ್ಲಂ ಯಥಾ ತಥಾ ॥೭೯॥**

ಹುಣಿಸೇ ಹಣ್ಣು ಸ್ವಾಭಾವಿಕವಾಗಿ ಅತಿಶಯ ಹುಳಿ. ಅದರಲ್ಲಿ ಉಪ್ಪನ್ನು ಬೆರೆಸಿದರೆ ಹುಳಿಯು ಕಡಿಮೆಯಾಗುವದು. ಅದರಂತೆ ರಾಜಸವೃತ್ತಿಯಲ್ಲಿ ಆನಂದಾಂಶ ಮರೆಯಾಗುವದು.

—ಮತ್ತೆ ಶಂಕೆ.

**ನನು ಪ್ರಿಯತಮತ್ವೇನ ಪರಮಾನಂದತಾತ್ಮನಿ ।**
**ವಿವೇಕ್ತುಂ ಶಕ್ಯತಾಮೇವಂ ವಿನಾ ಯೋಗೇನ ಕಿಂ ಭವೇತ್ ॥೮೦॥**

ಮೇಲೆ ಹೇಳಿದ ಕಾರಣಗಳಿಂದ ಆತ್ಮನು ಅತಿಪ್ರಿಯನೆಂದರಿಯಬಹುದು. ಆದರೆ ಈ ವಿವೇಕದಿಂದ ಮುಕ್ತಿಯಾಗದು. ಅಪರೋಕ್ಷ ಜ್ಞಾನ ಮಾಡಿಕೊಡುವ ಯೋಗವಿಲ್ಲದೇ ಏನಾಗುತ್ತದೆ?

—ಇದಕ್ಕೆ ಸಮಾಧಾನ

**ಯದ್ಯೋಗೇನ ತದೇವೇತಿ ವದಾಮೋ ಜ್ಞಾನಸಿದ್ಧಯೇ ।**
**ಯೋಗಃ ಪ್ರೋಕ್ತೋ ವಿವೇಕೇನ ಜ್ಞಾನಂ ಕಿ ನೋಪಜಾಯತೇ ॥೮೧॥**

ಯಾವುದು ಯೋಗದಿಂದ ಆಗುವದೋ ಅದೇ ವಿಚಾರದಿಂದ ಕೂಡ ಎಂದು ನಾವು ಹೇಳುತ್ತೇವೆ. ಜ್ಞಾನಸಿದ್ಧಿಗೆಂದು ಯೋಗವನ್ನು ಹೇಳಿದೆ. ವಿವೇಕದಿಂದ ಜ್ಞಾನವು ಹುಟ್ಟಲಾರದೇ?

(ಅಪರೋಕ್ಷ ಜ್ಞಾನಕ್ಕೆ ಸಾಧನವೆಂದು ಯೋಗವನ್ನು ಪೂರ್ವಾಧ್ಯಾಯದಲ್ಲಿ ಹೇಳಿದಂತೆ ಈ ಅಧ್ಯಾಯದಲ್ಲಿ ವಿವೇಕವನ್ನು ಹೇಳಿದೆ ಗೌಣಾತ್ಮ-ಮಿಥ್ಯಾತ್ಮರ ವಿವೇಕ. ಅದರಂತೆ ಪಂಚಕೋಶಗಳ ವಿವೇಕ ಮಾಡಿಕೊಂಡದ್ದಾದರೆ ಜ್ಞಾನವು ಹುಟ್ಟುವದು)

—ಈ ವಿಷಯಕ್ಕೆ ಪ್ರಮಾಣ.

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ।**
**ಇತಿ ಸ್ಮೃತಂ ಫಲೈಕತ್ವಂ ಯೋಗಿನಾಂಚ ವಿವೇಕಿನಾಮ್॥೮೨॥**

ಆತ್ಮಾನಾತ್ಮ ವಿವೇಕ ಉಳ್ಳವನು ಯಾವ ಸ್ಥಾನವನ್ನು ಪಡೆಯುವನೋ ಯೋಗಿಯು ಕೂಡ ಅದನ್ನು ಪಡೆಯುವನು. ಹೀಗೆ ಯೋಗಿ ಮತ್ತು ವಿವೇಕಿಗೆ ಒಂದೇ ಫಲವು ಸ್ಮೃತಿಯಲ್ಲಿ ಹೇಳಲಾಗಿದೆ.

—ಹೀಗೆ ವಿವೇಕ ಮತ್ತು ಯೋಗಗಳಿಗೆ ಫಲವು ಒಂದೇ ಆಗಿದ್ದರೆ ಶಾಸ್ತ್ರದಲ್ಲಿ ಎರಡನ್ನೂ ಹೇಳುವ ಅವಶ್ಯಕತೆ ಇರಲಿಲ್ಲ ಎಂದರೆ ಅಧಿಕಾರಿಗಳ ಭೇದಾನುಸಾರವಾಗಿ ಎರಡೂ ಬೇಕು ಎನ್ನುತ್ತಾರೆ.

**ಅಸಾಧ್ಯಃ ಕಸ್ಯಚಿದ್ಯೋಗಃ ಕಸ್ಯ ಚಿದ್‌ಜ್ಞಾನನಿಶ್ಚಯಃ।**
**ಇತ್ಥಂವಿಚಾರ್ಯ ಮಾರ್ಗೌ ದ್ವೌ ಜಗಾದ ಪರಮೇಶ್ವರಃ ॥೮೩॥**

ಕೆಲವರಿಗೆ ಯೋಗವು ಅಸಾಧ್ಯವೆನಿಸಿದರೆ ಕೆಲವರಿಗೆ ಜ್ಞಾನ ನಿಶ್ಚಯವು ಅಸಾಧ್ಯವೆನಿಸುತ್ತದೆ. ಹೀಗೆ ವಿಚಾರ ಮಾಡಿ ಪರಮೇಶ್ವರನು ಎರಡು ಮಾರ್ಗಗಳನ್ನು ಹೇಳಿರುವನು.

—ಕಷ್ಟಸಾಧ್ಯವಾದ ಯೋಗಮಾರ್ಗದಲ್ಲಿ ಸುಲಭಸಾಧ್ಯವಾದ ಜ್ಞಾನ ಮಾರ್ಗಕ್ಕಿಂತ ಹೆಚ್ಚೇನಾದರೂ ಇರಬೇಕು ಎಂದರೆ ಯೋಗದಲ್ಲಿ ಮೂರು ವಿಕಲ್ಪಗಳನ್ನು ಕಲ್ಪಿಸಿ ಅವುಗಳಿಗೆ ಪರಿಹಾರವನ್ನು ಹೇಳುತ್ತಾರೆ.

**ಯೋಗೇ ಕೋಽತಿಶಯಸ್ತೇಽತ್ರ ಜ್ಞಾನಮುಕ್ತಂ ಸಮಂದ್ವಯೋಃ ।**
**ರಾಗದ್ವೇಷಾದ್ಯಭಾವಶ್ಚ ತುಲ್ಯೋ ಯೋಗಿ-ವಿವೇ-ಕಿನೋಃ ||೮೪||**

ನಿನ್ನ ತಿಳಿವಳಿಕೆಯಂತೆ ಯೋಗದಲ್ಲಿ ಏನು ಹೆಚ್ಚಿನದದಿದೆ? ಯೋಗಿಗೂ ವಿವೇಕಿಗೂ ಜ್ಞಾನರೂಪ ಫಲವನ್ನು ಸಮಾನವಾಗಿ ಹೇಳಿದುದಾಗಿದೆ. ರಾಗ ದ್ವೇಷಾದಿಗಳು ಇರುವದಿಲ್ಲವೆಂಬುದೂ ಸಮಾನವಾಗಿದೆ.

—ವಿವೇಕಿಯಾದವನಿಗೆ ರಾಗ-ದ್ವೇಷಾದಿಗಳು ಇಲ್ಲವೆಂಬುದು ಹೇಗೆ?

**ನ ಪ್ರೀತಿರ್ವಿಷಯೇಷ್ವಸ್ತಿ ಪ್ರೇಯಾನಾತ್ಮೇತಿ ಜಾನತಃ ।**
**ಕುತೋರಾಗಃ ಕುತೋ ದ್ವೇಷಃ ಪ್ರಾತಿಕೂಲ್ಯಮಪಶ್ಯತಃ||೮೫||**

ಆತ್ಮನು ಅತಿಪ್ರಿಯನೆಂದು ನಿಶ್ಚಯವಾಗಿ ತಿಳಿದವನಿಗೆ ವಿಷಯಗಳಲ್ಲಿ ಪ್ರೀತಿ ಇರುವದಿಲ್ಲ. ಅವು ಅನುಕೂಲವಾದವುಗಳೆಂಬ ಭಾವನೆ ಇಲ್ಲದ್ದರಿಂದ ದ್ವೇಶವೂ ಇರುವದಿಲ್ಲ.

—ಎಂದಮೇಲೆ ಪ್ರೀತಿ ಎಲ್ಲಿಯದು? ನನಗೆ ಪ್ರತಿಕೂಲವಾದುದೆಂಬುದನ್ನೇ ನೋಡದವನಿಗೆ ದ್ವೇಷವೆಲ್ಲಿಯದು?

—ಆದರೆ ವ್ಯವಹಾರದಲ್ಲಿ ಯಾರಾದರೂ ದೇಹಾದಿಗಳಿಗೆ ಪೀಡೆಕೊಟ್ಟರೆ ಅವರ ವಿಷಯದಲ್ಲಿ ವಿವೇಕಿಯ ಮನದಲ್ಲಿ ದ್ವೇಶವು ಹುಟ್ಟಲಾರದೇ?

**ದೇಹಾದೇಃ ಪ್ರತಿಕೂಲೇಷು ದ್ವೇಷಸ್ತುಲ್ಯೋದ್ವಯೋರಪಿ ।**
**ದ್ವೇಷಂ ಕುರ್ವನ್ನ ಯೋಗೀ ಚೇದವಿವೇಕ್ಯಪಿ ತಾದೃಶಃ||೮೬||**

ದೇಹಕ್ಕೆ ಪೀಡೆಕೊಡುವ ಹಾವು-ಚೇಳು ಮುಂತಾದ ಪದಾರ್ಥಗಳಲ್ಲಿ ವಿವೇಕಿಯಂತೆ ಯೋಗಿಗೂ ದ್ವೇಷವಿರುವದು. ದ್ವೇಷಮಾಡುವವನು ಯೋಗಿ ಯೇ ಅಲ್ಲವೆಂದು ಅಂದರೆ ದ್ವೇಷ ಮಾಡುವವನು ವಿವೇಕಿಯೂ ಅಲ್ಲ.

—ಆದರೆ ವಿವೇಕಿಗೆ ಪ್ರಪಂಚವು ತೋರುತ್ತದೆ. ಯೋಗಿಗೆ ಇಲ್ಲವೆಂಬುದೇ ಯೋಗಗಳಲ್ಲಿ ವಿಶೇಷ ಎಂದರೆ.

**ದ್ವೈತಸ್ಯ ಪ್ರತಿಭಾನಂ ತು ವ್ಯವಹಾರೇ ದ್ವಯೋಃ ಸಮಮ್ ।**
**ಸಮಾಧೌ ನೇತಿ ಚೇತ್ತದ್ವನ್ನಾದ್ವೈತತ್ವ ವಿವೇಕಿನಃ ||೮೭||**

ವ್ಯವಹಾರದಲ್ಲಿ ಪ್ರಪಂಚದ ತೋರಿಕೆಯು ಇಬ್ಬರಲ್ಲಿಯೂ ಸಮಾನವಾಗಿರುವದು. ಆದರೆ ಸಮಾಧಿಯಲ್ಲಿ ಇರುವದಿಲ್ಲ. ಎಂದರೆ ಅದ್ವೈತ ತತ್ತ್ವವನ್ನು ತಿಳಿದ ವಿವೇಕಿಗೂ ಪ್ರಪಂಚ ಕಾಣುವದಿಲ್ಲ.

—ಮುಂದಿನ ಪ್ರಕರಣದಲ್ಲಿ ಇದನ್ನು ಸ್ಪಷ್ಟಮಾಡುತ್ತೇವೆ ಎನ್ನುತ್ತಾರೆ.

**ವಿವಕ್ಷ್ಯತೇ ತದಸ್ಮಾಭಿರದ್ವೈತಾನಂದ ನಾಮಕೇ ।**
**ಅಧ್ಯಾಯೇ ಹಿ ತೃತೀಯೇಽತಃ ಸರ್ವಮಪ್ಯತಿ**
**ಮಂಗಲಮ್ ॥೮೮॥**

ಅದನ್ನು ನಾವು 'ಅದ್ವೈತಾನಂದ' ವೆಂಬ ಹೆಸರಿನ ಮೂರನೆಯ ಅಧ್ಯಾಯದಲ್ಲಿ ಹೇಳುತ್ತೇವೆ. ಅದೆಲ್ಲವೂ ಅತಿ ಮಂಗಳರೂಪವಾಗುವದು.

—ದ್ವೈತ ದರ್ಶನವಿಲ್ಲದ ಆತ್ಮಜ್ಞಾನಿ ಎಂದರೆ ಯೋಗಿಯೇ ಸರಿ ಎಂದು ನೀನಂದರೆ ಒಳ್ಳೆಯದಾಯಿತು. ಅದುನಮಗೆ ಸಂತೋಷ.

**ಸದಾಪಶ್ಯನ್ನಿಜಾನಂದಮಪಶ್ಯನ್ನಿಖಿಲಂ ಜಗತ್ ।**
**ಅರ್ಥಾದ್ಯೋಗೀತಿ ಚೇತ್ತರ್ಹಿ ಸಂತುಷ್ಟೋ ವರ್ಧತಾಂ**
**ಭವಾನ್ ॥೮೯॥**

ಯಾವಾಗಲೂ ಆತ್ಮಾನಂದದ ಅನುಭವವನ್ನು ಪಡೆಯುತ್ತ ಜಗತ್ತನ್ನೇ ಕಾಣದಿರುವವನು ಯೋಗಿಯೇ ಸರಿ ಎಂದು ಅನ್ನುವದಾದರೆ ಹಾಗಂದ್ಕೊಂಡು ನೀನು ಸಂತೋಷಪಡು. ನಿನ್ನ ಏಳಿಗೆಯಾಗಲಿ.

ಈ ಎರಡನೇ ಅಧ್ಯಾದ ತಾತ್ಪರ್ಯ

**ಬ್ರಹ್ಮಾನಂದಾಭಿದೇ ಗ್ರಂಥೇ ಮಂದಾನುಗ್ರಹಸಿದ್ಧಯೇ ।**
**ದ್ವಿತೀಯಾಧ್ಯಾಯ ಏತಸ್ಮಿನ್ನಾತ್ಮಾನಂದೋ ವಿವೇಚಿತಃ॥೯೦॥**

ಬ್ರಹ್ಮಾನಂದವೆಂಬ ಹೆಸರಿನ ಗ್ರಂಥದ ಈ ಎರಡನೇ ಅಧ್ಯಾಯದಲ್ಲಿ ಮಂದಬುದ್ಧಿಯುಳ್ಳವರಿಗೆ ತಿಳಿಸುವದಕ್ಕಾಗಿ ಆತ್ಮಾನಂದದ ವಿವೇಚನೆಯಾಯಿತು,

## ಆತ್ಮಾನಂದ ಪ್ರಕರಣದ ಸಾರಾಂಶ

ಆತ್ಮಾನಂದದ ಉಪದೇಶಕ್ಕೆ ತಕ್ಕವನು. ಎಲ್ಲವೂ ಬೇಕೆನಿಸುವದು ತನಗಾಗಿ. ಆತ್ಮನು ಎಲ್ಲಕ್ಕಿಂತ ಪ್ರಿಯ. ಆತ್ಮನ ಮೂರು ಪ್ರಕಾರ. ಆತ್ಮನು ಅತಿಪ್ರಿಯನಾಗಿರುವನು ಎಂಬುದರ ವಿವರ. ಆತ್ಮನ ಅತಿ ಪ್ರಿಯತ್ವವು ತೋರದಿರುವದು. ಯೋಗವೂ ವಿವೇಕವೂ ಸಮಾನ.

# ೧೩ ಬ್ರಹ್ಮಾನಂದದಲ್ಲಿ ಅದ್ವೈತಾನಂದ

ಬ್ರಹ್ಮಾನಂದ, ವಿದ್ಯಾನಂದ, ವಿಷಯಾನಂದವೆಂದು ಆನಂದವು ಮೂರು ವಿಧವಾಗಿರುವುದೆಂದು ಹಿಂದೆ ಹನ್ನೊಂದನೇ ಪ್ರಕರಣದಲ್ಲಿ ಹೇಳಿದೆ. ಆದರೆ ಹನ್ನೆರಡನೇ ಪ್ರಕರಣದಲ್ಲಿ ಆತ್ಮಾನಂದವೆಂಬ ಬೇರೆಯ ಆನಂದವನ್ನು ಕುರಿತು ಭಾಸವಾಗುತ್ತದೆ. ಇದರಿಂದ ಕ್ರಮಕ್ಕೆ ವ್ಯತ್ಯಯ ಬಂದಿತೆಂದು ಯಾರಾದರೂ ಹೇಳಬಹುದೆಂದು ಗ್ರಂಥಕಾರರು ಹೇಳುತ್ತಾರೆ.

**ಯೋಗಾನಂದಃ ಪುರೋಕ್ತೋ ಯಃ ಸ ಆತ್ಮಾನಂದ ಇಷ್ಯತಾಮ್ ।**
**ಕಥಂ ಬ್ರಹ್ಮತ್ವಮೇತಸ್ಯ ಸದ್ವಯಸ್ಯೇತಿ ಚೇಚ್ಛೃಣು ॥೧॥**

ಯೋಗಾನಂದವೆಂದು ಹಿಂದೆ ಹೇಳಿರುವದೇ ಆತ್ಮಾನಂದವೆಂದು ತಿಳಿಯಬೇಕು. ಮಿಥ್ಯಾತ್ಮ, ಗೌಣಾತ್ಮ, ಮುಂತಾದ ದ್ವೈತಯುಕ್ತವಾದ ಆತ್ಮಾನಂದಕ್ಕೆ ಬ್ರಹ್ಮತ್ವವು ಹೇಗೆ ಬರುವುದು ? ಎಂದರೆ ಕೇಳು.

**ಆಕಾಶಾದಿ ಸ್ವದೇಹಾಂತಂ ತೈತ್ತಿರೀಯ ಶ್ರುತೀರಿತಮ್ ।**
**ಜಗನ್ನಾಸ್ತ್ಯನ್ಯದಾನಂದಾದದ್ವೈತಬ್ರಹ್ಮತಾ ತತಃ ॥೨॥**

'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ, ಎಂಬ ತೈತ್ತಿರೀಯ ಶ್ರುತಿಯು ಆಕಾಶದಿಂದ ಮೊದಲುಗೊಂಡು ದೇಹದವರೆಗೆ ಹೇಳಿದ ಜಗತ್ತು

ತನ್ನ ಕಾರಣವೆನಿಸಿದ ಆನಂದಕ್ಕಿಂತ ಬೇರೆಅಲ್ಲ. ಹಾಗೆಂದು ಆತ್ಮಾನಂದಕ್ಕೆ ಅದ್ವಿತೀಯ ಬ್ರಹ್ಮರೂಪತ್ವವಿದೆ.

—ಆದರೆ ಆ ಶ್ರುತಿಯಲ್ಲಿ ಆತ್ಮನು ಜಗತ್ಕಾರಣನೆಂದು ಹೇಳಿದೆ. ಆನಂದವು ಜಗತ್ತಿನ ಕಾರಣವೆಂದು ಹೇಳಲಿಲ್ಲ ಎಂಬ ಶಂಕೆಗೆ ಉತ್ತರವಾಗಿ ಆನಂದವೇ ಕಾರಣವೆಂದು ಹೇಳುವ ಅದೇ ಶ್ರುತಿಯು •ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ, ಇತ್ಯಾದಿ ವಾಕ್ಯದ ಅರ್ಥವನ್ನು ಕೊಡುತ್ತಾರೆ.

**ಆನಂದಾದೇವ ತಜ್ಜಾತಂ ತಿಷ್ಠತ್ಯಾನಂದ ಏವ ತತ್ ।**
**ಆನಂದ ಏವ ಲೀನಂ ಚೇತ್ಯುಕ್ತಾನಂದಾತ್ ಕಥಂ ಪೃಥಕ್॥೩॥**

ಅದು ಆನಂದದಿಂದಲೇ ಹುಟ್ಟಿತು. ಅದು ಆನಂದದಲ್ಲಿಯೇ ಇರುತ್ತದೆ. ಮತ್ತು ಆನಂದದಲ್ಲಿಯೇ ಅಡಗುತ್ತದೆ ಎಂದು ಹೇಳಿರುವಾಗ ಆನಂದದಿಂದ ಜಗತ್ತು ಭಿನ್ನವಾದುದು ಹೇಗೆ ?

—ಆದರೆ ಕುಂಬಾರನಿಂದ ನಿರ್ಮಾಣವಾದ ಘಟವು ಅವನಿಂದ ಹೇಗೆ ಭಿನ್ನವಾಗಿರುವದೋ ಹಾಗೆ ಆನಂದದಿಂದ ಉತ್ಪನ್ನವಾದ ಜಗತ್ತು ಆನಂದದಿಂದ ಭಿನ್ನವಾಗಿರಲು ಶಕ್ಯವಿದೆ.

**ಕುಲಾಲಾದ್ಘಟ ಉತ್ಪನ್ನೋ ಭಿನ್ನಶ್ಚೇತಿ ನ ಶಂಕ್ಯತಾಮ್ ।**
**ಮೃದ್ವದೇಷ ಉಪಾದಾನಂ ನಿಮಿತ್ತಂ ನ ಕುಲಾಲವತ್ ॥೪॥**

ಕುಂಬಾರನಿಂದ ಉತ್ಪನ್ನವಾದ ಘಟವು ಅವನಿಂದ ಭಿನ್ನವಾಗಿದೆಯಲ್ಲ ಎಂದು ಶಂಕೆಯನ್ನೆತ್ತಬಾರದು. ಯಾಕಂದರೆ ಅಲ್ಲಿ ಘಟಕ್ಕೆ ಮಣ್ಣು ಉಪಾದಾನ ಕಾರಣವಿರುವಂತೆ ಇಲ್ಲಿ ಜಗತ್ತಿಗೆ ಆನಂದವು ಉಪಾದಾನ ಕಾರಣವಾಗಿದೆ. ಕುಂಬಾರನಂತೆ ಬರೀ ನಿಮಿತ್ತಕಾರಣವಲ್ಲ.

—ಹಾಗೇಕೆ ? ಕುಂಬಾರನಿಗೇ ಘಟದ ಉಪಾದಾನ ಕಾರಣತ್ವವು ಯಾಕಿಲ್ಲ ?

**ಸ್ಥಿತಿ-ಲಯಯುಶ್ಚ ಕುಂಭಸ್ಯ ಕುಲಾಲೇಸ್ತೋ ನ ಹಿ ಕ್ವಚಿತ್ ।**
**ದೃಷ್ಟೌ ತೌ ಮೃದಿ ತದ್ವತ್ಸ್ಯಾದುಪಾದಾನಂ ತಯೋಃ ಶ್ರುತೇಃ ॥೫॥**

ಕುಂಭದ ಇರುವಿಕೆಯೂ ಮತ್ತು ಕುಂಭ ಲಯವಾದ ಮೇಲೆ ಅದರೊಡನೆ ಒಂದಾಗುವಿಕೆಯೂ ಕುಂಬಾರನಿಗೆ ಶಕ್ಯವಾಗದ್ದು. ಅವೆರಡು ರೀತಿಗಳು

ಮಣ್ಣಿನಲ್ಲಿ ಮಾತ್ರ ಆಗುತ್ತಿರುವುದು ಕಂಡುಬರುತ್ತದೆ. ಹಾಗೆ ಶ್ರುತಿಪ್ರಮಾಣದಿಂದ ಆನಂದವು ಜಗತ್ತಿನ ಸ್ಥಿತಿಲಯಗಳಿಗೆ ಉಪಾದಾನ ಕಾರಣವಾಗಿದೆ.

—ಉಪಾದಾನದ ಅವಾಂತರ ಭೇದಗಳು.

**ಉಪಾದಾನಂ ತ್ರಿಧಾ ಭಿನ್ನಂ ವಿವರ್ತಿ ಪರಿಣಾಮಿ ಚ ।**
**ಆರಂಭಕಂ ಚ ತತ್ರಾಂತ್ಯೌ ನ ನಿರಂಶೇಽವಕಾಶಿನೌ ॥೬॥**

ವಿವರ್ತ–ಪರಿಣಾಮ–ಆರಂಭಕವೆಂದು ಉಪಾದಾನವು ಮೂರುಬಗೆಯಾಗಿದೆ. ಇವುಗಳಲ್ಲಿ ಕೊನೆಯ ಅಂದರೆ ಪರಿಣಾಮ ಮತ್ತು ಆರಂಭಕಗಳೆಂಬವುಗಳಿಗೆ ನಿರವಯವ ಆತ್ಮವಸ್ತುವಿನಲ್ಲಿ ಅವಕಾಶವಿಲ್ಲ.

ಹೇಗೆ ಎಂಬುದನ್ನು ತೋರಿಸಲು ಮೊದಲು ಆರಂಭವಾದಿಗಳ ಮತ ಅನುವಾದಿಸುತ್ತಾರೆ.

**ಆರಂಭವಾದಿನೋಽನ್ಯಸ್ಮಾದನ್ಯಸ್ಯೋತ್ಪತ್ತಿಮೂಚಿರೇ ।**
**ತಂತೋಃ ಪಟಸ್ಯ ನಿಷ್ಪತ್ತೇರ್ಭಿನ್ನೌ ತಂತು ಪಟೌ ಖಲು ॥೭॥**

ವೈಶೇಷಿಕರೇ ಮೊದಲಾದ ಆರಂಭವಾದಿಗಳು ಎಂದರೆ ತಾರ್ಕಿಕರು ಒಂದರಿಂದ ಇನ್ನೊಂದು ಹುಟ್ಟುವುದೆಂದು ಹೇಳುವರು. ನೂಲಿನಿಂದ ಬಟ್ಟೆ ಹುಟ್ಟುತ್ತದೆ. ನೂಲು ಸಣ್ಣದು ಬಟ್ಟೆ ದೊಡ್ಡದು. ಆದುದರಿಂದ ಅವೆರಡೂ ಬೇರೆ ಬೇರೆ. ಇಲ್ಲಿ ದೊಡ್ಡದಕ್ಕೆ ಸಣ್ಣದು ಆರಂಭಕವೆಂಬ ಉಪಾದಾನ.

—ಪರಿಣಾಮದ ಸ್ವರೂಪ.

**ಅವಸ್ಥಾಂತರತಾಪತ್ತಿರೇಕಸ್ಯ ಪರಿಣಾಮಿತಾ ।**
**ಸ್ಯಾತ್ಕ್ಷೀರಂ ದಧಿ ಮೃತ್ಕುಂಭಃ ಸುವರ್ಣಂ ಕುಂಡಲಂ ಯಥಾ ॥೮॥**

ಒಂದು ಪದಾರ್ಥವು ತನ್ನ ಮೊದಲಿನ ಅವಸ್ಥೆಯನ್ನು ಕಳೆದುಕೊಂಡು ಮತ್ತೊಂದು ಅವಸ್ಥೆಯನ್ನು ಹೊಂದುವದು ಪರಿಣಾಮವಾಗುವಿಕೆ. ಹೇಗೆಂದರೆ ಹಾಲು ಮೊಸರಾಗುವದು. ಮಣ್ಣು ಕೊಡವಾಗುವದು. ಭಂಗಾರವು ಕುಂಡಲ ಎಂದರೆ ಕಿವಿಯ ಆಭರಣವಾಗುವುದು.

( ಪೂರ್ವಮಿಮಾಂಸಕರೇ ಮೊದಲಾದವರು ಇದನ್ನು ಹಿಡಿಯುವರು.)

—ಈಗ ವಿವರ್ತದ ಲಕ್ಷಣಗಳನ್ನು ಹೇಳುತ್ತಾರೆ.

**ಅವಸ್ಥಾಂತರ ಭಾನಂ ತು ವಿವರ್ತೋ ರಜ್ಜು ಸರ್ಪವತ್ ।**
**ನಿರಂಶೇಽಪ್ಯಸ್ತ್ಯಸೌ ವ್ಯೋಮ್ನಿ ತಲಮಾಲಿನ್ಯಕಲ್ಪನಾತ್ ॥೯॥**

ಹಗ್ಗವು ತಾನು ಇರುವಂತೆ ಇದ್ದು ಹಾವಿನಂತೆ ತೋರುವದೇ ವಿವರ್ತವು. ಸಾವಯವವುಳ್ಳ ಹಗ್ಗ ಮುಂ. ಗಳಲ್ಲಿ ತೋರುವ ವಿವರ್ತವು ನಿರವಯವ ಪದಾರ್ಥಗಳಲ್ಲಿಯೂ ಇರುವುದುಂಟು. ನಿರವಯವವೆನಿಸಿದ ಆಕಾಶವು ಡಬ್ಬಿ ಹಾಕಿದ ಕೊಪ್ಪರಗಿಯಂತೆ ಇರುತ್ತದೆ. ನೀಲವರ್ಣವಾಗಿದೆ ಎಂದು ತಿಳಿಯದವರು ಆಕಾಶದಲ್ಲಿ ಆರೋಪ ಮಾಡುವರು.

**ತತೋ ನಿರಂಶ ಆನಂದೇ ವಿವರ್ತೋ ಜಗದಿಷ್ಯತಾಮ್ ।**
**ಮಾಯಾಶಕ್ತಿಃ ಕಲ್ಪಿಕಾ ಸ್ಯಾದೈಂದ್ರಜಾಲಿಕ ಶಕ್ತಿವತ್ ॥೧೦॥**

ಹೀಗೆ ನಿರವಯವ ಪದಾಥಗಳಲ್ಲಿ ವಿವರ್ತವು ತೋರುವುದರಿಂದ ಜಗತ್ತು ನಿರವಯವ ಆನಂದದಲ್ಲಿ ಆರೋಪಿತವೆಂದು ತಿಳಿಯಬೇಕು. ಗಾರುಡಿಗನು ತನ್ನ–ಮನೆ-ಮಂತ್ರ–ಔಷಧಾದಿ ತನ್ನ ಶಕ್ತಿಗಳಿಂದ ಅನೇಕ ಚಮತ್ಕಾರ ತೋರಿಸುವಂತೆ ಪರಬ್ರಹ್ಮನ ಮಾಯೆಯೇ ಎಲ್ಲವನ್ನು ಕಲ್ಪಿಸುವದು.

—ಆದರೆ ಆತ್ಮನಿಗಿಂತ ಭಿನ್ನವಾದ ಈ ಮಾಯಾ ಶಕ್ತಿಯನ್ನು ಸ್ವೀಕರಿಸಿದರೆ ಅದ್ವೈತದ ಹಾನಿಯಲ್ಲವೇ ?

**ಶಕ್ತಿಃ ಶಕ್ತಾತ್ ಪೃಥಙ್ನಾಸ್ತಿ ತದ್ವದ್ದೃಷ್ಟೇರ್ನ ಚಾಭಿದಾ।**
**ಪ್ರತಿಬಂಧಸ್ಯ ದೃಷ್ಟತ್ವಾಚ್ಛಕ್ತ್ಯಭಾವೇ ತು ಕಸ್ಯ ಸಃ ॥೧೧॥**

ಶಕ್ತಿಯು ಶಕ್ತಿಯನ್ನು ಹೊಂದಿದ ಪದಾರ್ಥದಿಂದ ಬೇರೆಯಾದುದಲ್ಲ. ಅದು ಹೇಗೆ ? ಎಂದರೆ ಬೇರೆ ಎಂಬ ಅನುಭವವು ಬರುವದಿಲ್ಲವಾದುದರಿಂದ. ಅದರಂತೆ ಆ ಮಾಯೆಯ ಕಾರ್ಯಕ್ಕೆ ಅಡ್ಡಿಯಾಗುವದೆಂದು ಕಂಡು ಬರುವುದರಿಂದ ಪದಾರ್ಥದೊಡನೆ ಅದು ಅಭಿನ್ನವೂ ಅಲ್ಲ. ಹಾಗಾದರೆ ಶಕ್ತಿಯು ಇಲ್ಲವೇ ಇಲ್ಲ ಎನ್ನಬೇಕೇ ? ಹಾಗಂದರೆ ಅನುಭವಕ್ಕೆ ಬರುವ ಪ್ರತಿಬಂಧವು ಯಾವುದಕ್ಕೆ ?

(ಇಂದ್ರಿಯಗಳಿಗೆ ಅಗ್ನಿಯು ಗೋಚರವಾದಂತೆ ಅದರ ಶಕ್ತಿಯು ಗೋಚರವಾಗುವದಿಲ್ಲ. ನಿಜ. ಆದರೂ ಅಗ್ನಿಯನ್ನು ಮುಟ್ಟಿದರೆ ಸುಟ್ಟು ಗುರುಳಿಗಳೇಳುತ್ತವೆ. ಇವೆಲ್ಲಕಾರಣಗಳಿಂದ ಅಗ್ನಿಯಲ್ಲಿ ಶಕ್ತಿಯುಂಟೆಂದು

ತಿಳಿಯಬೇಕಾಗುತ್ತದೆ. ಹೀಗಿದ್ದೂ ಒಂದು ವೇಳೆ ಅಗ್ನಿಯನ್ನು ಮುಟ್ಟಿದರೆ ಸುಡುವುದಿಲ್ಲ. ಅದುಯಾವುದಕ್ಕೆ ಪ್ರತಿಬಂಧವಾದುದರಿಂದ? ಎಂದರೆ-ಅಗ್ನಿ ಶಕ್ತಿಗೆ ಎಂದು ಸಿದ್ಧವಾಗುವದು.)

—ಆದರೆ ಅತೀಂದ್ರಿಯ ಶಕ್ತಿಗಾದ ಪ್ರತಿಬಂಧವನ್ನು ತಿಳಿಯುವುದು ಹೇಗೆ?

**ಶಕ್ತೇಃ ಕಾರ್ಯಾನುಮೇಯತ್ವಾದಕಾರ್ಯೇ ಪ್ರತಿಬಂಧನಮ್।**
**ಜ್ವಲತೋಽಗ್ನೇರದಾಹೇ ಸ್ಯಾನ್ಮಂತ್ರಾದಿ ಪ್ರತಿಬಂಧಿತಾ ॥೧೨॥**

ಶಕ್ತಿಯನ್ನು ಅದರ ಕಾರ್ಯದಿಂದ ತಿಳಿಯಬೇಕಾಗಿರುವದು. ಆದುದರಿಂದ ಅದರ ಕಾರ್ಯವು ಆಗದಂತಾದ ಕೂಡಲೇ ಅದಕ್ಕೆ ಅಡ್ಡಿಯುಂಟಾದ ಜ್ಞಾನವಾಗುತ್ತದೆ. ನಿಗಿನಿಗಿ ಕೆಂಡವನ್ನು ಮುಟ್ಟಿದರೂ ಸುಡದಂತಾದರೆ ಮಂತ್ರ ಮೊದಲಾದವುಗಳಿಂದ ಅಡ್ಡಿಯುಂಟಾದ ಕಲ್ಪನೆ ಬರುತ್ತದೆ.

—ಹೀಗೆ ಲೌಕಿಕ ಶಕ್ತಿಯನ್ನು ಪ್ರಮಾಣದಿಂದ, ಸ್ವರೂಪದಿಂದ ತೋರಿಸಿ ಮಾಯಾಶಕ್ತಿಯು ಇರುವದೆಂಬ ಬಗೆಗೆ ಶ್ವೇತಾಶ್ವತಾರೋಪನಿಷತ್ತಿನ ವಾಕ್ಯದ ಅರ್ಥವನ್ನು ಹೇಳುತ್ತಾರೆ.

**ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ ಮುನಯೋಽವಿದನ್ ।**
**ಪರಾಸ್ಯ ಶಕ್ತಿರ್ವಿವಿಧಾ ಕ್ರಿಯಾಜ್ಞಾನಬಲಾತ್ಮಿಕಾ ॥೧೩॥**

ಸತ್ವ–ರಜ–ತಮೋಗುಣಗಳ ಕಾರ್ಯರೂಪಗಳಾದ ಸ್ಥೂಲ-ಸೂಕ್ಷ್ಮ ಶರೀರಗಳಲ್ಲಿ ಅಡಗಿರುವ ದೇವರ ಆತ್ಮಶಕ್ತಿಯನ್ನು ತಿಳಿದರು. ಬ್ರಹ್ಮನ ಉತ್ಕೃಷ್ಟವಾದ ಶಕ್ತಿಯು ಅನೇಕಬಗೆಎಂದರೆ ಕ್ರಿಯಾಶಕ್ತಿ–ಜ್ಞಾನಶಕ್ತಿ–ಬಲ ಶಕ್ತಿ ಎಂದು ಬಹುವಿಧವಾಗಿ ಶ್ರುತಿಯಲ್ಲಿ ಹೇಳಿದೆ.

**ಇತಿ ವೇದವಚಃ ಪ್ರಾಹ ವಸಿಷ್ಠಶ್ಚ ತಥಾಽಬ್ರವೀತ್ ।**
**ಸರ್ವಶಕ್ತಿ ಪರಂಬ್ರಹ್ಮ ನಿತ್ಯಮಾಪೂರ್ಣಮದ್ವಯಮ್ ॥೧೪॥**

ಹೀಗೆ ಶ್ವೇತಾಶ್ವತರೋಪನಿಷತ್ತಿನಲ್ಲಿದೆ. ವಸಿಷ್ಠಋಷಿಗಳು ಕೂಡ ಯೋಗವಾಸಿಷ್ಠದಲ್ಲಿ ಮಾಯಾಶಕ್ತಿಯನ್ನು ಹೀಗೇವರ್ಣಿಸಿದ್ದಾರೆ. ಸರ್ವಶಕ್ತಿಮಂತನೆಂಬುದು ಬ್ರಹ್ಮನ ಸೋಪಾಧಿಕ ರೂಪವಾಗಿದ್ದು, ನಿತ್ಯ–ಪರಿಪೂರ್ಣ-ಅದ್ವಿತೀಯವೆಂಬುದು ಅವನ ಪಾರಮಾರ್ಥಿಕ ರೂಪವಾಗಿದೆ.

—ವಸಿಷ್ಠರ ವಚನದ ಅನುವಾದ

**ಯಥೋಲ್ಲಸತಿ ಶಕ್ತ್ಯಾಸೌ ಪ್ರಕಾಶಮಧಿಗಚ್ಛತಿ ।**
**ಚಿಚ್ಛಕ್ತಿರ್ಬ್ರಹ್ಮಣೋ ರಾಮ ಶರೀರೇಷೂಪಲಭ್ಯತೇ ॥೧೫॥**

ಆ ಬ್ರಹ್ಮವು ಯಾವಾಗ ಯಾವಶಕ್ತಿಯಿಂದ ವಿವರ್ತವಾಗುವದೋ, ಎಂದರೆ ತನ್ನ ಸ್ವರೂಪವಲ್ಲದ ಬೇರೆ ತೋರಿಕೆಯನ್ನು ತೋರುವದೋ, ಆಗ ಆ ಶಕ್ತಿಯು ಕಾಣುವದು. ಎಲೈ ರಾಮನೇ ಚಿಚ್ಛಕ್ತಿಯು ದೇವತೆಗಳೇ ಮೊದಲಾದ ಶರೀರದಲ್ಲಿ ಲಭ್ಯವಾಗುವದು.

**ಸ್ಪಂದಶಕ್ತಿಶ್ಚ ವಾತೇಷು ಧಾರ್ಢ್ಯಶಕ್ತಿಸ್ತಥೋಪಲೇ ।**
**ದ್ರವಶಕ್ತಿಸ್ತಥಾಂಭಃಸು ದಾಹಶಕ್ತಿಸ್ತಥಾನಲೇ ॥೧೬॥**

**ಶೂನ್ಯಶಕ್ತಿಸ್ತಥಾಕಾಶೇ ನಾಶಶಕ್ತಿರ್ವಿನಾಶಿನಿ ।**
**ಯಥಾಂಡೇಽಂತರ್ಮಹಾ ಸರ್ಪೋ ಜಗದಸ್ತಿ ತಥಾತ್ಮನಿ ॥೧೭॥**

ಗಾಳಿಯಲ್ಲಿ ಅಲ್ಲಾಡುವಶಕ್ತಿ, ಕಲ್ಲಿನಲ್ಲಿ ಘಟ್ಟಿಯಾಗಿರುವ ಶಕ್ತಿ ನೀರಿನಲ್ಲಿ ಹರಿಯುವಶಕ್ತಿ, ಬೆಂಕಿಯಲ್ಲಿ ಸುಡುವಶಕ್ತಿ, ಆಕಾಶದಲ್ಲಿ ಬರಿದಾಗಿರುವ ಶಕ್ತಿ, ನಾಶವುಳ್ಳದ್ದರಲ್ಲಿ ನಾಶಶಕ್ತಿ ಇವು ಎದ್ದು ಕಾಣುವವು. ಹೀಗೆ ಒಂದು ತತ್ತಿಯಲ್ಲಿ ದೊಡ್ಡ ಹಾವು ಅಡಗಿರುವಂತೆ ಪರಮಾತ್ಮನಲ್ಲಿ ಜಗತ್ತು ಇರುವದು

—ಒಬ್ಬ ಆತ್ಮನಲ್ಲಿ ಈ ವಿಚಿತ್ರಜಗತ್ತು ಹೇಗೆ ಇರುವದು?

**ಫಲಪತ್ರಲತಾಪುಷ್ಪಶಾಖಾವಿಟಪಮೂಲವಾನ್ ।**
**ನನು ಬೀಜೇ ಯಥಾ ವೃಕ್ಷಸ್ತಥೇದಂ ಬ್ರಹ್ಮಣಿ ಸ್ಥಿತಮ್ ॥೧೮॥**

ಹಣ್ಣು-ಎಲೆ-ಟೊಂಗೆ–ಹೂವು–ಕೊಂಬೆ-ಚಿಗುರು-ಬೇರು ಮೊದಲಾದವುಗಳಿಂದ ಕೂಡಿದ ಗಿಡವು ಒಂದು ಬೀಜದಲ್ಲಿರುತ್ತದೆ. ಅದರಂತೆ ಇದೆಲ್ಲವು ಬ್ರಹ್ಮನಲ್ಲಿರುತ್ತದೆ.

—ಬ್ರಹ್ಮನ ಎಲ್ಲ ಶಕ್ತಿಗಳು ಒಮ್ಮೆಲೇ ಏಕೆ ಉದಯವಾಗುವದಿಲ್ಲ?

**ಕ್ವಚಿತ್‌ಕಾಚಿತ್‌ಕದಾಚಿಚ್ಚ ತಸ್ಮಾದುದ್ಯಂತಿ ಶಕ್ತಯಃ ।**
**ದೇಶಕಾಲವಿಚಿತ್ರತ್ವಾತ್ ಕ್ಷ್ಮಾತಲಾದಿವ ಶಾಲಯಃ ॥೧೯॥**

ಭೂತಲದಿಂದ ಹುಟ್ಟಿ ಬೆಳೆಯುವ ಭತ್ತದಂತೆ, ದೇಶ ಎಂದರೆ ಸ್ಥಳ, ಕಾಲ ಎಂದರೆ ಋತುಮಾನ ಇವುಗಳ ವಿಚಿತ್ರಸ್ಥಿತಿಯಿಂದ ಕೆಲವು ಬೀಜಗಳು

ಕೆಲವು ಕಾಲದಲ್ಲಿ ಮಾತ್ರ ಮೊಳಕೆಯೊಡೆಯುವಂತೆ ಸಂಬಂಧ ಭೇದದಿಂದ ಬ್ರಹ್ಮಶಕ್ತಿಗಳು ಕಾಣಿಸಿಕೊಳ್ಳುವವು.

—ಜಗತ್ತು ಕಲ್ಪನಾ ಮಾತ್ರವಾಗಿದೆ ಎಂಬದನ್ನು ತೋರಿಸಲು ಅದನ್ನು ಕಲ್ಪಿಸುವ ಮನದ ಸ್ವರೂಪವನ್ನು ತಿಳಿಸುತ್ತಾರೆ.

**ಸ ಆತ್ಮಾ ಸರ್ವಗೋ ರಾಮ ನಿತ್ಯೋದಿತಮಹಾವಪುಃ ।**
**ಯನ್ಮನಾಙ್ಮನನೀಂ ಶಕ್ತಿಂ ಧತ್ತೇ ತನ್ಮನ ಉಚ್ಯತೇ ॥೨೦॥**

ಎಲೈರಾಮನೇ, ದೇಶಕಾಲಾದಿ ಕಟ್ಟಿಗೊಳಪಡದ ಯಾವಾಗಲೂ ಬೆಳಗುತ್ತಿರುವದೇ ಯಾವನ ಸ್ವರೂಪವಾಗಿರುವದೋ ಆ ಸರ್ವವ್ಯಾಪಿಯಾದ ಆತ್ಮನು ಯಾವಾಗ ತನ್ನನ್ನಾಗಲೀ, ಬೇರೆಯವರನ್ನಾಗಲೀ ಅರಿಯುವದಕ್ಕೆ ಯೋಗ್ಯವಾದ ಅವಿದ್ಯಾ ಪರಿಣಾಮವಾದ ಶಕ್ತಿಯನ್ನು ತಾಳುವನೋ ಆಗ ಅದು ಮನಸ್ಸೆನಿಸುವದು.

—ಇನ್ನು ಕಲ್ಪನೆ ಹೇಗಾಗುವದೆಂದು ತಿಳಿಸುತ್ತಾರೆ.

**ಆದೌ ಮನಸ್ತದನು ಬಂಧವಿಮೋಕ್ಷದೃಷ್ಟೀ ।**
**ಪಶ್ಚಾತ್ ಪ್ರಪಂಚರಚನಾ ಭುವನಾಭಿಧಾನಾ ॥**
**ಇತ್ಯಾದಿಕಾ ಸ್ಥಿತಿರಿಯಂ ಹಿ ಗತಾ ಪ್ರತಿಷ್ಠಾ-**
**ಮಾಖ್ಯಾಯಿಕಾ ಸುಭಗ ! ಬಾಲಜನೋದಿತೇವ ॥೨೧॥**

ಹೀಗೆ ಮೊದಲು ಮನಸ್ಸು, ತರುವಾಯ ತಾನುಬಂಧನದಲ್ಲಿ ಸಿಕ್ಕಿರುವೆನೆಂದೂ, ಇದರಿಂದ ಬಿಡುಗಡೆಮಾಡಿಕೊಳ್ಳಬೇಕೆಂದೂ ಕಲ್ಪನೆ. ಮುಂದೆ ಭುವನವೆಂಬ ಹೆಸರಿನ ಪ್ರಪಂಚರಚನೆ. ಎಲೈ ಭಾಗ್ಯಶಾಲಿಯೇ, ಹೀಗೆ ಈ ಜಗತ್ತಿನ ಸ್ಥಿತಿಯು ಬಾಲಕನಿಗೆ ಒಬ್ಬ ದಾಸಿಯು ಹೇಳಿದಕಥೆಯಂತೆ ನಿಜವಾಗಿಯೇ ಪರಿಣಮಿಸಿದೆ.

— ಈಗ ಅದೇ ವಸಿಷ್ಠ ರಾಮಾಯಣದ ಕಥೆ ಹೇಳುತ್ತಾರೆ.

**ಬಾಲಸ್ಯ ಹಿ ವಿನೋದಾಯ ಧಾತ್ರೀ ವಕ್ತಿ ಶುಭಾಂ ಕಥಾಮ್।**
**ಕ್ವಚಿತ್‌ಸಂತಿ ಮಹಾಬಾಹೋ ರಾಜಪುತ್ರಾಸ್ತ್ರಯಃ**
**ಶುಭಾಃ ॥೨೨॥**

ದ್ಭ್ವೌ ನ ಜಾತೌ ತಥೈಕಸ್ತು ಗರ್ಭ ಏವ ನ ಚ ಸ್ಥಿತಃ ।
ವಸಂತಿತೇ ಧರ್ಮಯುಕ್ತಾ ಅತ್ಯಂತಾಸತಿ ಪತ್ತನೇ ॥೨೩॥
ಸ್ವಕೀಯಾಚ್ಛೂನ್ಯನಗರಾನ್ನಿರ್ಗತ್ಯ ವಿಮಲಾಶಯಾಃ ।
ಗಚ್ಛಂತೋ ಗಗನೇ ವೃಕ್ಷಾನ್ ದದೃಶುಃ ಫಲಶಾಲಿನಃ ॥೨೪॥
ಭವಿಷ್ಯನ್ನಗರೇ ತತ್ರ ರಾಜಪುತ್ರಾಸ್ತ್ರಯೋಽಪಿ ತೇ ।
ಸುಖಮದ್ಯ ಸ್ಥಿತಾಃ ಪುತ್ರ ಮೃಗಯಾವ್ಯವಹಾರಿಣಃ ॥೨೫॥
ಧಾತ್ರ್ಯೇತಿ ಕಥಿತಾ ರಾಮ ಬಾಲಕಾಖ್ಯಾಯಿಕಾ ಶುಭಾ ।
ನಿಶ್ಚಯಂ ಸ ಯಯೌ ಬಾಲೋ ನಿರ್ವಿಚಾರಣಯಾ
ಧಿಯಾ ॥೨೬॥

ಬಾಲಕನ ಮನೋರಂಜನೆಗಾಗಿ ದಾಸಿಯು ಒಂದು ಶುಭ ಕಥೆಯನ್ನು ಹೇಳುತ್ತಾಳೆ:— ಎಲೈ ಬಲಶಾಲಿಯಾದ ರಾಜಪುತ್ರನೇ, ಒಂದೂರಲ್ಲಿ ಭಾಗ್ಯ ಶಾಲಿಗಳಾದ ಮೂವರು ರಾಜಪುತ್ರರಿರುವರು. ಅವರೊಳಗಿನ ಇಬ್ಬರು ತಾಯಿಯ ಹೊಟ್ಟೆಯಿಂದ ಹುಟ್ಟಿ ಬಂದವರೇ ಅಲ್ಲ. ಇನ್ನೊಬ್ಬನು ತಾಯಿ ಬಸಿರಲ್ಲಿ ಮೂಡಿದವನೇ ಅಲ್ಲ. ಹೀಗೆ ಧರ್ಮಾತ್ಮರಾದ ಅವರು 'ಹಸೀಸುಳ್ಳು' ಎಂಬ ರಾಜಧಾನಿಯಲ್ಲಿ ಇರುವರು. ಅವರು ಬಹಳ ಶುದ್ಧಮನಸ್ಸಿನವರು. ಒಮ್ಮೆ ಆ ರಾಜಪುತ್ರರು ಹಸೀಸುಳ್ಳು ನಗರದಿಂದ ಹೊರಗೆ ನಡೆದಿರಲು ಆಕಾಶ ದಲ್ಲಿ ಬಹಳ ಹಣ್ಣುಗಳಾಗಿರುವ ಮರಗಳನ್ನು ಕಂಡರು. ಆಗ ಬೇಟೆಯಾಡುತ್ತ ದಣಿದ ಆ ಮೂವರೂ ರಾಜಪುತ್ರರು ಆ ಮರಗಳ ನೆರಳಲ್ಲಿ ದಣಿವಾರಿಸಿ ಕೊಂಡು ನೀರಿಲ್ಲದ ಸರೋವರದಲ್ಲಿ ಸ್ನಾನಮಾಡಿ ಬಾಯಾರಿಕೆ ತೀರಿಸಿಕೊಂಡು ಮುಂದೆ ನಡೆಯುತ್ತ ಆ ವನದ ಮಧ್ಯದಲ್ಲಿ 'ಮುಂದೆ ಹುಟ್ಟುವ ಊರು' ಎಂಬ ನಗರವನ್ನು ಕಂಡರು. ಅಲ್ಲಿ ಅವರು ಗೋಡೆಗಳಿಲ್ಲದ ಮನೆಗಳಲ್ಲಿ ತಳ ವಿಲ್ಲದ ತಪ್ಪೇಲಿಗಳನ್ನು ತಂದು ಅವುಗಳಲ್ಲಿ ಅನ್ನವನ್ನು ಬೇಯಿಸಿ ಬಾಯಿ ಯಿಲ್ಲದ ಅನೇಕ ಬ್ರಾಹ್ಮಣರಿಗೆ ಹೊಟ್ಟೆತುಂಬ ಊಟಕ್ಕೆ ಹಾಕಿ ತಾವು ಉಂಡು ಈಗ ಕೂಡ ಆ ಊರಲ್ಲಿ ಸುಖವಾಗಿದ್ದಾರೆ.

ಎಲೈ ರಾಮಚಂದ್ರನೇ, ಹೀಗೆ ಆ ದಾಸಿಯು ಒಂದು ಚಂದಾದ ಸಣ್ಣ ಹುಡುಗರ ಕಥೆಯನ್ನು ಹೇಳಲು ವಿಚಾರವಿಲ್ಲದ ಆ ರಾಜಪುತ್ರನು ಅದೆಲ್ಲ ನಿಜವೆಂದೇ ತಿಳಿದನು.

—ದೃಷ್ಟಾಂತದಿಂದ ಸಿದ್ಧವಾದ ಅರ್ಥವನ್ನು ದಾರ್ಷ್ಟಾಂತಿಕದಲ್ಲಿ ಯೋಚಿಸಿ ತೋರಿಸುತ್ತಾರೆ.

**ಇಯಂ ಸಂಸಾರರಚನಾ ವಿಚಾರೋಜ್ಝಿತಚೇತಸಾಮ್ ।**
**ಬಾಲಕಾಖ್ಯಾಯಿಕೇವೇತ್ಥಮವಸ್ಥಿತಿಮುಪಾಗತಾ ॥೨೭॥**

ಬಾಲಕನಿಗೆ ಹೇಳಿದ ಮೇಲಿನ ಕಥೆಯಂತೆ ವಿಚಾರವಿಲ್ಲದವರಿಗೆ ಈ ಪ್ರಪಂಚದ ರೂಪವಾದ ಸಂಸಾರದ ಕಲ್ಪನೆಯು ನಿಜವಾದುದೆಂದು ಅನಿಸುವುದು.

ಈಗ ವಸಿಷ್ಠರ ವಚನದ ಉಪಸಂಹಾರ.

**ಇತ್ಯಾದಿಭಿರುಪಾಖ್ಯಾನೈರ್ಮಾಯಾಶಕ್ತೇಶ್ಚ ವಿಸ್ತರಮ್ ।**
**ವಸಿಷ್ಠಃ ಕಥಯಾಮಾಸ ಸೈವ ಶಕ್ತಿರ್ನಿರೂಪ್ಯತೇ ॥೨೮॥**

ಹೀಗೆ ವಸಿಷ್ಠರು ಮಾಯಾ ಶಕ್ತಿಯ ಇರುವಿಕೆಯನ್ನು ಅನೇಕ ಕಥೆಗಳ ಮುಖಾಂತರ ಹೇಳಿದರು. ಆ ಮಾಯಾ ಶಕ್ತಿಯನ್ನೇ ನಾವಿನ್ನು ಹೇಳುತ್ತೇವೆ.

**ಕಾರ್ಯಾದಾಶ್ರಯತಶ್ಚೈಷಾ ಭವೇತ್‌ಶಕ್ತಿರ್ವಿಲಕ್ಷಣಾ ।**
**ಸ್ಫೋಟಾಂಗಾರೌ ದೃಶ್ಯಮಾನೌ ಶಕ್ತಿಸ್ತತ್ರಾನುಮೀ-**
**ಯತೇ ॥೨೯॥**

ಈ ಮಾಯಾ ಶಕ್ತಿಯು ತನ್ನ ಕಾರ್ಯವೆನಿಸಿದ ಜಗತ್ತಿನಕಿಂತ, ತನಗೆ ಆಶ್ರಯವಾದ ಬ್ರಹ್ಮನಿಗಿಂತ ಬೇರೆ ಸ್ವಭಾವದ್ದಾಗಿದೆ. ಅಗ್ನಿಯಲ್ಲಿರುವ ದಾಹ ಶಕ್ತಿಯಿಂದ ಹುಟ್ಟಿದ ಗುರುಳೆ ಮತ್ತು ಆ ಶಕ್ತಿಗೆ ಆಶ್ರಯವಾದ ಅಗ್ನಿ ಪ್ರತ್ಯಕ್ಷವಾಗಿ ಕಾಣುತ್ತದೆ. ಆದರೆ ಶಕ್ತಿಯು ಮಾತ್ರ ಕಾಣುವುದಿಲ್ಲ. ಅದನ್ನು ಅದರ ಕಾರ್ಯವೆನಿಸಿದ ಗುರುಳೆ ಮುಂ. ಗಳಿಂದ ತಿಳಿಯಬೇಕಾಗಿದೆ.

ಆದುದರಿಂದ ಆದಾಹಾ ಶಕ್ತಿಯು ತನ್ನ ಕಾರ್ಯ ಮತ್ತು ಆಶ್ರಯಗಳಿಗಿಂತ ಬೇರೆ.

—ಇದೇ ನ್ಯಾಯವನ್ನು ಮಣ್ಣಿನ ಶಕ್ತಿಯಲ್ಲಿಯೂ ಯೋಚಿಸಿ ಹೇಳುತ್ತಾರೆ.

**ಪೃಥುಬುಧ್ನೋದರಾಕಾರೋ ಘಟಃ ಕಾರ್ಯೋಽತ್ರ ಮೃತ್ತಿಕಾ।**
**ಶಬ್ದಾದಿಭಿಃ ಪಂಚಗುಣೈರ್ಯುಕ್ತಾ ಶಕ್ತಿಸ್ತ್ವತದ್ವಿಧಾ ॥೩೦॥**

ದೊಡ್ಡದೂ, ದುಂಡು ಹೊಟ್ಟೆಯದೂ ಆದ ಘಟವು ಕಾರ್ಯ. ಶಬ್ದವೇ ಮೊದಲಾದ ಐದುಗುಣಗಳಿಂದ ಕೂಡಿದ ಮಣ್ಣು ಆಶ್ರಯ. ಆದರೆ ಶಕ್ತಿಯು ಇವೆರಡಕ್ಕಿಂತ ಬೇರೆಯಾಗಿದೆ.

— ಅದು ಹೇಗೆ ? ಎಂಬುದನ್ನು ಹೇಳುತ್ತಾರೆ.

**ನ ಪೃಥ್ವ್ಯಾದಿರ್ನ ಶಬ್ದಾದಿಃ ಶಕ್ತಾವಸ್ತು ಯಥಾ ತಥಾ ।**
**ಅತ ಏವ ಅಚಿಂತ್ಯೈಷಾ ನ ನಿರ್ವಚನಮರ್ಹತಿ ॥೩೦॥**

ಶಕ್ತಿಯಲ್ಲಿ ಪೃಥ್ವಿಯ ಸ್ಥೂಲತ್ವವೆ ಮುಂ. ಕಾರ್ಯಧರ್ಮಗಳಿಲ್ಲ. ಶಬ್ದ–ಸ್ಪರ್ಶ ಮುಂ. ಆಶ್ರಯಧರ್ಮಗಳೂ ಇಲ್ಲ. ಅದು ಇರುವಂತೆಯೇ ಇರಲಿ. ಒಟ್ಟಿನಲ್ಲಿ ಅದು ಅಚಿಂತ್ಯವಾಗಿದ್ದು ಮಾತಿನಿಂದ ಅದು ಹೀಗಿರುವುದೆಂದು ಹೇಳಲು ಸಾಧ್ಯವಿಲ್ಲ.

—ಆ ಶಕ್ತಿಯು ವಸ್ತುವಿನ ಸ್ವರೂಪಕ್ಕಿಂತ ಬೇರೆಯಾಗಿರುವುದಾದರೆ ಆ ಸ್ವರೂಪದಂತೆ ಬೇರೆಯಾಗಿ ಯಾಕೆ ತೋರುವುದಿಲ್ಲ ?

**ಕಾರ್ಯೋತ್ಪತ್ತೇಃ ಪುರಾ ಶಕ್ತಿರ್ನಿಗೂಢಾ ಮೃದ್ಯವಸ್ಥಿತಾ ।**
**ಕುಲಾಲಾದಿ ಸಹಾಯೇನ ವಿಕಾರಾಕಾರತಾಂ ವ್ರಜೇತ್ ॥೩೧॥**

ಮಣ್ಣಿನಲ್ಲಿರುವ ಶಕ್ತಿಯು ಘಟವೇ ಮೊದಲಾದ ಕಾರ್ಯೋತ್ಪತ್ತಿಯಾಗುವುದಕ್ಕಿಂತ ಮೊದಲು ಮಣ್ಣಿನಲ್ಲಿ ಗುಪ್ತವಾಗಿರುತ್ತದೆ. ಅದು ಹಾಗೆ ಗುಪ್ತವಾಗಿರುವುದಾದರೆ ಎಂದೂ ಕಣ್ಣಿಗೆ ಕಾಣುವುದು ಸಾಧ್ಯವಿಲ್ಲ ಎಂದು ಅನ್ನುವದಾದರೆ ಹಾಲಿನಲ್ಲಿ ಅಡಗಿರುವ ಬೆಣ್ಣೆಯು ಕಡೆಯುವಿಕೆಯಿಂದ ಕಡೆಗಾಗಿ ಕಾಣುವಂತೆ ಕುಂಬಾರನ ಬಗೆಬಗೆಯ ಕಾರ್ಯಗಳಿಂದ ಘಟದ ರೂಪವನ್ನು ತಾಳುವದು.

— ಕಾರಣಕ್ಕಿಂತ ಬೇರೆಯಾಗಿ ಶಕ್ತಿಯ ಕಾರ್ಯವಿದ್ದರೆ ಕಾರ್ಯ–ಮತ್ತು ಕಾರಣಗಳಿಗೆ ಭೇದವೇಕೆ ತೋರಬಾರದು ?

**ಪೃಥುತ್ವಾದಿವಿಕಾರಾಂತಂ ಸ್ಪರ್ಶಾದಿಂ ಚಾಪಿ ಮೃತ್ತಿಕಾಮ್ ।**
**ಏಕೀಕೃತ್ಯ ಘಟಂ ಪ್ರಾಹುರ್ವಿಚಾರವಿಕಲಾ ಜನಾಃ ॥೩೨॥**

ದಡ್ಡರು ದುಂಡುಹೊಟ್ಟೆಯ ದಪ್ಪ ಘಟವೆಂಬಕಾರ್ಯವನ್ನೂ ಶಬ್ದಸ್ಪರ್ಶಾದಿ ಗುಣಗಳುಳ್ಳ ಕಾರಣ ರೂಪ ಮಣ್ಣನ್ನೂ ಒಂದುಗೂಡಿಸಿಕೊಂಡು 'ಘಟ'ವೆಂದು ಹೇಳುವರು.

( ವಿಚಾರವಿಲ್ಲದಿರುವಿಕೆಯೇ ಕಾರ್ಯ-ಕಾರಣ ಭೇದಗಳು ತಿಳಿಯದಿರುವುದಕ್ಕೆ ನಿಮಿತ್ತವಾಗಿದೆ. )

—ಘಟವೆನ್ನುವುದು ದಡ್ಡತನ ಹೇಗೆ ?

**ಕುಲಾಲವ್ಯಾಪೃತೇಃ ಪೂರ್ವೋ ಯಾವಾನಂಶಃ ಸ ನೋ ಘಟಃ।**
**ಪಶ್ಚಾತ್ತು ಪೃಥುಬುಧ್ನಾದಿಮಚ್ಚೇ ಯುಕ್ತಾ ಹಿ ಕುಂಭತಾ ॥೩೪॥**

ಕುಂಬಾರನು ಕಾರ್ಯ ಮಾಡುವುದಕ್ಕಿಂತ ಮೊದಲಿದ್ದ ಮಣ್ಣು ಅದೇನು ಘಟವೆನಿಸುವದಿಲ್ಲ. ಕುಂಬಾರನ ಕಾರ್ಯವಾದ ಮೇಲೆ ಅದಕ್ಕೆ ದುಂಡು ಹೊಟ್ಟೆ, ದಪ್ಪತನ ಮುಂತಾದವೆಲ್ಲ ಬಂದಮೇಲೆ ಘಟವೆನ್ನುವುದು ಯೋಗ್ಯವಾಗುವದು.

—ನಿಜವಾಗಿರುವ ಘಟವು ಹೀಗೆಂದು ಹೇಳಲಾಗದ ಶಕ್ತಿಯ ಕಾರ್ಯವೆನ್ನುವುದು ಯೋಗ್ಯವಲ್ಲ ಎಂದರೆ-

**ಸ ಘಟೋ ನ ಮೃದೋ ಭಿನ್ನೋ ವಿಯೋಗೇ ಸತ್ಯನೀಕ್ಷಣಾತ್ ।**
**ನಾಪ್ಯಭಿನ್ನಃ ಪುರಾ ಪಿಂಡದಶಾಯಾಮನವೇಕ್ಷಣಾತ್ ॥೩೫॥**

ಘಟವನ್ನು ಮಣ್ಣಿನಿಂದ ಬೇರೆಮಾಡಿ ನೋಡುವದು ಶಕ್ಯವಿಲ್ಲದ್ದರಿಂದ- ಒಂದುವೇಳೆ ಬೇರೆಮಾಡಿ ನೋಡಿದಲ್ಲಿ ಘಟವೆಂಬುದು ಉಳಿಯುವದಿಲ್ಲ. ಆದುದರಿಂದ ಘಟವು ಮಣ್ಣಿಗಿಂತ ಬೇರೆ ಅಲ್ಲ. ಮಣ್ಣು ಮುದ್ದೆಯಾಗಿರುವಾಗ ಘಟವು ಕಾಣಿಸುವದಿಲ್ಲ. ಆದುದರಿಂದ ಅಭೇದವೂ ಅಲ್ಲ.

(ಹೀಗೆ ಭೇದಾಭೇದಗಳಿಂದ ಹೇಳುವದಕ್ಕೆ ಶಕ್ಯವಾಗದ ಕಾರಣ ಘಟಕ್ಕೆ ಪಾರಮಾರ್ಥಿಕತ್ವವಿಲ್ಲ.)

**ಅತೋಽನಿರ್ವಚನೀಯೋಽಯಂ ಶಕ್ತಿವತ್ತೇನಶಕ್ತಿಜಃ ।**
**ಅವ್ಯಕ್ತತ್ವೇ ಶಕ್ತಿರುಕ್ತಾ ವ್ಯಕ್ತತ್ವೇ ಘಟನಾಮಭೃತ್ ॥೩೬॥**

ಶಕ್ತಿಯಂತೆ ಘಟವು ಕೂಡ ಅನಿರ್ವಚನೀಯವಾಗಿದೆ. ಹಾಗೆಂದು ಅದು ಶಕ್ತಿಯಿಂದಾದು. ಶಕ್ತಿ ಮತ್ತು ಕಾರ್ಯ ಇವೆರಡೂ ಅನಿರ್ವಚನೀಯವೆಂದರೆ ಒಂದಕ್ಕೆ ಶಕ್ತಿ ಮತ್ತೊಂದಕ್ಕೆ ಕಾರ್ಯವೆನ್ನುವಕಾರಣ? ಘಟವು ಯಾವಾಗ

ಅವ್ಯಕ್ತವಾಗಿದ್ದಿತೋ ಆಗ ಅದಕ್ಕೆ ಶಕ್ತಿ ಎನ್ನುವರು. ಅದು ವ್ಯಕ್ತವಾದಾಗ 'ಘಟ'ವೆಂದು ಹೆಸರನ್ನು ಪಡೆಯಿತು.

—ಲೌಕಿಕವಾದ ಮಾಯೆ ಎಂದರೆ ಇಂದ್ರಜಾಲಾದಿಗಳೂ ಇದರಂತೆ ಎನ್ನುತ್ತಾರೆ.

**ಐಂದ್ರಜಾಲಿಕನಿಷ್ಠಾಪಿ ಮಾಯಾ ನ ವ್ಯಜ್ಯತೇ ಪುರಾ ।**
**ಪಶ್ಚಾದ್‌ಗಂಧರ್ವಸೇನಾದಿರೂಪೇಣ ವ್ಯಕ್ತಿಮಾಪ್ನು-**
**ಯಾತ್ ॥೩೭॥**

ಇಂದ್ರಜಾಲ ವಿದ್ಯೆಯನ್ನು ಬಲ್ಲ ಗಾರುಡಿಗನ ಮಾಯೆಯು ಕೂಡ ಕಾರ್ಯವಾಡುವದಕ್ಕಿಂತ ಮೊದಲು ವ್ಯಕ್ತವಾಗಿರುವದಿಲ್ಲ. ಮುಂದೆ ಗಂಧರ್ವಸೇನೆ ಮುಂ. ಗಳ ರೂಪದಿಂದ ವ್ಯಕ್ತವಾಗುವದು.

ಶಕ್ತಿಯ ಕಾರ್ಯವೆನಿಸಿದ ಘಟವೇ ಮೊದಲಾದವುಗಳು ಸುಳ್ಳೆಂದೂ, ಆ ಶಕ್ತಿಯ ಆಧಾರವೆನಿಸಿದ ಮಣ್ಣುಮಾತ್ರ ನಿಜವೆಂದೂ 'ವಾಚಾರಂಭಣಂ ವಿಕಾರೋನಾಮಧೇಯಂ' ಎಂಬ ಛಾಂದೋಗ್ಯ ಶ್ರುತಿಯು ಹೇಳುತ್ತದೆ ಎನ್ನುತ್ತಾರೆ.

**ಏವಂ ಮಾಯಾಮಯತ್ವೇನ ವಿಕಾರಸ್ಯಾನೃತಾತ್ಮತಾಮ್ ।**
**ವಿಕಾರಾಧಾರಮೃದ್ವಸ್ತುಸತ್ಯತ್ವಂ ಚಾಬ್ರವೀತ್‌ಶ್ರುತಿಃ ॥೩೮॥**

ಹೀಗೆ ಮಾಯೆಯಿಂದ ನಿರ್ಮಾಣಗೊಂಡ ಘಟವೇ ಮೊದಲಾದ ಕಾರ್ಯ ರೂಪ ವಿಕಾರಗಳು ಸುಳ್ಳು; ಆ ವಿಕಾರಗಳಿಗೆ ಆಧಾರಭೂತವಾದ ಮಣ್ಣು ಸತ್ಯವೆಂದು ಶ್ರುತಿಯು ಹೇಳುವದು.

—ಈ ಆ ಶ್ರುತಿವಾಕ್ಯದ ಅರ್ಥ.

**ವಾಙ್‌ನಿಷ್ಪಾದ್ಯಂ ನಾಮಮಾತ್ರಂ ವಿಕಾರೋ ನಾಸ್ಯ ಸತ್ಯತಾ।**
**ಸ್ಪರ್ಶಾದಿಗುಣಯುಕ್ತಾ ತು ಸತ್ಯಾ ಕೇವಲ ಮೃತ್ತಿಕಾ ॥೩೯॥**

ವಿಕಾರವು ಬರಿಮಾತು ಮಾತ್ರ. ಅದರಿಂದ ಅದೊಂದು ಹೆಸರು. ಆದು ದರಿಂದ ಅದು ನಿಜವಲ್ಲ ಸ್ಪರ್ಶವೇ ಮೊದಲಾದ ಗುಣಗಳಿಂದ ಕೂಡಿದ ಮಣ್ಣುಮಾತ್ರ ನಿಜ.

—ಹೀಗೆ ಅನ್ನುವದೇಕೆ?

ವ್ಯಕ್ತಾವ್ಯಕ್ತೇ ತದಾಧಾರ ಇತಿ ತ್ರಿಷ್ವಾದ್ಯಯೋರ್ದ್ವಯೋಃ।
ಪರ್ಯಾಯಃ ಕಾಲಭೇದೇನ ತೃತೀಯಸ್ತ್ವನುಗಚ್ಛತಿ ॥೪೦॥

ಘಟವೇ ಮೊದಲಾದ ಕಾರ್ಯವು ವ್ಯಕ್ತ, ಅದಕ್ಕೆ ಕಾರಣವೆನಿಸಿದ ಶಕ್ತಿಯು ಅವ್ಯಕ್ತ, ಇವೆರಡಕ್ಕೂ ಆಧಾರವಾದ ಮಣ್ಣು. ಹೀಗೆ ಈ ಮೂರು ಪದಾರ್ಥಗಳಲ್ಲಿಯ ಕಾರ್ಯ-ಶಕ್ತಿಗಳ ಕಾಲವು ಬೇರೆ ಬೇರೆಯಾಗಿದೆ. ಅವುಗಳ ಇರುವಿಕೆ ಒಂದೇಕಾಲದಲ್ಲಿ ಎಂಬ ನಿಯಮವಿಲ್ಲ, ಹೀಗೆ ಕಾರ್ಯ ಮತ್ತು ಶಕ್ತಿಗಳಿಗೆ ಆಯಾಕಾಲಕ್ಕೆ ಹೊಂದಿಕೊಂಡು ಆಧಾರವಾದ ಮಣ್ಣು ಎರಡರಲ್ಲಿಯೂ ಹಿಂಬಾಲಿಸಿಕೊಂಡಿರುತ್ತದೆ.

—ವಿಕಾರಗಳು ಅನಿತ್ಯವಾದವು ಎಂಬುದಕ್ಕೆ ಮೂರು ಕಾರಣಗಳನ್ನು ಕೊಡುತ್ತಾರೆ.

ನಿಸ್ತತ್ತ್ವಂ ಭಾಸಮಾನಂ ಚ ವ್ಯಕ್ತಮುತ್ಪತ್ತಿನಾಶಭಾಕ್ ।
ತದುತ್ಪತ್ತೌ ತಸ್ಯ ನಾಮವಾಚಾ ನಿಷ್ಪಾದ್ಯತೇ ನೃಭಿಃ ॥೪೧॥

ಶಕ್ತಿಯಿಂದ ಹೊರಬಿದ್ದವುಗಳು ಸುಳ್ಳಾದವುಗಳು. ಯಾಕಂದರೆ ನಿಜವಾದ ರೂಪವು ಅವುಗಳಿಗಿಲ್ಲದೇ ತೋರುತ್ತಿರುವದು. ಉತ್ಪತ್ತಿ ಹಾಗೂ ನಾಶವುಳ್ಳದ್ದಾಗಿರುವದು; ಉತ್ಪತ್ತಿಯ ನಂತರವೇ ಜನರ ಮಾತಿನಿಂದ ಕರೆಸಿಕೊಳ್ಳುವದು.

—ಅಲ್ಲದೇ.

ವ್ಯಕ್ತೇ ನಷ್ಟೇಽಪಿ ನಾಮ್ನೈತತ್ ನೃವಕ್ತ್ರೇಷ್ವನುವರ್ತತೇ ।
ತೇನ ನಾಮ್ನಾ ನಿರೂಪ್ಯತ್ವಾದ್ವ್ಯಕ್ತಂ ತದ್ರೂಪ-
ಮುಚ್ಯತೇ ॥೪೨॥

ಶಕ್ತಿಯಿಂದ ಹೊರಬಿದ್ದ ಪದಾರ್ಥವು ನಾಶವಾದರೂ ಅದರ ಹೆಸರು ಜನರ ಬಾಯಲ್ಲಿ ಇದ್ದೇಇರುವದು. ಹೀಗಾಗಿ ಬಳಸುವ ವಸ್ತುವು ಹೆಸರಿನಿಂದ ತಿಳಿದುಬರುವದಾದುದರಿಂದ ಆ ವ್ಯಕ್ತಪದಾರ್ಥವು ಬರಿ ನಾಮ-ರೂಪವೆಂದು ಹೇಳಬೇಕಾಯಿತು.

(ನಾಮದಿಂದಲೇ ಶಕ್ತಿಯಕಾರ್ಯವನ್ನು ಹೇಳಬೇಕಾಗುವದರಿಂದ ಅದು ನಾಮಮಾತ್ರವೆಂದು ತಾತ್ಪರ್ಯ.)

—ಇನ್ನು ಅನುಮಾನವು ಹೇಗೆ?

**ನಿಸ್ತತ್ತ್ವತ್ವಾತ್ ವಿನಾಶಿತ್ವಾದ್ವಾಚಾರಂಭಣನಾಮತಃ ।**
**ವ್ಯಕ್ತಸ್ಯ ನ ತು ತದ್ರೂಪಂ ಸತ್ಯಂ ಕಿಂಚಿನ್ಮೃದಾದಿವತ್॥೪೩॥**

ಘಟವೇ ಮೊದಲಾದ ಕಾರ್ಯರೂಪವು ಎಂದಿಗೂ ಸತ್ಯವಲ್ಲ; ಯಾಕಂದರೆ ಅದಕ್ಕೆ ನಿಜವಾದರೂಪವಿಲ್ಲ. ತನಗೆ ಆಧಾರವಾದ ಮಣ್ಣು ಇದ್ದರೂ ಅದು ಕೆಡುತ್ತದೆ ಮತ್ತು ಜನರ ಬಾಯಿಂದ ಬರುವ ಮಾತಿನ ಸ್ವರೂಪವುಳ್ಳದ್ದಾಗಿದೆ. ಆದುದರಿಂದ ಮಣ್ಣು ಮುಂ. ಗಳಂತೆ ಸತ್ಯವಲ್ಲ.

—ಈಗ ವಿಕಾರಗಳಿಗೆ ಆಧಾರರೂಪ ಮಣ್ಣು ಸತ್ಯವಾದುದೆಂದು ಹೇಳುತ್ತಾರೆ.

**ವ್ಯಕ್ತಕಾಲೇ ತತಃ ಪೂರ್ವಮೂರ್ಧ್ವಮಪ್ಯೇಕರೂಪಭಾಕ್ ।**
**ಸತತ್ತ್ವಮವಿನಾಶಂ ಚ ಸತ್ಯಂ ಮೃದ್ವಸ್ತು ಕಥ್ಯತೇ ॥೪೪॥**

ಘಟರೂಪತಾಳಿ ಹೊರಬಿದ್ದಮೇಲೆ, ಹೊರಬೀಳುವದಕ್ಕೆ ಮೊದಲು ಮತ್ತು ಘಟವು ನಾಶವಾದಮೇಲೆ ಮಣ್ಣು ಒಂದೇರೂಪವಾಗಿದ್ದು ನಾಶ ಹೊಂದದ ಮಣ್ಣು ಸತ್ಯವೆನಿಸುವದು.

—ಘಟ ಮುಂ. ಕಾರ್ಯಗಳೆಲ್ಲ ಸುಳ್ಳೆನ್ನುವದಾದರೆ, ಸಿಂಪಿನಲ್ಲಿ ಬೆಳ್ಳಿ ಕಾಣುವದು ಮುಂತಾದ ಅಸತ್ಯಕಾರ್ಯಗಳಂತೆ ಆಶ್ರಯವನ್ನು ತಿಳಿದ ಕೂಡಲೇ ಆ ನಾಮರೂಪಗಳೂ ಹೋಗಿಬಿಡಬೇಕಲ್ಲವೇ?

**ವ್ಯಕ್ತಂ ಘಟೋ ವಿಕಾರಶ್ಚೇತ್ಯೇತೈರ್ನಾಮಭಿರೀರಿತಃ ।**
**ಅರ್ಥಶ್ಚೇದನೃತಃ ಕಸ್ಮಾನ್ನ ಮೃದ್ಬೋಧೇ ನಿವರ್ತತೇ ॥೪೫॥**

ಹೊರಬಿದ್ದು ಕಾಣುವದೆಂದು, ಘಟವೆಂದು, ಆಕಾರವುಳ್ಳದುದೆಂದು, ಮೂಲಹೆಸರುಗಳಿಂದ ಹೇಳಿಸಿಕೊಳ್ಳುವ ವಸ್ತುವು ಸುಳ್ಳು ಎನ್ನುವದಾದರೆ ನಿಜವಾದ ಮಣ್ಣನ್ನು ತಿಳಿದಮೇಲೆ ಅವೆಲ್ಲ ಸುಳ್ಳಾಗಲಾರವೇ?

(ಕಾರಣಕ್ಕಿಂತ ಕಾರ್ಯವು ಬೇರೆಯಲ್ಲ ಎಂದು ಅಂಗೀಕರಿಸಿದರೆ ಕಾರಣಜ್ಞಾನದಿಂದ ಕಾರ್ಯವು ಬಾಧಿತವಾಗಲಾರದೇ? ಹಗ್ಗ-ಸಿಂಪು ಮುಂತಾದವುಗಳ ಅಧಿಷ್ಠಾನಜ್ಞಾನವುಂಟಾದಮೇಲೆ ಹಾವು-ಬೆಳ್ಳಿ ಮುಂ.

ಆರೋಪಿತವಸ್ತುಗಳು ಸುಳ್ಳೆನಿಸಿದಂತೆ ಇಲ್ಲಿ ಕೂಡ ಕಾರ್ಯವು ಸುಳ್ಳಾಗುವದು ಎಂದು ವಾದಿಯ ಅಭಿಪ್ರಾಯ.)

—ಸಮಾಧಾನ.

**ನಿವೃತ್ತ ಏವ ಯಸ್ಮಾತ್ತೇ ತತ್ ಸತ್ಯತ್ವಮತಿರ್ಗತಾ ।**
**ಈದೃಜ್‌ನಿವೃತ್ತಿರೇವಾತ್ರ ಬೋಧಜಾ ನ ತ್ವಭಾಸನಮ್ ॥೪೬॥**

ಹೊರಬಿದ್ದು ಕಾಣುವದೇ ಮುಂತಾದವೆಲ್ಲ ಸುಳ್ಳು ಎಂದು ನಿನಗನಿಸಿದರೆ ಅವೆಲ್ಲನಿಜವಾಗಿಯೂ ಸುಳ್ಳು. ಮೂಲ ಕಾರಣವೆನಿಸಿದ ಸಿಂಪಿನ ಅರಿವಾದಾಗ ಅದರಲ್ಲಿ ಹೊರಬಿದ್ದು ಕಾಣುತ್ತಿರುವ ಬೆಳ್ಳಿಯು ಕಾಣದೇ ಹೋದಂತೆ ಇಲ್ಲಿ ಮೂಲಕಾರಣವಾದ ಮಣ್ಣಿನ ಅರಿವಾಗಲು ಅದರಲ್ಲಿ ಹೊರಬಿದ್ದು ಕಾಣುತ್ತಿರುವ ಘಟವು ಯಾಕೆ ಕಾಣದೇ ಹೋಗುವುದಿಲ್ಲವೆಂದು ಶಂಕೆಯು ಬರಬಹುದು. ಸಿಂಪಿನಲ್ಲಿ ಬೆಳ್ಳಿಯು ಕಾಣುವಾಗ ಆ ಬೆಳ್ಳಿಯ ರೂಪದಲ್ಲಿಸಿಂಪು ಎಷ್ಟು ಮಾತ್ರವೂ ಕೂಡಿಕೊಂಡಿಲ್ಲ. ಆದುದರಿಂದ ಸಿಂಪಿನ ಅರಿವಾಗುತ್ತಲೇ ಬೆಳ್ಳಿಯು ಕಾಣದೇ ಹೋಗುವದು. (ಇದು ನಿರುಪಾಧಿಕ ಭ್ರಮಕ್ಕೆ ಉದಾಹರಣೆ) ಘಟದ ವಿಷಯಹಾಗಲ್ಲ. ಮಣ್ಣಿನಲ್ಲಿ ಗಡಿಗೆಯು ಹೊರಬಿದ್ದು ಕಾಣುವಾಗ ಆ ರೂಪದಲ್ಲಿ ಮಣ್ಣು ಕೂಡಿಕೊಂಡೇ ಇರುವದರಿಂದ ಮಣ್ಣಿನ ಅರಿವಾದರೂ ಘಟವು ಕಾಣುತ್ತಲೇ ಇರುವದು. (ಇದು ಸೋಪಾಧಿಕ ಭ್ರಮಕ್ಕೆ ಉದಾಹರಣೆ) ಸೋಪಾಧಿಕ ಭ್ರಮೆಯಲ್ಲಿ ಹೀಗೆ ಬೋಧ ಮಾತ್ರದಿಂದಲೇ ಸುಳ್ಳೆಂದು ಅರಿವಾಗಬೇಕು. ನಿರುಪಾಧಿಕ ಭ್ರಮೆಯಂತೆ ಆರೋಪಿಸಿದ ಪದಾರ್ಥವೇ ಅನುಭವಕ್ಕೆ ಬರುವದಿಲ್ಲ ಎಂಬಂತಾಗುವದಿಲ್ಲ.

—ಎಲ್ಲಿ ಹೀಗೆ ಅನುಭವಕ್ಕೆ ಬರುತ್ತದೆ?

**ಪುಮಾನಧೋಮುಖೋ ನೀರೇ ಭಾತೋಽಪ್ಯಸ್ತಿ ನ ವಸ್ತುತಃ।**
**ತಟಸ್ಥಮರ್ತ್ಯವತ್ತಸ್ಮಿನ್ನೈವಾಸ್ಥಾ ಕಸ್ಯಚಿತ್ ಕ್ವಚಿತ್ ॥೪೭॥**

ನೀರಿನಲ್ಲಿ ಕೆಳಗೆತಲೆ ಮೇಲೆಕಾಲು ಆಗಿ ಕಾಣುವ ಮನುಷ್ಯನ ಪ್ರತಿಬಿಂಬವು ನಿಜವಾದ ಮನುಷ್ಯನಲ್ಲ. ದಂಡೆಯಮೇಲೆ ನಿಂತ ಮನುಷ್ಯನ ಬಗೆಗಿರುವಂತೆ ನೀರೊಳಗಿನ ಮನುಷ್ಯನ ವಿಷಯವನ್ನು ಯಾರೂ ನಿಜವೆಂದು ತಿಳಿಯುವುದಿಲ್ಲ.

—ಆರೋಪಿಸಿದ ಪದಾರ್ಥವು ಸುಳ್ಳಾದುದು. ಇಷ್ಟುಮಾತ್ರದ ಜ್ಞಾನ ದಿಂದ ಪುರುಷಾರ್ಥ ಸಿದ್ಧಿಯಾಗುವದಿಲ್ಲ.

**ಈದೃಗ್ಬೋಧೇ ಪುಮರ್ಥತ್ವಂ ಮತಮದ್ವೈತವಾದಿನಾಮ್ ।**
**ಮೃದ್ರೂಪಸ್ಯಾಪರಿತ್ಯಾಗಾದ್ವಿವರ್ತತ್ವಂ ಘಟೇ**
**ಸ್ಥಿತಮ್ ॥೪೮॥**

ಅದ್ವೈತವಾದಿಗಳು ಇಷ್ಟು ಮಾತ್ರದ ಬೋಧವಾದರೆ ಪುರುಷಾರ್ಥವು ಸಾಧಿಸಿತೆನ್ನುವರು. ಎಂದರೆ ಅದ್ವೈತವಾದದಲ್ಲಿ ಆತ್ಮಾನಂದದ ಹೊರತು ಉಳಿದ ಎಲ್ಲ ಸೃಷ್ಟಿಯು ಸುಳ್ಳು ಎಂಬ ನಿಶ್ಚಯವಾದರೆ ಸಾಕು. 'ಅದ್ವೈತಾನಂದ'ವು ತೋರುವ ಪುರುಷಾರ್ಥವು ಸಿದ್ಧವಾಗುವದು. ಮಣ್ಣಿನ ಸ್ವರೂಪವನ್ನು ಬಿಡದೇ ಘಟವು ಕಾಣುತ್ತಿರುವದರಿಂದ ಘಟವು ಮಣ್ಣಿನಲ್ಲಿ ಆರೋಪಿತವಾದುದೆಂಬುದು ಸಿದ್ಧವೇಇದೆ.

(ಆರೋಪ, ವಿವರ್ತ, ಅಧ್ಯಾಸ, ಕಲ್ಪಿತ, ಮುಂತಾದ ಶಬ್ದಗಳೆಲ್ಲ ಬಹುತರ ಒಂದೇ ಅರ್ಥವನ್ನು ಕೊಡುವಂಥವು. ಇವುಗಳ ಅರ್ಥವು ಒಂದರಲ್ಲಿ ಇನ್ನೊಂದನ್ನು ಕಲ್ಪಿಸು, ಹೇರು ಎಂಬುದು ಇವುಗಳ ಅರ್ಥ.)

ಒಳ್ಳೇದು. ಕೊಡದಲ್ಲಿರುವ ಮಣ್ಣಿನ ಅಂಶವನ್ನು ಬಿಡಲು ಸಾಧ್ಯವಿಲ್ಲವಾದರೂ ಘಟವು ಮಣ್ಣಿನ ಪರಿಣಾಮವೆಂದು ಯಾಕೆ ತಿಳಿಯಬಾರದು?

**ಪರಿಣಾಮೇ ಪೂರ್ವರೂಪಂ ತ್ಯಜೇತ್ತತ್ ಕ್ಷೀರರೂಪವತ್ ।**
**ಮೃತ್ಸುವರ್ಣೇ ನಿವರ್ತೇತೇ ಘಟಕುಂಡಲಯೋರ್ನ ಹಿ ॥೪೯॥**

ಮೊದಲಿನ ರೂಪವನ್ನು ಬಿಟ್ಟು ಬೇರೆ ರೂಪವನ್ನು ಪಡೆಯುವದು ಪರಿಣಾಮ. ಹಾಲು ತನ್ನರೂಪವನ್ನು ಬಿಟ್ಟು ಮೊಸರಾಗುವದು ಇದಕ್ಕೆ ಉದಾಹರಣೆ. ಆದರೆ ಘಟದಲ್ಲಿ ಮಣ್ಣು, ಕುಂಡಲದಲ್ಲಿ ಭಂಗಾರ ಇವು ತಮ್ಮ ಸ್ವರೂಪಕಳೆದುಕೊಂಡಿರುವದಿಲ್ಲ.

(ಇಲ್ಲ ಕಾರಣವೆನಿಸಿದ ಮಣ್ಣು ಹಾಗೂ ಭಂಗಾರ ಕಾರ್ಯಕಾಲದಲ್ಲಿಯೂ ಇರುತ್ತದೆ. ಆದುದರಿಂದ ಇಲ್ಲಿ ವಿವರ್ತ.)

—ಆದರೆ ಘಟವನ್ನು ಮಣ್ಣಿನ ವಿವರ್ತವೆನ್ನುವದು ಸರಿಯಲ್ಲ. ಯಾಕಂದರೆ ಘಟವು ನಾಶವಾದ ಮೇಲೆ ಅದು ಮಣ್ಣಾಗುವದು ಕಂಡು ಬರುವದಿಲ್ಲ.

**ಘಟೇ ಭಗ್ನೇ ನ ಮೃದ್ಭಾವಃ ಕಪಾಲಾನಾಮವೇಕ್ಷಣಾತ್ ।**
**ಮೈವಂ ಚೂರ್ಣೇಽಸ್ತಿ ಮೃದ್ರೂಪಂ ಸ್ವರ್ಣರೂಪಂತ್ವತಿ-**
**ಸ್ಫುಟಮ್ ॥೫೦॥**

ಘಟವು ಒಡೆದ ಮೇಲೆ ಅದರ ಚೂರುಗಳು ಕಾಣುತ್ತಿರುವದರಿಂದ ಅದು ಮಣ್ಣಾಗುವುದಿಲ್ಲವೆಂದರೆ ಹಾಗಲ್ಲ. ಯಾಕಂದರೆ ಮಣ್ಣಿನ ಸ್ವರೂಪವು ಆ ಚೂರುಗಳ ಪುಡಿಯಲ್ಲಿರುವುದು ಕುಂಡಲದಲ್ಲಿ ಭಂಗಾರದ ರೂಪವಂತೂ ಅತಿಶಯಸ್ಪಷ್ಟವಿದೆ.

ಹಿಂದೆ ಎಂಟನೆಯ ಶ್ಲೋಕದಲ್ಲಿ ಹಾಲು-ಮಣ್ಣು-ಭಂಗಾರಗಳನ್ನು ಪರಿಣಾಮಕ್ಕೆ ದೃಷ್ಟಾಂತವಾಗಿ ಹೇಳಿ ಈಗ-ಮಣ್ಣು ಮತ್ತು ಭಂಗಾರ ವಿವರ್ತ ದೃಷ್ಟಾಂತವೆಂದರೆ ಹಾಲನ್ನೂ ಅದರೊಡನೆ ಯಾಕೆ ಕೂಡಿಸಬಾರದು?

**ಕ್ಷೀರಾದೌ ಪರಿಣಾಮೋಽಸ್ತು ಪುನಸ್ತದ್ಭಾವವರ್ಜನಾತ್ ।**
**ಏತಾವತಾ ಮೃದಾದೀನಾಂ ದೃಷ್ಟಾಂತತ್ವಂ ನ ಹೀಯತೇ॥೫೧॥**

ಒಮ್ಮೆ ಹಾಲು ಮೊಸರಾದರೆ ಪುನಃ ಅದಕ್ಕೆ ಹಾಲಿನ ಸ್ವರೂಪ ಬರುವದಿಲ್ಲವಾದುದರಿಂದ ಅದರ ವಿಷಯದಲ್ಲಿ ಪರಿಣಾಮವೇ ಇರಲಿ. ಇಷ್ಟು ಮಾತ್ರದಿಂದ ಮಣ್ಣು ಮೊದಲಾದವುಗಳ ವಿವರ್ತ ದೃಷ್ಟಾಂತನೇನೂ ನಷ್ಟವಾಗುವದಿಲ್ಲ.

(ಮಣ್ಣು, ಭಂಗಾರ ಮೊದಲಾದವು ಒಂದು ಬಗೆಯ ಪರಿಣಾಮವೂ ಹೌದು. ಅದರಂತೆ ವಿವರ್ತವೂ ಹೌದು)

—ಹೀಗೆಂದಮೇಲೆ ಮಣ್ಣು ಮತ್ತು ಭಂಗಾರ ಮೊದಲಾದವುಗಳ ವಿಷಯದಲ್ಲಿ ಆರಂಭವಾದವನ್ನೇಕೆ ಸ್ವೀಕರಿಸಬಾರದು?

**ಆರಂಭವಾದಿನಃ ಕಾರ್ಯೇ ಮೃದೋದ್ವೈಗುಣ್ಯಮಾಪತೇತ್।**
**ರೂಪಸ್ಪರ್ಶಾದಯಃ ಪ್ರೋಕ್ತಾಃ ಕಾರ್ಯಕಾರಣಯೋಃ**
**ಪೃಥಕ್ ॥೫೨॥**

ಆರಂಭವಾದಿಗಳ ಮತದಂತೆ ಘಟವೇ ಮೊದಲಾದ ಕಾರ್ಯಗಳಲ್ಲಿ ಮಣ್ಣು ಮೊದಲಾದ ದ್ರವ್ಯಗಳಿಗೆ ಕಾರ್ಯಕಾರವಾದ ರೂಪವೊಂದು, ಕಾರಣಾಕಾರವಾದ ರೂಪವೊಂದು ಹೀಗೆ ದ್ವಿಗುಣತ್ವವು ಎಂದರೆ ಎರಡು

ಬಗೆಯ ರೂಪವು ಉಂಟಾಗುವದು. ಅರ್ಥಾತ್ ಅದರ ಭಾರವು ಎರಡು ಪಟ್ಟಾಗುವದೆಂದು ತಿಳಿಯ ಬೇಕಾಗುವದು. ಹಾಗೇಕೆ ಎಂದರೆ–ರೂಪ–ಸ್ಪರ್ಶ ಮುಂತಾದಗುಣಗಳನ್ನು ಕಾರ್ಯ ಮತ್ತು ಕಾರಣಗಳಿಂದ ಬೇರೆ ಎಂದು ಆರಂಭವಾದಿಗಳು ಹೇಳುತ್ತಾರೆ.

(ಇದೆಲ್ಲ ಶ್ರುತಿಗೆ ವಿರೋಧವಾಗಿದೆ.)

—ಒಳ್ಳೇದು. ಮಣ್ಣು ಭಂಗಾರ ಇವೆರಡಕ್ಕೇ ವಿವರ್ತ ದೃಷ್ಟಾಂತ ಹೇಳುವದೇಕೆ?

**ಮೃತ್ಸುವರ್ಣಮುಯಶ್ಚೇತಿ ದೃಷ್ಟಾಂತತ್ರಯಮಾರುಣೀಃ ।**
**ಪ್ರಾಹಾತೋ ವಾಸಯೇತ್ಕಾರ್ಯಾನೃತತ್ವಂ ಸರ್ವವಸ್ತುಷು॥೫೩॥**

ಮಣ್ಣು–ಭಂಗಾರ–ಮತ್ತು ಕಬ್ಬಿಣ ಹೀಗೆ ಮೂರು ದೃಷ್ಟಾಂತಗಳನ್ನು ಆರುಣಿ (ಉದ್ದಾಲಕ)ಯು ಹೇಳಿದ್ದಾನೆ. ಆದುದರಿಂದ ಜಗತ್ತಿನಲ್ಲಿ ಹೊರ ಬಿದ್ದು ಕಾಣುವ ವಸ್ತುಗಳೆಲ್ಲ ಕಾರ್ಯಗಳೆನಿಸುವದರಿಂದ ಸುಳ್ಳು ಎಂದು ತಿಳಿಯುಬೇಕು.

(ಈ ವಿಷಯವು ಛಾಂದೋಗ್ಯದಲ್ಲಿದೆ.)

—ಕಾರ್ಯಜಾತವೆಲ್ಲ ಸುಳ್ಳು ಎಂದು ಯಾಕೆ ತಿಳಿಯಬೇಕು? ಎಂದರೆ ಕಾರಣ ಜ್ಞಾನದಿಂದ ಕಾರ್ಯಜ್ಞಾನವಾಗಬೇಕೆಂದು.

**ಕಾರಣಜ್ಞಾನತಃ ಕಾರ್ಯವಿಜ್ಞಾನಂ ಚಾಪಿ ಸೋಽವದತ್ ।**
**ಸತ್ಯಜ್ಞಾನೇಽನೃತಜ್ಞಾನಂ ಕಥಮತ್ರೋಪಪದ್ಯತೇ ॥೫೪॥**

ಆ ಅರುಣಪುತ್ರನಾದ ಉದ್ದಾಲಕನು ಕಾರಣಜ್ಞಾನದಿಂದ ಕಾರ್ಯ ಜ್ಞಾನವೂ ಆಗುವದೆಂದು ಹೇಳಿದ್ದಾನೆ. ಆದರೆ ಸತ್ಯವನ್ನರಿಯುವದರಿಂದ ಅಸತ್ಯದ ಜ್ಞಾನವು ಹೇಗೆ ಆಗುವದು ?

**ಸಮೃತ್ಕಸ್ಯ ವಿಕಾರಸ್ಯ ಕಾರ್ಯತಾ ಲೋಕದೃಷ್ಟಿತಃ ।**
**ವಾಸ್ತವೋಽತ್ರ ಮೃದಂಶೋಽಸ್ಯ ಬೋಧಃ ಕಾರಣ–ಬೋಧತಃ ॥೫೫॥**

ಅಧಿಷ್ಠಾನವಾದ ಮಣ್ಣಿನೊಡನೆ ಕೂಡಿಕೊಂಡಿರುವ ಆಕಾರವುಳ್ಳ ಘಟ ವನ್ನು ಕಾರ್ಯವೆಂದು ಜನರು ಹೇಳುವರು. ಈ ಕಾರ್ಯವೆನಿಸಿದ ಘಟದಲ್ಲಿ

ವಾಸ್ತವವಾಗಿ ಮಣ್ಣೇ ಇರುತ್ತದೆ. ಹೀಗೆ ಕಾರಣವನ್ನು ತಿಳಿಯುವದರಿಂದ ಘಟದಲ್ಲಿಯ ಮಣ್ಣು ನಿಜವಾದುದೆಂದು ತಿಳಿದುಬರುವದು.

— ಕಾರ್ಯದಲ್ಲಿಯ ಸತ್ಯಾಂಶವನ್ನು ತಿಳಿಯುವ ಅವಶ್ಯಕತೆ ಇರುವಂತೆ ಮಿಥ್ಯಾತ್ವವನ್ನು ತಿಳಿಯಬೇಕಾದ ಅವಶ್ಯಕತೆಯುಂಟಲ್ಲವೇ ?

**ಅನೃತಾಂಶೋ ನ ಬೋದ್ಧ ವ್ಯಸ್ತದ್ಬೋಧಾನುಪಯೋಗತಃ ।**
**ತತ್ವಜ್ಞಾನಂ ಪುಮರ್ಥಂ ಸ್ಯಾನ್ನಾನೃತಾಂಶಾವಬೋಧನಮ್॥೫೬॥**

ಸುಳ್ಳಾದವುಗಳ ಜ್ಞಾನದಿಂದ ಉಪಯೋಗವಿಲ್ಲದ್ದರಿಂದ ಅವುಗಳನ್ನೇನೂ ತಿಳಿಯಬೇಕಾದ ಅವಶ್ಯಕತೆ ಇಲ್ಲ. ಯಾಕಂದರೆ ತತ್ವಜ್ಞಾನವು ಪುರುಷಾರ್ಥಕ್ಕೆ ಉಪಯೋಗವಾದಂತೆ ಸುಳ್ಳಾದವುಗಳ ಅರಿವು ಉಪಯುಕ್ತವಿಲ್ಲ.

**ತರ್ಹಿ ಕಾರಣ ವಿಜ್ಞಾನಾತ್ಕಾರ್ಯಜ್ಞಾನಮಿತೀರಿತೇ ।**
**ಮೃದ್ಬೋಧಾನ್ಮೃತ್ತಿಕಾ ಬುದ್ಧೇತ್ಯುಕ್ತಂ ಸ್ಯಾತ್-**
**ಕೋಽತ್ರ ವಿಸ್ಮಯಃ ॥೫೭॥**

ಆದರೆ ಮಣ್ಣು ಮೊದಲಾದ ಕಾರಣ ವಸ್ತುಗಳ ಯಥಾರ್ಥಜ್ಞಾನದಿಂದ ಕಾರ್ಯವಸ್ತುವೆನಿಸಿದ ಘಟದಲ್ಲಿಯ ಮಣ್ಣಿನಇರುವಿಕೆಯು ನಿಜವಾದುದೆನಿಸುವದು. ಹೀಗೆ ಹೇಳುವದಾದರೆ ಮಣ್ಣಿನ ಜ್ಞಾನವು ಆಗುವದೆಂದು ಹೇಳಿದಂತಾಗುವದು. ಇಲ್ಲಿ ಮಾತಿನ ಚಮತ್ಕಾರವೆನಿಸಿತೇ ಹೊರತು ಅರ್ಥ ಚಮತ್ಕಾರ ಕಾಣಲಿಲ್ಲ.

— ಹೀಗೆ ವಿಚಾರಿಸುವ ವಿವೇಕಿಗಳಿಗೆ ಚಮತ್ಕಾರವೇನೂ ಎನಿಸದಿದ್ದರೂ ಅರಿಯದವರಿಗೆ ಚಮತ್ಕಾರವೆನಿಸಿಯೇತೀರುವದು.

**ಸತ್ಯಂ ಕಾರ್ಯೇಷು ವಸ್ತ್ವಂಶಃ ಕಾರಣಾತ್ಮೇತಿ ಜಾನತಃ ।**
**ವಿಸ್ಮಯೋ ಮಾಸ್ತ್ವಿಹಾಜ್ಞಸ್ಯ ವಿಸ್ಮಯಃ ಕೇನ ವಾರ್ಯತೇ॥೫೮॥**

ನಿಜ. ಘಟವೇ ಮೊದಲಾದಕಾರ್ಯದಲ್ಲಿ ಇರುವ ಸತ್ಯಾಂಶವು ಕಾರಣ ರೂಪವೇ ಆಗಿದೆ ಎಂದು ತಿಳಿದವರಿಗೆ ಚಮತ್ಕಾರವೆನಿಸುವದು ಬೇಡ. ಆದರೆ ಇಲ್ಲಿ ಅರಿಯದವರಿಗೆ ಆಗುವ ಚಮತ್ಕಾರವನ್ನು ತಪ್ಪಿಸುವದು ಯಾರಿಂದಾದೀತು ?

— ಇನ್ನು ವಿವೇಕವಿಲ್ಲದವರಿಗೆ ಕಾರ್ಯ-ಕಾರಣಗಳ ಐಕ್ಯವಿರುವದನ್ನು ಕೇಳಿ ಹೇಗೆ ಆಶ್ಚರ್ಯವಾಗುವದು ಎಂಬುದನ್ನು ಹೇಳುತ್ತಾರೆ.

**ಆರಂಭೀ ಪರಿಣಾಮೀ ಚ ಲೌಕಿಕಶ್ಚೈಕಕಾರಣೇ ।**
**ಜ್ಞಾತೇ ಸರ್ವಮಿತಿಂ ಶ್ರುತ್ವಾ ಪ್ರಾಪ್ನುವಂತ್ಯೇವ ವಿಸ್ಮ-**
**ಯಮ್ ॥೫೯॥**

ಕಾರಣಕ್ಕಿಂತ ಕಾರ್ಯವು ಬೇರೆ ಎಂಬ ಆರಂಭವಾದಿಗೂ, ಕಾರಣವು ತನ್ನ ಸ್ವರೂಪವನ್ನು ಕಳೆದುಕೊಂಡು ಬೇರೆ ಸ್ವರೂಪವನ್ನು ಹೊಂದುವದೆಂಬ ಪರಿಣಾಮವಾದಿಗೂ ಇದಾವುದನ್ನೂ ಅರಿಯದೇ ಸುಮ್ಮನೇ ವ್ಯವಹಾರ ಸಾಗಿಸುತ್ತಿರುವ ಲೌಕಿಕನಿಗೂ ಕಾರಣವಾದ ಒಂದನ್ನರಿತರೆ ಕಾರ್ಯಗಳನ್ನೆಲ್ಲ ಅರಿತಂತಾಯಿತೆಂಬ ಮಾತು ಚಮತ್ಕಾರವನ್ನುಂಟುಮಾಡಿಯೇತೀರುವದು.

(ಆರು ಶಾಸ್ತ್ರಗಳಲ್ಲಿ ನ್ಯಾಯ–ವೈಶೇಷಿಕ (ಜರತ್ತಾರ್ಕಿಕ) ರು ಆರಂಭವಾದಿಗಳು. ಆರಂಭವೆಂದರೆ ಸಮವಾಯೀ ಎಂದರ್ಥ. ಯೋಗ ಮತ್ತು ಸಾಂಖ್ಯ ಶಾಸ್ತ್ರಗಳು ಪರಿಣಾಮವಾದವನ್ನು ಮನ್ನಿಸುತ್ತವೆ. ಈ ಶಾಸ್ತ್ರಗಳ ಮಲಕನ್ನರಿಯದೇ ಸುಮ್ಮನೆ ಸಾಗಿದವರು ಲೌಕಿಕರು.)

—ಇದುವರೆಗೆ ನೀವು ಹೇಳಿದ್ದರ ಅರ್ಥವನ್ನು ಬಿಟ್ಟು ಇಷ್ಟು ಜಟಿಲ ವ್ಯಾಖ್ಯಾನ ಮಾಡುವದೇಕೆ ?

**ಅದ್ವೈತೇಽಭಿಮುಖೀಕರ್ತುಮೇವಾತ್ರೈಕಸ್ಯ ಬೋಧತಃ ।**
**ಸರ್ವಬೋಧಃ ಶ್ರುತೌ ನೈವ ನಾನಾತ್ವಸ್ಯ ವಿವಕ್ಷಯಾ ॥೬೦॥**

ಶಿಷ್ಯನನ್ನು ಅದ್ವೈತದ ಕಡೆಗೆ ತಿರುಗಿಸುವದಕ್ಕೋಸ್ಕರ ಛಾಂದೋಗ್ಯ ಶ್ರುತಿಯಲ್ಲಿ ಒಂದು ಕಾರಣ ಜ್ಞಾನದಿಂದ ಎಲ್ಲ ಕಾರ್ಯಜ್ಞಾನವಾಗುವದೆಂದು ಹೇಳಿದೆ. ಅನೇಕವಾದ ಕಾರ್ಯಗಳ ಅರಿವಾಗುವದೆಂಬುದಕ್ಕಲ್ಲ.

**ಏಕಮೃತ್ಪಿಂಡವಿಜ್ಞಾನಾತ್ ಸರ್ವಮೃನ್ಮಯಧೀರ್ಯಥಾ ।**
**ತಥೈಕಬ್ರಹ್ಮಬೋಧೇನ ಜಗದ್‌ಬುದ್ಧಿರ್ವಿಭಾವ್ಯತಾಮ್॥೬೧॥**

ಒಂದು ಮಣ್ಣು ಮುದ್ದೆಯ ಅರಿವಾದರೆ ಅದರಿಂದ ಹೊರಬಿದ್ದ ಎಲ್ಲ ಕಾರ್ಯಜಾತ ಎಂದರೆ ವಸ್ತುಗಳು ತಿಳಿಯುತ್ತವೆ ಅರ್ಥಾತ್ ಸುಳ್ಳೆನಿಸುತ್ತವೆ. ಅದರಂತೆ ಒಂದು ಬ್ರಹ್ಮದ ಅರಿವಿನಿಂದ ಅದರಿಂದ ಹೊರಬಿದ್ದ ಎಲ್ಲ ಜಗತ್ತು ಸುಳ್ಳೆಂಬ ಜ್ಞಾನವಾಗುತ್ತದೆಂದು ತಿಳಿಯಬೇಕು.

—ಈಗ ಬ್ರಹ್ಮನ ಮತ್ತು ಜಗತ್ತಿನ ಸ್ವರೂಪವನ್ನು ತಿಳಿಸುತ್ತಾರೆ.

**ಸಚ್ಚಿತ್ಸುಖಾತ್ಮಕಂ ಬ್ರಹ್ಮ ನಾಮರೂಪಾತ್ಮಕಂ ಜಗತ್ ।**
**ತಾಪನೀಯೇ ಶ್ರುತಂ ಬ್ರಹ್ಮ ಸಚ್ಚಿದಾನಂದಲಕ್ಷಣಮ್ ॥೬೨॥**

ಬ್ರಹ್ಮವು ಸಚ್ಚಿದಾನಂದ. ಜಗತ್ತಿನ ಸ್ವರೂಪವು ಹೆಸರು ಮತ್ತು ಆಕಾರ (ನಾಮರೂಪಾತ್ಮಕ) ಉತ್ತರ ತಾಪನೀಯ ನಾಮಕ ಉಪನಿಷತ್ತಿನಲ್ಲಿ ಬ್ರಹ್ಮವು ಸತ್-ಚಿತ್-ಆನಂದವೆಂದು ಹೇಳಿದೆ.

—ಇತರ ಶ್ರುತಿಗಳಲ್ಲಿ.

**ಸದ್ರೂಪಮಾರುಣಿಃ ಪ್ರಾಹ ಪ್ರಜ್ಞಾನಂ ಬ್ರಹ್ಮ ಬಹ್ವೃಚಃ ।**
**ಸನತ್ಕುಮಾರ ಆನಂದಮೇವಮನ್ಯತ್ರ ಗಮ್ಯತಾಮ್ ॥೬೩॥**

ಛಾಂದೋಗ್ಯದಲ್ಲಿ ಉದ್ದಾಲಕನೆಂಬ ಅರುಣಪುತ್ರನು ಸದ್ರೂಪವೆಂದಿರುವನು. ಋಗ್ವೇದದ ಐತರೇಯೋಪನಿಷತ್ತಿನಲ್ಲಿ ಪ್ರಜ್ಞಾನವೆಂದು ಹೇಳಿರುವರು. ಸನತ್ಕುಮಾರನೆಂಬ ಗುರು ನಾರದನೆಂಬ ಶಿಷ್ಯನನ್ನು ಕುರಿತು ಛಾಂದೋಗ್ಯದಲ್ಲಿಯೇ ಆನಂದವೆಂದು ತಿಳಿಸಿರುವನು.

—ಇದರಂತೆ ನಾಮ–ರೂಪ ವಿಷಯದಲ್ಲಿ ಶ್ರುತಿಗಳನ್ನು ಹೇಳುತ್ತಾರೆ.

**ವಿಚಿಂತ್ಯ ಸರ್ವರೂಪಾಣಿ ಕೃತ್ವಾ ನಾಮಾನಿ ತಿಷ್ಠತಿ ।**
**ಅಹಂ ವ್ಯಾಕರವಾಣೀಮೇ ನಾಮರೂಪೇ ಇತಿ ಶ್ರುತೇಃ ॥೬೪॥**

ಎಲ್ಲ ರೂಪಗಳ ವಿಷಯದಲ್ಲಿ ಪೂರ್ಣ ಚಿಂತಿಸಿ ಅವುಗಳಿಗೆಲ್ಲ ಹೆಸರು ಕೊಟ್ಟು ಬ್ರಹ್ಮವು ಇರುತ್ತದೆ. "ನಾನು ಇವೆಲ್ಲ ನಾಮರೂಪಗಳನ್ನು ಮಾಡುತ್ತೇನೆ." ಎಂದು ಶ್ರುತಿ ಇದೆ.

(ದೇವತೆಗಳ–ಮರ–ಕಲ್ಲು–ಮನುಷ್ಯರು ಮೊದಲಾದ ಎಲ್ಲ ರೂಪಗಳನ್ನು ಹೊರಗೆಡಹಿದ ಪರಮೇಶ್ವರನು ಅವುಗಳಿಗೆಲ್ಲ ಹೆಸರುಗಳನ್ನು ಇಟ್ಟು ಸುಖವಾಗಿರುವನೆಂದು ಶ್ರುತಿಯಿದೆ.)

—ಇನ್ನೂ ಒಂದು ಶ್ರುತಿ.

**ಅವ್ಯಾಕೃತಂ ಪುರಾ ಸೃಷ್ಟೇರೂರ್ಧ್ವಂ ವ್ಯಾಕ್ರಿಯತೇ ದ್ವಿಧಾ ।**
**ಅಚಿಂತ್ಯಶಕ್ತಿರ್ಮಾಯೈಷಾ ಬ್ರಹ್ಮಣ್ಯವ್ಯಾಕೃತಾಭಿಧಾ ॥೬೫॥**

ಸೃಷ್ಟಿಯಾಗುವದಕ್ಕೆ ಮೊದಲು ಇದು ಅವಶ್ಯವಿತ್ತು. ಅದು ಮುಂದೆ ನಾಮರೂಪಗಳೆಂದು ಎರಡುಬಗೆಯಾಗಿ ಹೊಗಬಿದ್ದಿತು. ಬ್ರಹ್ಮನಲ್ಲಿರುವ

ಅಚಿಂತನೀಯವಾದ ಶಕ್ತಿ ಎನಿಸಿದ ಮಾಯೆಯೇ "ಅವ್ಯಾಕೃತ"ವೆನಿಸುವದು.

—'ತನ್ನಾಮ ರೂಪಾಭ್ಯಾಮೇವ ವ್ಯಾಕ್ರಿಯತೇ, ಎಂಬ ಶ್ರುತಿ ವಚನದ ಅರ್ಥ.

**ಅವಿಕ್ರಿಯಬ್ರಹ್ಮನಿಷ್ಠಾ ವಿಕಾರಂ ಯಾತ್ಯನೇಕಧಾ ।**
**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇ-**
**ಶ್ವರಮ್ ॥೬೬॥**

ಯಾವ ಬದಲಾವಣೆಯನ್ನೂ ಹೊಂದದ ಬ್ರಹ್ಮನಲ್ಲಿರುವ ಮಾಯೆಯು ಭೂತ-ಭೌತಿಕ ಪ್ರಪಂಚ ರೂಪದಿಂದ ಅನೇಕ ಪ್ರಕಾರದ ವಿಕಾರಗಳನ್ನು ಹೊಂದುತ್ತದೆ. ಈ ಮಾಯೆಯನ್ನು ಪ್ರಕೃತಿ ಎಂದು ತಿಳಿಯಬೇಕು. ಆ ಮಾಯೆ ಸ್ವಾಧೀನದಲ್ಲಿ ಉಳ್ಳವನೇ ಮಹೇಶ್ವರನು.

(ಪ್ರಕೃತಿ ಎಂದರೆ ಉಪಾದಾನ ಕಾರಣ.)

—ಮಾಯೆಯ ಸಂಬಂಧ ಪಡೆದ ಬ್ರಹ್ಮದ ಮೊದಲನೇ ಕಾರ್ಯವನ್ನು ಹೇಳುತ್ತಾರೆ.

**ಆದ್ಯೋ ವಿಕಾರ ಆಕಾಶಃ ಸೋಽಸ್ತಿ ಭಾತ್ಯಪಿ ಚ ಪ್ರಿಯಃ ।**
**ಅವಕಾಶಸ್ತಸ್ಯರೂಪಂ ತನ್ಮಿಥ್ಯಾ ನ ತು ತತ್ತ್ರಯಮ್ ॥೬೭॥**

ಮೊದಲನೆಯ ವಿಕಾರ ಅಥವಾ ಕಾರ್ಯವು ಆಕಾಶ. ಅದರಲ್ಲಿ ಇದೆ. ಬೆಳಗುತ್ತಿದೆ. ಪ್ರಿಯವಾಗಿದೆ. ಎಂಬ ಮೂರು ರೂಪಗಳಿರುವವು. ಪೊಳ್ಳಾಗಿರುವದೇ ಅದರ ಸ್ವರೂಪ. ಆದರೆ ಅದು ಸುಳ್ಳಾದುದು. ಇಲ್ಲಿ ಆದರ ಇದೆ ಮುಂತಾದ ರೂಪಗಳು ಸುಳ್ಳಾಗುವದಿಲ್ಲ.

— ಆಕಾಶವು ಪೊಳ್ಳು ಎಂಬುದೇಕೆ ಸುಳ್ಳು ?

**ನ ವ್ಯಕ್ತೇಃ ಪೂರ್ವಮಸ್ತ್ಯೇವ ನ ಪಶ್ಚಾಚ್ಚಾಪಿ ನಾಶತಃ ।**
**ಆದಾವಂತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ ॥೬೮॥**

ಹುಟ್ಟುವದಕ್ಕೆ ಮೊದಲು ಆ ಪೊಳ್ಳು ಇರಲಿಲ್ಲ. ಪ್ರಳಯ ಕಾಲದಲ್ಲಿ ನಾಶವಾದಾಗಲೂ ಇರುವದಿಲ್ಲ. ಮೊದಲು ಹಾಗೂ ಕೊನೆಗೆ ಇಲ್ಲದುದು ಎನಿಸುವದು ವರ್ತಮಾನ ಕಾಲದಲ್ಲಿಯೂ ಇಲ್ಲದುದು.

ಈ ಬಗೆಗೆ ಶ್ರೀಕೃಷ್ಣ ವಚನ.

**ಅವ್ಯಕ್ತಾದೀನಿ ವ್ಯಕ್ತಮಧ್ಯಾನಿ ಭಾರತ |**
**ಅವ್ಯಕ್ತನಿಧನಾನ್ಯೇವೇತ್ಯಾಹ ಕೃಷ್ಣೋಽರ್ಜುನಂ ಪ್ರತಿ||೬೯||**

ಅರ್ಜುನಾ, ಈ ಪಂಚಮಹಾಭೂತಗಳು ಹಾಗೂ ಪ್ರಾಣಿಗಳು ಇವುಗಳ ಕಾರಣವು ಅವ್ಯಕ್ತವಾಗಿದೆ. ಮಧ್ಯದಲ್ಲಿ ಮಾತ್ರ ವ್ಯಕ್ತವಾಗಿದೆ. ಇನ್ನು ನಾಶವಾದನಂತರ ಪುನಃ ಅವ್ಯಕ್ತಾವಸ್ಥೆಯೇ ಇದೆ. ಹೀಗೆ ಇವುಗಳ ಸ್ಥಿತಿ. ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ.

—ಆಕಾಶದಲ್ಲಿ ಇರುವಿಕೆ, ಬೆಳಗುವಿಕೆ, ಪ್ರಿಯತ್ವಗಳು ಇರುವವೆಂಬುದಕ್ಕೆ ಅನುಭವವೇ ಪ್ರಮಾಣವಾಗಿದೆ.

**ಮೃದ್ವತ್ತೇ ಸಚ್ಚಿದಾನಂದಾ ಅನುಗಚ್ಛಂತಿ ಸರ್ವದಾ |**
**ನಿರಾಕಾಶೇ ಸದಾದೀನಾಮನುಭೂತಿರ್ನಿಜಾತ್ಮನಿ ||೭೦||**

ಮಣ್ಣು ತನ್ನ ಗುಣಗಳೊಡನೆ ಘಟ ಮೊದಲಾದ ಕಾರ್ಯಗಳಲ್ಲಿ ಯಾವಾಗಲೂ ಹಿಂಬಾಲಿಸಿಕೊಂಡಿರುವಂತೆ ಸತ್-ಚಿತ್-ಆನಂದಗಳೆಂಬ ಆತ್ಮಗುಣಗಳು ಆಕಾಶವೆಂಬ ಕಾರ್ಯದಲ್ಲಿ ಯಾವಾಗಲೂ ಹಿಂಬಾಲಿಸಿಕೊಂಡಿರುವವು. ಆಕಾಶವು ಲಯವಾದ ಸಮಯದಲ್ಲಿ ತನ್ನ ಸ್ವರೂಪದಲ್ಲಿಯೇ ಸತ್ ಮೊದಲಾದ ಗುಣಗಳು ಅನುಭವಕ್ಕೆ ಬರುವವು.

**ಅವಕಾಶೇ ವಿಸ್ಮೃತೇಽಥ ತತ್ರ ಕಿಂ ಭಾತಿ ತೇವದ |**
**ಶೂನ್ಯಮೇವೇತಿ ಚೇದಸ್ತು ನಾಮ ತಾದೃಗ್ವಿಭಾತಿ ಹಿ ||೭೧||**

ಆಕಾಶದ ಪೊಳ್ಳನ್ನು ಮರೆತಮೇಲೆ ಅಲ್ಲೇನು ತೋರುವುದು? ಹೇಳು. ಶೂನ್ಯವು ತೋರುತ್ತದೆ ಎಂದು ಹೇಳುವುದಾದರೆ ಹಾಗೆ ಆಗಲಿ. ಶೂನ್ಯವೆಂದರೆ ಏನೂ ಇಲ್ಲ ಎಂಬರ್ಥವಾದರೂ ಅರಿವಿಗೆ ಬರುವದಲ್ಲ.

**ತಾದೃಕ್ತ್ವಾದೇವ ತತ್ಸತ್ವಮೌದಾಸೀನ್ಯೇನ ತತ್ಸುಖಮ್ |**
**ಆನುಕೂಲ್ಯಪ್ರಾತಿಕೂಲ್ಯ ಹೀನಂ ಯತ್ತನ್ನಿಜಂ ಸುಖಮ್ ||೭೨||**

'ಶೂನ್ಯವಿರುತ್ತದೆ, ಎಂದು ಹೇಳುವುದರಿಂದಲೇ ಅದರ ಇರುವಿಕೆಯನ್ನು ಅಂಗೀಕರಿಸಿದಂತಾಯಿತು. ಅದರಲ್ಲಿ ನಮಗೆ ಉದಾಸೀನತೆ ಇರುವು

ದರಿಂದ ಅದು ಸುಖರೂಪವು. ಯಾವದು ಅನುಕೂಲ ಮತ್ತು ಪ್ರತಿಕೂಲ ಎಂದರೆ ಬೇಕಾದುದು, ಬೇಡವಾದುದು ಅಲ್ಲವೋ ಅದೇ ನಿಜಸುಖ.

**ಆನುಕೂಲ್ಯೇ ಹರ್ಷಧೀಃ ಸ್ಯಾತ್ಪ್ರಾತಿಕೂಲ್ಯೇ ತು ದುಃಖಧೀಃ।**
**ದ್ವಯಾಭಾವೇ ನಿಜಾನಂದೋ ನಿಜದುಃಖಂ ನ ತು ಕ್ವಚಿತ್ ॥೭೩॥**

ಬೇಕಾದುದೆಂದುಕಂಡರೆ ಸಂತೋಷ. ಬೇಡವಾದುದೆಂದು ಕಂಡರೆ ದುಃಖ. ಇವರೆಡೂ ಇಲ್ಲದಾಗ ಆಗುವದು ನಿಜಾನಂದ. ನಿಜ ದುಃಖವೆಂಬುದು ಎಂದಿಗೂ ಇಲ್ಲದುದು.

— ನಿಜಾನಂದವು ನಿತ್ಯವಾದುದೆಂದರೆ ಯಾವಾಗಲೂ ಆನಂದವು ಇರದೇ ಶೋಕವೇಕೆ ಆವರಿಸುವುದು ?

**ನಿಜಾನಂದೇ ಸ್ಥಿರೇ ಹರ್ಷಶೋಕಯೋರ್ವ್ಯತ್ಯಯಃ ಕ್ಷಣಾತ್।**
**ಮನಸಃ ಕ್ಷಣಿಕತ್ವೇನ ತಯೋರ್ಮಾನಸತೇಷ್ಯತಾಮ್ ॥೭೪॥**

ನಿಜಾನಂದವು ಸ್ಥಿರವಾಗಿ ಇರುವುದಾದರೂ ಅದನ್ನು ಗ್ರಹಿಸುವ ಮನಸ್ಸು ಕ್ಷಣಿಕವಾದುದರಿಂದ ಹರ್ಷ-ಶೋಕಗಳೂ ನಮಗೆ ಕ್ಷಣಿಕವಾಗಿ ತೋರುತ್ತಿರುವವು.

—ದೃಷ್ಟಾಂತದಿಂದ ಸಿದ್ಧವಾದ ಅರ್ಥವನ್ನು ದಾಷ್ಟಾರ್ಂತಿಕದಲ್ಲಿ ಜೋಡಿಸುವರು.

**ಆಕಾಶೇಽಪ್ಯೇವಮಾನಂದಃ ಸತ್ತಾಭಾನೇತು ಸಮ್ಮತೇ ।**
**ವಾಯ್ವಾದಿ ದೇಹಪರ್ಯಂತಂ ವಸ್ತುಷ್ವೇವಂ ವಿಭಾವ್ಯ-ತಾಮ್ ॥೭೫॥**

ನಿಜಾತ್ಮನಲ್ಲಿ ಹೇಳಿದ ಪ್ರಕಾರವಾಗಿ ಆಕಾಶದಲ್ಲಿಯೂ ಆನಂದವಿದೆ. ಇರುವಿಕೆ ಬೆಳಗುವಿಕೆಗಳು ನಿನಗೂ ಒಪ್ಪಿತ. ಇದರಂತೆ ವಾಯು ಮೊದಲುಗೊಂಡು ದೇಹದವರೆಗಿನ ವಸ್ತುಗಳಲ್ಲಿ ಎಲ್ಲವುಗಳಲ್ಲಿ ಸಚ್ಚಿದಾನಂದ ಭಾವನೆ ಮಾಡಬೇಕು.

ಈಗ ವಾಯು-ತೇಜ ಮುಂತಾದ ಭೂತಗಳಿಗೆ ತಮ್ಮವೇಆದ ಧರ್ಮಗಳುಂಟು ಎನ್ನುತ್ತಾರೆ.

**ಗತಿಸ್ಪರ್ಶೌ ವಾಯುರೂಪಂ ವಹ್ನೇರ್ದಾಹಪ್ರಕಾಶನೇ ।**
**ಜಲಸ್ಯ ದ್ರವತಾ ಭೂಮೇಃ ಕಾಠಿನ್ಯಂ ಚೇತಿನಿರ್ಣಯಃ ॥೭೬॥**

ಸುಳಿದಾಟ ಮತ್ತು ಸೋಂಕು ಇವೆರಡು ವಾಯುವಿನರೂಪ. ಸುಡುವುದು, ಬೆಳಗುವುದು ಇವೆರಡು ಅಗ್ನಿಯರೂಪ. ತೋಯಿಸುವದು (ಅಥವಾ ದ್ರವತ್ವ) ನೀರಿನ ರೂಪ. ಬಿರಸುತನ ಭೂಮಿಯ ರೂಪ. ಹೀಗೆಂದು ನಿರ್ಣಯವು.

**ಅಸಾಧಾರಣ ಆಕಾರ ಔಷಧ್ಯನ್ನವಪುಷ್ಯಪಿ ।**
**ಏವಂ ವಿಭಾವ್ಯಂ ಮನಸಾ ತತ್ತದ್ರೂಪಂ ಯಥೋ-**
**ಚಿತಮ್ ॥೭೭॥**

ಇದರಂತೆ ಔಷಧಗಳು-ಅನ್ನ-ಶರೀರಗಳು ಇವುಗಳಲ್ಲಿ ತಮ್ಮವೇ ಆದ ಆಕಾರಗಳಿರುವುದನ್ನು ಅರಿಯಬೇಕು. ಈ ಬಗೆಯಿಂದ ವಿಚಾರ ಮಾಡಿ ಎಲ್ಲ ವಸ್ತುಗಳಿಗೆ ಆತ್ಮವೇ ಆದ ಆಕಾರಗಳು ಮನಸ್ಸಿನಿಂದ ಗುರುತಿಸಬೇಕು.

**ಅನೇಕಧಾ ವಿಭಿನ್ನೇಷು ನಾಮರೂಪೇಷು ಚೈಕಧಾ ।**
**ತಿಷ್ಠಂತಿ ಸಚ್ಚಿದಾನಂದಾ ವಿಸಂವಾದೋ ನ ಕಸ್ಯಚಿತ್ ॥೭೮॥**

ಹೀಗೆ ನಾನಾರೀತಿ ಅತಿ ಭಿನ್ನವಾಗಿರುವ ನಾಮ-ರೂಪಾತ್ಮಕ ಜಗತ್ತಿನಲ್ಲಿ ಸಚ್ಚಿದಾನಂದವು ಒಂದೇ ಬಗೆಯಾಗಿ ನೆಲೆಯಾಗಿದೆ. ಈ ವಿಷಯಕ್ಕೆ ಯಾರದೂ ವಾದವಿವಾದವಿಲ್ಲ.

—ಆದರೆ ತೋರುತ್ತಿರುವ ನಾಮರೂಪಗಳ ಗತಿಏನು ?

**ನಿಸ್ತತ್ತ್ವೇ ನಾಮರೂಪೇ ದ್ವೇ ಜನ್ಮನಾಶಯುತೇ ಚ ತೇ ।**
**ಬುದ್ಧ್ಯಾ ಬ್ರಹ್ಮಣಿ ವೀಕ್ಷಸ್ವ ಸಮುದ್ರೇ ಬುದ್ಬುದಾವದಿತ್॥೭೯॥**

ನಾಮ ಮತ್ತು ರೂಪಗಳೆರಡು ಸುಳ್ಳಾದವುಗಳು. ಮತ್ತು ಹುಟ್ಟು ಸಾವಿನಿಂದ ಕೂಡಿದವು. ಆದುದರಿಂದ ಸಮುದ್ರದಲ್ಲಿಯ ಗುರುಳೆ-ನೊರೆಗಳಂತೆ ಬ್ರಹ್ಮದಲ್ಲಿ ಅವೆಲ್ಲ ಕಲ್ಪಿತವಾದವುಗಳೆಂದು ವಿವೇಕದಿಂದ ತಿಳಿ.

**ಸಚ್ಚಿದಾನಂದರೂಪೇಽಸ್ಮಿನ್ಪೂರ್ಣೇ ಬ್ರಹ್ಮಣಿ ವೀಕ್ಷಿತೇ ।**
**ಸ್ವಯಮೇವಾವಜಾನಾತಿ ನಾಮರೂಪೇ ಶನೈಃ ಶನೈಃ ॥೮೦॥**

ಈ ಪೂರ್ಣವೂ ಸಚ್ಚಿದಾನಂದ ರೂಪವೂ ಆದ ಬ್ರಹ್ಮನನ್ನು ಕಾಣುತ್ತಿರಲು ಜ್ಞಾನಿಯು ನಾಮ-ರೂಪಗಳನ್ನು ಮೆಲ್ಲ-ಮೆಲ್ಲಗೆ ದುರ್ಲಕ್ಷಿಸುವನು.

—ಎರಡನೆಯ ವಸ್ತುವನ್ನು ಉಪೇಕ್ಷೆ ಮಾಡಿದಷ್ಟು ಬ್ರಹ್ಮಜ್ಞಾನವು ದೃಢ ಎನ್ನುತ್ತಾರೆ.

**ಯಾವದ್ಯಾವದವಜ್ಞಾ ಸ್ಯಾತ್ತಾವತ್ತಾವತ್ತದೀಕ್ಷಣಮ್ ।**
**ಯಾವದ್ಯಾವದ್ವೀಕ್ಷತೇ ತತ್ತಾವತ್ತಾವದುಭೇ ತ್ಯಜೇತ್ ॥೬೧॥**

ಎಷ್ಟು ಮಟ್ಟಿಗೆ ನಾಮ ರೂಪಾತ್ಮಕವಾದ ಜಗತ್ತಿನ ದುರ್ಲಕ್ಷವಾಗುವದೋ ಅಷ್ಟು ಮಟ್ಟಿಗೆ ಬ್ರಹ್ಮದರ್ಶನವು ಸ್ಪಷ್ಟವಾಗುವದು. ಬ್ರಹ್ಮ ದರ್ಶನವು ಒಲಗೊಂಡಂತೆ ನಾಮ-ರೂಪಗಳು ತಾವೇ ಬಿಟ್ಟು ಹೋಗುವವು.

—ಒಳ್ಳೇದು. ಹೀಗೆ ಅಭ್ಯಾಸ ಮಾಡಿದ್ದರ ಫಲ ?

**ತದಭ್ಯಾಸೇನ ವಿದ್ಯಾಯಾಂ ಸುಸ್ಥಿತಾಯಾಮಯಂ ಪುಮಾನ್।**
**ಜೀವನ್ನೇವ ಭವೇನ್ಮುಕ್ತೋ ವಪುರಸ್ತು ಯಥಾ ತಥಾ ॥೬೨॥**

ಬ್ರಹ್ಮಾಭ್ಯಾಸದಿಂದ ವಿದ್ಯೆಯು ಸ್ಥಿರವಾಗಿ ನೆಲೆಗೊಳ್ಳಲು ಆ ಪುರುಷನು ಜೀವನ್ಮುಕ್ತನಾಗುವನು. ಆ ಮೇಲೆ ದೇಹವು ಹೇಗೆ ಬೇಕಾದರೂ ಇರಲಿ.

—ಆ ಬ್ರಹ್ಮಾಭ್ಯಾಸದ ಸ್ವರೂಪವನ್ನು ಹೇಳುತ್ತಾರೆ.

**ತಚ್ಚಿಂತನಂ ತತ್ಕಥನಮನ್ಯೋನ್ಯಂ ತತ್ ಪ್ರಬೋಧನಮ್ ।**
**ಏತದೇಕಪರತ್ವಂಚ ಬ್ರಹ್ಮಾಭ್ಯಾಸಂ ವಿದುರ್ಬುಧಾಃ ॥೬೩॥**

ಅದನ್ನೇ ಯುಕ್ತಿಗೆ ಹೊಂದಿಸಿಕೊಂಡು ನೆನೆಯುವುದು, ಅದರ ವಿಷಯವನ್ನೇ ಹೇಳುವುದು, ಅದನ್ನೇ ಒಬ್ಬರಿಗೊಬ್ಬರು ತಿಳಿಸುವುದು, ಅದರಲ್ಲಿಯೇ ಆಸಕ್ತಿಯನ್ನು ತಳೆದಿರುವುದು ಹೀಗಿರುವದಕ್ಕೆ ಬ್ರಹ್ಮಾಭ್ಯಾಸವೆಂದು ಪಂಡಿತರು ತಿಳಿಯುವರು.

—ಎಷ್ಟೋ ಹಿಂದಿನಿಂದ (ಅನಾದಿ ಕಾಲದಿಂದ) ಗಂಟು ಬಿದ್ದ ದ್ವೈತ ವಾಸನೆಯು ಆಗೀಗ ಮಾಡುವ ಬ್ರಹ್ಮಾಭ್ಯಾಸದಿಂದ ಹೇಗೆ ನಾಶವಾದೀತು ?

**ವಾಸನಾನೇಕಕಾಲೀನಾ ದೀರ್ಘಕಾಲಂ ನಿರಂತರಮ್ ।**
**ಸಾದರ ಚಾಭ್ಯಸ್ಯಮಾನೇ ಸರ್ವಥೈವ ನಿವರ್ತತೇ ॥೬೪॥**

ಅನಾದಿ ಕಾಲದಿಂದ ಗಂಟು ಬಿದ್ದ ವಾಸನೆಯು ಬಹುಕಾಲದ ವರೆಗೆ ಎಡೆಬಿಡದೆ ಆದರದಿಂದ ಬ್ರಹ್ಮಾಭ್ಯಾಸ ಮಾಡಿದರೆ ಎರಡನೆಯದರ ಹಂಬಲು ಪೂರ್ಣವಾಗಿ ಬಿಡುವುದು.

—ಏಕರೂಪವಾಗಿ ಅದ್ವಿತೀಯವೆನಿಸುವ ಬ್ರಹ್ಮವು ಅನೇಕ ಆಕಾರಗಳಿಂದ ಕೂಡಿದ ಜಗತ್ತಿನ ಕಾರಣ ಹೇಗಾಗುವದು ?

**ಮೃಚ್ಛಕ್ತಿವದ್ಬ್ರಹ್ಮಶಕ್ತಿರನೇಕಾನನ್ಯತಾನ್ಸೃಜೇತ್ ।**
**ಯದ್ವಾ ಜೀವಗತಾ ನಿದ್ರಾ ಸ್ವಪ್ನಶ್ಚಾತ್ರನಿದರ್ಶನಮ್ ॥೮೫॥**

ಮಣ್ಣಿನಲ್ಲಿ ಬ್ರಹ್ಮರೂಪಗಳನ್ನು ಹೊರಗೆಡಹುವ ಶಕ್ತಿ ಇರುವಂತೆ ಬ್ರಹ್ಮದಲ್ಲಿ ಮಾಯಾಶಕ್ತಿ ಇದೆ. ಅದು ಸುಳ್ಳಾದ ಅನೇಕ ವಸ್ತುಗಳನ್ನು ಹುಟ್ಟಿಸುವುದು. ಮಣ್ಣಿನಲ್ಲಿರುವ ಶಕ್ತಿ ನಿಜ. ಅದು ಬಹುರೂಪಗಳನ್ನು ಹುಟ್ಟಿಸಲು ಶಕ್ಯ. ಸುಳ್ಳಾದ ಮಾಯಾಶಕ್ತಿಯಿಂದ ಅಂಥ ಕಾರ್ಯವಾಗುವದು ಹೇಗೆ ? ಎಂಬ ಸಂಶಯ ಬಂದರೆ-ಜೀವನಿಗೊದಗುವ ನಿದ್ರೆ-ಕನಸನ್ನು ಇಲ್ಲಿ ದೃಷ್ಟಾಂತ ತೆಗೆದುಕೊಳ್ಳಬೇಕು.

—ಈಗ ಕನಸಿನ ದೃಷ್ಟಾಂತ.

**ನಿದ್ರಾಶಕ್ತಿರ್ಯಥಾ ಜೀವೇ ದುರ್ಘಟಸ್ವಪ್ನಕಾರಿಣೀ ।**
**ಬ್ರಹ್ಮಣ್ಯೇಷಾ ಸ್ಥಿತಾ ಮಾಯಾ ಸೃಷ್ಟಿಸ್ಥಿತ್ಯಂತಕಾರಿಣೀ ॥೮೬॥**

ಜೀವನಲ್ಲಿರುವ ನಿದ್ರಾಶಕ್ತಿಯು ಬೇಕುಬೇಕಾದ ಕನಸುಗಳನ್ನು ಹುಟ್ಟಿಸುವಂತೆ ಬ್ರಹ್ಮದಲ್ಲಿರುವ ಮಾಯಾ ಶಕ್ತಿಯು ಒಂದಕ್ಕೊಂದ ಹೊಂದಿಕೆಯಾಗದಂತೆ ಸುಳ್ಳಾದ ಅನೇಕ ವಸ್ತುಗಳನ್ನು ಹೊರಗೆಡಹುವದು. ಅಲ್ಲದೇ ಜಗತ್ತಿನ ಸ್ಥಿತಿ-ಲಯಗಳನ್ನೂ ಮಾಡುವುದು.

—ನಿದ್ರಾ ಶಕ್ತಿಯ ಹೊಂದಿಕೆಇಲ್ಲದ ರೀತಿಯನ್ನು ತೋರಿಸುತ್ತಾರೆ.

**ಸ್ವಪ್ನೇ ವಿಯದ್ಗತಿಂ ಪಶ್ಯೇತ್ಸ್ವಮೂರ್ಧಚ್ಛೇದನಂ ಯಥಾ ।**
**ಮುಹೂರ್ತೇ ವತ್ಸರೌಘಂ ಚ ಮೃತಪುತ್ರಾದಿಕಂ ಪುನಃ ॥೮೭॥**

ಜೀವನು ಆಕಾಶದಲ್ಲಿ ಹಾರುತ್ತಿರುವಂತೆ, ತನ್ನ ಕುತ್ತಿಗೆಯನ್ನೇ ಕೊಯಿದಂತೆ ನೋಡುವನು. ಎರಡು ಎರಡುವರೀ ಘಳಿಗೆಗಳಲ್ಲಿ ಎಷ್ಟೋ ವರ್ಷಗಳು ಕಳೆದುಹೋಂದತೆ, ಸತ್ತ ಮಕ್ಕಳು-ಮರಿ ಮುಂತಾದವನ್ನು ನೋಡುವನು.

—ಹೀಗಾಗುವುದರ ಕಾರಣ.

**ಇದಂ ಯುಕ್ತಮಿದಂ ನೇತಿ ವ್ಯವಸ್ಥಾ ತತ್ರ ದುರ್ಲಭಾ ।**
**ಯಥಾಯಥೇಕ್ಷತೇ ಯದ್ಯತ್ತತ್ತದ್ಯುಕ್ತಂ ತಥಾ ತಥಾ ॥೮೮॥**

ಅಲ್ಲಿ ಇದು ಯೋಗ್ಯ ಇದು ಅಯೋಗ್ಯ ನೇಮವನ್ನು ಹಚ್ಚುವಂತಿಲ್ಲ. ಯಾವುದು ಹೇಗೆ ಹೇಗೆ ಕಾಣುವುದೋ ಆದು ಹಾಗೆಯೇ ಸರಿ.

**ಈದೃಶೋ ಮಹಿಮಾ ದೃಷ್ಟೋ ನಿದ್ರಾಶಕ್ತೇರ್ಯದಾ ತದಾ ।**
**ಮಾಯಾಶಕ್ತೇರಚಿಂತ್ಯೋಽಯಂ ಮಹಿಮೇತಿ ಕಿಮ-**
**ದ್ಭುತಮ್ ॥೮೯॥**

ನಿದ್ರಾಶಕ್ತಿಗೇ ಇಂಥ ಮಹಿಮೆ ಕಾಣುತ್ತಿರುವಾಗ ಮಾಯಾಶಕ್ತಿಗೆ ಮನಸ್ಸಿನಿಂದಕೂಡ ಊಹಿಸಲು ಬಾರದಂಥ ಮಹಿಮೆ ಇರುವುದೆಂಬಲ್ಲಿ ಆಶ್ಚರ್ಯವೇನು.

ನಿರಿಚ್ಛನಾದ ಬ್ರಹ್ಮನನ್ನಾಶ್ರಯ ಮಾಡಿಕೊಂಡಿರುವ ಮಾಯೆಯು ಜಗತ್ತಿನ ಕಾರಣವೆಂತಾಗುವದು ?

**ಶಯಾನೇ ಪುರುಷೇ ನಿದ್ರಾಸ್ವಪ್ನಂ ಬಹುವಿಧಂ ಸೃಜೇತ್ ।**
**ಬ್ರಹ್ಮಣ್ಯೇವಂ ನಿರ್ವಿಕಾರೇ ವಿಕಾರಾನ್ ಕಲ್ಪಯತ್ಯಸೌ ॥೯೦॥**

ಮಲಗಿಕೊಂಡ ಮನುಷ್ಯನಲ್ಲಿ ನಿದ್ರೆಯು ಬಹುಬಗೆಯ ಕನಸನ್ನು ಹುಟ್ಟಿಸುವಂತೆ, ಯಾವ ಬದಲಾವಣೆಯೂ ಇಲ್ಲದ ಬ್ರಹ್ಮನಲ್ಲಿ ಮಾಯೆಯು ಜಗತ್ತಿನ ಬಗೆಬಗೆ ರೂಪುಗಳನ್ನುಂಟು ಮಾಡುವುದು.

—ಮಾಯೆಯು ಯಾವಯಾವ ಪದಾರ್ಥಗಳನ್ನು ನಿರ್ಮಿಸಿತು ಎಂಬುದನ್ನು ಹೇಳುತ್ತಾರೆ.

**ಖಾನಿಲಾಗ್ನಿಜಲೋರ್ವ್ಯಂಡಲೋಕಪ್ರಾಣಿಶಿಲಾದಿಕಾಃ ।**
**ವಿಕಾರಾಃ ಪ್ರಾಣಿಧೀಷ್ವಂತಶ್ಚಿಚ್ಛಾಯಾ ಪ್ರತಿಬಿಂಬತಾ ॥೯೧॥**

ಆಕಾಶ–ವಾಯು-ಅಗ್ನಿ-ಜಲ-ಪೃಥ್ವಿ-ಬ್ರಹ್ಮಾಂಡ-ಸತ್ಯಾದಿಲೋಕಗಳು– ದೇವತೆಗಳೇ ಮೊದಲಾದ ಪ್ರಾಣಿಗಳು, ಕಲ್ಲು-ಮರ ಮುಂತಾದವು. ಹೀಗೆ ಇವೆಲ್ಲ ಭೂತಸೃಷ್ಟಿಯಾದರೆ ಕೆಲವು ಸಚೇತನ-ಕೆಲವು ಚೇತನಗಳು ಏಕೆ ? ಎಂದರೆ ಪ್ರಾಣಿಗಳ ದೇಹದಲ್ಲಿರುವ ಅಂತಃಕರಣದಲ್ಲಿ ಚೈತನ್ಯವು ಪ್ರತಿಬಿಂಬಿ

ಸಿಮದರಿಂದ ಸಚೇತನ. ಈ ಚೈತನ್ಯಾಭಾಸವಿಲ್ಲದವು ಅಚೇತನ ಅರ್ಥಾತ್ ಜಡ.

—ಹಾಗಾದರೆ ಚೇತನ ಮತ್ತು ಜಡವೆಂಬ ವಿಭಾಗಕ್ಕೆ ಬ್ರಹ್ಮವೇ ಕಾರಣವೆನ್ನಲು ಅಡ್ಡಿ ಏನು? ಎಂದರೆ ಬ್ರಹ್ಮವು ಎಲ್ಲವುಗಳ ಉಪಾದಾನ ಕಾರಣವಿರುವದರಿಂದ ಅದು ಎಲ್ಲಕಡೆಗೆ ಸಮವಾಗಿದೆ. ಆದುದರಿಂದ ಹಾಗನ್ನಲು ಬರುವದಿಲ್ಲ.

**ಚೇತನಾಚೇತನೇಷ್ವೇಷು ಸಚ್ಚಿದಾನಂದಲಕ್ಷಣಮ್ ।**
**ಸಮಾನಂ ಬ್ರಹ್ಮ ಭಿದ್ಯೇತೇ ನಾಮರೂಪೇ ಪೃಥಕ್ ಪೃಥಕ್ ॥೯೨॥**

ಚೇತನ-ಅಚೇತನಗಳಲ್ಲಿ ಸತ್-ಚಿತ್-ಆನಂದರೂಪವಾದ ಬ್ರಹ್ಮವು ಸಮಾನವಾಗಿದೆ. ಅದರ ಆಧಾರದಮೇಲೆ ತೋರುವ ನಾಮ-ರೂಪಗಳು ಬೇರೆಬೇರೆ.

—ಈಗ ಚೇತನ ಮತ್ತು ಜಡಗಳಿಗೆ ಬ್ರಹ್ಮವು ಹೇಗೆ ಸಾಧಾರಣವೆಂಬುದನ್ನು ತೋರಿಸುತ್ತಾರೆ.

**ಬ್ರಹ್ಮಣ್ಯೇತೇ ನಾಮರೂಪೇ ಪಟೇ ಚಿತ್ರಮಿವಸ್ಥಿತೇ ।**
**ಉಪೇಕ್ಷ್ಯ ನಾಮರೂಪೇ ದ್ವೇ ಸಚ್ಚಿದಾನಂದಧೀರ್ಭವೇತ್॥೯೩॥**

ಈ ಹೆಸರುಗಳೂ, ಆಕಾರಗಳೂ ಬಟ್ಟೆಯಮೇಲೆ ಬರೆದ ಚೇತನಾಚೇತನಗಳ ಚಿತ್ರದಂತೆ ಬ್ರಹ್ಮದಲ್ಲಿ ಇರುವವು. ಹೆಸರು ಮತ್ತು ಆಕಾರ ಎಂಬ ಎರಡನ್ನೂ ಉಪೇಕ್ಷೆಮಾಡಿದರೆ ಸಚ್ಚಿದಾನಂದರೂಪ ಬ್ರಹ್ಮದ ಅರಿವಾಗುವದು.

—ಈ ಬಗೆಗೆ ಒಂದು ದೃಷ್ಟಾಂತ.

**ಜಲಸ್ಥೇಽಧೋಮುಖೇ ಸ್ವಸ್ಯ ದೇಹೇದೃಷ್ಟೇಽಪ್ಯುಪೇಕ್ಷ್ಯತಮ್।**
**ತೀರಸ್ಥ ಏವದೇಹೇ ಸ್ವೇ ತಾತ್ಪರ್ಯಂ ಸ್ಯಾದ್ಯಥಾ ತಥಾ ॥೯೪॥**

ನೀರಿನಲ್ಲ ತನ್ನ ದೇಹದನೆರಳು ತಲೆಕೆಳಗೆ ಕಾಲುಮೇಲಾಗಿ ಕಂಡರೂ ಅದನ್ನು ತಿರಸ್ಕರಿಸಿ ಮನುಷ್ಯನು ದಂಡೆಯಮೇಲಿರುವ ದೇಹವನ್ನು ತನ್ನ

ದೆಂದರಿಯುವಂತೆ ನಾಮರೂಪಗಳ ಉಪೇಕ್ಷೆಯನ್ನು ಮಾಡಿ ಸಾಧಕನು ಅವುಗಳಿಗೆ ಆಧಾರವಾದ ಬ್ರಹ್ಮನಲ್ಲಿ ಮನವನ್ನಿಡುವನು.

—ಇನ್ನೊಂದು ಲೋಕಪ್ರಸಿದ್ಧ ದೃಷ್ಟಾಂತ.

**ಸಹಸ್ರಶೋ ಮನೋರಾಜ್ಯೇ ವರ್ತಮಾನೇ ಸದೈವತತ್ ।**
**ಸರ್ವೈರುಪೇಕ್ಷ್ಯತೇ ಯದ್ವದುಪೇಕ್ಷಾ ನಾಮರೂಪಯೋಃ॥೯೫॥**

ಮನೋರಾಜ್ಯವು ಎಡೆಬಿಡದೆ ಸಾವಿರಾರುಬಗೆಯಿಂದ ಸಾಗಿದ್ದರೂ ಎಲ್ಲರೂ ಅದನ್ನು ಉಪೇಕ್ಷಿಸುವರು. ಅದರಂತೆ ನಾಮರೂಪಗಳನ್ನು ಉಪೇಕ್ಷಿಸಬೇಕು.

—ಮನೋರಾಜ್ಯದ ವೈಚಿತ್ರ್ಯ.

**ಕ್ಷಣೇ ಕ್ಷಣೇ ಮನೋರಾಜ್ಯಂ ಭವತ್ಯೇವಾನ್ಯಥಾಽನ್ಯಥಾ ।**
**ಗತಂ ಗತಂ ಪುನರ್ನಾಸ್ತಿ ವ್ಯವಹಾರೋ ಬಹಿಸ್ತಥಾ ॥೯೬॥**

ಮನೋರಾಜ್ಯವು ಕ್ಷಣಕ್ಷಣಕ್ಕೆ ಬೇರೆಬೇರೆ ಆಗುತ್ತಿರುವದು, ಆದರೆ ಹಿಂದೆಆದದು ಮುಂದೆ ಇರುವದೇಇಲ್ಲ. ಅದರಂತೆಯೇ ಹೊರಗಿನಪ್ರಪಂಚವೆಲ್ಲ.

**ನ ಬಾಲ್ಯಂ ಯೌವನೇ ಲಭ್ಯಂ ಯೌಭನಂ ಸ್ಥವಿರೇ ತಥಾ ।**
**ಮೃತಃ ಪಿತಾ ಪುನರ್ನಾಸ್ತಿ ನಾಯಾತ್ಯೇವ ಗತಂ ದಿನಮ್ ॥೯೭॥**

ಯೌವನದಲ್ಲಿ ಹುಡುಗತನಬರುವಂತಿಲ್ಲ, ಮುಪ್ಪಿನಲ್ಲಿ ಯೌವನವು ಬರುವಂತಿಲ್ಲ, ಸತ್ತತಂದೆ ಮರಳಿಸಿಗುವದಿಲ್ಲ, ಹೋದದಿನವು ಬರುವದಿಲ್ಲ.

— ಕ್ಷಣಿಕವೆನಿಸುವ ಈ ಪ್ರಪಂಚವಿಷಯದ ಉಪಸಂಹಾರ.

**ಮನೋರಾಜ್ಯಾದ್ವಿಶೇಷಃ ಕಃ ಕ್ಷಣಧ್ವಂಸಿನಿ ಲೌಕಿಕೇ ।**
**ಅತೋಽಸ್ಮಿನ್ ಭಾಸಮಾನೇಽಪಿ ತತ್ಸತ್ಯತ್ವಧಿಯಂ ತ್ಯಜೇತ್ ॥೯೮॥**

ಹೀಗೆ ಒಂದುಘಳಿಗೆಯಲ್ಲಿ ಇಲ್ಲದಂತಾಗುವ ಜಗತ್ತಿನ ವಸ್ತುಗಳಲ್ಲಿ ಮನೋರಾಜ್ಯಕ್ಕಿಂತ ಹೆಚ್ಚಿನದೇನು? ಆದುದರಿಂದ ಪ್ರಪಂಚವು ತೋರುತ್ತಿದ್ದರೂ ಅದರಲ್ಲಿ ಸತ್ಯತ್ವಬುದ್ಧಿಯನ್ನು ಬಿಡಬೇಕು.

— ಹೀಗೆಮಾಡುವದರಿಂದ ಲಾಭವೇನು ?

**ಉಪೇಕ್ಷಿತೇ ಲೌಕಿಕೇ ಧೀರ್ನಿರ್ವಿಘ್ನಾ ಬ್ರಹ್ಮಚಿಂತನೇ ।**
**ನಟವತ್ ಕೃತ್ರಿಮಾಸ್ಥಾಯಾಂ ನಿರ್ವಹತ್ಯೇವ ಲೌಕಿಕಮ್॥೯೯॥**

ಹೀಗೆ ಲೋಕದ ವಸ್ತುಗಳನ್ನೆಲ್ಲ ಉಪೇಕ್ಷೆಮಾಡಿದರೆ ಬುದ್ಧಿಯು ಯಾವ ವಿಘ್ನವೂ ಇಲ್ಲದೆ ನಿರ್ವಿಘ್ನದಿಂದ ಸ್ಥಿರವಾಗುವದು. ಹೀಗಂದರೆ–ಜ್ಞಾನಿಯವ್ಯವಹಾರ ಸಾಗುವಬಗೆ? ಒಬ್ಬ ನಟನಂತೆ ಕೃತ್ರಿಮವಾದ ಆಸ್ಥೆಯನ್ನು ತಳೆದರೂ ಲೌಕಿಕವು ನಾಗುತ್ತದೆ.

—ಜ್ಞಾನಿಯು ವ್ಯವಹಾರಮಾಡುವನೆಂದರೆ ಅವನಲ್ಲಿ ವಿಕಾರಿತ್ವವುಂಟಾಗುವದು ಎಂದರೆ— ಬುದ್ಧಿವ್ಯವಹಾರ ಮಾಡುತ್ತಿದ್ದರೂ ಸಾಕ್ಷಿಯಾದ ಆತ್ಮನು ನಿರ್ವಿಕಾರನಾಗಿರುತ್ತಾನೆ ಎನ್ನುತ್ತಾರೆ.

**ಪ್ರವಹತ್ಯಪಿ ನೀರೇಧಃ ಸ್ಥಿರಾ ಪ್ರೌಢಶಿಲಾ ಯಥಾ ।**
**ನಾಮರೂಪಾನ್ಯಥಾತ್ವೇಽಪಿ ಕೂಟಸ್ಥಂ ಬ್ರಹ್ಮನಾನ್ಯಥಾ॥೧೦೦॥**

ಮೇಲೆ ನೀರುಹರಿಯುತ್ತಿದ್ದರೂ ತಳದಲ್ಲಿರುವ ಶಿಲೆಯು ಸ್ಥಿರವಾಗಿರುವಂತೆ, ಬುದ್ಧಿಯು ನಾಮರೂಪಗಳಿಂದ ಚಲಿಸಿದರೂ ಕೂಟಸ್ಥ ಬ್ರಹ್ಮನಿಗೆ ಅದರ ಲೇಪವಿಲ್ಲ.

—ಆದರೆ ಅಖಂಡಬ್ರಹ್ಮನಲ್ಲಿ ಬ್ರಹ್ಮನಿಂದ ವಿಲಕ್ಷಣವೆನಿಸಿದ ಜಗತ್ತು ಹೇಗೆತೋರುವದು?

**ನಿಶ್ಛಿದ್ರೇ ದರ್ಪಣೇ ಭಾತಿ ವಸ್ತುಗರ್ಭಂ ಬೃಹದ್ವಿಯತ್ ।**
**ಸಚ್ಚಿದ್ಘನೇ ತಥಾ ನಾನಾಜಗದ್ಗರ್ಭಮಿದಂ ವಿಯತ್ ॥೧೦೧॥**

ತೂತಿಲ್ಲದ ಕನ್ನಡಿಯಲ್ಲಿ ಸೂರ್ಯ-ಚಂದ್ರ-ಗ್ರಹ-ತಾರಕೆಗಳಿಂದ ಕೂಡಿದ ದೊಡ್ಡ ಆಕಾಶವು ತೋರುವಂತೆ ಅಖಂಡವಾದ ಬ್ರಹ್ಮದಲ್ಲಿ ಎಂದರೆ–ಸತ್–ಚಿತ್–ಆನಂದಪೂರ್ಣ ಬ್ರಹ್ಮದಲ್ಲಿ ಅನೇಕ ಬ್ರಹ್ಮಾಂಡಗಳನ್ನೊಳಗೊಂಡ ಈ ಭೂತಾಕಾಶವು ತೋರುವದು.

—ಆದರೆ ಅದೃಶ್ಯನೆನಿಸುವ ಬ್ರಹ್ಮದಲ್ಲಿ ಜಗತ್ತುತೋರುವದೆಂತು? ಎಂದರೆ—

**ಅದೃಷ್ಟ್ವಾ ದರ್ಪಣಂ ನೈವ ತದಂತಸ್ಥೇಕ್ಷಣಂ ತಥಾ ।**
**ಅಮತ್ವಾ ಸಚ್ಚಿದಾನಂದಂ ನಾಮರೂಪಮತಿಃ ಕುತಃ ॥೧೦೨॥**

ಕನ್ನಡಿಯನ್ನು ನೋಡದೇ ಅದರೊಳಗಿರುವದನ್ನು ನೋಡುವದು ಶಕ್ಯವಿಲ್ಲ. ಅದರಂತೆ ಸಚ್ಚಿದಾನಂದರೂಪ ಬ್ರಹ್ಮವನ್ನರಿಯದೇ ನಾಮರೂಪಗಳ ಅರಿವಾಗುವದೇ ಇಲ್ಲ.

(ಆಧಾರವು ತೋರದೇ ಅದನ್ನಾಶ್ರಯಿಸುತ್ತಿರುವ ವಸ್ತುವು ತೋರುವದೇ ಇಲ್ಲ.)

—ನಾಮರೂಪಗಳೂ ತೋರುತ್ತಿರುವದರಿಂದ ನಿರ್ವಿಷಯ ಬ್ರಹ್ಮದ ಅರಿವಾಗುವದು ಹೇಗೆ?

**ಪ್ರಥಮಂ ಸಚ್ಚಿದಾನಂದೇ ಭಾಸಮಾನೇಽಥ ತಾವತಾ |**
**ಬುದ್ಧಿಂ ನಿಯಮ್ಯ ನೈವೋರ್ಧ್ವಂ ಧಾರಯೇನ್ನಾಮ-**
**ರೂಪಯೋಃ ||೧೦೪||**

ಮೊದಲು ಸಚ್ಚಿದಾನಂದ ಬ್ರಹ್ಮದಲ್ಲಿ ಕಲ್ಪಿಸಿದ ನಾಮರೂಪಾತ್ಮಕ ಪ್ರಪಂಚದಲ್ಲಿಯ ಸಚ್ಚಿದಾನಂದದ ಅನುಭವವು ಬರುತ್ತಿರುವಾಗ ಪ್ರಪಂಚದಲ್ಲಿಯ ಸಚ್ಚಿದಾನಂದದಲ್ಲಿಯೇ ಬುದ್ಧಿಯನ್ನು ನಿಲ್ಲಿಸಿ ನಾಮರೂಪಗಳ ಕಡೆಗೆ ಅದನ್ನು ಹರಿಸಬಾರದು.

**ಏವಂಚ ನಿರ್ಜಗದ್ಬ್ರಹ್ಮ ಸಚ್ಚಿದಾನಂದ ಲಕ್ಷಣಮ್ |**
**ಅದ್ವೈತಾನಂದ ಏತಸ್ಮಿನ್ ವಿಶ್ರಾಮ್ಯಂತು ಜನಾಶ್ಚಿರಮ್ ||೧೦೫||**

ಹೀಗೆ ಜಗತ್ತಿನ ಸುಳಿವಿಲ್ಲದೇ ಬ್ರಹ್ಮವು ಸಚ್ಚಿದಾನಂದ ಮಾತ್ರವಾಗುವದು. ಈ ಅದ್ವೈತಾನಂದದಲ್ಲಿ ಜನರು ಬಹುಕಾಲದವರೆಗೆ ವಿಶ್ರಾಂತಿಯನ್ನು ಪಡೆಯಲಿ.

**ಬ್ರಹ್ಮಾನಂದಾಭಿದೇ ಗ್ರಂಥೇ ತೃತೀಯೋಽಧ್ಯಾಯ ಈರಿತಃ |**
**ಅದ್ವೈತಾನಂದ ಏವ ಸ್ಯಾಜ್ಜಗನ್ಮಿಥ್ಯಾತ್ವಚಿಂತಯಾ ||೧೦೬||**

ಬ್ರಹ್ಮಾನಂದವೆಂಬ ಗ್ರಂಥದ ತೃತೀಯೋಧ್ಯಾಯವನ್ನು ಹೇಳಲಾಯಿತು. ಜಗತ್ತು ಸುಳ್ಳಾದುದೆಂಬ ಅರಿವಿನಿಂದ ಅದ್ವೈತಾನಂದವು ಉಂಟಾಗುವದು.

## ಅದ್ವೈತಾನಂದ ಪ್ರಕರಣದ ಸಾರಾಂಶ

ಆತ್ಮನು ಎರಡನೆಯದೆಂಬುದಿಲ್ಲದವನು. ಎರಡನೆಯವೆಂಬವುಗಳೆಲ್ಲ ಮಾಯೆಯಿಂದ ಹುಟ್ಟಿದವುಗಳು.

# ೧೪ ಬ್ರಹ್ಮಾನಂದದಲ್ಲಿ ವಿದ್ಯಾನಂದ

ಮೊದಲು ಪೂರ್ವಾಪರ ಗ್ರಂಥದ ಸಂದರ್ಭವನ್ನು ಹೇಳುತ್ತಾರೆ.

**ಯೋಗೇನಾತ್ಮವಿವೇಕೇನ ದ್ವೈತಮಿಥ್ಯಾತ್ವಚಿಂತಯಾ ।**
**ಬ್ರಹ್ಮಾನಂದಂ ಪಶ್ಯತೋಽಥ ವಿದ್ಯಾನಂದೋ ನಿರೂಪ್ಯತೇ॥೧॥**

ಮನೋನಿಗ್ರಹರೂಪವಾದಯೋಗದಿಂದ, ಆತ್ಮಾನಾತ್ಮ ವಿವೇಕದಿಂದ ಮತ್ತು ನಾಮರೂಪಾತ್ಮಕವಾದ ಜಗತ್ತು ಮಿಥ್ಯೆಯಾಗಿದೆ ಎಂದು ಚಿಂತಿಸುವದರ ಮೂಲಕವೂ ಬ್ರಹ್ಮಾನಂದವನ್ನು ಅನುಭವಿಸುವ ಜ್ಞಾನಿಗೆ ಆಗುವ ವಿದ್ಯಾನಂದವನ್ನು ಇಲ್ಲಿ ಹೇಳಲಾಗುವದು.

—ಈಗ ವಿದ್ಯಾನಂದದ ಸ್ವರೂಪ ಮತ್ತು ಅದರ ಅವಾಂತರಭೇದಗಳು.

**ವಿಷಯಾನಂದವದ್ವಿದ್ಯಾನಂದೋ ಧೀವೃತ್ತಿರೂಪಕಃ ।**
**ದುಃಖಾಭಾವಾದಿರೂಪೇಣ ಪ್ರೋಕ್ತ ಏಷ ಚತುರ್ವಿಧಃ ॥೨॥**

ವಿಷಯಾನಂದದಂತೆ ಎಂದರೆ ವಿಷಯಗಳ ಮೂಲಕ ಸುಖವನ್ನು ಪಡೆದಾಗ ಕ್ಷಣಕಾಲ ಮನಸ್ಸಿಗೆ ಆನಂದವೆನಿಸುವಂತೆ ವಿದ್ಯಾನಂದವುಕೂಡ ಅಂತಃಕರಣದ ವೃತ್ತಿರೂಪವು. ಇದು ದುಃಖವಿಲ್ಲದಿರುವಿಕೆ ಮುಂತಾದ ನಾಲ್ಕು ವಿಧವೆಂದು ಹೇಳಲಾಗಿದೆ.

**ದುಃಖಾಭಾವಶ್ಚ ಕಾಮಾಪ್ತಿಃ ಕೃತಕೃತ್ಯೋಽಹಮಿತ್ಯಸೌ ।**
**ಪ್ರಾಪ್ತಪ್ರಾಪ್ಯೋಽಹಮಿತ್ಯೇವ ಚಾತುರ್ವಿಧ್ಯಮುದಾ-**
**ಹೃತಮ್ ॥೩॥**

ದುಃಖವಿಲ್ಲದಿರುವಿಕೆ, ಬಯಕೆಗಳೆಲ್ಲ ಪೂರ್ಣವಾಗುವಿಕೆ, ಮಾಡತಕ್ಕದುದನ್ನು ಮಾಡಿದೆನೆಂಬ ಭಾವನೆಯಾಗುವಿಕೆ, ಮತ್ತು ಪಡೆಯ ತಕ್ಕದುದನ್ನೆಲ್ಲ ಪಡೆದೆನೆಂದು ತೃಪ್ತಿ ಹೀಗೆ ನಾಲ್ಕು ಬಗೆಯಾಗಿದೆ.

— ದುಃಖಗಳಲ್ಲಿ ಭೇದ.

**ಐಹಿಕಂ ಚಾಮುಷ್ಮಿಕಂ ಚೇತ್ಯೇವಂ ದುಃಖಂ ದ್ವಿಧೇರಿತಮ್ ।**
**ನಿವೃತ್ತಿಮೈಹಿಕಸ್ಯಾಹ ಬೃಹದಾರಣ್ಯಕಂ ವಚಃ ॥೪॥**

ಈ ಲೋಕದವು ಮತ್ತು ಪರಲೋಕದವು ಎಂದು ದುಃಖಗಳನ್ನು ಎರಡು ಬಗೆಯಾಗಿ ಹೇಳುತ್ತಾರೆ. ಬೃಹದಾರಣ್ಯಕ ಶ್ರುತಿಯು ಈ ಲೋಕದ ದುಃಖಗಳು ನಿವಾರಣೆಯಾಗುವ ಬಗೆಯನ್ನು ಹೇಳುತ್ತದೆ.

—ಆ ಶ್ರುತಿ.

**ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ ।**
**ಕಿಮಿಚ್ಛನ್ ಕಸ್ಯಕಾಮಾಯ ಶರೀರಮನು ಸಂಜ್ವರೇತ್ ॥೫॥**

'ನಾನು ಕೂಟಸ್ಥನು' ಎಂದು ತನ್ನನ್ನು ತಿಳಿದ ಪುರುಷನು, ಯಾವುದರ ಇಚ್ಛೆಯಿಂದ ಯಾರಕಾರ್ಯಕ್ಕೋಸ್ಕರ ದೇಹದೊಡನೆ ಬೆಂದಾನು?

(ಈ ಶ್ರುತಿವಾಕ್ಯದ ವ್ಯಾಖ್ಯಾನವು ಹಿಂದೆ ಏಳನೆಯ ಪ್ರಕರಣದಲ್ಲಿ ವಿಸ್ತಾರವಾಗಿ ಬಂದಿದೆ.)

—ಶೋಕಸಂಬಂಧವನ್ನು ತೋರಿಸುವದಕ್ಕೆ ಆತ್ಮವಿಭಾಗವನ್ನು ಹೇಳುತ್ತಾರೆ.

**ಜೀವಾತ್ಮಾ ಪರಮಾತ್ಮಾ ಚೇತ್ಯಾತ್ಮಾ ದ್ವಿವಿಧ ಈರಿತಃ ।**
**ಚಿತ್ತಾದಾತ್ಮ್ಯಾತ್ತ್ರಿಭಿರ್ದೇಹೈರ್ಜೀವಃ ಸನ್ ಭೋಕ್ತೃತಾಂ ವ್ರಜೇತ್ ॥೬॥**

ಜೀವಾತ್ಮ ಹಾಗೂ ಪರಮಾತ್ಮನೆಂದು ಆತ್ಮನನ್ನು ಎರಡು ಬಗೆಯಾಗಿ ಹೇಳುತ್ತಾರೆ. ಸ್ಥೂಲ-ಸೂಕ್ಷ್ಮ-ಕಾರಣಗಳೆಂಬ ಮೂರದೇಹಗಳೊಡನೆ ಚೈತನ್ಯದ ತಾದಾತ್ಮ್ಯವಾದುದರಿಂದ ಆ ಚೈತನ್ಯಜೀವನೆನಿಸಿ ಸುಖ-ದುಃಖಾನುಭವ ಪಡೆಯುವವನಾದನು.

(ಚೈತನ್ಯವು ಭೋಕ್ತಾರನಾಗುವದೇ ಅವನ ಜೀವಭಾವವು)

—ಪರಮಾತ್ಮಸ್ವರೂಪ.

**ಪರಾತ್ಮಾ ಸಚ್ಚಿದಾನಂದಸ್ತಾದಾತ್ಮ್ಯಂ ನಾಮರೂಪಯೋಃ ।**
**ಗತ್ವಾ ಭೋಗ್ಯತ್ವಮಾಪನ್ನಸ್ತದ್ವಿವೇಕೇ ತು ನೋಭಯಮ್ ॥೭॥**

ಪರಮಾತ್ಮನು ಸಚ್ಚಿದಾನಂದ ರೂಪನು. ನಾಮ ಮತ್ತು ರೂಪಗಳೆಂಬ ಕಲ್ಪನೆಗೆ ಆಧಾರನಾಗಿ ಭೋಗಸಾಧನವೆನಿಸಿದ ಜಗತ್ತಾದನು. ವಿವೇಕದಿಂದ

ನೋಡಲು ಸ್ಥೂಲ ಮೊದಲಾದ ಶರೀರಗಳು ಮತ್ತು ಜಗತ್ತು ಇವುಗಳಿಂದ ಅವನು ಬೇರೆಯಾಗಿರುವನು.

—ಇದರ ವಿವರಣೆ.

**ಭೋಗ್ಯಮಿಚ್ಛನ್ ಭೋಕ್ತುರರ್ಥೇ ಶರೀರಮನುಸಂಜ್ವರೇತ್।**
**ಜ್ವರಾಸ್ತ್ರಿಷು ಶರೀರೇಷು ಸ್ಥಿತಾ ನ ತ್ವಾತ್ಮನೋ ಜ್ವರಾಃ ॥೮॥**

ಮೂರು ಶರೀರಗಳಲ್ಲಿ ಅಭಿಮಾನ ತಾಳಿ ತಾದಾತ್ಮ್ಯವನ್ನು ಪಡೆದ ಜೀವನು ತನ್ನ ಪ್ರಯೋಜನಕ್ಕಾಗಿ ಸುಖಸಾಧನಗಳನ್ನು ಬಯಸಿ ಶರೀರದೊಡನೆ ಬೇಯುವನು. ಈ ಜ್ವರವು ಮೂರುಶರೀರಗಲ್ಲಿ ಮಾತ್ರ ಇರುವುದು. ಆತನಿಗೆ ಅದಿಲ್ಲ.

—ಯಾವ ಶರೀರಕ್ಕೆ ಯಾವಜ್ವರವೆಂಬುದನ್ನು ಹೇಳುತ್ತಾರೆ.

**ವ್ಯಾಧಯೋ ಧಾತುವೈಷಮ್ಯೇ ಸ್ಥೂಲದೇಹೇ ಸ್ಥಿತಾ ಜ್ವರಾಃ।**
**ಕಾಮಕ್ರೋಧಾದಯಃ ಸೂಕ್ಷ್ಮೇ ದ್ವಯೋರ್ಬೀಜಂ ತು ಕಾರಣೇ ॥೯॥**

ಸಪ್ತಧಾತುಗಳ ವೈಷಮ್ಯದಿಂದ ಉಂಟಾಗುವ ಜ್ವರಗಳು ಸ್ಥೂಲದೇಹದಲ್ಲಿರುತ್ತವೆ. ಕಾಮ-ಕ್ರೋಧಾದಿಗಳಿಂದ ಉಂಟಾದ ಜ್ವರಗಳು ಸೂಕ್ಷ್ಮದೇಹದಲ್ಲಿರುತ್ತವೆ. ಅವೆರಡರ ಬೀಜವುಕಾರಣ ಶರೀರದಲ್ಲಿರುತ್ತದೆ.

**ಅದ್ವೈತಾನಂದಮಾರ್ಗೇಣ ಪರಾತ್ಮನಿ ವಿವೇಚಿತೇ।**
**ಅಪಶ್ಯನ್ವಾಸ್ತವಂ ಭೋಗ್ಯಂ ಕಿಂ ನಾಮೇಚ್ಛೇತ್-ಪರಾತ್ಮವಿತ್ ॥೧೦॥**

ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ಅದ್ವೈತಾನಂದದ ಮುಖಾಂತರ ನಾಮರೂಪಗಳಿಗಿಂತ ಪರಮಾತ್ಮನು ಬೇರೆ. ನಾಮ-ರೂಪಗಳೆಲ್ಲ ಸುಳ್ಳು ಎಂದು ಅರಿತಮೇಲೆ ನಿಜವಾದ ಸುಖ-ಸಾಧನಗಳನ್ನು ಕಾಣದ ಜ್ಞಾನಿಯು ಯಾವುದನ್ನು ಅಪೇಕ್ಷಿಸಬೇಕು?

—ಆತ್ಮಾನಂದ ಪ್ರಕರಣದಲ್ಲಿ ಹೇಳಿದಂತೆ ಜೀವನ ನಿಜಸ್ವರೂಪವು ಕೂಟಸ್ಥ ಚೈತನ್ಯವೆಂದು ನಿಶ್ಚಯವಾದಮೇಲೆ ಅಪೇಕ್ಷೆ ಮಾಡುವವರೇ ಇಲ್ಲದಂತಾಯಿತು. ಇನ್ನು ಜ್ವರಗಳ ಮಾತೆಲ್ಲಿ ? ಎನ್ನುತ್ತಾರೆ.

**ಆನಂದೋಕ್ತರೀತ್ಯಾಸ್ಮಿನ್ ಜೀವಾತ್ಮನ್ಯವಧಾರಿತೇ ।**
**ಭೋಕ್ತಾ ನೈವಾಸ್ತಿ ಕೋಽಪ್ಯತ್ರ ಶರೀರೇ ತು ಜ್ವರಃ ಕುತಃ ॥೧೧॥**

ಆತ್ಮಾನಂದವೆಂಬ ಪ್ರಕರಣದಲ್ಲಿ ಹೇಳಿದಂತೆ ಜೀವಾತ್ಮನ ನಿಶ್ಚಯವಾದ ಮೇಲೆ, ಈ ಶರೀರದಲ್ಲಿ ಭೋಗಿಸುವವನೇ ಇಲ್ಲದಂತಾಗುವದು. ಎಂದಮೇಲೆ ಶರೀರದಲ್ಲಿ ಜ್ವರ ಎಂದರೆ ತಪ್ತನಾಗಿ ದುಃಖಗೊಳ್ಳುವ ಮಾತೆಲ್ಲಿ ?

**ಪುಣ್ಯಪಾಪದ್ವಯೇ ಚಿಂತಾ ದುಃಖಮಾಮುಷ್ಮಿಕಂ ಭವೇತ್।**
**ಪ್ರಥಮಾಧ್ಯಾಯ ಏವೋಕ್ತಂ ಚಿಂತಾ ನೈನಂ ತಪೇದಿತಿ ॥೧೨॥**

ಪುಣ್ಯ–ಪಾಪಗಳ ವಿಷಯದ ಚಿಂತೆಯೇ ಪಾರಲೌಕಿಕ ದುಃಖವು. ಜ್ಞಾನಿಯನ್ನು ಇದು ಸಂತಪ್ತಗೊಳಿಸಲಾರದೆಂದು ಮೊದಲಿನ ಅಧ್ಯಾಯದಲ್ಲಿಯೇ ಬಂದಿದೆ.

ಜ್ಞಾನಿಗೆ ಮುಂದಿನ ಕರ್ಮ (ಆಗಾಮಿ) ಗಳ ವಿಷಯವಾಗಿಯೂ ಚಿಂತೆ ಇಲ್ಲವೆಂದು 'ತದ್ಯಥಾ ಪುಷ್ಕರಪಲಾಶೇ' ಎಂಬ ಶ್ರುತಿಯ ಆಧಾರದಿಂದ ಹೇಳುತ್ತಾರೆ.

**ಯಥಾ ಪುಷ್ಕರಪರ್ಣೇಽಸ್ಮಿನ್ನಪಾಮಶ್ಲೇಷಣಂ ತಥಾ ।**
**ವೇದನಾದೂರ್ಧ್ವಮಾಗಾಮಿ ಕರ್ಮಣೋಽಶ್ಲೇಷಣಂ ಬುಧೇ ॥೧೩॥**

ಕಮಲದೆಲೆಯಮೇಲೆ ನೀರು ಹೇಗೆ ನಿಲ್ಲುವದಿಲ್ಲವೋ ಹಾಗೆ ಜ್ಞಾನಿಗೆ ಸಾಕ್ಷಾತ್ಕಾರವಾದನಂತರ ಮುಂದೆ ಬರುವ ಕರ್ಮಫಲದ ಸಂಪರ್ಕವೂ ಇರುವದಿಲ್ಲ.

—ಸಂಚಿತ ಕರ್ಮವೂ ಜ್ಞಾನಿಗೆ ಪ್ರತಿಬಂಧ ಮಾಡುವದಿಲ್ಲ ಎಂದು ತದ್ಯಥೇಷೀ ಕಾ ತೂಲ ಮಗ್ನೌ ಪ್ರೋತ ಎಂಬ ಶ್ರುತಿಯ ಆಧಾರದಿಂದ ಹೇಳುತ್ತಾರೆ.

**ಇಷೀಕಾತೃಣತೂಲಸ್ಯ ವಹ್ನಿದಾಹಃ ಕ್ಷಣಾದ್ಯಥಾ**
**ತಥಾ ಸಂಚಿತಕರ್ಮಾಸ್ಯ ದಗ್ಧಂ ಭವತಿ ವೇದನಾತ್ ॥೧೪॥**

ಇಷೀಕವೆಂಬ ಸಣ್ಣ ಹುಲ್ಲಿನ ಕಡ್ಡಿಗಳು ಮತ್ತು ಅರಳೆ ಮುಂತಾದವು ಬೆಂಕಿಯಲ್ಲಿ ಹಾಕಿದ ಕೂಡಲೆ ಸುಟ್ಟುಹೋಗುತ್ತವೆ. ಅದರಂತೆ ಜ್ಞಾನಿಯ ಕರ್ಮಗಳು ಜ್ಞಾನದಿಂದ ಸುಟ್ಟುಹೋಗುತ್ತವೆ.

—ಈ ವಿಷಯದಲ್ಲಿ ಗೀತಾವಾಕ್ಯ.

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥೧೫॥**

ಎಲೈ ಅರ್ಜುನನೇ, ಧಗಧಗಿಸುತ್ತಿರುವ ಬೆಂಕಿಯು ಕಟ್ಟಿಗೆಗಳನ್ನು ಬೂದಿಮಾಡುವಂತೆ, ಜ್ಞಾನವೆಂಬ ಆಗ್ನಿಯು ಪ್ರಾರಬ್ಧದ ಹೊರತು ಉಳಿದ ಸಂಚಿತ ಕರ್ಮಗಳನ್ನು ಬೂದಿಮಾಡುವದು.

—ಗೀತೆಯ ಮತ್ತೊಂದು ವಾಕ್ಯ.

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನಲಿಪ್ಯತೇ।**
**ಹತ್ವಾಪಿ ಸ ಇಮಾನ್ ಲೋಕಾನ್ನ ಹಂತಿ ನ ನಿಬಧ್ಯತೇ ॥೧೬॥**

ಯಾರಿಗೆ ನಾನು ಮಾಡುವವನೆಂಬ ಅಭಿಮಾನವಿಲ್ಲವೋ, ಯಾರ ಬುದ್ಧಿಯು ಪುಣ್ಯ ಪಾಪಗಳನ್ನು ಅಂಟಿಸಿಕೊಳ್ಳುವದಿಲ್ಲವೋ ಅವನು ಈ ಲೋಕವನ್ನೇ ಕೊಂದರೂ ಕೊಲೆಗಾರನಾಗುವದಿಲ್ಲ. ಮತ್ತು ಕೊಲೆಯ ಫಲಕ್ಕೆ ಬಾಧ್ಯನಾಗುವದಿಲ್ಲ.

–ಇದೇ ಅರ್ಥದಲ್ಲಿ 'ನ ಮಾತೃವಧೇನ ನ ಪಿತೃವಧೇನ ನ ಸ್ತೇಯೇನ' ಇತ್ಯಾದಿ ಕೌಷೀತಕ್ಯುಪನಿಷತ್ತಿನ ವಾಕ್ಯವನ್ನು ಹೇಳುತ್ತಾರೆ.

**ಮಾತಾಪಿತ್ರೋರ್ವಧಸ್ತೇಯಂ ಭ್ರೂಣಹತ್ಯಾನ್ಯದೀದೃಶಮ್।**
**ನ ಮುಕ್ತಿಂ ನಾಶಯೇತ್ಪಾಪಂ ಮುಖಕಾಂತಿರ್ನ ಶಕ್ಯತಿ ॥೧೭॥**

ತಾಯ್ತಂದೆಗಳ ಕೊಲೆ, ಕಳವು, ಮಕ್ಕಳ ಕೊಲೆ ಅಲ್ಲದೆ ಇಂಥವೇ ಇತರ ಪಾಪಗಳು ಜ್ಞಾನಿಗೆ ಆಗುವ ಮುಕ್ತಿಯನ್ನು ತಪ್ಪಿಸಲಾರವು. ಅಲ್ಲದೆ ಅವನ ಮುಖಕಾಂತಿಯನ್ನೂ ಕುಂದಿಸಲಾರವು.

—ಹೀಗೆ ದುಃಖಾಭಾವರೂಪ ಆನಂದವನ್ನು ಹೇಳಿ ಈಗ ಎಲ್ಲ ಬಯಕೆಗಳನ್ನು ತೀರಿಸಿಕೊಂಡು ಬೇರೊಂದು ವಿಧದ ವಿದ್ಯಾನಂದ ಹೇಳುತ್ತಾರೆ.

**ದುಃಖಾಭಾವವದೇವಾಸ್ಯ ಸರ್ವಕಾಮಾಪ್ತಿರೀರಿತಾ |**
**ಸರ್ವಾನ್ ಕಾಮಾನಸಾವಾಪ್ತ್ವಾ ಹ್ಯಮೃತೋಽಭವದಿತ್ಯ-**
**ತ್ಯತಃ ||೧೮||**

ಜ್ಞಾನಿಯು ಎಲ್ಲ ಬಯಕೆಗಳನ್ನು ತೀರಿಸಿಕೊಂಡವನಾಗಿ ಅಮೃತನಾಗಿರುವನು. ಹೀಗೆ ಐತರೇಯ ಶ್ರುತಿಯು ದುಃಖಾಭಾವದಂತೆ ಸರ್ವ ಕಾಮಾಪ್ತಿಯನ್ನು ಹೇಳುತ್ತದೆ.

—ಈಗ ಛಾಂದೋಗ್ಯ ಶ್ರುತಿ.

**ಜಕ್ಷನ್ ಕ್ರೀಡನ್ ರತಿಂ ಪ್ರಾಪ್ತಃ ಸ್ತ್ರೀಭಿರ್ಯಾನೈಸ್ತಥೇತರೈಃ |**
**ಶರೀರಂ ನ ಸ್ಮರೇತ್ ಪ್ರಾಣಃ ಕರ್ಮಣಾ ಜೀವಯೇದ-**
**ಮುಮ್ ||೧೯||**

ಅವನು ತಿಂದುಂಡರೂ, ಆಟವಾಡಿದರೂ, ಸ್ತ್ರೀಯರಿಂದ ಆನಂದಗೊಂಡರೂ, ವಾಹನವೇರಿ ನಡೆದರೂ, ಅಲ್ಲ ಇತರ ವಿಷಯ ಸುಖಗಳನ್ನು ಪಡೆದರೂ ಅವನಿಗೆ ಶರೀರದ ನೆನಪಿರುವದಿಲ್ಲ. ಪ್ರಾಣವು ಪ್ರಾರಬ್ಧ ಕರ್ಮಯೋಗದಿಂದ ಅವನನ್ನು ಬದುಕಿಸುವದು.

**ಸರ್ವಾನ್ ಕಾಮಾನ್ ಸಹಾಪ್ನೋತಿ ನಾನ್ಯವಜ್ಜನ್ಮಕರ್ಮಭಿಃ |**
**ವರ್ತಂತೇ ಶ್ರೋತ್ರಿಯೇ ಭೋಗಾ ಯುಗಪತ್-**
**ಕ್ರಮವರ್ಜಿತಾಃ ||೨೦||**

"ಸೋಽಶ್ನುತೇ ಸರ್ವಾನ್ ಕಾಮಾನ್ ಸಹ" ಎಂಬ ತೈತ್ತಿರೀಯ ಶ್ರುತಿ.

ಜ್ಞಾನಿಯಾದವನ ಬಯಕೆಗಳೆಲ್ಲ ಒಮ್ಮೆಲೇ ಕೈಗೂಡುವವು. ಆದರೆ ಅವು ಇತರ ಅಜ್ಞರಂತೆ ಹುಟ್ಟು ಮತ್ತು ಕರ್ಮಗಳ ಮುಖಾಂತರ ದೊರಕಿದವುಗಳಲ್ಲ. ಯಾಕಂದರೆ ಜ್ಞಾನದಿಂದ ಅವನ ಸಂಚಿತ ಕರ್ಮಗಳೆಲ್ಲ ಸುಟ್ಟು ಹೋಗಿರುತ್ತವೆ. ಅಲ್ಲದೇ ಈ ಶ್ರೋತ್ರಿಯನಲ್ಲಿ ಎಲ್ಲ ಸುಖಗಳೂ ಒಂದೇ ಕಾಲಕ್ಕೆ ತಮ್ಮ ಕ್ರಮವನ್ನು ತಪ್ಪಿ ಇರುತ್ತವೆ.

ತೈತ್ತರೀಯ-ಬೃಹದಾರಣ್ಯಕದ ಆನಂದ ಪ್ರತಿಪಾದಿಸುವ ವಾಕ್ಯಗಳು.

ಯುವಾ ರೂಪೀ ಚ ವಿದ್ವಾನ್ನೀರೋಗೋ ದೃಢಚಿತ್ತ-
ವಾನ್ |
ಸೈನ್ಯೋಪೇತಃ ಸರ್ವಪೃಥ್ವೀಂ ವಿತ್ತಪೂರ್ಣಾಂ ಪ್ರಪಾಲ-
ಯನ್ ||೨೧||

ಸರ್ವೈರ್ಮಾನುಷ್ಯಕೈರ್ಭೋಗೈಃ ಸಂಪನ್ನಸ್ತೃಪ್ತಭೂಮಿಪಃ |
ಯಮಾನಂದಮವಾಪ್ನೋತಿ ಬ್ರಹ್ಮವಿಚ್ಚ ತಮಶ್ನುತೇ ||೨೨||

ತರುಣನು, ರೂಪವಂತನು, ವಿದ್ಯೆಯುಳ್ಳವನು, ಬೇನೆ ಇಲ್ಲದ ಬಲಿಷ್ಠನು, ಘಟ್ಟಿಮನವುಳ್ಳವನು, ಕೈಕೆಳಗೆ ಸೈನ್ಯವಿದ್ದವನು, ಸಂಪತ್ತಿನಿಂದ ಪೃಥ್ವಿಯನ್ನು ಆಳುವಂಥವನು ಹೀಗೆ ಮನುಷ್ಯಲೋಕದ ಎಲ್ಲ ಭೋಗಗಳಿಂದ ಕೂಡಿ ತೃಪ್ತನಾದ ರಾಜನು ಯಾವ ಆನಂದವನ್ನು ಪಡೆಯಬಲ್ಲನೋ ಆ ಆನಂದವನ್ನು ಜ್ಞಾನಿಯು ಪಡೆಯುವನು.

(ಸಾರ್ವಭೌಮ ರಾಜನಿಂದ ಮೊದಲುಗೊಂಡು ಹಿರಣ್ಯಗರ್ಭನವರೆಗೆ ಎಲ್ಲ ಜೀವನಿಷ್ಠ ಆನಂದವು ಬ್ರಹ್ಮನ ಅಂಶವಾಗಿದೆ ಎಂದು ಜ್ಞಾನಿಯು ತಿಳಿಯುವದರಿಂದ ಅವನಲ್ಲಿ ಎಲ್ಲ ಆನಂದಗಳೂ ಕೂಡುತ್ತವೆ.)

—ಆದರೆ ಸಾರ್ವಭೌಮ ರಾಜ ಮತ್ತು ಜ್ಞಾನಿ ಇವರಲ್ಲಿರುವ ಸುಖ ಸಾಧನಗಳು ಸಮಾನವಾಗಿರುವದಿಲ್ಲ. ಎಂದಮೇಲೆ ಸುಖವು ಹೇಗೆ ಸಮಾನವಾಗುವದು ?

ಮರ್ತ್ಯಭೋಗೇ ದ್ವಯೋರ್ನಾಸ್ತಿ ಕಾಮಸ್ತೃಪ್ತಿರತಃ ಸಮಾ |
ಭೋಗಾನ್ನಿಷ್ಕಾಮತೈಕಸ್ಯ ಪರಸ್ಯಾಪಿ ವಿವೇಕತಃ ||೨೩||

ಈ ಮೃತ್ಯುಲೋಕದ ಭೋಗಗಳ ವಿಷಯದಲ್ಲಿ ಇಬ್ಬರಿಗೂ ಇಚ್ಛೆ ಇರುವುದಿಲ್ಲ. ಆದುದರಿಂದ ಅವರ ತೃಪ್ತಿ ಸಮವಾದುದು. ರಾಜನಾದವನಿಗೆ ಭೋಗದಿಂದ ನಿರಿಚ್ಛೆಯುಂಟಾಗಿರುತ್ತದೆ. ಜ್ಞಾನಿಗೆ ವಿಷಯ ಸುಖಗಳೆಲ್ಲ ದೋಷದಿಂದ ಕೂಡಿದವುಗಳೆಂದು ನಿರಿಚ್ಛೆಯುಂಟಾಗಿರುತ್ತದೆ.

ಶ್ರೋತ್ರಿಯತ್ವಾದ್ವೇದ ಶಾಸ್ತ್ರೈರ್ಭೋಗದೋಷಾನವೇಕ್ಷತೇ |
ರಾಜಾಬೃಹದ್ರಥೋ ದೋಷಾಂಸ್ತಾನ್ ಗಾಥಾಭಿರುದಾ-
ಹರತ್ ||೨೪||

ಜ್ಞಾನಿಯು ವೇದ-ಶಾಸ್ತ್ರಗಳನ್ನು ಚನ್ನಾಗಿ ತಿಳಿದು ಭೋಗಗಳಲ್ಲಿ ದೋಷವನ್ನು ಕಾಣುತ್ತಾನೆ ಬೃಹದ್ರಥನೆಂಬ ರಾಜನು ಆದೋಷಗಳನ್ನು ಮೈತ್ರಾಯಣೀ ಶಾಖೆಯಲ್ಲಿ ಚನ್ನಾಗಿ ಹೇಳಿದ್ದಾನೆ.

—ಆ ದೋಷಗಳು.

**ದೇಹದೋಷಾಂಶ್ಚಿತ್ತದೋಷಾನ್ ಭೋಗ್ಯದೋಷಾನನೇಕಶಃ।**
**ಶುನಾ ವಾಂತೇ ಪಾಯಸೇ ನೋ ಕಾಮಸ್ತದ್ವದ್ವಿವೇಕಿನಃ॥೨೫॥**

ಆ ರಾಜನು ದೇಹದೋಷಗಳು, ಮನಸ್ಸಿನದೋಷಗಳು, ಭೋಗ್ಯವದಾಗಳಲ್ಲಿಯ ದೋಷಗಳು ಇವುಗಳನ್ನೆಲ್ಲ ಹೇಳಿದನು. ವಿಚಾರವಂತನಿಗೆ ಅವುಗಳ ಬಯಕೆಯುಂಟಾಗುವುದಿಲ್ಲವೆಂಬುದಕ್ಕೆ ಉದಾಹಣೆ. ನಾಯಿಯು ಕಾರಿಕೊಂಡ ಪಾಯಸವನ್ನು ಬಯಸುವವರುಂಟೇ?

—ಸಾರ್ವಭೌಮ ರಾಜನಿಗಿಂತ ಶ್ರೋತ್ರಿಯನ ಹೆಚ್ಚಳ.

**ನಿಷ್ಕಾಮತ್ವೇ ಸಮೇಽಪ್ಯತ್ರ ರಾಜ್ಞಃ ಸಾಧನಸಂಚಯೇ।**
**ದುಃಖಮಾಸೀದ್ಭಾವಿನಾಶಾದತಿಭೀರನುವರ್ತತೇ ॥೨೬॥**
**ನೋಭಯಂ ಶ್ರೋತ್ರಿಯಸ್ಯಾತಸ್ತದಾನಂದೋಽಧಿಕೋಽನ್ಯತಃ।**
**ಗಂಧರ್ವಾನಂದ ಆಶಾಸ್ತಿ ರಾಜ್ಞೋ ನಾಸ್ತಿ ವಿವೇಕಿನಃ ॥೨೭॥**

ಚಕ್ರವರ್ತಿಗೂ, ಜ್ಞಾನಿಗೂ ಬಯಕೆ ಇಲ್ಲದಿರುವದು ಸಮವಾದರೂ, ಅವರಲ್ಲಿ ರಾಜನಿಗೆ ಸಾಧನಗಳನ್ನು ಸಂಗ್ರಹಿಸಿಕೊಳ್ಳುವಾಗ ದುಃಖವಾಗಿರುತ್ತದೆ. ಅಲ್ಲದೆ ಮುಂದೆ ಅವುಗಳ ನಾಶವಾಗುವದೆಂದು ಭಯವಾಗುತ್ತದೆ. ಶ್ರೋತ್ರಿಯನಿಗೆ ಇವೆರಡೂ ಇಲ್ಲ. ಆದುದರಿಂದ ರಾಜನ ಆನಂದಕ್ಕಿಂತ ಜ್ಞಾನಿಯ ಆನಂದವು ಹೆಚ್ಚು. ಮತ್ತು ರಾಜನಿಗೆ ಗಂಧರ್ವಾನಂದದ ಆಶೆ ಇರುತ್ತದೆ. ಆದರೆ ವಿವೇಕಶೀಲನಿಗೆ ಅದಿಲ್ಲ.

—ಗಂಧರ್ವಾನಂದವು ಎರಡು ಬಗೆಯಾಗಿದೆ, ಎಂದು ಹೇಳುವುದಕ್ಕೆ ಮುಂದಿನ ಎರಡು ಶ್ಲೋಕಗಳಲ್ಲಿ ಗಂಧರ್ವರ ಭೇದಗಳನ್ನು ಹೇಳುತ್ತಾರೆ.

**ಅಸ್ಮಿನ್‌ಕಲ್ಪೇ ಮನುಷ್ಯಃ ಸನ್ ಪುಣ್ಯಪಾಕವಿಶೇಷತಃ।**
**ಗಂಧರ್ವತ್ವಂ ಸಮಾಪನ್ನೋ ಮರ್ತ್ಯಗಂಧರ್ವ ಉಚ್ಯತೇ ॥೨೮॥**

**ಪೂರ್ವಕಲ್ಪೇ ಕೃತಾತ್ ಪುಣ್ಯಾತ್ ಕಲ್ಪಾದಾವೇವ ಚೇದ್ಭವೇತ್।**
**ಗಂಧರ್ವತ್ವಂ ತಾದೃಶೋಽತ್ರ ದೇವಗಂಧರ್ವ ಉಚ್ಯತೇ ॥೨೯॥**

ಈ ಕಲ್ಪದಲ್ಲಿ ಮನುಷ್ಯನಾಗಿದ್ದು ವಿಶೇಷ ಪ್ರಕಾರದ ಪುಣ್ಯ ಪರಿಪಾಕದಿಂದ ಯಾವನು ಗಂಧರ್ವನಾಗಿರುವನೋ ಅವನಿಗೆ ಮರ್ತ್ಯ ಗಂಧರ್ವನೆಂದು ಹೇಳುತ್ತಾರೆ.

ಪೂರ್ವ ಕಲ್ಪದಲ್ಲಿ ಮಾಡಿದ ಪುಣ್ಯ ಕರ್ಮದಿಂದ ಕಲ್ಪದ ಆರಂಭದಲ್ಲಿಯೇ ಒಂದು ವೇಳೆ ಗಂಧರ್ವತ್ವವು ದೊರಕಿದ್ದರೆ ಅಂಥ ಗಂಧರ್ವನಿಗೆ ದೇವಗಂಧರ್ವನೆಂದು ಅನ್ನುತ್ತಾರೆ.

—ಇನ್ನು ಪಿತೃಗಳ, ಆಜಾನ ದೇವತೆಗಳ ಆನಂದವನ್ನು ಹೇಳುತ್ತಾರೆ. ಅವರು ಯಾರು?

**ಅಗ್ನಿಷ್ವಾತ್ತಾದಯೋ ಲೋಕೇ ಪಿತರಶ್ಚಿರವಾಸಿನಃ ।**
**ಕಲ್ಪಾದಾವೇವ ದೇವತ್ವಂ ಗತಾ ಆಜಾನದೇವತಾಃ ॥೩೦॥**

ಪಿತೃಲೋಕದಲ್ಲಿ ಯಾವಾಗಲೂ ಇರತಕ್ಕ ಅಗ್ನಿಷ್ವಾತ್ತ ಮೊದಲಾದವರು ಪಿತೃದೇವತೆಗಳು. ಕಲ್ಪದ ಆದಿಯಲ್ಲಿಯೇ ದೇವತ್ವವನ್ನು ಹೊಂದಿದವರು ಆಜಾನದೇವತೆಗುಳ.

—ಕರ್ಮ ದೇವತೆಗಳು.

**ಅಸ್ಮಿನ್ ಕಲ್ಪೇಽಶ್ವಮೇಧಾದಿ ಕರ್ಮಕೃತ್ವಾ ಮಹತ್ಪದಮ್ ।**
**ಅವಾಪ್ಯಾಜಾನ ದೇವೈರ್ಯಾ ಪೂಜ್ಯಾಸ್ತಾಃ ಕರ್ಮ-**
**ದೇವತಾಃ ॥೩೦॥**

ಈ ಕಲ್ಪದಲ್ಲಿ ಅಶ್ವಮೇಧಾದಿ ಕರ್ಮಗಳನ್ನು ಮಾಡಿ ದೊಡ್ಡ ಪದವಿಯನ್ನು ಹೊಂದಿ ಆಜಾನದೇವತೆಗಳಿಂದ ಪೂಜೆಗೊಳ್ಳುವವರು ಕರ್ಮ ದೇವತೆಗಳು.

**ಯಮಾಗ್ನಿಮುಖ್ಯಾ ದೇವಾಃಸ್ಯುರ್ಜ್ಞಾತಾ ವಿಂದ್ರಬೃಹಸ್ಪತೀ।**
**ಪ್ರಜಾಪತಿರ್ವಿರಾಟ್ ಪ್ರೋಕ್ತೋ ಬ್ರಹ್ಮಾ ಸೂತ್ರಾತ್ಮ-**
**ನಾಮಕಃ ॥೩೨॥**

ಯಮ, ಅಗ್ನಿ ಮುಂತಾದವರು ದೇವತೆಗಳು. ಇಂದ್ರ-ಹಾಗೂ ಬೃಹಸ್ಪತಿಗಳು ಪ್ರಸಿದ್ಧರು. ಸ್ಥೂಲದೇಹಾಭಿಮಾನಿಯಾದ ಪ್ರಜಾಪತಿಗೇ

ವಿರಾಟ್ ಎನ್ನುವರು. ಬ್ರಹ್ಮದೇವನು-ಸೂತ್ರಾತ್ಮನೆನಿಸುವನು.

—ಇವರೆಲ್ಲರ ಆನಂದಕ್ಕಿಂತ ಶ್ರೋತ್ರಿಯನ ಆನಂದವು ಹೆಚ್ಚಿನದು ಎನ್ನುತ್ತಾರೆ.

**ಸಾರ್ವಭೌಮಾದಿಸೂತ್ರಾಂತಾ ಉತ್ತರೋತ್ತರಕಾಮಿನಃ |**
**ಅವಾಙ್ಮನಸಗಮ್ಯೋಽಯಮಾತ್ಮಾನಂದಸ್ತತಃ ಪರಃ ||೩೩||**

ಸಾರ್ವಭೌಮ ರಾಜನಿಂದ ಮೊದಲುಮಾಡಿ ಸುತ್ರಾತ್ಮನವರೆಗೆ ಎಲ್ಲರೂ ತಮಗಿಂತ ಹೆಚ್ಚಿನ ಪದವಿ-ಆನಂದಗಳನ್ನು ಬಯಸುತ್ತ ಇರುತ್ತಾರೆ. ಮಾತು ಮನಗಳಿಗೆ ನಿಲುಕದ ಆತ್ಮಾನಂದವು ಎಲ್ಲಕ್ಕಿಂತ ಹೆಚ್ಚಿನದು.

— ಇವೆಲ್ಲ ಆನಂದಶ್ರೋತ್ರಿಯ ಹೇಗೆ ಇರುತ್ತವೆಂಬುದನ್ನು ಹೇಳುತ್ತಾರೆ.

**ತೈಸ್ತೈಃ ಕಾಮ್ಯೇಷು ಸರ್ವೇಷು ಸುಖೇಷು ಶ್ರೋತ್ರಿಯೋ ಯತಃ |**
**ನಿಸ್ಪೃಹಸ್ತೇನ ಸರ್ವೇಷಾಮಾನಂದಾಃ ಸಂತಿ ತಸ್ಯ ತೇ ||೩೪||**

ಶ್ರೋತ್ರಿಯನು ಆ ಎಲ್ಲ ಜೀವರು ಬಯಸುತ್ತಿರುವ ಸುಖದ ವಿಷಯದಲ್ಲಿ ನಿಸ್ಪೃಹನಾಗಿರುತ್ತಾನೆ. ಆದುದರಿಂದ ಅವನೆ ಅವೆಲ್ಲ ಆನಂದಗಳು ದೊರಕಿರುವವೆಂದು ತಿಳಿಯಬೇಕು.

—ಉಪಸಂಹಾರ.

**ಸರ್ವಕಾಮಾಪ್ತಿರೇಷೋಕ್ತಾ ಯದ್ವಾ ಸಾಕ್ಷಿ ಚಿದಾತ್ಮನಾ |**
**ಸ್ವದೇಹವದ್ಸರ್ವದೇಹೇಷ್ವಪಿ ಭೋಗಾನವೇಕ್ಷತೇ ||೩೫||**

ಜ್ಞಾನಿಗೆ ಎಲ್ಲ ಬಯಕೆಗಳು ತೀರಿರುವವೆಂಬುದು ಇದೇ. ಜ್ಞಾನಿಯು ಸಾಕ್ಷಿ ಚೈತನ್ಯ ರೂಪನಾಗಿ ತನ್ನ ದೇಹದಲ್ಲಿರುವಂತೆ ಎಲ್ಲ ದೇಹಗಳಲ್ಲಿಯೂ ಆನಂದವೇ ಇರುವದನ್ನು ಕಾಣುತ್ತಾನೆ.

—ಹೀಗೆಂದರೆ ಅಜ್ಞಾನಿಗೂ ಆನಂದವುಂಟೆನ್ನಬೇಕೇ ?

**ಅಜ್ಞಸ್ಯಾಪ್ಯೇತದಸ್ತ್ಯೇವ ನತು ತೃಪ್ತಿರಬೋಧತಃ |**
**ಯೋ ವೇದ ಸೋಽಶ್ನುತೇ ಸರ್ವಾನ್ ಕಾಮಾನಿತ್ಯಬ್ರವೀತ್ ಶ್ರುತಿಃ ||೩೬||**

ಅಜ್ಞಾನಿಗೆ ಕೂಡ ಈ ಆನಂದ ಲಾಭವಿದೆ. ಆದರೆ ಅವನು ಆತ್ಮನನ್ನು ತಿಳಿದಿರುವದಿಲ್ಲ. ಆ ಅಜ್ಞಾನದಿಂದ ಅವನಿಗೆ ತೃಪ್ತಿ ಎಂಬುದಿಲ್ಲ. ಯಾರು ಗುಹೆಯಲ್ಲಿಯ ಬ್ರಹ್ಮನನ್ನು ತಿಳಿಯುವರೋ ಅವರಿಗೆಸರ್ವಾನಂದ ದೊರೆಯುವದೆಂದು ತೈತ್ತರೀಯ ಶ್ರುತಿ ಹೇಳುವದು.

**ಯದ್ವಾ ಸರ್ವಾತ್ಮತಾಂ ಸ್ವಸ್ಯ ಸಾಮ್ನಾ ಗಾಯತಿ ಸರ್ವದಾ ।**
**ಅಹಮನ್ನಂ ತಥಾನ್ನಾದಶ್ಚೇತಿ ಸಾಮ ಹ್ಯಧೀಯತೇ ॥೩೭॥**

—ಎಲ್ಲ ಬಯಕೆಗಳು ತೀರಿರುವದರ ಮತ್ತೊಂದು ಪ್ರಕಾರ.

ತತ್ತ್ವಜ್ಞನು ತನ್ನ ಸರ್ವಾತ್ಮತ್ವವನ್ನು ಸಾಮವೇದದ ಮುಖಾಂತರ ಯಾವಾಗಲೂ ಹಾಡುವನು. 'ನಾನು ಅನ್ನವೂ ಅನ್ನಉಣ್ಣುವವನೂ ಆಗಿದ್ದೇನೆ. ಎಂದು ಸಾಮವೇದವು ಹೇಳುತ್ತದೆ.

—ಇದುವರೆಗೆ ಹೇಳಿದುದನ್ನು ಸಂಕ್ಷೇಪವಾಗಿ ಹೇಳುತ್ತಾರೆ.

**ದುಃಖಾಭಾವಶ್ಚ ಕಾಮಾಪ್ತಿರುಭೇ ಹ್ಯೇವಂ ನಿರೂಪಿತೇ ।**
**ಕೃತಕೃತ್ಯತ್ವಮನ್ಯಚ್ಚ ಪ್ರಾಪ್ತಪ್ರಾಪ್ಯತ್ವಮೀಕ್ಷ್ಯತಾಮ್॥೩೮॥**

ಹೀಗೆ ದುಃಖಾಭಾವ ಮತ್ತು ಕಾಮಾಪ್ತಿಗಳು ನಿರೂಪಿತವಾದವು. ಇನ್ನು ಕೃತಕೃತ್ಯತೆಯನ್ನು ಮತ್ತು ಪ್ರಾಪ್ತಪ್ರಾಪ್ಯತ್ವವನ್ನೂ ನೋಡಬೇಕು.

**ಉಭಯಂ ತೃಪ್ತಿದೀಪೇ ಹಿ ಸಮ್ಯಗಸ್ಮಾಭಿರೀರಿತಮ್ ।**
**ತ ಏವಾತ್ರಾನುಸಂಧೇಯಾಃ ಶ್ಲೋಕಾ ಬುದ್ಧಿವಿಶುದ್ಧಯೇ॥೩೯॥**

ನಾವು ಆವೆರಡನ್ನು ತೃಪ್ತಿದೀಪದಲ್ಲಿ ಚನ್ನಾಗಿ ಹೇಳಿದ್ದೇವೆ. ಬುದ್ಧಿಯು ತಿಳಿಯಾಗಬೇಕೆಂದು ಆ ಶ್ಲೋಕಗಳನ್ನು ಇಲ್ಲಿ ನೆನೆದುಕೊಳ್ಳಬೇಕು.

ಇನ್ನು ಕೃತಕೃತ್ಯತೆ–ಪ್ರಾಪ್ತಪ್ರಾಪ್ಯತೆಗಳನ್ನು ಹೇಳುತ್ತಾರೆ.

**ಐಹಿಕಾಮುಷ್ಮಿಕವ್ರಾತಸಿದ್ಧ್ಯೈಮುಕ್ತೇಶ್ಚ ಸಿದ್ಧಯೇ ।**
**ಬಹುಕೃತ್ಯಂ ಪುರಾಸ್ಯಾಭೂತ್ತತ್‌ಸರ್ವಮಧುನಾ ಕೃತಮ್॥೪೦॥**

ಆತ್ಮಸಾಕ್ಷಾತ್ಕಾರವಾಗುವದಕ್ಕೆ ಮೊದಲು ಈ ಲೋಕದ ಹಾಗೂ ಪರಲೋಕದ ಸುಖಗಳು ದೊರೆಯಬೇಕೆಂದು ಮತ್ತು ಮುಕ್ತಿಯು ದೊರೆಯಬೇಕೆಂದು ನನಗೆ ಬಹಳ ಕರ್ತವ್ಯಗಳಿದ್ದವು. ಈಗ ಆತ್ಮಸಾಕ್ಷಾತ್ಕಾರವಾದುದರಿಂದ ನನಗೆ ಯಾವ ಕರ್ತವ್ಯವೂ ಉಳಿದಿಲ್ಲ.

**ಇದೇತತ್ ಕೃತಕೃತ್ಯತ್ವಂ ಪ್ರತಿಯೋಗಿಪುರಃಸರಮ್ ।**
**ಅನುಸಂದಧದೇವಾಯಮೇವಂ ತೃಪ್ಯತಿ ನಿತ್ಯಶಃ ॥೪೧॥**

ತಾನು ಮಾಡಬೇಕಾದುದನ್ನೆಲ್ಲ ಮಾಡಿದ್ದಾಯಿತೆಂದು, ಇದರ ವಿರುದ್ಧ ಸ್ಥಿತಿಯು ಎಂದರೆ ಅಜ್ಞಾನಿಗಳ ಆಚರಣೆಯ ಅನುಸಂಧಾನದ ಮೂಲಕವಾಗಿ ಯಾವಾಗಲೂ ತೃಪ್ತಿಯನ್ನು ಹೊಂದುವನು.

**ದುಃಖಿನೋಽಜ್ಞಾಃ ಸಂಸರಂತು ಕಾಮಂ ಪುತ್ರಾದ್ಯಪೇಕ್ಷಯಾ।**
**ಪರಮಾನಂದಪೂರ್ಣೋಽಹಂ ಸಂಸರಾಮಿ ಕಿಮಿಚ್ಛಯಾ॥೪೨॥**

ತಿಳಿವಳಿಕೆ ಇಲ್ಲದವರು ಮಕ್ಕಳು–ಮರಿಗಳ ಇಚ್ಛೆಯಿಂದ ದುಃಖಿಗಳಾಗಿ ಬೇಕಾದಂತೆ ಸಂಸಾರದಲ್ಲಿ ತೊಡಗಲಿ. ನನಗೆ ಅದರಗೊಡವೆ ಇಲ್ಲ. ಬ್ರಹ್ಮಾನಂದದಿಂದ ಪೂರ್ಣನಾಗಿರುವ ನಾನು ಯಾವ ಲೋಕ ಪಡೆಯುವ ಇಚ್ಛೆಯಿಂದ ಸುತ್ತಲಿ ?

**ಅನುತಿಷ್ಠಂತು ಕರ್ಮಾಣಿ ಪರಲೋಕಯಿಯಾಸವಃ ।**
**ಸರ್ವಲೋಕಾತ್ಮಕಃ ಕಸ್ಮಾದನುತಿಷ್ಠಾಮಿ ಕಿಂ ಕಥಮ್ ॥೪೩॥**

ಯಾರಿಗೆ ಸ್ವರ್ಗಾದಿಗಳನ್ನು ಪಡೆಯುವ ಬಯಕೆಯುಂಟೋ ಅವರು ಯಥೇಚ್ಛಕರ್ಮಾನುಷ್ಠಾನ ಮಾಡಲಿ. ಆದರೆ ನಾನು ಸರ್ವಲೋಕಮಯನಾದುದರಿಂದ ನನಗೆ ಲೋಕಗಳ ಇಚ್ಛೆ ಇಲ್ಲ. ಅದರಿಂದ ಕರ್ಮಾನುಷ್ಠಾನವೂ ಇಲ್ಲ.

**ವ್ಯಾಚಕ್ಷತಾಂ ತೇ ಶಾಸ್ತ್ರಾಣಿ ವೇದಾನಧ್ಯಾಪಯಂತು ವಾ ।**
**ಯೇಽತ್ರಾಧಿಕಾರಿಣೋ ಮೇತು ನಾಧಿಕಾರೋಽ-**
**ಕ್ರಿಯತ್ವತಃ ॥೪೪॥**

ಅಧಿಕಾರವಿದ್ದವರು ಶಾಸ್ತ್ರಗಳ ವ್ಯಾಖ್ಯಾನ ಮಾಡಲಿ. ಅಥವಾ ವೇದಾಧ್ಯಯನ ಮಾಡಲಿ. ನನಗೆ ಅದರ ಅವಶ್ಯಕತೆ ಇಲ್ಲ. ಯಾಕೆಂದರೆ ಅವುಗಳಿಂದ ದೊರೆಯುವ ಫಲದ ಇಚ್ಛೆಯು ನನಗೆ ಇಲ್ಲವಾದುದರಿಂದ ನಾನು ಅನಧಿಕಾರಿ.

**ನಿದ್ರಾ-ಭಿಕ್ಷೆ-ಸ್ನಾನ-ಶೌಚೇ ನೇಚ್ಛಾಮಿ ನ ಕರೋಮಿ ಚ ।**
**ದ್ರಷ್ಟಾರಶ್ಚೇತ್ ಕಲ್ಪಯಂತಿ ಕಿಂ ಮೇ ಸ್ಯಾದನ್ಯ-**
**ಕಲ್ಪನಾತ್ ॥೪೫॥**

ನಿದ್ರೆ-ಭಿಕ್ಷೆ-ಸ್ನಾನ-ಮಲ ಮೂತ್ರಗಳನ್ನು ನಾನು ಸ್ವತಃ ಅಸಂಗನಾದುದರಿಂದ ಅವುಗಳನ್ನು ಮಾಡುವದೇ ಇಲ್ಲ. ನನ್ನ ದೇಹದ ಮೇಲೆ ಲಕ್ಷವಿಟ್ಟವರು ಯಾರಾದರೂ ನಾನು ಅವುಗಳನ್ನು ಮಾಡುವೆನೆಂದು ಕಲ್ಪಿಸಿದರೆ ಕಲ್ಪಿಸಲಿ. ಬೇರೆಯವರ ಕಲ್ಪನೆಯಿಂದ ನನಗೇನು. ನನಗೆ ಯಾವ ಇಚ್ಛೆಯೂ ಇಲ್ಲ.

**ಗುಂಜಾಪುಂಜಾದಿ ದಹ್ಯೇತ ನಾನ್ಯಾರೋಪಿತವಹ್ನಿನಾ ।**
**ನಾನ್ಯಾರೋಪಿತಸಂಸಾರಧರ್ಮಾನೇವಮಹಂ ಭಜೇ ॥೫೬॥**

ಗುಲಗಂಜಿಯ ರಾಶಿಯಮೇಲೆ ಇದು ಬೆಂಕಿಯ ರಾಶಿ ಎಂದು ಎಷ್ಟೇ ಆರೋಪ ಮಾಡಿದರೂ ಅದು ಯಾರನ್ನೂ ಸುಡುವದಿಲ್ಲ. ಅದರಂತೆ ಇತರರು ನನ್ನ ಮೇಲೆ ಸಂಸಾರ ಧರ್ಮವನ್ನು ಆರೋಪಿಸಿದರೂ ನಾನು ಸಂಸಾರಿಯಾಗುವದು ಸಾಧ್ಯವಿಲ್ಲ.

**ಶೃಣ್ವಂತ್ವಜ್ಞಾನತತ್ತ್ವಾಸ್ತೇ ಜಾನನ್ ಕಸ್ಮಾತ್ ಶೃಣೋಮ್ಯ-**
**ಹಮ್ ।**
**ಮನ್ಯಂತಾಂ ಸಂಶಯಾಪನ್ನಾ ನಮನ್ಯೇಽಹಮಸಂಶಯಃ ॥೫೭॥**

ತತ್ತ್ವವನ್ನು ತಿಳಿಯದವರು ಅವಶ್ಯವಾಗಿ ಶ್ರವಣ ಮಾಡಲಿ. ನಾನು ತತ್ತ್ವ ತಿಳಿದಿರುವದರಿಂದ ಅದರ ಅವಶ್ಯಕತೆ ನನಗಿಲ್ಲ. ಸಂಶಯವಿದ್ದವರು ಚನ್ನಾಗಿ ಮನನ ಮಾಡಿಕೊಳ್ಳಲಿ. ನನಗೆ ಸಂಶಯವಿಲ್ಲದ್ದರಿಂದ ಮನನ ಮಾಡುವದಿಲ್ಲ.

**ವಿಪರ್ಯಸ್ತೋ ನಿದಿಧ್ಯಾಸೇತ್ ಕಿಂ ಧ್ಯಾನಮವಿಪರ್ಯಯೇ ।**
**ದೇಹಾತ್ಮತ್ವವಿಪರ್ಯಾಸಂ ನ ಕದಾಚಿದ್ಭಜಾಮ್ಯಹಮ್ ॥೫೮॥**

ಯಾರಿಗೆ ವಿಪರೀತ ಭಾವನೆಯಾಗಿರುವದೋ ಅವರು ನಿದಿಧ್ಯಾಸನ ಮಾಡಿಕೊಳ್ಳಲಿ. ನನಗೆ ವಿಪರೀತ ಭಾವನೆಯೇ ಇಲ್ಲ. ಆದುದರಿಂದ ನಿದಿಧ್ಯಾಸನದ ಅವಶ್ಯಕತೆ ಇಲ್ಲ. ದೇಹವೇ ನಾನೆಂದು ತಿಳಿಯುವದು ವಿಪರೀತ ಭಾವನೆ. ನಾನು ಎಂದೂ ಹಾಗೆ ತಿಳಿದಿಲ್ಲ. ಎಂದಮೇಲೆ ಧ್ಯಾನದ ಅವಶ್ಯಕತೆಯೂ ನನಗಿಲ್ಲ.

**ಅಹಂ ಮನುಷ್ಯ ಇತ್ಯಾದಿವ್ಯವಹಾರೋ ವಿನಾಪ್ಯಮುಮ್ ।**
**ವಿಪರ್ಯಾಸಂ ಚಿರಾಭ್ಯಸ್ತವಾಸನಾತೋಽವಕಲ್ಪತೇ ॥೫೯॥**

'ನಾನು ಮನುಷ್ಯ' ಎಂಬ ವ್ಯವಹಾರವನ್ನಾದರೂ ನೀವು ಹೇಗೆ ಮಾಡುವಿರಿ ? ಎಂದರೆ ದೇಹವು ನಾನೆಂಬ ಭಾವನೆ ಇಲ್ಲದೆ. ಬಹಳ ಕಾಲದ ವರೆಗೆ ಅಭ್ಯಾಸವಾದುದರಿಂದ ವಾಸನಾ ಬಲದಿಂದಲೇ ವ್ಯವಹಾರ ಸಾಗುವದು.

**ಆರಬ್ಧಕರ್ಮಣಿಕ್ಷೀಣೇ ವ್ಯವಹಾರೋ ನಿವರ್ತತೇ ।**
**ಕರ್ಮಾಕ್ಷಯೇ ತ್ವಸೌ ನೈವ ಶಾಮ್ಯೇದ್ಧ್ಯಾನ ಸಹಸ್ರತಃ ॥೫೦॥**

ವಾಸನೆಯಿಂದ ಸಾಗುವ ವ್ಯವಹಾರವು ಮುಗಿಯುವದೆಂದಿಗೆ ? ಎಂದರೆ ಪ್ರಾರಬ್ಧ ಕರ್ಮವು ತೀರಿತೆಂದರೆ ವ್ಯವಹಾರವು ತಂತಾನೇ ತೀರುವದು. ಕರ್ಮ ಮುಗಿಯುವವರೆಗೆ ಸಾವಿರಾರು ಸಾರೆ ಧ್ಯಾನ ಮಾಡಿದರೂ ಕೂಡ ಅದರದೇನೂ ಉಪಯೋಗವಾಗುವದಿಲ್ಲ.

**ವಿರಲತ್ವಂ ವ್ಯವಹೃತೇರಿಷ್ಟಂ ಚೇದ್ಧ್ಯಾನಮಸ್ತು ತೇ ।**
**ಅಬಾಧಿಕಾಂ ವ್ಯವಹೃತಿಂ ಪಶ್ಯನ್‌ಧ್ಯಾಯಾಮ್ಯಹಂ ಕುತಃ ॥೫೧॥**

ಧ್ಯಾನಮಾಡುವದರಿಂದ ವ್ಯವಹಾರವು ಕ್ಷೀಣವಾಗುವದೆಂದು ಅನ್ನುವದಾದರೆ ನೀನು ಅವಶ್ಯಧ್ಯಾನಮಾಡು. ಪ್ರಾರಬ್ಧಕರ್ಮದಿಂದ ಗಂಟುಬಿದ್ದ ವ್ಯವಹಾರತಪ್ಪುವದು ಶಕ್ಯವಿಲ್ಲ. ಇಷ್ಟು ತಿಳಿಯುತ್ತಿದ್ದರೂ ನಾನೇತಕ್ಕೆ ಧ್ಯಾನಮಾಡಲಿ?

**ವಿಕ್ಷೇಪೋ ನಾಸ್ತಿ ಯಸ್ಮಾನ್ಮೇ ನ ಸಮಾಧಿಸ್ತತೋ ಮಮ ।**
**ವಿಕ್ಷೇಪೋ ವಾ ಸಮಾಧಿರ್ವಾ ಮನಸಃ ಸ್ಯಾದ್ವಿಕಾರಿಣಃ ॥೫೨॥**

ಮನಸ್ಸು ಹೊರಗೆಹರಿಯುವದೆಂಬುದೇ ಇಲ್ಲದ ನನಗೆ ಸಮಾಧಿಯ ಅಭ್ಯಾಸಬೇಕಾಗಿಲ್ಲ. ಹರಿದಾಡುವದೂ, ಸಮಾಧಿಯೂ ಚಂಚಲವಾದ ಮನಸ್ಸಿಗೆ ಸಂಬಂಧಪಟ್ಟವುಗಳು.

**ನಿತ್ಯಾನುಭವರೂಪಸ್ಯ ಕೋ ಮೇsತ್ರಾನುಭವಃ ಪೃಥಕ್ ।**
**ಕೃತಂ ಕೃತ್ಯಂ ಪ್ರಾಪಣೀಯಂ ಪ್ರಾಪ್ತಮಿತ್ಯೇವ ನಿಶ್ಚಯಃ ॥೫೩॥**

ನನಗೆ ಅವಶ್ಯವಿರುವ ಕಾರ್ಯಗಳನ್ನೆಲ್ಲ ನಾನು ಮಾಡಿದ್ದೇನೆ, ಯಾವುದನ್ನು ದೊರಕಿಸಿಕೊಳ್ಳಬೇಕಾಗಿತ್ತೋ ಅದು ನನಗೆ ದೊರಕಿದೆ. ನಿತ್ಯ ಅನುಭವರೂಪನಾದ ನನಗೆ ಇನ್ನು ಬೇರೆಯಾವ ಅನುಭವವು ಬರಬೇಕು ?

**ವ್ಯವಹಾರೋ ಲೌಕಿಕೋ ವಾ ಶಾಸ್ತ್ರೀಯೋ ವಾನ್ಯಥಾಪಿ ವಾ।**
**ಮಮಾಕರ್ತುರಲೇಪಸ್ಯ ಯಥಾರಬ್ಧಂ ಪ್ರವರ್ತತಾಮ್ ॥೫೪॥**

ಅಕರ್ತನೂ-ನಿರ್ಲೇಪನೂ ಆದ ನನ್ನ ಲೌಕಿಕ-ಶಾಸ್ತ್ರೀಯ ಅಥವಾ ಅಶಾಸ್ತ್ರೀಯ ವ್ಯವಹಾರಗಳು ಪ್ರಾರಬ್ಧಕರ್ಮದಂತೆ ಬೇಕಾದಹಾಗೆ ನಡೆಯಲಿ.

**ಅಥವಾ ಕೃತಕೃತ್ಯೋಽಪಿ ಲೋಕಾನುಗ್ರಹಕಾಮ್ಯಯಾ ।**
**ಶಾಸ್ತ್ರೀಯೇಣೈವ ಮಾರ್ಗೇಣ ವರ್ತೇಽಹಂ ಕಾ**
**ಮಮಕ್ಷತಿಃ ॥೫೫॥**

ನಾನು ಕೃತಕೃತ್ಯನಾಗಿರುವದೇನೋ ಸರಿ. ಲೋಕೋಪಕಾರಕ್ಕಾಗಿ ಶಾಸ್ತ್ರೀಯಮಾರ್ಗದಿಂದಲೇ ನಡೆಯುವೆನು. ಅದರಲ್ಲಿ ನನಗಾಗುವ ಹಾನಿಯಾದರೂ ಏನು ?

**ದೇವಾರ್ಚನ-ಸ್ನಾನ-ಶೌಚ-ಭಿಕ್ಷಾದೌ ವರ್ತತಾಂ ವಪುಃ ।**
**ತಾರಂ ಜಪತು ವಾಕ್ ತದ್ವತ್ ಪಠತ್ವಾಮ್ನಾಯ ಮಸ್ತ-**
**ಕಮ್ ॥೫೬॥**

ಈ ಶರೀರವು ದೇವರಪೂಜೆ–ಸ್ನಾನ–ಶೌಚ ಭಿಕ್ಷಾದಿಗಳನ್ನು ಅವಶ್ಯ ಮಾಡಲಿ, ವಾಣಿಯು ಉಚ್ಚಧ್ವನಿಯಲ್ಲಿ ಪ್ರಣವಜಪಮಾಡಲಿ, ಅದರಂತೆ ಉಪನಿಷತ್ತುಗಳ ಅಧ್ಯಯನವನ್ನೂ ಮಾಡಲಿ.

**ವಿಷ್ಣುಂ ಧ್ಯಾಯತು ಧೀರ್ಯದ್ವಾ ಬ್ರಹ್ಮಾನಂದೇ ವಿಲೀಯ-**
**ತಾಮ್ ।**
**ಸಾಕ್ಷ್ಯಹಂ ಕಿಂಚಿದಪ್ಯತ್ರ ನಕುರ್ವೇ ನಾಪಿಕಾರಯೇ ॥೫೭॥**

ನನ್ನಬುದ್ಧಿಯು ವಿಷ್ಣುವನ್ನು ಧ್ಯಾನಮಾಡಲಿ, ಅಥವಾ ಬ್ರಹ್ಮಾನಂದದಲ್ಲಿ ಮುಳುಗಲಿ, ಸಾಕ್ಷಿಯಾದ ನಾನು ಇವುಗಳೊಳಗಿನ ಒಂದನ್ನೂ ಮಾಡುವವನಲ್ಲ, ಮಾಡಿಸುವವನೂ ಅಲ್ಲ.

ಕೃತಕೃತ್ಯತಯಾ ತೃಪ್ತಃ ಪ್ರಾಪ್ತಂ ಪ್ರಾಪ್ಯತಯಾ ಪುನಃ ।
ತೃಪ್ಯನ್ನೇವಂ ಸ್ವಮನಸಾ ಮನ್ಯತೇಽಸೌ ನಿರಂತರಮ್ ॥೫೮॥

ಮಾಡಬೇಕಾದ ಕಾರ್ಯವನ್ನು ಮಾಡಿದುದರಿಂದ, ಪಡೆಯಬೇಕಾದುದನ್ನು ಪಡೆದುದರಿಂದ ತೃಪ್ತನಾದ ಜ್ಞಾನಿಯು ಮುಂದೆ ವರ್ಣಿಸಿದಂತೆ ಯಾವಾಗಲೂ ಚಿಂತಿಸುತ್ತಿರುವನು.

ಧನ್ಯೋಽಹಂ ಧನ್ಯೋಽಹಂ ನಿತ್ಯಂಸ್ವಾತ್ಮಾನಮಂಜಸಾ ವೇದ್ಮಿ।
ಧನ್ಯೋಽಹಂ ಧನ್ಯೋಽಹಂ ಬ್ರಹ್ಮಾನಂದೋ ವಿಭಾತಿ ಮೇ
ಸ್ಪಷ್ಟಮ್ ॥೫೯॥

ಧನ್ಯೋಽಹಂ ಧನ್ಯೋಽಹಂ ದುಃಖಂ ಸಾಂಸಾರಿಕಂ ನವೀಕ್ಷೇಽದ್ಯ।
ಧನ್ಯೋಽಹಂ ಧನ್ಯೋಽಹಂ ಸ್ವಸ್ಯಾಜ್ಞಾನಂ ಪಲಾಯಿತಂ
ಕ್ವಾಪಿ ॥೬೦॥

ಧನ್ಯೋಽಹಂ ಧನ್ಯೋಽಹಂ ಕರ್ತವ್ಯಂ ಮೇ ನ ವಿದ್ಯತೇ ಕಿಂಚಿತ್।
ಧನ್ಯೋಽಹಂ ಧನ್ಯೋಽಹಂ ಪ್ರಾಪ್ತವ್ಯಂ ಸರ್ವಮದ್ಯ
ಸಂಪನ್ನಮ್ ॥೬೧॥

ಧನ್ಯೋಽಹಂ ಧನ್ಯೋಽಹಂ ತೃಪ್ತೇರ್ಮೇ ಕೋಪಮಾ
ಭವೇಲ್ಲೋಕೇ ।
ಧನ್ಯೋಽಹಂ ಧನ್ಯೋಽಹಂ ಧನ್ಯೋ ಧನ್ಯಃ ಪುನಃ
ಪುನರ್ಧನ್ಯಃ ॥೬೨॥

ಅಹೋ ಪುಣ್ಯಮಹೋ ಪುಣ್ಯಂ ಫಲಿತಂ ಫಲಿತಂ ದೃಢಮ್।
ಅಸ್ಯ ಪುಣ್ಯಸ್ಯ ಸಂಪತ್ತೇರಹೋ ವಯಮಹೋ
ವಯಮ್ ॥೬೩॥

ಅಹೋ ಶಾಸ್ತ್ರಮಹೋ ಶಾಸ್ತ್ರಮಹೋ ಗುರುರಹೋ ಗುರುಃ।
ಅಹೋ ಜ್ಞಾನಮಹೋ ಜ್ಞಾನಮಹೋ ಸುಖಮಹೋ
ಸುಖಮ್ ॥೬೪॥

ನಾನು ಆತ್ಮನನ್ನು ನಿತ್ಯದಲ್ಲಿಯೂ ಪ್ರತ್ಯಕ್ಷವಾಗಿ ಕಾಣುತ್ತಿರುವೆನು. ಅದರಿಂದ ಬ್ರಹ್ಮಾನಂದದ ಸ್ಪಷ್ಟಅನುಭವವು ಬರುತ್ತದೆ. ನಿಜವಾಗಿಯೂ ನಾನುಧನ್ಯನು, ನನ್ನಜನ್ಮವು ಸಫಲವಾಯಿತು, ನನಗೆ ಇಂದು ಸಾಂಸಾರಿಕ

ದುಃಖವು ಎಷ್ಟೂ ಇಲ್ಲ. ಆತ್ಮನ ವಿಷಯಕ್ಕಿದ್ದ ಅಜ್ಞಾನವು ಎಲ್ಲಿ ಒಡಿ ಹೋಯಿತೋ ಕಾಣೆ, ಇನ್ನು ನನ್ನ ಕರ್ತವ್ಯವು ಎಷ್ಟೂ ಉಳಿದಿರುವದಿಲ್ಲ, ಯಾವುದನ್ನು ಪಡೆಯಬೇಕಾಗಿತ್ತೋ ಅದನ್ನು ಪಡೆದಿರುವೆನು, ನನ್ನತೃಪ್ತಿಗೆ ಈ ಲೋಕದಲ್ಲಿ ಉಪಮೆಯೇ ಇಲ್ಲ, ನಿಜವಾಗಿಯೂ ನಾನು ಧನ್ಯ, ಧನ್ಯ, ಧನ್ಯ, ಅತಿಧನ್ಯನು. ಅಹಹಾ, ಏನುಹೇಳಲಿ, ನನ್ನಪುಣ್ಯವು ಫಲಿಸಿತು, ಈ ಪುಣ್ಯಫಲದಿಂದ ನಾನು ಸಂಪನ್ನನಾದುದರಿಂದ ಕೃತಕೃತ್ಯನು, ಅಹಾ, ಅದು ಎಂಥಶಾಸ್ತ್ರ, ಗುರುವಿನ ಯೋಗ್ಯತೆ ಎಂಥದು? ಅದು ಎಂಥಜ್ಞಾನ, ಎಂಥ ಸೌಖ್ಯ, ಎಲ್ಲವೂ ಚಮತ್ಕಾರವಾಗಿದೆ, ನಾನಿಂದು ಧನ್ಯನಾದೆನು, ಕೃತಕೃತ್ಯ ನಾದೆನು, ಆನಂದದ ಶಿಖರವನ್ನೇರಿ ಕುಳಿತಿರುವೆನು.

—ಉಪಸಂಹಾರ.

**ಬ್ರಹ್ಮಾನಂದಾಭಿದೇ ಗ್ರಂಥೇ ಚತುರ್ಥೋಽಧ್ಯಾಯ ಈರಿತಃ ।**
**ವಿದ್ಯಾನಂದಸ್ತದುತ್ಪತ್ತಿಪರ್ಯಂತೋಽಭ್ಯಾಸ ಇಷ್ಯ-**
**ತಾಮ್ ॥೬೫॥**

ಬ್ರಹ್ಮಾನಂದವೆಂಬ ಗ್ರಂಥದಲ್ಲಿ ವಿದ್ಯಾನಂದವೆಂಬ ನಾಲ್ಕನೇ ಅಧ್ಯಾಯ ವನ್ನು ಹೇಳಿತು. ಜ್ಞಾನವು ಬಲಗೊಳ್ಳುವವರೆಗೆ ಅದನ್ನು ಅಭ್ಯಾಸ ಮಾಡಬೇಕು.

## ವಿದ್ಯಾನಂದ ಪ್ರಕರಣದ ಸಾರಾಂಶ

ಎರಡನೆಯವುಗಳೆಲ್ಲ ಸುಳ್ಳೆಂದು ಅರಿತಾಗ ತಾನು ಧನ್ಯನಾದೆನೆಂಬ ಅಂತಃಕರಣವೃತ್ತಿಯುಂಟಾಗುವದೆಂದು ಹೇಳುತ್ತಾರೆ.

---

# ೧೫ ಬ್ರಹ್ಮಾನಂದೇ ವಿಷಯಾನಂದಃ

**ಅಥಾತ್ರ ವಿಷಯಾನಂದೋ ಬ್ರಹ್ಮಾನಂದಾಂಶರೂಪಭಾಕ್ ।**
**ನಿರೂಪ್ಯತೇ ದ್ವಾರಭೂತಸ್ತದಂಶತ್ವಂ ಶ್ರುತಿರ್ಜಗೌ ॥೧॥**

ಈ ಪ್ರಕರಣದಲ್ಲಿ ಬ್ರಹ್ಮಾನಂದದ ಅಂಶರೂಪವೂ, ಬ್ರಹ್ಮಾನಂದದ ಅರಿವಾಗುವುದಕ್ಕೆ ಒಂದು ಬಾಗಿಲೂ ಎನಿಸಿದ ವಿಷಯಾನಂದವನ್ನು ನಿರೂಪಿಸುತ್ತೇವೆ. ಇದಕ್ಕೆ ಬ್ರಹ್ಮಾನಂದದ ಅಂಶತ್ವವಿರುವದೆಂದು ಶ್ರುತಿಯು ಹೇಳಿದೆ.

(ವಿಷಯಾನಂದವು ಎಲ್ಲ ಪ್ರಾಣಿಗಳಿಗೆ ಅನುಭವಕ್ಕೆ ಬರುವ ಲೌಕಿಕ ವಿಷಯವಾದರೂ ಬ್ರಹ್ಮಾನಂದವೆಂದರೆ ಹೇಗಿರುತ್ತದೆ ಎಂಬುದನ್ನರಿಯಲು ಸಹಾಯಕವಾಗಿವೆ.)

—ವಿಷಯಾನಂದವು ಬ್ರಹ್ಮಾನಂದದ ಒಂದಂಶವೆಂದು ಹೇಳುವ ಶ್ರುತಿಯ ಅರ್ಥ.

**ಏಷೋಽಸ್ಯ ಪರಮಾನಂದೋಯೋಽಖಂಡೈಕರಸಾತ್ಮಕಃ ।**
**ಅನ್ಯಾನಿ ಭೂತಾನ್ಯೇತಸ್ಯ ಮಾತ್ರಾಮೇವೋಪಭುಂಜತೇ॥೨॥**

ಅಖಂಡವೂ, ಏಕರಸಾತ್ಮಕವೂ ಆದ ಬ್ರಹ್ಮಕ್ಕೆ ಪರಮಾನಂದವು ಸ್ವರೂಪವೆನಿಸುವದು. ಎಲ್ಲ ಪ್ರಾಣಿಗಳು ಆದರ ಅಂಶಮಾತ್ರವನ್ನು ಪಡೆದು ಸುಖಿಸುವವು.

—ವಿಷಯಾನಂದವನ್ನೊಳಗೊಂಡು ಅಂತಃಕರಣ ವೃತ್ತಿಗಳೆಷ್ಟು?

**ಶಾಂತಾ ಘೋರಾಸ್ತಥಾ ಮೂಢಾ ಮನಸೋ ವೃತ್ತಯಸ್ತ್ರಿಧಾ।**
**ವೈರಾಗ್ಯಂ ಕ್ಷಾಂತಿರೌದಾರ್ಯಮಿತ್ಯಾದ್ಯಾ ಶಾಂತ-**
**ವೃತ್ತಯಃ ॥೩॥**

**ತೃಷ್ಣಾ ಸ್ನೇಹೋ ರಾಗ ಲೋಭಾವಿತ್ಯಾದ್ಯಾ ಘೋರ-**
**ವೃತ್ತಯಃ ।**
**ಸಂಮೋಹೋ ಭಯಮಿತ್ಯಾದ್ಯಾಃ ಕಥಿತಾ ಮೂಢ-**
**ವೃತ್ತಯಃ ॥೪॥**

ಶಾಂತ-ಘೋರ ಹಾಗೂ ಮೂಢವೆಂದು ಮನಸ್ಸಿನ ಮೂರುವೃತ್ತಿಗಳು. ವೈರಾಗ್ಯ-ಕ್ಷಮೆ-ಔದಾರ್ಯ ಮುಂ. ಶಾಂತವೃತ್ತಿಗಳು. ತೃಷ್ಣೆ-ಸ್ನೇಹ-ರಾಗ ಲೋಭಗಳು ಘೋರವೃತ್ತಿಗಳು. ಮೋಹ-ಭಯಾದಿಗಳು ಮೂಢ ವೃತ್ತಿಗಳು

**ವೃತ್ತಿಷ್ವೇತಾಸು ಸರ್ವಾಸು ಬ್ರಹ್ಮಣಶ್ಚಿತ್‌ಸ್ವಭಾವತಾ ।**
**ಪ್ರತಿಬಿಂಬತಿ ಶಾಂತಾಸು ಸುಖಂಚ ಪ್ರತಿಬಿಂಬತಿ ॥೫॥**

ಈ ಎಲ್ಲ ವೃತ್ತಿಗಳಲ್ಲಿಯೂ ಬ್ರಹ್ಮದ ಚಿದ್ರೂಪತ್ವವು ಹೊಳೆಯುವದು. ಶಾಂತವೃತ್ತಿಗಳಲ್ಲಿ ಮಾತ್ರ ಆನಂದ ರೂಪವು ಪ್ರತಿಬಿಂಬಿಸುವದು.

—ಇದಕ್ಕೆ ಶ್ರುತಿಪ್ರಮಾಣವೂ ಇದೆ.

**ರೂಪಂ ರೂಪಂ ಬಭೂವಾಸೌ ಪ್ರತಿರೂಪ ಇತಿ ಶ್ರುತಿಃ ।**
**ಉಪಮಾ ಸೂರ್ಯಕೇತ್ಯಾದಿ ಸೂತ್ರಯಾಮಾಸ**
**ಸೂತ್ರಕೃತ್ ॥೬॥**

ಪರಮಾತ್ಮನು ಪ್ರತಿಯೊಂದು ದೇಹದಲ್ಲಿ ಆಯಾ ದೇಹಗಳಂತೆ ಆದನೆಂದು ಶ್ರುತಿಯು ಇರುವದು. ಆದುದರಿಂದಲೇ ಶ್ರುತಿಯು ಆತ್ಮನಿಗೆ ಸೂರ್ಯ ಮೊದಲಾದ ಉಪಮೆಯನ್ನು ಹೇಳಿರುವುದೆಂದು ಬ್ರಹ್ಮಸೂತ್ರಕಾರರಾದ ವ್ಯಾಸರು ಸೂತ್ರವನ್ನು ಮಾಡಿರುವರು.

—ಪರಮಾತ್ಮನು ವಸ್ತುತಃಒಬ್ಬನೇ. ಉಪಾಧಿಗಳ ಸಂಬಂಧದಿಂದ ಅವನು ಅನೇಕತ್ವವನ್ನು ಪಡೆಯಬೇಕಾಯಿತು ಎಂಬ ಅರ್ಥದಲ್ಲಿ ಆಧಾರವಾದ ಶ್ರುತಿವಾಕ್ಯ.

**ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ ।**
**ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥೭॥**

ಎಲ್ಲರ ಆತ್ಮನೆನಿಸಿದ ಪರಮಾತ್ಮನು ಬೇರೆಬೇರೆ ಪ್ರಾಣಿಗಳಲ್ಲಿ ಬೇರೆಬೇರೆಯಾಗಿ ತೋರುತ್ತಾನೆ. ಹೇಗಂದರೆ–ಬೇರೆಬೇರೆ ನಿಂತನಿಂತ ನೀರುಗಳಲ್ಲಿ ಚಂದ್ರಮನು ಪ್ರತಿಬಿಂಬಿಸಿ ತಾನೊಬ್ಬನೇ ಆದರೂ ಅನೇಕ ಪ್ರಕಾರವಾಗಿ ತೋರುವಂತೆ.

ಬ್ರಹ್ಮವು ನಿರವಯವ ಎಂದರೆ ಎಲ್ಲಕಡೆಗೆ ತುಂಬಿರುವಂಥದು. ಹೀಗಿರಲು ಒಂದುಕಡೆ ಅದರ ಚಿದಂಶ ಮಾತ್ರ ತೋರುವದು. ಮತ್ತೊಂದು ಕಡೆ ಆನಂದಾಂಶಮಾತ್ರ ಎಂದು ಹೇಳುವದು ಸರಿಯಲ್ಲ ಎಂದರೆ.

**ಜಲೇ ಪ್ರವಿಷ್ಟಶ್ಚಂದ್ರೋಽಯಮಸ್ಪಷ್ಟಃ ಕಲುಷೇ ಜಲೇ ।**
**ವಿಸ್ಪಷ್ಟೋ ನಿರ್ಮಲೇ ತದ್ವದ್ದ್ವೇಧಾ ಬ್ರಹ್ಮಾಪಿ ವೃತ್ತಿಷು॥೮॥**

ನೀರುಗಳಲ್ಲಿ ಪ್ರತಿಬಿಂಬಿಸುವ ಚಂದ್ರನು ಹೊಲಸುನೀರಿನಲ್ಲಿ ಮಸುಕಾಗಿ ಸ್ವಚ್ಛನೀರಿನಲ್ಲಿ ಸ್ಪಷ್ಟವಾಗಿ ಕಾಣುತ್ತಾನೆ. ಅದರಂತೆ ಬ್ರಹ್ಮವುಕೂಡ ವೃತ್ತಿಗಳಲ್ಲಿ ಎರಡು ಬಗೆಯಾಗುತ್ತದೆ.

**ಘೋರಾ ಮೂಢಾಸು ಮಾಲಿನ್ಯಾತ್ಸುಖಾಂಶಶ್ಚ ತಿರೋಹಿತಃ ।**
**ಈಷನ್ನೈರ್ಮಲ್ಯತಸ್ತತ್ರ ಚಿದಂಶಪ್ರತಿಬಿಂಬನಮ್ ॥೯॥**

ರಾಜಸವೆನಿಸುವ ಘೋರ ವೃತ್ತಿಗಳಲ್ಲಿ, ತಾಮಸವೆನಿಸುವ ಮೂಢ ವೃತ್ತಿಗಳಲ್ಲಿ ದುಃಖರೂಪ ಹೊಲಸು ತುಂಬಿರುವದರಿಂದ ಸುಖಾಂಶವು ಅಲ್ಲಿ ಅಡಗಿರುವದು. ಆದರೆ ಅವು ಸ್ವಲ್ಪ ನಿರ್ಮಲವಾಗಿರುವದರಿಂದ ಚಿದಂಶವು ಪ್ರತಿಬಿಂಬಿತವಾಗಿತೋರುವದು.

—ಚಂದ್ರನ ಉಪಮೆಯಲ್ಲಿ ಹೇಳಿದುದು ಯೋಗ್ಯವಾಯಿತು. ಆದರೆ ಇಲ್ಲಿ ಅಂತಃಕರಣವೆಂಬುದು ಒಂದೇ ಇರುವದರಿಂದ ಅಲ್ಲಿ ಬ್ರಹ್ಮದ ಒಂದೇ ಅಂಶ ತೋರುವದು ಎಂದು ಹೇಳುವದು ಸರಿಯಲ್ಲ ಎಂದರೆ–

**ಯಥ್ವಾಽಪಿ ನಿರ್ಮಲೇ ನೀರೇ ವಹ್ನೇರೌಷ್ಣ್ಯಸ್ಯ ಸಂಕ್ರಮಃ ।**
**ನ ಪ್ರಕಾಶಸ್ಯ ತದ್ವತ್ ಸ್ಯಾಚ್ಚಿನ್ಮಾತ್ರೋದ್ಭೂತಿರೇವ ಚ॥೧೦॥**

ನಿರ್ಮಲವಾದ ನೀರಿನಲ್ಲಿ ಅಗ್ನಿಯ ಉಷ್ಣಾಂಶವು ಮಾತ್ರ ಬೆರೆಯುವದು. ಪ್ರಕಾಶ ಎಂದರೆ ಬೆಳಕು ಬೆರೆಯುವದಿಲ್ಲ. ಅದರಂತೆ ಅಂತಃಕರಣದಲ್ಲಿ ಚಿದಂಶವು ಮಾತ್ರ ತೋರುವದು.

—ಶಾಂತವೃತ್ತಿಯಲ್ಲಿ ಚಿದಾನಂದದ ಪ್ರತೀತಿಯು ಬರುವದು ಎಂಬುದಕ್ಕೆ ದೃಷ್ಟಾಂತ.

**ಕಾಷ್ಠೇ ತ್ವೌಷ್ಣ್ಯ ಪ್ರಕಾಶೌ ದ್ವಾವುದ್ಭವಂ ಗಚ್ಛತೋ ಯಥಾ ।**
**ಶಾಂತಾಸು ಸುಖಚೈತನ್ಯೇ ತಥೈವೋದ್ಭೂತಿಮಾಪ್ನುತಃ ॥೧೧॥**

ಕಟ್ಟಿಗೆಯಲ್ಲಿ ಉಷ್ಣಾಂಶವೂ, ಪ್ರಕಾಶವೂ, ಉಂಟಾಗುವವು. ಅದರಂತೆ ಶಾಂತವೃತ್ತಿಗಳಲ್ಲಿ ಚಿದಂಶ ಮತ್ತು ಆನಂದಾಂಶಗಳೆರಡೂ ತೋರುವವು.

ಹೀಗೆ ವ್ಯವಸ್ಥೆಯು ಯಾಕೆ?

**ವಸ್ತು ಸ್ವಭಾವಮಾಶ್ರಿತ್ಯ ವ್ಯವಸ್ಥಾ ತೂಭಯೋಃ ಸಮಾ ।**
**ಅನುಭೂತ್ಯನುಸಾರೇಣ ಕಲ್ಪ್ಯತೇ ಹಿ ನಿಯಾಮಕಮ್ ॥೧೨॥**

ಆದು ದೃಷ್ಟಾಂತಕ್ಕೆ ತೆಗೆದುಕೊಂಡ ಅಗ್ನಿಯು ಉಪಾಧಿಗಳೆನಿಸಿದ ನೀರಿನ ಸ್ವಭಾವವನ್ನೂ, ಕಟ್ಟಿಗೆಯ ಸ್ವಭಾವವನ್ನೂ ದಾರ್ಷ್ಟಾಂತಿಕದ ಆತ್ಮನ ಉಪಾಧಿಗಳಾದ ರಾಜಸ-ತಾಮಸ ವೃತ್ತಿಗಳ ಸ್ವಭಾವವನ್ನೂ ಹಿಡಿದು

ಮಾಡಿದುದಾಗಿದೆ. ಆದುದರಿಂದ ಅನುಭವಕ್ಕೆ ಅನುಸಾರವಾಗಿ ಒಂದಂಶವು ತೋರಿ ಇನ್ನೊಂದಂಶ ಮರೆಯಾಗುವದೆಂದು ತಿಳಿಯಬೇಕು. —ಅನುಭವ.

**ನ ಘೋರಾಸು ನ ಮೂಢಾಸು ಸುಖಾನುಭವ ಈಕ್ಷ್ಯತೇ ।**
**ಶಾಂತಾಸ್ವಪಿ ಕ್ವಚಿತ್ ಕಶ್ಚಿತ್ ಸುಖಾತಿಶಯ ಈಕ್ಷ್ಯ-**
**ತಾಮ್ ॥೧೩॥**

ಸುಖಾನುಭವವು ಘೋರ ಮತ್ತು ಮೂಢ ವೃತ್ತಿಗಳಲ್ಲಿ ಎಂದಿಗೂ ಬರುವದಿಲ್ಲ. ಶಾಂತವೃತ್ತಿಗಳಲ್ಲಿಯಾದರೂ ಕೆಲವು ಸಂದರ್ಭಗಳಲ್ಲಿ ಮಾತ್ರ ಅತಿಶಯವಾದ ಸುಖವು ತೋರುವದು.

—ಘೋರ ಮತ್ತು ಮೂಢವೃತ್ತಿಗಳಲ್ಲಿ ಸುಖವೆಂಬುದು ಇಲ್ಲ.

**ಗೃಹಕ್ಷೇತ್ರಾದಿವಿಷಯೇ ಯದಾ ಕಾಮೋ ಭವೇತ್ತದಾ ।**
**ರಾಜಸಸ್ಯಾಸ್ಯ ಕಾಮಸ್ಯ ಘೋರತ್ವಾತ್ತತ್ರ ನೋ**
**ಸುಖಮ್ ॥೧೪॥**

ಹೊಲ-ಮನೆ ಮುಂತಾದವುಗಳ ಅಪೇಕ್ಷೆಯಾಗಲು, ಇದು ರಜೋಗುಣದ ಅಪೇಕ್ಷೆಯಾಗಿ ಘೋರ ವೃತ್ತಿ ಎನಿಸುವದರಿಂದ ಇಲ್ಲಿ ಸುಖವಿಲ್ಲ.

ಈ ಘೋರ ವೃತ್ತಿಗಳಲ್ಲಿ ಸುಖಲೇಶವೂ ಇಲ್ಲವೆಂಬುದು ಯಾತರ ಮೇಲಿಂದ ?

**ಸಿದ್ಧ್ಯೇನ್ನವೇತ್ಯಸ್ತಿ ದುಃಖಮಸಿದ್ಧೌ ತದ್ವಿವರ್ಧತೇ ।**
**ಪ್ರತಿಬಂಧೇ ಭವೇತ್ ಕ್ರೋಧೋ ದ್ವೇಷೋ ವಾ ಪ್ರತಿ-**
**ಕೂಲತಃ ॥೧೫॥**

ಯಾಕಂದರೆ ಈ ವೃತ್ತಿಯಲ್ಲಿ ನನ್ನ ಅಪೇಕ್ಷೆ ಪೂರ್ಣವಾದೀತೋ ಇಲ್ಲವೋ ಎಂಬ ಹೊಯ್ದಾಟದ ದುಃಖವು ಇರುತ್ತದೆ. ಒಂದು ವೇಳೆ ಪೂರ್ಣ ವಾಗದಿದ್ದರೆ ಅದಿನ್ನೂ ಹೆಚ್ಚಾಗುತ್ತದೆ. ಯಾರಾದರೂ ಅಡ್ಡಿಯುಂಟು ಮಾಡಿದರೆ ಸಿಟ್ಟು ಬರುತ್ತದೆ. ಒಂದು ವೇಳೆ ಅಪೇಕ್ಷಿಸಿದ ಫಲವು ಪ್ರತಿಕೂಲ ವಾದರೆ ದ್ವೇಷವು ಹುಟ್ಟುತ್ತದೆ.

—ಅಡ್ಡಿಗಳನ್ನು ನಿವಾರಿಸಿಕೊಳ್ಳುವುದು ಅಸಾಧ್ಯವಾದರೆ ವಿಷಾದವು ಆರಂಭವಾಗುತ್ತದೆ. ಆದರೆ ಇದೂ ಕೂಡ ತಮೋ ಗುಣದ ಕಾರ್ಯವಾ ದುದರಿಂದ ಇಲ್ಲಿ ಕೂಡ ಸುಖವಿಲ್ಲ ಎನ್ನುತ್ತಾರೆ.

**ಅಶಕ್ಯಶ್ಚೇತ್ಪ್ರತೀಕಾರೋ ವಿಷಾದಃ ಸ್ಯಾತ್ಸ ತಾಮಸಃ ।**
**ಕ್ರೋಧಾದಿಷು ಮಹದ್ದುಃಖಂ ಸುಖಶಂಕಾಪಿ ದೂರತಃ ॥೧೬॥**

ಅದನ್ನು ನಿವಾರಿಸಿಕೊಳ್ಳುವದು ಅಸಾಧ್ಯವೆನಿಸಿದರೆ ವಿಷಾದ ವುಂಟಾಗುತ್ತದೆ. ಆದರೆ ಇದು ತಮೋಗುಣದ ವಿಕಾರ ವಾಗಿದೆ. ಸಿಟ್ಟು ಮೊದಲಾದವುಗಳಲ್ಲಿ ಬಹಳ ದುಃಖವಾಗುತ್ತದೆ. ಎಂದ ಮೇಲೆ ಅದರಲ್ಲಿ ಸುಖವಿರಬಹುದೆಂಬ ಸಂದೇಹ ತಾಳುವುದುಕೂಡ ದೂರದ ಮಾತು.

—ಅದರಂತೆ.

**ಕಾಮ್ಯಲಾಭೇ ಹರ್ಷವೃತ್ತಿಃ ಶಾಂತಾ ತತ್ರ ಮಹತ್ಸುಖಮ್ ।**
**ಭೋಗೇ ಮಹತ್ತರಂ ಲಾಭಪ್ರಸಕ್ತಾವೀಷದೇವ ಹಿ ॥೧೭॥**

ಅಪೇಕ್ಷಿಸಿದ ವಸ್ತುವು ದೊರಕಿದರೆ ಹರ್ಷವು ಉಂಟಾಗುವದು. ಅದು ಶಾಂತವೃತ್ತಿ. ಅಲ್ಲಿ ಬಹಳ ಸುಖವಿದೆ. ಭೋಗದಲ್ಲಿ ದೊಡ್ಡ ಸುಖವಾಗುತ್ತದೆ. ದೊರೆಯುವ ಕಾಲಬಂದಾಗ ಆ ಮಾನದಿಂದ ಆಗುವ ಸುಖವು ಅಲ್ಪ.

**ಮಹತ್ತಮಂ ವಿರಕ್ತೌ ತು ವಿದ್ಯಾನಂದೇ ತದೀರಿತಮ್ ।**
**ಏವಂ ಕ್ಷಾಂತೌ ತಥೌದಾರ್ಯೇ ಕ್ರೋಧಲೋಭನಿವಾ-**
**ರಣಾತ್ ॥೧೮॥**

ವೈರಾಗ್ಯದಲ್ಲಿಯ ಸುಖವು ಮಾತ್ರ ಅತಿಶಯವಾಗಿರುವದು. ವಿದ್ಯಾನಂದ ಪ್ರಕರಣದಲ್ಲಿ ಅದನ್ನು ಹೇಳಲಾಗಿದೆ. ಅದರಂತೆ ಕ್ಷಮಾಗುಣವು ತಲೆ ದೋರಿದಾಗ, ಮತ್ತು ಔದಾರ್ಯವು ಹೆಚ್ಚಿದಾಗ ಸಿಟ್ಟು ಮತ್ತು ಲೋಭಗಳು ಇರುವುದಿಲ್ಲ. ಆದುದರಿಂದ ಆಗಕೂಡ ಆನಂದವು ಹೆಚ್ಚಾಗುವದು.

**ಯದ್ಯತ್ಸುಖಂ ಭವೇತ್ತತ್ತದ್ಬ್ರಹ್ಮೈವ ಪ್ರತಿಬಿಂಬನಾತ್ ।**
**ವೃತ್ತಿಷ್ವಂತರ್ಮುಖಾಸ್ವಸ್ಯ ನಿರ್ವಿಘ್ನಂ ಪ್ರತಿಬಿಂಬನಮ್ ॥೧೯॥**

ಯಾವ ಯಾವುದು ಸುಖವೆಂಬುದುಂಟೋ ಅದೆಲ್ಲ ಬ್ರಹ್ಮವೇ ಎನಿಸುವುದು. ಯಾಕೆಂದರೆ ಅಲ್ಲಿ ಬ್ರಹ್ಮವೇ ಪ್ರತಿಬಿಂಬಿತವಾಗಿರುತ್ತದೆ. ಅಂತರ್ಮುಖವಾದ ವೃತ್ತಿಗಳಲ್ಲಿ ಬ್ರಹ್ಮದ ಪ್ರತಿಬಿಂಬವು ನಿರ್ವಿಘ್ನವಾಗಿ ಮೂಡುತ್ತದೆ.

(ಯಾಕಂದರೆ ಬಹಿರ್ಮುಖ ಚಾಂಚಲ್ಯದಿಂದ ರಾಜಸವೃತ್ತಿಗಳೆನಿಸಿ ಘೋರವಾಗಬಹುದು. ಅಥವಾ ಮರವೆಯಿಂದ ತಾಮಸಗಳಾಗಿ ಮೂಢವೃತ್ತಿಗಳು ಆನಂದದ ಪ್ರತಿಬಿಂಬನಕ್ಕೆ ಅನುಕೂಲವಲ್ಲ.)

**ಸತ್ತಾ ಚಿತಿಃ ಸುಖಂ ಚೇತಿ ಸ್ವಭಾವಾ ಬ್ರಹ್ಮಣಸ್ತ್ರಯಃ |**
**ಮೃತ್‌ಶಿಲಾದಿಷು ಸತ್ತೈವ ವ್ಯಜ್ಯತೇ ನೇತರದ್ವಯಮ್ ||೨೦||**

ಸತ್ತಾ (ಇರುವಿಕೆ) ಚಿತಿಃ (ಹೊಳೆಯುವಿಕೆ) ಮತ್ತು ಸುಖ (ಆನಂದ) ವೆಂದು ಬ್ರಹ್ಮಕ್ಕೆ ಮೂರು ಸ್ವಭಾವಗಳು. ಮಣ್ಣು-ಕಲ್ಲು ಮೊದಲಾದ ಜಡಪದಾರ್ಥಗಳಲ್ಲಿ ಸತ್ತೆ ಮಾತ್ರ ತೋರುತ್ತದೆ. ಉಳಿದ ಎರಡು ಸ್ವಭಾವಗಳು ತೋರುವದಿಲ್ಲ.

**ಸತ್ತಾ ಚಿತಿದ್ವಯಂ ವ್ಯಕ್ತಂ ಧೀವೃತ್ತ್ಯೋರ್ಘೋರ-**
**ಮೂಢಯೋಃ |**
**ಶಾಂತವೃತ್ತೌ ತ್ರಯಂ ವ್ಯಕ್ತಂ ಮಿಶ್ರಂ ಬ್ರಹ್ಮೇತ್ಥ-**
**ಮೀರಿತಮ್ ||೨೧||**

ಘೋರ ಮತ್ತು ಮೂಢ ಬುದ್ಧಿವೃತ್ತಿಗಳಲ್ಲಿ ಸತ್ತೆಯೂ-ಜ್ಞಾನವೂ ಎರಡೂ ತೋರಿಕೊಳ್ಳುವವು. ಶಾಂತವೃತ್ತಿಗಳಲ್ಲಿ ಸತ್-ಚಿತ್-ಆನಂದಗಳೆಂಬ ಮೂರೂ ಸ್ವಭಾವಗಳು ತೋರುವವು. ಹೀಗೆ ಉಪಾಧಿಯಿಂದ ಕೂಡಿದ್ದರಿಂದ ಎಂದರೆ ಪ್ರಪಂಚದ ಉಪಾಧಿಯನ್ನು ಗಂಟುಹಾಕಿಕೊಂಡ ಸಗುಣ ಬ್ರಹ್ಮನ ಸ್ವರೂಪ.

—ಈಗ ಶುದ್ಧವಾದ ಬ್ರಹ್ಮನ ಜ್ಞಾನವಾಗುವ ಬಗೆಯನ್ನು ಹೇಳುತ್ತಾರೆ.

**ಅಮಿಶ್ರಂ ಜ್ಞಾನ ಯೋಗಾಭ್ಯಾಂ ತೌ ಚ ಪೂರ್ವಮುದೀರಿತೌ|**
**ಆದ್ಯೇಽಧ್ಯಾಯೇ ಯೋಗಚಿಂತಾ ಜ್ಞಾನಮಧ್ಯಾಯಯೋ-**
**ರ್ದ್ವಯೋಃ ||೨೨||**

ಯಾವ ಉಪಾಧಿಯೂ ಅಂಟದ ಬ್ರಹ್ಮವು ತನ್ನ ಆತ್ಮವೇ ಬ್ರಹ್ಮವೆಂದು ಮೊದಲೇ ಹೇಳಿದೆ. ಅಂದರೆ ಹನ್ನೊಂದನೇ ಅಧ್ಯಾಯದಲ್ಲಿ ಯೋಗ ಅದರ ಮುಂದಿನ ಎರಡು ಅಧ್ಯಾಯಗಳಲ್ಲಿ ಜ್ಞಾನದ ವಿಚಾರವನ್ನು ಮಾಡಿದೆ.

ಸತ್-ಚಿತ್-ಆನಂದಗಳು ಬ್ರಹ್ಮದಸ್ವರೂಪವಾದರೆ ಮಾಯೆಯ ಸ್ವರೂಪವು ಯಾವದು?

**ಅಸತ್ತಾ ಜಾಡ್ಯದುಃಖೇ ದ್ವೇ ಮಾಯಾರೂಪತ್ರಯಂ ತ್ವಿದಮ್ ।**
**ಅಸತ್ತಾ ನರಶೃಂಗಾದೌ ಜಾಡ್ಯಂಕಾಷ್ಠಶಿಲಾದಿಷು ॥೨೩॥**

ಅಸತ್-ಜಡ-ದುಃಖಗಳೆಂಬವು ಮಾಯೆಯ ಸ್ವರೂಪ. ಮನುಷ್ಯನ ಕೋಡು ಮುಂತಾದವುಗಳಲ್ಲಿ ಅಸತ್-ಅಂಶ (ಸುಳ್ಳಿನ ಅಂಶ), ವು, ಕಟ್ಟಿಗೆ, ಕಲ್ಲು ಮುಂತಾದವುಗಳಲ್ಲಿ ಜಡರೂಪವು ಗೋಚರವಾಗುವವು.

(ಬಂಜೆಯ ಮಗ, ಮೊಲದ ಕೋಡು ಮುಂ. ಮಾಯೆಯ ಸುಳ್ಳಿನ ಅಂಶಕ್ಕೆ ಉದಾಹರಣೆ)

**ಘೋರ ಮೂಢ ಧಿಯೋರ್ದುಃಖಮೇವಂ ಮಾಯಾ ವಿಜೃಂಭಿತಾ ।**
**ಶಾಂತಾದಿಬುದ್ಧಿವೃತ್ತ್ಯೈಕ್ಯಾನ್ಮಿಶ್ರಂ ಬ್ರಹ್ಮೇತಿ ಕೀರ್ತಿತಮ್ ॥೨೪॥**

ರಜೋಗುಣದ ಘೋರ ವೃತ್ತಿಗಳಲ್ಲಿಯೂ ತಮೋಗುಣದ ಮೂಢವೃತ್ತಿಗಳಲ್ಲಿಯೂ ಮಾಯೆಯ ದುಃಖರೂಪವು ತೋರುವದು. ಹೀಗೆ ಮಾಯೆಯು ಎಲ್ಲ ಕಡೆಗೆ ಹರಡಿರುವದು. ಬ್ರಹ್ಮ ಶಾಂತ ಮೊದಲಾದ ವೃತ್ತಿಗಳಲ್ಲಿ ಬೆರೆತು ತೋರುವದರಿಂದ ಅದಕ್ಕೆ ಮಿಶ್ರಬ್ರಹ್ಮ ಅಥವಾ ಸಗುಣ ಬ್ರಹ್ಮವೆನ್ನಬೇಕಾಯಿತು.

—ಇಷ್ಟೆಲ್ಲ ಹೇಳುವದು ಯಾಕೆ? ಎಂದರೆ ಬ್ರಹ್ಮದ ಧ್ಯಾನಕ್ಕೆ ಎನ್ನುತ್ತಾರೆ.

**ಏವಂ ಸ್ಥಿತೇಽತ್ರ ಯೋ ಬ್ರಹ್ಮ ಧ್ಯಾತುಮಿಚ್ಛೇತ್-ಪುಮಾನಸೌ ।**
**ನೃಶೃಂಗಾದಿಮುಪೇಕ್ಷ್ಯೇತ ಶಿಷ್ಟಂ ಧ್ಯಾಯೇದ್ಯಥಾ-ಯಥಮ್ ॥೨೫॥**

ಹೀಗೆ ವಸ್ತುಸ್ಥಿತಿ ಇರಲು ಯಾವ ಪುರುಷನು ಬ್ರಹ್ಮವನ್ನು ಧ್ಯಾನ ಮಾಡಬೇಕೆಂದು ಇಚ್ಛಿಸುವನೋ ಅವನು ಮನುಷ್ಯನ ಕೋಡು ಮುಂ. ಮಾಯಾಗುಣದಿಂದ ಕೂಡಿದ ಅಸತ್-ಜಡ-ದುಃಖರೂಪ ಪದಾರ್ಥಗಳನ್ನು ತಿರಸ್ಕರಿಸಿಬಿಡಬೇಕು. ಉಳಿದ ಬ್ರಹ್ಮತ್ವವನ್ನು ಪ್ರಸಂಗಕ್ಕೆ ತಕ್ಕಂತೆ ಧ್ಯಾನ ಮಾಡಬೇಕು. —ಅದು ಹೇಗೆ ?

**ಶಿಲಾದೌ ನಾಮರೂಪೇ ದ್ವೇ ತ್ಯಕ್ತ್ವಾ ಸನ್ಮಾತ್ರಚಿಂತನಮ್ ।**
**ತ್ಯಕ್ತ್ವಾ ದುಃಖಂ ಘೋರಮೂಢಧಿಯೋಃ ಸಚ್ಚಿದ್ದ್ವಿ-**
**ಚಿಂತನಮ್ ॥೨೬॥**

ಕಲ್ಲು-ಕಟ್ಟಿಗೆ ಮುಂ. ಜಡಪದಾರ್ಥಗಳಲ್ಲಿ ಮಾಯೆಯ ಅಂಶಗಳಾದ ನಾಮರೂಪಗಳನ್ನು ತ್ಯಜಿಸಿ ಕೇವಲ ಸದ್ರೂಪ ಚಿಂತನ ಮಾಡಬೇಕು. ಆದರಂತೆ ಘೋರ ಮೂಢವೃತ್ತಿಗಳಲ್ಲಿ ದುಃಖವನ್ನು (ಮಾಯಾಗುಣ) ತ್ಯಜಿಸಿ ಸದ್ರೂಪ-ಚಿದ್ರೂಪಗಳನ್ನು ಚಿಂತಿಸಬೇಕು.

—ಸಾತ್ವಿಕ ವೃತ್ತಿಗಳಲ್ಲಿ ಬ್ರಹ್ಮದ ಮೂರೂ ಗುಣಗಳನ್ನು ಧ್ಯಾನಿಸಬೇಕು ಎನ್ನುತ್ತಾರೆ.

**ಶಾಂತಾಸು ಸಚ್ಚಿದಾನಂದಾಂಸ್ತ್ರೀನಪ್ಯೇವಂ ವಿಚಿಂತಯೇತ್ ।**
**ಕನಿಷ್ಠಮಧ್ಯಮೋತ್ಕೃಷ್ಟಾಸ್ತಿಸ್ರಶ್ಚಿಂತಾಃ ಕ್ರಮಾದಿಮಾಃ॥೨೭॥**

ಶಾಂತವೃತ್ತಿಗಳಲ್ಲಿ ಸತ್-ಚಿತ್-ಆನಂದ ಈ ಮೂರೂ ಗುಣಗಳನ್ನು ಬ್ರಹ್ಮವೆಂದು ಧ್ಯಾನಿಸಬೇಕು. ಈ ಮೂರು ಪ್ರಕಾರದ ಧ್ಯಾನಗಳಲ್ಲಿ ಕಲ್ಲು ಮೊದಲಾದವುಗಳಲ್ಲಿ ಸದ್ರೂಪ ಧ್ಯಾನವು ಕನಿಷ್ಠ. ಘೋರ-ಮೂಢವೃತ್ತಿಗಳಲ್ಲಿಯ ಸಚ್ಚಿದ್ರೂಪದ ಧ್ಯಾನವು ಮಧ್ಯಮ. ಶಾಂತವೃತಿಗಳಲ್ಲಿಯ ಸಚ್ಚಿದಾನಂದ ರೂಪಧ್ಯಾನವು ಉತ್ಕೃಷ್ಟ.

—ನಿರ್ಗುಣ ಬ್ರಹ್ಮವನ್ನು ಧ್ಯಾನಿಸಲು ಅಸಮರ್ಥರಾದವರು ಮಿಶ್ರ (ಸಗುಣ) ಬ್ರಹ್ಮಧ್ಯಾನಮಾಡುವದು ಒಳ್ಳೆಯದೆನ್ನುತ್ತಾರೆ.

**ಮಂದಸ್ಯ ವ್ಯವಹಾರೇಽಪಿ ಮಿಶ್ರಬ್ರಹ್ಮಣಿ ಚಿಂತನಮ್ ।**
**ಉತ್ಕೃಷ್ಟಂ ವಕ್ತುಮೇವಾತ್ರ ವಿಷಯಾನಂದ ಈರಿತಃ ॥೨೮॥**

ವ್ಯವಹಾರಮಾಡುತ್ತಿರುವಾಗಲೂ ಅಸಮರ್ಥರಾದವರು ಸಗುಣ ಬ್ರಹ್ಮ ಚಿಂತನವನ್ನು ಮಾಡುತ್ತಿರುವದು ಶ್ರೇಷ್ಠ ಎಂದು ತಿಳಿಸುವದಕ್ಕಾಗಿಯೇ ಇಲ್ಲಿ ವಿಷಯಾನಂದವನ್ನು ಹೇಳಲಾಯಿತು.

—ವೃತ್ತಿಸಹಿತವಾಗಿ ನಡೆಯುವ ಮೂರು ಬಗೆಯ ಧ್ಯಾನಗಳ ನಂತರ ವೃತ್ತಿರಹಿತ ಧ್ಯಾನವನ್ನು ಹೇಳುತ್ತಾರೆ.

**ಔದಾಸೀನ್ಯೇ ತು ಧೀವೃತ್ತೇಃ ಶೈಥಿಲ್ಯಾದುತ್ತಮೋತ್ತಮಮ್।**
**ಚಿಂತನಂ ವಾಸನಾನಂದೇ ಧ್ಯಾನಮುಕ್ತಂ ಚತುರ್ವಿಧಮ್ ॥೨೯॥**

ನಿದ್ದೆಯು ಹೋಗಿ ಇನ್ನೂ ಎಚ್ಚರವು ಮೈಗೂಡದೆ ಇದ್ದಾಗ ಎಂದರೆ- ಉದಾಸೀನ ಅವಸ್ಥೆಯಲ್ಲಿ ಬುದ್ಧಿವೃತ್ತಿಗಳು ಶಿಥಿಲವಾಗಿರುವದರಿಂದ ವಾಸನಾನಂದದಲ್ಲಿಯ ಆಧ್ಯಾನವು ಮೇಲೆ ಹೇಳಿದ ಎಲ್ಲ ಧ್ಯಾನಗಳಿಗಿಂತ ಮೇಲು. ಹೀಗೆ ನಾಲ್ಕು ಪ್ರಕಾರದ ಧ್ಯಾನಗಳನ್ನು ಹೇಳಿದ್ದಾಯಿತು.

—ಈ ಧ್ಯಾನವು ಹಿಂದಿನವುಗಳಿಗಿಂತ ಬೇರೆ ಬಗೆ ಎನ್ನುತ್ತಾರೆ.

**ನ ಧ್ಯಾನಂ ಜ್ಞಾನಯೋಗಾಭ್ಯಾಂ ಬ್ರಹ್ಮವಿದ್ಯೈವ ಸಾಖಲು ।**
**ಧ್ಯಾನೇನೈಕಾಗ್ರ್ಯಮಾಪನ್ನೇ ಚಿತ್ತೇ ವಿದ್ಯಾ ಸ್ಥಿರೀ-**
**ಭವೇತ್ ॥೩೦॥**

ಇದು ಜ್ಞಾನ ಮತ್ತು ಯೋಗಗಳಿಂದಾಗುವ ಧ್ಯಾನವಲ್ಲ. ಇದು ಬ್ರಹ್ಮವಿದ್ಯೆಯಾಗಿದೆ. ಧ್ಯಾನ ಯೋಗದಿಂದ ಏಕಾಗ್ರವಾದ ಚಿತ್ತದಲ್ಲಿ ವಿದ್ಯೆಯು ಸ್ಥಿರವಾಗುತ್ತದೆ.

—ಈಗ ಈ ಧ್ಯಾನಕ್ಕೆ ಬ್ರಹ್ಮವಿದ್ಯೆ ಎಂದು ಹೇಳುವ ಕಾರಣವನ್ನು ಹೇಳುತ್ತಾರ.

**ವಿದ್ಯಾಯಾಂ ಸಚ್ಚಿದಾನಂದಾ ಅಖಂಡೈಕರಸಾತ್ಮತಾಮ್ ।**
**ಪ್ರಾಪ್ಯ ಭ್ರಾಂತಿ ನ ಭೇದೇನ ಭೇದಕೋಪಾಧಿವರ್ಜನಾತ್॥೩೧॥**

ಈ ವಿದ್ಯೆಯಲ್ಲಿ ಸತ್-ಚಿತ್-ಆನಂದಗಳೆಂಬವು ಬಿಡಿಬಿಡಿಯಾಗಿ ತೋರದೇ ಏಕ ರಸರೂಪವಾಗಿ ತೋರುವವು. ಯಾಕೆಂದರೆ ಆಗ ಭೇದವನ್ನುಂಟುಮಾಡುವ ಉಪಾಧಿಗಳು ಎಂದರೆ ರಾಜಸವೇ ಮುಂ. ವೃತ್ತಿಗಳು ಇರುವದಿಲ್ಲ.

—ಯಾವ ಉಪಾಧಿಗಳಿಂದ ಅನಂಧಾದಿಗಳಲ್ಲಿ ಭೇದವುಂಟಾಗುತ್ತದೆ?

**ಶಾಂತಾ ಘೋರಾ ಶಿಲಾದ್ಯಾಶ್ಚ ಭೇದಕೋಪಾಧಯೋ ಮತಾಃ।**
**ಯೋಗಾದ್ವಿವೇಕತೋ ವೈಷಾಮುಪಾಧೀನಾಮುಪಾಕೃತಿಃ॥೩೨॥**

ಸಾತ್ವಿಕ-ರಾಜರಸ ತಾಮಸ ವೃತ್ತಿಗಳೂ, ಕಲ್ಲು ಮೊದಲಾದವುಗಳೂ ಇವೇ ಆನಂದಾದಿಗಳಲ್ಲಿ ಭೇದವನ್ನುಂಟುಮಾಡುವ ಉಪಾಧಿಗಳೆಂದು ತಿಳಿಯುತ್ತದೆ. ಏಕಾಗ್ರತೆಯಿಂದಾಗಲೀ, ಅಥವಾ ವಿವೇಕದಿಂದಾಗಲಿ ಈ ಉಪಾಧಿಗಳ ಪರಿಹಾರವಾಗುತ್ತದೆ.

**ನಿರುಪಾಧಿಬ್ರಹ್ಮತತ್ವೇ ಭಾಸಮಾನೆ ಸ್ವಯಂಪ್ರಭೇ ।**
**ಅದ್ವೈತೇ ತ್ರಿಪುಟೀ ನಾಸ್ತಿ ಭೂಮಾನಂದೋಽತ**
**ಉಚ್ಯತೇ ॥೩೩॥**

ತನ್ನ ಬೆಳಕಿನಿಂದಲೇ ಬೆಳಗುವಂಥದೂ, ತಾನೇತಾನಾಗಿರುವದೂ, ನಿರುಪಾಧಿಕವೂ ಆದ ಬ್ರಹ್ಮತತ್ತ್ವವು ಹೊಳೆಯಲು ತ್ರಿಪುಟಿ ಅಂದರೆ ಧ್ಯಾನ ಮಾಡುವವ, ಧ್ಯಾನ ಮಾಡತಕ್ಕ ವಸ್ತು ಮತ್ತು ಧ್ಯಾನವೆಂಬವು ಉಳಿಯುವ ದಿಲ್ಲ. ಆದುದರಿಂದ ಅದಕ್ಕೆ ಭೂಮಾನಂದವೆನ್ನುವರು. —ಉಪಸಂಹಾರ.

**ಬ್ರಹ್ಮಾನಂದಾಭಿದೇ ಗ್ರಂಥೇ ಪಂಚಮೋಽಧ್ಯಾಯ ಈರಿತಃ ।**
**ವಿಷಯಾನಂದ ಏತೇನ ದ್ವಾರೇಣಾಂತಃ ಪ್ರವಿಶ್ಯತಾಮ್ ||೩೪||**

ಬ್ರಹ್ಮಾನಂದವೆಂಬ ಗ್ರಂಥದೊಳಗಿನ ವಿಷಯಾನಂದವೆಂಬ ಐದನೆಯ ಅಧ್ಯಾಯವನ್ನು ಹೇಳಲಾಯಿತು. ಈ ಬಾಗಿಲಿನಿಂದ ಒಳಗೆ ಪ್ರವೇಶ ಮಾಡಬೇಕು.

**ಪ್ರೀಯಾದ್ಧರಿಹರೋಽನೇನ ಬ್ರಹ್ಮಾನಂದೇನ ಸರ್ವದಾ ।**
**ಪಾಯಚ್ಚ ಪ್ರಾಣಿನಃ ಸರ್ವಾನ್ ಸ್ವಾಶ್ರಿತಾನ್‌ಶುದ್ಧ-**
**ಮಾನಸಾನ್ ||೩೫||**

ಹರಿ-ಹರ ಸ್ವರೂಪನಾದ ಪರಮಾತ್ಮನು ಬ್ರಹ್ಮಾನಂದಂಬ ಗ್ರಂಥದಿಂದ ಯಾವಾಗಲೂ ಸಂತೋಷಗೊಳ್ಳಲಿ. ಮತ್ತು ತನ್ನನ್ನು ಆಶ್ರಯಮಾಡಿ ಕೊಂಡು ಶುದ್ಧ ಮನಸ್ಸಿನವರಾದ ಎಲ್ಲ ಪ್ರಾಣಿಗಳನ್ನು ರಕ್ಷಿಸಲಿ.

## ವಿಷಯಾನಂದ ಪ್ರಕರಣದ ಸಾರಾಂಶ

ವಿಷಯಾನಂದವೂ ಬ್ರಹ್ಮಾನಂದದ ಅಂಶವಾಗಿದೆ. ಆದುದರಿಂದ ಬ್ರಹ್ಮಾನಂದವನ್ನು ತಿಳಿಯಲು ಉಪಯುಕ್ತವೆನಿಸಿದೆ. ಎಂದರೆ ಸಿಬಯಕೆ ತೀರಿ ದಾಗ ಉಂಟಾದ ಸಾತ್ವಿಕ ವೃತ್ತಿಯಲ್ಲಿ ತೋರುವ ಆನಂದವು ಬ್ರಹ್ಮದ ಅಂಶವೇ ಎಂಬುದನ್ನರಿತು ಅದನ್ನು ಆ ದೃಷ್ಟಿಯಿಂದಲೇ ನೋಡುವದು ಸಗು ಣೋಪಾಸನೆ. ಯೋಗದಿಂದಲೂ ವಿವೇಕದಿಂದಲೂ ಉಂಟಾದ ಆನಂದವು ಬ್ರಹ್ಮವಿದ್ಯೆ ಎಂದರೆ ಬ್ರಹ್ಮಾನುಭವ.

**ಸಂಪೂರ್ಣ**